# ಚಿತ್ರದುರ್ಗ ಜಿಲ್ಲೆಯ ಕೆರೆಗಳು: ಚಾರಿತ್ರಿಕ ಅಧ್ಯಯನ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಸಂಶೋಧನಾ ಮಹಾಪ್ರಬಂಧ)

ಸಂಶೋಧಕರು
ಶ್ರೀಮತಿ ರಾಣಿ ಸಿ.

ಮಾರ್ಗದರ್ಶಕರು
ಡಾ. ವಿರೂಪಾಕ್ಷಿ ಪೂಜಾರಹಳ್ಳಿ
ಪ್ರಾಧ್ಯಾಪಕರು, ಚರಿತ್ರೆ ವಿಭಾಗ



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೯

# ಚಿತ್ರದುರ್ಗ ಜಿಲ್ಲೆಯ ಕೆರೆಗಳು: ಚಾರಿತ್ರಿಕ ಅಧ್ಯಯನ

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಸಂಶೋಧನಾ ಮಹಾಪ್ರಬಂಧ)

**ಸಂಶೋಧಕರು**
ಶ್ರೀಮತಿ ರಾಣಿ ಸಿ.

**ಮಾರ್ಗದರ್ಶಕರು**
**ಡಾ. ವಿರೂಪಾಕ್ಷಿ ಪೂಜಾರಹಳ್ಳಿ**
ಪ್ರಾಧ್ಯಾಪಕರು, ಚರಿತ್ರೆ ವಿಭಾಗ



**ಚರಿತ್ರೆ ವಿಭಾಗ**
**ಸಮಾಜ ವಿಜ್ಞಾನಗಳ ನಿಕಾಯ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

೨೦೧೮-೧೯

# ಮಾರ್ಗದರ್ಶಕರ ದೃಢೀಕರಣ ಪತ್ರ

**ಶ್ರೀಮತಿ ರಾಣಿ ಸಿ. ಅವರು ಚಿತ್ರದುರ್ಗ ಜಿಲ್ಲೆಯ ಕೆರೆಗಳು: ಚಾರಿತ್ರಿಕ ಅಧ್ಯಯನ** ಎನ್ನುವ ಪಿಎಚ್.ಡಿ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದು, ಇದನ್ನು ಇಲ್ಲಿಯವರೆಗೆ ಯಾವುದೇ ಪದವಿಗೆ ಸಲ್ಲಿಸಿರುವುದಿಲ್ಲವೆಂದು ಮತ್ತು ಇದನ್ನು ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ :

**(ಡಾ. ವಿರೂಪಾಕ್ಷಿ ಪೂಜಾರಹಳ್ಳಿ)**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಚರಿತ್ರೆ ವಿಭಾಗ

# ಪ್ರಮಾಣ ಪತ್ರ

**ಶ್ರೀಮತಿ ರಾಣಿ** ಸಿ. ಆದ ನಾನು **ಚಿತ್ರದುರ್ಗ ಜಿಲ್ಲೆಯ ಕೆರೆಗಳು: ಚಾರಿತ್ರಿಕ ಅಧ್ಯಯನ** ಎನ್ನುವ ಮಹಾಪ್ರಬಂಧವನ್ನು ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ್ದೇನೆ. ಇದನ್ನು ಇಲ್ಲಿಯವರೆಗೆ ಯಾವುದೇ ಪದವಿಗೆ ಸಲ್ಲಿಸಿರುವುದಿಲ್ಲವೆಂದು ಮತ್ತು ಇದನ್ನು ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಈ ಮೊದಲು ಪ್ರಕಟಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

Rani.C

ದಿನಾಂಕ : **(ಶ್ರೀಮತಿ ರಾಣಿ ಸಿ.)**

## ಪರಿವಿಡಿ

## ಅಧ್ಯಾಯ ಒಂದು

# ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

೧.೩. ಅಧ್ಯಯನದ ವ್ಯಾಪ್ತಿ ಮತ್ತು ವಿಧಾನ

೧.೪. ಅಧ್ಯಯನದ ಸ್ವರೂಪ

## ಅಧ್ಯಾಯ ಒಂದು

# ಪ್ರಸ್ತಾವನೆ

ಸುಮಾರು ೪.೫. ಬಿಲಿಯನ್ ವರ್ಷಗಳ ಹಿಂದೆ ಭೂಮಿ ತನ್ನ ಹುಟ್ಟನ್ನು ಪಡೆಯಿತು. ಆನಂತರ ಅಂದರೆ ಸುಮಾರು ೨ ಬಿಲಿಯನ್ ಸಾವಿರ ವರ್ಷಗಳ ಹಿಂದೆ ಈ ಭೂಮಿಯಲ್ಲಿ ಮಾನವನ ಉಗಮವಾಯಿತು[೧]. ಮಾನವನ ಈ ಸುದೀರ್ಘವಾದ ಇತಿಹಾಸದಲ್ಲಿ ಬೇಟೆ, ಕೃಷಿ, ನಾಗರಿಕತೆ ಎನ್ನುವ ಬಹು ಮುಖ್ಯವಾದ ಮೂರು ಸಾಂಸ್ಕೃತಿಕ ಹಂತಗಳು ಪ್ರಮುಖವಾದ ಪಾತ್ರ ವಹಿಸಿವೆ. ಇವುಗಳನ್ನು ಆಧಾರವಾಗಿಟ್ಟುಕೊಂಡು ಮಾನವನ ಸಾಂಸ್ಕೃತಿಕ ಅಭಿವೃದ್ಧಿಯ ವಿಕಾಸವನ್ನು ಗುರುತಿಸಬಹುದಾಗಿದೆ. ಪ್ರಾಗೈತಿಹಾಸಿಕ (ಶಿಲಾಯುಗ) ಕಾಲದಲ್ಲಿ ಮಾನವ ಅಲೆಮಾರಿ ಜೀವನಕ್ರಮ ಮತ್ತು ಬೇಟೆ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದನು. ಕಾಲಕ್ರಮೇಣ ವಿಕಾಸ ಹೊಂದುತ್ತಾ, ತನ್ನ ಅಲೆಮಾರಿ ಜೀವನ ಕ್ರಮವನ್ನು ಕೈಬಿಟ್ಟು, ಒಂದೆಡೆ ವ್ಯವಸ್ಥಿತವಾಗಿ ನೆಲೆಸಿ, ಕೃಷಿ ಸಂಸ್ಕೃತಿಯನ್ನು ಅಳವಡಿಸಿಕೊಂಡನು. 'ಕೃಷಿ' ಆವಿಷ್ಕಾರ ಮಾನವನ ಇತಿಹಾಸದಲ್ಲಿ ಒಂದು ಮಹತ್ವದ **'ಕ್ರಾಂತಿಕಾರಕ ಹೆಜ್ಜೆ'**ಯಾಯಿತು. ಏಕೆಂದರೆ ಇದುವೇ ಮಾನವನು **'ಸ್ವಾವಲಂಬಿ ಮತ್ತು ಉತ್ಪಾದನಾ ಜೀವನ ಕ್ರಮವನ್ನು'** ಅಳವಡಿಸಿಕೊಳ್ಳಲು ಬಹುಮುಖ್ಯ ಕಾರಣವಾಯಿತು. ಅಲ್ಲದೇ ಇದು ನಾಗರಿಕತೆಗಳ ಹುಟ್ಟಿಗೆ, ರಾಜ್ಯ ಮತ್ತು ಸಾಮ್ರಾಜ್ಯಗಳ ನಿರ್ಮಾಣಕ್ಕೆ ಅತಿ ಮುಖ್ಯ ಪ್ರೇರೇಪಣೆಯಾಯಿತು.

ಕೃಷಿ ಬೆಳವಣಿಗೆಯಲ್ಲಿ ನೀರಾವರಿ ವ್ಯವಸ್ಥೆಯ ಅಳವಡಿಕೆ ಮಾನವನ ಚರಿತ್ರೆಯಲ್ಲಿಯೇ ಅತ್ಯಂತ ಪ್ರಮುಖವಾದ ಮೈಲಿಗಲ್ಲು. ಸಾಮಾನ್ಯವಾಗಿ ಪ್ರಕೃತಿ ನಿರ್ಮಿತವಾದ ನೀರಿನ ತಗ್ಗು/ಗುಂಡಿ, ದೊಣೆ, ಸರೋವರ, ಸಮುದ್ರ, ಹೊಂಡ, ಕೊಳಗಳಿದ್ದರೂ ಸಹ ಅವುಗಳು ಕೇವಲ ಅವನ ಸೀಮಿತ ಉದ್ದೇಶ ಈಡೇರಿಕೆಗೆ ಮಾತ್ರ ಸಹಾಯಕವಾಗಿದ್ದವು. ಆದರೆ ಅವು ಅವನ ಕೃಷಿ ಚಟುವಟಿಕೆಗಳಿಗೆ ಪೂರಕವಾಗಿ ಸಹಾಯಕವಾಗುತ್ತಿರಲಿಲ್ಲ. ಈ ಹಿನ್ನೆಲೆಯಲ್ಲಿ ಅವನು ತನ್ನ ವಿಭಿನ್ನ ಉದ್ದೇಶಗಳಿಗೆ ಅನುಗುಣವಾಗಿ ಕೆರೆ, ಕಾಲುವೆ, ಬಾವಿ, ಕಂದಕ, ಪುಷ್ಕರಣಿ, ಕಟ್ಟೆ, ತೀರ್ಥ, ತಟಾಕ, ಜಲಾಶಯ, ಕುಂಟೆಗಳನ್ನು ನಿರ್ಮಿಸಿ ನೀರನ್ನು ಸಂಗ್ರಹಿಸಿ ತನ್ನ ಉಪಯೋಗಕ್ಕೆ ಬಳಕೆ ಮಾಡಿಕೊಳ್ಳಲು ಆರಂಭಿಸಿದನು. ಇದು ಪ್ರಯಾಶಃ ಆಗಾಗ್ಗೆ ತಲೆದೋರುತ್ತಿದ್ದ ಅನಾವೃಷ್ಠಿಯಿಂದ ಕಂಗಾಲಾಗುತ್ತಿದ್ದ ಅವನಿಗೆ ಒಂದು ವರದಾನವಾಗಿ, ನಿಶ್ಚಿತ ಬೆಳೆಗಳನ್ನು ಬೆಳೆಯಲು, ಬೆಳೆದ ಬೆಳೆಯನ್ನು ಕಾಪಾಡಿಕೊಳ್ಳಲು ಮತ್ತು ಅಧಿಕ ಇಳುವರಿ ಪಡೆಯಲು ಸಾಧ್ಯವಾಗಿಸಿತು. ಇದು ಅವನಲ್ಲಿ ಹೆಚ್ಚು ಭರವಸೆ ಮತ್ತು

ಆತ್ಮವಿಶ್ವಾಸ ಮೂಡಲು ಕಾರಣವಾಯಿತಲ್ಲದೇ ಅವನ ಜೀವನ ಮತ್ತಷ್ಟು ಸುರಕ್ಷಿತ ಎನ್ನುವ ಮನೋಭಾವನೆ ಮೂಡಿಬರಲು ಕಾರಣವಾಯಿತು. ಬಹುಶಃ ಇದುವೇ ಜಗತ್ತಿನೆಲ್ಲೆಡೆ ಜಲ ಸಂಗ್ರಹಣೆ ಮತ್ತು ಪೂರೈಕೆಯನ್ನು ಅಳವಡಿಸಿಕೊಳ್ಳಲು ಮುಖ್ಯ ಪ್ರೇರಣೆಯಾಯಿತು. ಇದರಿಂದಾಗಿಯೇ ಮನುಷ್ಯ ಬಹು ಪ್ರಾಚೀನ ಕಾಲದಿಂದಲೂ ಜಲಾಶಯ, ಕೆರೆ-ಕಟ್ಟೆ, ಕಾಲುವೆ, ಅಣೆಕಟ್ಟುಗಳ ನಿರ್ಮಾಣ ಮಾಡಿ, ಅವುಗಳ ಉಪಯೋಗವನ್ನು ಪಡೆದುಕೊಂಡನು. ಅದೇ ರೀತಿ ಪ್ರಾಚೀನ ಇತಿಹಾಸವುಳ್ಳ ಚಿತ್ರದುರ್ಗ ಪ್ರದೇಶದಲ್ಲಿ ಕೂಡಾ ವ್ಯವಸ್ಥಿತವಾದ ನೀರಾವರಿ ವ್ಯವಸ್ಥೆ ಇದ್ದದ್ದು ಗೋಚರಿಸುತ್ತದೆ.

ಎಲ್ಲ ಕಾಲಕ್ಕೂ ಕೆರೆ, ಕಾಲುವೆ, ಬಾವಿ, ತೋಟ, ಛತ್ರ, ದೇವಾಲಯ ಕಟ್ಟಿಸುವುದು ಪುಣ್ಯದ ಕೆಲಸವೆಂಬ ಭಾವನೆ ಜನರಲ್ಲಿತ್ತು. ಈ ಉದ್ದೇಶಗಳ ಹಿನ್ನೆಲೆಯಲ್ಲಿಯೇ ರಾಜ್ಯದಲ್ಲಿ ಅಸಂಖ್ಯಾತ ಕೆರೆಗಳು ನಿರ್ಮಾಣವಾಗಿರುವುದನ್ನು ಗುರುತಿಸಬಹುದು. ಬಹು ಹಿಂದಿನಿಂದಲೂ ಕೆರೆ ನಿರ್ಮಿಸಿದವರಿಗೆ ಅದೇ ಪ್ರದೇಶದಲ್ಲಿ ಭೂದಾನ ನೀಡುವ ಪದ್ಧತಿಯಿತ್ತು. ಈ ರೀತಿ ನೀಡಿದ ಭೂದಾನಗಳು ಆ ಕೆರೆಯನ್ನು ಕಟ್ಟುವುದಕ್ಕೆ ತಗುಲಿದ ವೆಚ್ಚಕ್ಕೆ ಸಮವಾಗಿ ಕಂಡುಬರುತ್ತಿದ್ದವು. ಇದರಿಂದ ಅಂದು ಕೆರೆಗಳನ್ನು ಸಾಮಾಜಿಕ ಹಿತದೃಷ್ಟಿಯಿಂದ ಜನರ ಒಳಿತಿಗಾಗಿ ನಿರ್ಮಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.

ಸರ್ಕಾರದ ವರದಿಗಳ ಪ್ರಕಾರ ರಾಜ್ಯದಲ್ಲಿ ಅತ್ಯಂತ ಕಡಿಮೆ ಮಳೆಯಾಗುವ ಪ್ರದೇಶಗಳಲ್ಲಿ ಚಿತ್ರದುರ್ಗ ಜಿಲ್ಲೆಯು ಎರಡನೆಯದಾಗಿದೆ. ಇಲ್ಲಿ ವಾರ್ಷಿಕ ಸರಾಸರಿ ಮಳೆಯ ಪ್ರಮಾಣ ಕೇವಲ ೭೭೯ ಮಿ.ಮೀ. ಇರುತ್ತದೆ. ಇದು ವಿಪರೀತ ಏರುಪೇರುಗಳಿಂದ ಕೂಡಿದ್ದು, ತೀವ್ರ ಅನಾವೃಷ್ಟಿಗೆ ತುತ್ತಾಗುವ ಪ್ರದೇಶಗಳಲ್ಲಿ ಒಂದಾಗಿದೆ.[೨] ಈ ಹಿನ್ನೆಲೆಯಲ್ಲಿ ಬಿದ್ದ ಮಳೆಯ ನೀರನ್ನು ಸಂಗ್ರಹಿಸುವ ಹಾಗೂ ವ್ಯವಸ್ಥಿತವಾಗಿ ಬಳಸಿಕೊಳ್ಳುವ ಕಾರ್ಯ ಮಹತ್ವ ಪಡೆದಿದೆ. ಜಿಲ್ಲೆಯ ನೀರಾವರಿ ಚೌಕಟ್ಟಿನಲ್ಲಿ ಬರುವ ನದಿಗಳೆಂದರೆ ವೇದಾವತಿ ಚಿನ್ನಹಗರಿ ಮತ್ತು ಸುವರ್ಣಮುಖಿ ಪ್ರಮುಖವಾಗಿವೆ. ಇವುಗಳಲ್ಲಿ 'ವೇದಾವತಿ' ಜಿಲ್ಲೆಯ ಆಗ್ನೇಯ ಭಾಗದಲ್ಲಿ ಸುಮಾರು ೧೫೯ ಮೈಲಿ ಹರಿವನ್ನು ಹೊಂದಿದ್ದು, 'ವಾಣಿವಿಲಾಸ ಸಾಗರ' ನಿರ್ಮಾಣದ ತರುವಾಯ ಜಿಲ್ಲೆಯ ನೀರಾವರಿ ಕ್ಷೇತ್ರದ ವಿಸ್ತರಣೆಗೆ ಗಣನೀಯ ಕೊಡುಗೆ ನೀಡಿದೆ.

ಇವುಗಳಲ್ಲದೇ ಜಿಲ್ಲೆಯ ವಿವಿಧೆಡೆ ನಿರ್ಮಿತವಾಗಿರುವ ಕೆರೆಗಳು ಇಲ್ಲಿನ ಕೃಷಿ ಅಭಿವೃದ್ಧಿಗೆ ಮಹತ್ವದ ಕೊಡುಗೆ ನೀಡಿವೆ. ಚಿತ್ರದುರ್ಗ ಪ್ರದೇಶದ ನೀರಾವರಿ ವ್ಯವಸ್ಥೆಯ ಪ್ರಮುಖ ಆಧಾರವೆಂದರೆ ಕೆರೆ ನೀರಾವರಿ ಎನ್ನಬಹುದು. ಅದಕ್ಕೆ ಕಾರಣ ಭೌಗೋಳಿಕತೆ ಎಂದರೆ ತಪ್ಪಲ್ಲ. ಚಿತ್ರದುರ್ಗ ಪ್ರದೇಶವು ಅಲ್ಲಲ್ಲಿ ಗುಡ್ಡಬೆಟ್ಟಗಳಿಂದ ಆವರಿಸಿಕೊಂಡಿರುವುದನ್ನು ಗಮನಿಸಬಹುದು. ಬಹುತೇಕ ಭಾಗ ಬಯಲುಸೀಮೆ ಎನ್ನುವಂತಿದ್ದರೂ ಕೆರೆ ನಿರ್ಮಾಣಕ್ಕೆ ಅನುಕೂಲವಾಗುವಂತೆ ಅದು ಅಲ್ಲಲ್ಲಿ ದೊಡ್ಡ ಪ್ರಮಾಣದ ತಗ್ಗು ದಿನ್ನೆಗಳನ್ನು ಹೊಂದಿದೆ. ದೈತ್ಯ ಗಾತ್ರದ ಬೆಟ್ಟಗುಡ್ಡಗಳಿಂದ ತುಂಬಿರುವ ಚಿತ್ರದುರ್ಗ ಬೆಟ್ಟಗಳಲ್ಲಿ ಅಲ್ಲಲ್ಲಿ ಬಂಡೆಗಳ ಕಣಿವೆಗಳಲ್ಲಿ ನೀರು ನಿಲ್ಲುವುದಲ್ಲದೇ, ಹೆಚ್ಚು ನೀರು ನಿಲ್ಲದೆ ಹರಿದು ಹೋಗುವಂತಹುದು. ಅಲ್ಲದೇ ಕೆಲವೆಡೆ ಆಡು ಕುರಿಗಳಿಗೆ ನೀರಿನ ಸೌಲಭ್ಯಕ್ಕಾಗಿ ಅಡ್ಡಗಟ್ಟೆಯನ್ನು ಕಟ್ಟಿ ದೋಣಿಗಳನ್ನು ಅಥವಾ ಪುಟ್ಟ ಜಲಾಶಯಗಳನ್ನು ಮಾಡಿಕೊಂಡಿರುವುದು ಕಾಣಬರುತ್ತದೆ. ಅಲ್ಲದೆ ಬೆಟ್ಟಗುಡ್ಡಗಳ ನಡುವಿನ ಕಣಿವೆಗಳಲ್ಲಿ ಬೆಟ್ಟದ ಮೇಲೆ ಬಿದ್ದ ನೀರು ಎಲ್ಲೂ

ಸಂಗ್ರಹಗೊಳ್ಳದೆ ಸುಮ್ಮನೆ ಹರಿದು ಹೋಗುತ್ತಿದ್ದರಬೇಕು. ಇದನ್ನು ಮನಗಂಡ ರಾಜವಂಶಗಳು, ಅರಸರು ಹಾಗೂ ಆಡಳಿತಗಾರರು ಕೆರೆಗಳನ್ನು ಕಟ್ಟಿಸಿರುವಂತೆ ಕಂಡುಬರುತ್ತದೆ. ಅವುಗಳೆಂದರೆ ಚಂದ್ರವಳ್ಳಿ ಕೆರೆ, ಬರಗೆರೆ, ದೊಡ್ಡಣ್ಣನಕೆರೆ, ತಿಮ್ಮಣ್ಣನಾಯಕನಕೆರೆ ಇವುಗಳಲ್ಲದೆ ಬೆಟ್ಟದ ಮಧ್ಯದಲ್ಲಿ ಗೋಪಾಲಸ್ವಾಮಿ ಹೊಂಡ, ಅಕ್ಕ-ತಂಗಿ ಹೊಂಡ, ಉತ್ತರದಲ್ಲಿ ಉಚ್ಚಂಗಿ ಹೊಂಡ, ಈಶಾನ್ಯದಲ್ಲಿ ನೆಲತೋಡಿ ನಿರ್ಮಿಸಿರುವ ಸಂತೆಹೊಂಡ, ಲಿಂಗಣ್ಣವರ್ತಿ ಇವೆ. ಇಲ್ಲಿ ಕೆರೆಗಳು ಹೊಂಡಗಳು ನಿರ್ಮಾಣವಾಗುತ್ತಾ ಬಂದಂತೆ ಕಣಿವೆಗಳ ಮಧ್ಯದಿಂದ ವ್ಯರ್ಥವಾಗಿ ಹರಿದು ಹೋಗುತ್ತಿದ್ದ ನೀರು ಅಲ್ಲಲ್ಲಿ ನೆಲೆಗೊಳ್ಳುವಂತಾಗಿರುವುದು ಸ್ಪಷ್ಟವಾಗುತ್ತದೆ. ಮಳೆ ನೀರು ವ್ಯರ್ಥವಾಗಿ ಹರಿದು ಹೋಗದಂತೆ ಅದು ಉಪಯೋಗಕ್ಕೆ ಸಿಕ್ಕುವಂತೆಯೂ ಮಾಡಿರುವ ಹಿಂದಿನವರ ಯೋಜನಾತ್ಮಕ ದೃಷ್ಟಿ ಪ್ರಶಂಸನೀಯ ಎನಿಸುತ್ತದೆ.

ಚಿತ್ರದುರ್ಗ ಜಿಲ್ಲೆ ಕೃಷ್ಣಾ ಜಲಾನಯನ ಪ್ರದೇಶದಲ್ಲಿದ್ದು, ಮುಖ್ಯವಾಗಿ ಜಿಲ್ಲೆಯಲ್ಲಿ ವೇದಾವತಿ ನದಿ ಪ್ರಮುಖವಾಗಿದ್ದು ಅದು ೨೦೮ ಕಿ.ಮೀ. ಹರಿದು ಹಲವಾರು ಕೆರೆಗಳಿಗೆ ನೀರು ಒದಗಿಸುವ ಮೂಲ ಸೆಲೆಯಾಗಿದೆ. ಇಲ್ಲಿನ ಜಿನಗಿಹಳ್ಳವೂ ೧೨೮ ಕಿ.ಮೀ ಜಿಲ್ಲೆಯಲ್ಲಿ ಹರಿಯುತ್ತದೆ. ಇಲ್ಲಿನ ವಾಣಿವಿಲಾಸ ಜಲಾಶಯದಿಂದ ೯೨೮ ಹೆಕ್ಟೇರುಗಳಿಗೆ ನೀರಾವರಿ ಸೌಲಭ್ಯವಿದೆ. ಜಿಲ್ಲೆಯು ಬಯಲು ಸೀಮೆಯಲ್ಲಿದ್ದು ಬೆಟ್ಟಗುಡ್ಡಗಳಿಂದ ಆವೃತವಾಗಿರುವ ವೈಶಿಷ್ಟ್ಯತೆ ಪಡೆದು ಶುಷ್ಕ ಹಾಗೂ ಹಿತಕರ ಹವೆಯನ್ನು ಹೊಂದಿದೆ. ಇದು ಮಳೆ ಕಡಿಮೆ ಬೀಳುವ ಪ್ರದೇಶವಾಗಿದೆ. ಇಲ್ಲಿ ಕ್ರಿ ಪೂ. ೩ನೇ ಶತಮಾನದಿಂದ ಕ್ರಿ.ಶ. ೧೯ನೇ ಶತಮಾನದವರೆಗೆ ಆಳ್ವಿಕೆ ಮಾಡಿದ ವಿವಿಧ ರಾಜಮನೆತನಗಳು ಕೆರೆ ನಿರ್ಮಾಣಕ್ಕೆ ಹೆಚ್ಚಿನ ಆದ್ಯತೆ ಕೊಟ್ಟ ಪರಿಣಾಮ ಇಲ್ಲಿ ಹಲವಾರು ಕೆರೆಗಳು ನಿರ್ಮಾಣವಾಗಿವೆ. ಜಿಲ್ಲೆಯ ವಿವಿಧೆಡೆ ದೊರೆತ ಸುಮಾರು ೨೯ ಶಾಸನಗಳು ಇಲ್ಲಿನ ಕೆರೆ ನೀರಾವರಿ ವ್ಯವಸ್ಥೆಯನ್ನು ಮತ್ತು ಕೆರೆಗಳ ದುರಸ್ಥಿಗೆ ಸಂಬಂಧಿಸಿದ ವಿವರಗಳನ್ನು ಉಲ್ಲೇಖಿಸಿವೆ. ಜಿಲ್ಲೆಯಾದ್ಯಂತ ಒಟ್ಟು ೨೮೦ ಚಾರಿತ್ರಿಕ ಕೆರೆಗಳಿವೆ. ಅವುಗಳಲ್ಲಿ ೧೪೮ ದೊಡ್ಡ ಕೆರೆಗಳು ಹಾಗು ೧೩೨ ಸಣ್ಣ ಕೆರೆಗಳಿದ್ದು[೩] ಅಧ್ಯಯನ ದೃಷ್ಟಿಯಿಂದ ಅತ್ಯಂತ ಮಹತ್ವ ಪಡೆದಿವೆ. ಅವುಗಳಲ್ಲಿ ಚಂದ್ರವಳ್ಳಿ, ಭೀಮಸಮುದ್ರದ ಕೆರೆ, ಮಲ್ಲಾಪುರ ಕೆರೆ, ಕಾತ್ರಾಳ್ ಕೆರೆ, ಮಾನಂಗಿ ಕೆರೆ, ಚಿಕ್ಕಪುರ ಕೆರೆ, ಲಕ್ಷ್ಮೀಸಾಗರ ಕೆರೆ, ಚಂದ್ರವಳ್ಳಿ ಕೆರೆ, ಬರಗೆರೆ, ಮುರುಘಾಮಠದ ಕೆರೆ, ದೊಡ್ಡಣ್ಣನಕೆರೆ, ತಿಮ್ಮಣ್ಣನಾಯಕನ ಕೆರೆ, ಗೋನೂರು, ಮೈಲನಹಳ್ಳಿ, ಭೀಮಸಮುದ್ರ, ನೀರುಗುಂದ, ದೊಡ್ಡೇರಿ, ಮಧುರೆ, ನಗರಂಗೇರೆ, ತಳಕು, ದೊಡ್ಡ ಉಳ್ಳಾರ್ತಿ, ಸಾಣೇಕೆರೆ, ಪರುಶುರಾಂಪುರ, ರಾಣಿಕೆರೆ, ಕ್ಯಾದಿಗುಂಟೆ, ಗೌರಸಮುದ್ರ, ಬಿ.ಜಿ.ಕೆರೆ. ಹೊಳಲ್ಕೆರೆ, ಹೀರೇಕೆರೆನಹಳ್ಳಿ, ತಮ್ಮೇನಹಳ್ಳಿ, ಗುಡ್ಡದ ರಂಗನಹಳ್ಳಿ, ರಂಗಯ್ಯನದುರ್ಗ, ನಾಯಕನಹಟ್ಟಿ, ಬೋಸೇದೇವರಟ್ಟಿ, ಮಲ್ಲಾಪುರ, ಮುತ್ತುಗದೂರು, ಶಿವಗಂಗೆ, ತಾಳ್ಯ, ರಾಮಗಿರಿ, ಗಂಗಸಮುದ್ರ, ಚಿಕ್ಕಜಾಜೂರು, ಚಿಕ್ಕ ಎಮ್ಮಿಗನೂರು, ಕುಡಿನೀರುಕಟ್ಟೆ ಮುಂತಾದೆಡೆ ಪ್ರಾಚೀನವಾದ ಹಲವಾರು ಕೆರೆಗಳಿವೆ[೪]. ಸಾಮಾನ್ಯವಾಗಿ ಪ್ರತಿ ಕೆರೆಯೂ ನದಿ ಇಲ್ಲವೇ ಮಳೆಯಾಶ್ರಿತವಾಗಿರುತ್ತವೆ. ಕೆರೆಗಳನ್ನು ಅವುಗಳ ಗಾತ್ರಕ್ಕನುಗುಣವಾಗಿ ದೊಡ್ಡ ಕೆರೆ, ಸಣ್ಣ ಕೆರೆ ಮತ್ತು ಅತಿ ಸಣ್ಣಕೆರೆ ಹಾಗೂ ಕಟ್ಟೆ, ಕುಂಟೆಗಳೆಂದು ವಿಭಾಗಿಸಿ ಅಧ್ಯಯನ ಮಾಡಬಹುದು.

ಪ್ರಸ್ತುತ ಅಧ್ಯಯನದಲ್ಲಿ ಚಿತ್ರದುರ್ಗ ಭಾಗದ ಕೆರೆಗಳ ಇತಿಹಾಸದಲ್ಲಿ ಪ್ರಾಚೀನ ಮತ್ತು ಮಧ್ಯಕಾಲಿನ ಕೆರೆಗಳು ಹಾಗೂ ಆಧುನಿಕ ಕೆರೆಗಳ ಹುಟ್ಟು, ಬೆಳವಣಿಗೆ, ಅವುಗಳು ನಿರ್ವಹಿಸಿದ ಪಾತ್ರ, ಅವುಗಳಿಂದಾದ ಸಾಂಸ್ಕೃತಿಕ ಪಲ್ಲಟ, ಕೆರೆಯೊಂದಿಗಿನ ಜನತೆಯ ಸಂಬಂಧ ಹೇಗಿತ್ತು? ಕೆರೆಗಳಿಗೆ ಸಂಬಂಧಿಸಿದ ಸಾಂಸ್ಕೃತಿಕ ಆಚರಣೆಗಳಾದ ಹಬ್ಬ, ಉತ್ಸವ, ಜಾತ್ರೆಗಳನ್ನು ನಡೆಸುವ ಹಿಂದಿನ ಕಾರಣಗಳೇನು? ಕೆರೆಗೆ ಸಂಬಂಧಿಸಿದ ಬಲಿದಾನ, ಕೆರೆಯಿಂದಾದ ಸಾಮಾಜಿಕ ಪ್ರಗತಿಗೆ ಕಂಟಕವಾಗಿರುವ ದಲಿತರ ಶೋಷಣೆ, ಕೆರೆ ಮತ್ತು ಇಂದಿನ ರೈತರು, ರೈತರ ಸಮಸ್ಯೆಗಳು, ಕೆರೆ ಮತ್ತು ನಗರೀಕರಣ, ಕೆರೆ ಮತ್ತು ತಾಂತ್ರಿಕತೆಗೆ ಸಂಬಂಧಿಸಿದ ಇತ್ಯಾದಿ ಅಂಶಗಳನ್ನು ಚಾರಿತ್ರಿಕ ದೃಷ್ಟಿಕೋನದಿಂದ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

### ೧.೧. ಅಧ್ಯಯನದ ಉದ್ದೇಶ

ಕರ್ನಾಟಕದ ಮೈದಾನ ಪ್ರದೇಶದಲ್ಲಿರುವ ಚಿತ್ರದುರ್ಗ ಜಿಲ್ಲೆಯು ರಾಜ್ಯದಲ್ಲಿ ಹಲವು ವೈಶಿಷ್ಟ್ಯತೆಗಳಿಗೆ ಹೆಸರುವಾಸಿಯಾಗಿದೆ. ಏಷ್ಯಾ ಖಂಡದಲ್ಲಿಯೇ ಅತಿ ಪ್ರಾಚೀನ ನಿವೇಶನ ಮತ್ತು ಚರಿತ್ರೆ ಹೊಂದಿದ ಜಿಲ್ಲೆ ಚಿತ್ರದುರ್ಗ. ಚಿತ್ರದುರ್ಗ ಎಂದೊಡನೆ ಕೋಟೆ ಕೊತ್ತಲಗಳ ಪ್ರದೇಶ ಕಣ್ಣಿಗೆ ಗೋಚರವಾಗುತ್ತದೆ. ಚರಿತ್ರೆಯ ಕಣಜವಾಗಿರುವ ಈ ಜಿಲ್ಲೆಯಲ್ಲಿ ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ನೊಳಂಬರು ಸೇವುಣರು, ಹೊಯ್ಸಳರು, ವಿಜಯನಗರದ ಅರಸರು, ಪಾಳೆಯಗಾರರು, ಹೈದರ್, ಟಿಪ್ಪು ಹಾಗೂ ಮೈಸೂರಿನ ಒಡೆಯರು ಆಳ್ವಿಕೆ ಮಾಡಿದ್ದಾರೆ. ಇಲ್ಲಿ ಅಪಾರ ಪ್ರಮಾಣದ ಶಾಸನಗಳು, ದೇವಾಲಯಗಳು, ಮೂರ್ತಿಶಿಲ್ಪಗಳು, ಅರಮನೆ ಅವಶೇಷಗಳು, ಕೋಟೆ ಕೊತ್ತಲಗಳು, ಹೊಂಡ, ಬಾವಿ, ಕೆರೆಕಟ್ಟೆ ಮುಂತಾದ ಸ್ಮಾರಕಗಳಿದ್ದು, ಇವು ಇತಿಹಾಸ ರಚನೆಯ ಪ್ರಮುಖ ಆಕರಗಳಾಗಿವೆ. ಪೌರಾಣಿಕ ಸಂಗತಿಗಳು, ಐತಿಹ್ಯಗಳು, ಜನಪದ ನಂಬಿಕೆಗಳು, ಸಾಂಸ್ಕೃತಿಕವಾದ ಜಾತ್ರಾ ಉತ್ಸವಗಳು ಇಲ್ಲಿನ ಬಹುಮುಖಿ ಸಾಂಸ್ಕೃತಿಕ ಪರಂಪರೆಗೆ ಹಿಡಿದ ಕನ್ನಡಿಯಾಗಿದ್ದು, ಮಾನವ ಸಂಸ್ಕೃತಿಯ ಏಳಿಗೆಗಾಗಿ ತನ್ನದೇ ಆದ ಮಹತ್ವದ ಕೊಡುಗೆಯನ್ನು ನೀಡಿವೆ.

**ಚಿತ್ರದುರ್ಗ** ಜಿಲ್ಲೆಯು ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಿಗೆ ಬಹು ಅಮೂಲ್ಯ ಕೊಡುಗೆಗಳನ್ನು ನೀಡಿದೆ. ಜಿಲ್ಲೆಯಾದ್ಯಂತ ಪಸರಿಸಿರುವ ಕೆರೆಗಳು ತನ್ನದೇ ಆದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಹೊಂದಿವೆ. ಬಹುತೇಕ ಕಡೆ ಸುಸ್ಥಿತಿಯಲ್ಲಿರುವ ಪ್ರಾಚೀನ ಕೆರೆಗಳಿದ್ದರೆ, ಇನ್ನು ಕೆಲವು ಕಡೆ ಕೆಲವು ಮುಖ್ಯ ಕೆರೆಗಳು ಭಗ್ನ ಸ್ಥಿತಿಯನ್ನು ತಲುಪಿವೆ. ಇನ್ನು ಕೆಲವು ಕಡೆ ಕೆಲವು ಚಾರಿತ್ರಿಕ ಕೆರೆಗಳು ಸಂಪೂರ್ಣ ಅವಸಾನಗೊಂಡಿದ್ದು, ಅದರ ಪಳೆಯುಳಿಕೆಗಳು ಮಾತ್ರ ನಮಗೆ ಕಾಣಸಿಗುತ್ತವೆ. ಇಲ್ಲಿಯವರೆಗೆ ಈ ಜಿಲ್ಲೆಯ ಕೆರೆಗಳ ಕುರಿತು ಕೆಲವು ಬಿಡಿ ಬರಹಗಳು ಮಾತ್ರ ಬಂದಿದ್ದು, ಅಧ್ಯಯನಗಳನ್ನು ಪೂರೈಸುವುದು ಕಡಿಮೆಯೆಂದೇ ಪರಿಭಾವಿಸಬಹುದು. ಈ ಹಿನ್ನಲೆಯಲ್ಲಿ ಚಾರಿತ್ರಿಕ ಆಕರಗಳು ಮತ್ತು ಇತಿಹಾಸದ ಬಹು ಮುಖ್ಯ ಕೊಂಡಿಗಳಾದ ಕೆರೆಗಳ ಕುರಿತು ಸಮಗ್ರವಾಗಿ ಮತ್ತು ವ್ಯವಸ್ಥಿತ ಅಧ್ಯಯನ ನಡೆಸಿ ಅವುಗಳನ್ನು ಕ್ರಮಬದ್ಧವಾಗಿ ದಾಖಲಿಸುವ

ಅವಶ್ಯಕತೆ ಇದೆ. ತಪ್ಪಿದಲ್ಲಿ ಚರಿತ್ರೆಯ ಕೊಂಡಿಗಳು ಕಳಚಿ ಹೋಗುವ ಅಪಾಯವೂ ಇದೆ. ಕೆರೆಗಳು ಸಬಾಲ್ಟರ್ನ್ ಮತ್ತು ಸ್ಥಳಿಯ ಚರಿತ್ರೆಯ ಅಧ್ಯಯನಕ್ರಮದ ದೃಷ್ಟಿಯಿಂದಲೂ ಅತಿ ಪ್ರಮುಖ ಪಾತ್ರವಹಿಸುತ್ತವೆ. ಏಕೆಂದರೆ ಕೆರೆಗಳ ನಿರ್ಮಾಣ ಮತ್ತು ನಿರ್ವಹಣೆ ಹಾಗೂ ಕೆರೆಗಳ ಬಳಕೆ ಮತ್ತು ಕೆರೆ ಸಂಬಂಧಿ ಆಚರಣೆಗಳ ದೃಷ್ಟಿಯಿಂದ ಕೆಳಸ್ಥರದ ವಿವಿಧ ಸಮುದಾಯಗಳು ಮತ್ತು ಕುಶಲಕರ್ಮಿಗಳು ಹೆಚ್ಚು ಮಹತ್ವದ ಪಾತ್ರವಹಿಸಿದ್ದಾರೆ. ಈ ಹಿನ್ನಲೆಯಲ್ಲಿ ಇದುವರೆಗೆ ವ್ಯವಸ್ಥಿತವಾಗಿ ದಾಖಲಿಸಲಾಗದೇ ಇರುವ ಚಿತ್ರದುರ್ಗ ಪರಿಸರದ ಕೆರಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಅವಶ್ಯಕವಾಗಿ ಅಧ್ಯಯನ ಮಾಡಬೇಕಾಗಿದೆ. ಇಲ್ಲಿನ ಸ್ಥಳೀಯ ಚರಿತ್ರೆ ಅನಾವರಣಗೊಳಿಸುವುದರ ಜೊತೆಗೆ ಸ್ಥಳೀಯ ಜನರ ವೃತ್ತಿ, ಅವರ ಜೀವನ ಕ್ರಮ ಹಾಗೂ ಕೆರೆಗಳ ವೈಶಿಷ್ಟ್ಯತೆಗಳ ಮೇಲೆ ಬೆಳಕನ್ನು ಚೆಲ್ಲುವ ಉದ್ದೇಶದಿಂದ ಪ್ರಸಕ್ತ ವಿಷಯವನ್ನು ಸಂಶೋಧನೆಗಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

ಚಿತ್ರದುರ್ಗ ಜಿಲ್ಲೆಯ ಕೆರೆಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಸಂಬಂಧಿಸಿದಂತೆ ಇದುವರೆಗೆ ಆಗಿರುವ ಅಧ್ಯಯನಗಳು ಯಾವುವು, ಈ ವಿಷಯದ ಬಗ್ಗೆ ಯಾವ ದೃಷ್ಟಿಕೋನದಲ್ಲಿ ಅಧ್ಯಯನಗಳಾಗಿವೆ, ಅದಕ್ಕಿಂತಲೂ ಈ ಪ್ರಸ್ತುತ ಅಧ್ಯಯನ ಹೇಗೆ ಭಿನ್ನವಾಗಿದೆ ಮತ್ತು ಅದರ ದೃಷ್ಟಿಕೋನ ಏನು? ಎನ್ನುವುದನ್ನು ಗುರುತಿಸುವ ಅವಶ್ಯಕತೆ ಇದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಈ ಕೆಳಗಿನ ಉದ್ದೇಶಗಳನ್ನು ಹೊಂದಿರುವುದನ್ನು ಗಮನಿಸಬಹುದು.

೧. ಚಿತ್ರದುರ್ಗ ಜಿಲ್ಲಾ ಪರಿಸರದ ಕೆರೆಗಳ ಹುಟ್ಟು ಬೆಳವಣಿಗೆ ಅವುಗಳಿಂದಾದ ಸಾಂಸ್ಕೃತಿಕ ಪಲ್ಲಟಗಳ ಕುರಿತು ವಿಶ್ಲೇಷಿಸುವುದು.
೩. ಜಿಲ್ಲೆಯ ಕೆರೆಗಳ ಚರಿತ್ರೆಯ ಸಾಮಾಜಿಕ, ಆರ್ಥಿಕ, ವೈಚಾರಿಕ ದೃಷ್ಟಿಯಿಂದ ಅತ್ಯಂತ ಮಹತ್ವ ಪಡೆದಿವೆ. ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬರುವ ನೀರಾವರಿ ಮೂಲಗಳಾದ ಕೆರೆ-ಕಟ್ಟೆ, ಬಾವಿ, ಕಾಲುವೆಗಳ ವೈಶಿಷ್ಟ್ಯತೆಯನ್ನು ದಾಖಲಿಸುವುದು.
೪. ಯಾವುದೇ ದೇಶದಲ್ಲಿ ಅಲ್ಲಿನ ಭೌಗೋಳಿಕ ಅಂಶಗಳು ಬಹು ಮುಖ್ಯವಾದ ಪಾತ್ರವಹಿಸುತ್ತವೆ. ಮುಖ್ಯವಗಿ ಪರಿಸರ ಹಾಗೂ ಲಕ್ಷಣಗಳು ಮತ್ತು ಅವುಗಳ ಮಹತ್ವವನ್ನು ವಿವರಿಸುವುದು.
೫. ದೇಶವೊಂದರ ಪ್ರಗತಿ ಆ ದೇಶದ ಚರಿತ್ರೆಯನ್ನು ಅವಲಂಬಿಸಿರುತ್ತದೆ. ಆದ್ದರಿಂದ ಚಿತ್ರದುರ್ಗ ಜಿಲ್ಲೆಯ ಪ್ರಾಗೈತಿಹಾಸಿಕ ಸಂಸ್ಕೃತಿಯ ವೈಶಿಷ್ಟ್ಯತೆಯನ್ನು ಮತ್ತು ಅದರ ಉಪ ಕಾಲಘಟ್ಟಗಳಾದ ಹಳೆಯ ಶಿಲಾಯುಗ, ಮಧ್ಯ ಶಿಲಾಯುಗ, ನವ ಶಿಲಾಯುಗ, ಬೃಹತ್ ಶಿಲಾಯುಗಗಳ ಮಹತ್ವ ಹಾಗೂ ಜಿಲ್ಲೆಯಲ್ಲಿನ ಅವುಗಳ ವಿವಿಧ ನೆಲೆಗಳನ್ನು ಗುರುತಿಸುವುದು.
೬. ಚಿತ್ರದುರ್ಗ ಜಿಲ್ಲೆಯ ಚಾರಿತ್ರಿಕ ಕಾಲಘಟ್ಟದಲ್ಲಿ ಆಳ್ವಿಕೆ ಮಾಡಿದ ಪ್ರಾಚೀನ ಕಾಲದ ರಾಜಮನೆತನಗಳು ಮತ್ತು ಮಧ್ಯಯುಗೀನ ಕಾಲದ ರಾಜಮನೆತನಗಳು ಹಾಗೂ ಮಧ್ಯಯುಗದ ನಂತರ ಕಾಲದ ಪಾಳೇಯಗಾರರ ಮಹತ್ವ, ಪ್ರಮುಖ ಅರಸರು ಮತ್ತು ಅವರ ಕೊಡುಗೆಗಳ ಕುರಿತು ಚರ್ಚಿಸುವುದು.
೭. ಚಾರಿತ್ರಿಕ ಹಿನ್ನೆಲೆಯಲ್ಲಿ ಕರ್ನಾಟಕದ ಕೆರೆಗಳ ಮಹತ್ವ, ಕೆರೆಗಳ ಹುಟ್ಟು, ಅರ್ಥ, ವ್ಯಾಖ್ಯಾನಗಳು ಮತ್ತು ಕೆರೆಗಳ ನಿರ್ಮಾಣದ ಹಿನ್ನೆಲೆ ಮತ್ತು ಮಹತ್ವವನ್ನು ವಿವರಿಸುವುದು.

೮. ಕೆರೆಗಳ ಪ್ರಮುಖ ಅಂಗಗಳು, ಅವುಗಳ ತಾಂತ್ರಿಕತೆ ಹಾಗೂ ಕೆರೆ ನೀರಾವರಿ ವ್ಯವಸ್ಥೆ, ಅವುಗಳ ನಿರ್ವಹಣೆಯ ಸ್ವರೂಪಗಳನ್ನು ಅರಿಯುವುದರೊಂದಿಗೆ ಕೆರೆಗಳ ನಿರ್ಮಾಣ ಮತ್ತು ಸಂರಕ್ಷಣೆಯ ವಿವಿಧ ವಿಧಾನಗಳನ್ನು ಅವಲೋಕಿಸುವುದು.

೯. ಚಿತ್ರದುರ್ಗ ಜಿಲ್ಲೆಯ ಪ್ರಮುಖ ಐತಿಹಾಸಿಕ ಕೆರೆಗಳು ಮತ್ತು ಅವುಗಳು ವಿವಿಧ ಕಾಲಘಟ್ಟಗಳಲ್ಲಿ ನಿರ್ವಹಿಸಿದ ರಾಜಕೀಯ, ಸಾಮಾಜಿಕ, ಆರ್ಥಿಕ ಸಾಂಸ್ಕೃತಿಕ ಪಾತ್ರವನ್ನು ವಿಶ್ಲೇಷಿಸುವುದರೊಂದಿಗೆ ಜಿಲ್ಲೆಯಲ್ಲಿನ ಮಹತ್ವದ ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ(ಸಮಕಾಲೀನ) ಕೆರೆಗಳನ್ನು ವ್ಯವಸ್ಥಿತವಾಗಿ ದಾಖಲಿಸುವುದು.

೧೦. ಜಿಲ್ಲೆಯಲ್ಲಿನ ಕೆರೆಗಳ ಆಡಳಿತ ನಿರ್ವಹಣಾ ವ್ಯವಸ್ಥೆ ಮತ್ತು ಅದಕ್ಕಾಗಿ ನೇಮಿತವಾಗಿದ್ದ ವಿವಿಧ ಅಧಿಕಾರಿ ವರ್ಗ, ಅವರು ನಿರ್ವಹಿಸಬೇಕಿದ್ದ ಕಾರ್ಯಗಳನ್ನು ಅರ್ಥೈಸುವುದರೊಂದಿಗೆ ಅಂದಿನ ಕೃಷಿ–ನೀರಾವರಿ ವ್ಯವಸ್ಥೆಯ ಸ್ವರೂಪ, ಅಂದು ಬಳಕೆಯಲ್ಲಿದ್ದ ನೀರಿನ ತೆರಿಗೆ ವ್ಯವಸ್ಥೆ ಮತ್ತು ಬಳಕೆದಾರರ ಕರ್ತವ್ಯಗಳನ್ನು ಚರ್ಚಿಸುವುದು.

೧೧. ಅಂದಿನ ಜಲನಿರ್ವಹಣೆ ಮತ್ತು ಆಯಾಗಾರ ಪದ್ಧತಿಯ ಸ್ವರೂಪ, ಅದಕ್ಕಾಗಿ ಅವರು ಪಡೆಯುತ್ತಿದ್ದ ವೇತನ ಇಲ್ಲವೇ 'ಆಯಾ'(ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಪಡೆಯುತ್ತಿದ್ದ ದವಸ ಧಾನ್ಯ ಇತ್ಯಾದಿ) ಹಾಗೂ ಅಂದಿನ ಕೆರೆಗಳ ಸ್ಥಳೀಯ ಆಡಳಿತ ವ್ಯವಸ್ಥೆ, ಕೆರೆ ಮೀನುಗಾರಿಕೆ ಮತ್ತು ಕೆರೆ ಸಂಬಂಧಿ ಇತರೆ ವೃತ್ತಿಗಳನ್ನು ಚರ್ಚಿಸಿ ದಾಖಲಿಸುವುದು.

೧೨. ಕಾಲದಿಂದ ಕಾಲಕ್ಕೆ ಆದ ಜಿಲ್ಲೆಯ ಕೆರೆಗಳ ಸಂರಕ್ಷಣಾ ಕ್ರಮ ಮತ್ತು ಸಂರಕ್ಷಣೆಯ ವಿವಿಧ ಆಯಾಮಗಳು ಹಾಗೂ ಕೆರೆಗಳ ಜೀರ್ಣೋದ್ಧಾರ ಮತ್ತು ದುರಸ್ತಿ ಕಾರ್ಯಗಳನ್ನು ವಿಶ್ಲೇಷಿಸುವುದರೊಂದಿಗೆ ಕೆರೆಗಳ ಪುನರಾಭಿವೃದ್ಧಿಯ ಅವಶ್ಯಕತೆ ಮತ್ತು ಪರಿಹಾರ ಕ್ರಮಗಳನ್ನು ಮೌಲ್ಯೀಕರಿಸುವುದು.

೧೩. ಚಿತ್ರದುರ್ಗ ಜಿಲ್ಲೆಯಲ್ಲಿ ಅತಿ ಕಡಿಮೆ ಮಳೆ ಬೀಳುತ್ತದೆ. ಪದೇ ಪದೇ ಬರಗಾಲ ಸಂಭವಿಸುತ್ತದೆ. ಇದಕ್ಕೇನು ಕಾರಣ ಎಂಬುದನ್ನು ಕೆರೆಗಳ ನಿರ್ಮಾಣದ ಹಿನ್ನೆಲೆಯಲ್ಲಿ ಉತ್ತರವನ್ನು ಕಂಡು ಕೊಳ್ಳಬೇಕಾಗಿದೆ.

೧೪. ಯಾವುದೇ ಸಮಾಜದಲ್ಲಿ ನಂಬಿಕೆ ಮತ್ತು ಆಚರಣೆಗಳು ಪ್ರಮುಖ ಪಾತ್ರವಹಿಸುತ್ತವೆ. ಅದರಂತೆ ಜಿಲ್ಲೆಯ ಕೆರೆ ಸಂಬಂಧಿ ನಂಬಿಕೆ ಮತ್ತು ಆಚರಣೆಗಳನ್ನು ಮತ್ತು ಅಲ್ಲಿರುವ ಐತಿಹ್ಯ, ಸಂಪ್ರದಾಯಗಳು ಹಾಗೂ ಜಾನಪದ ಆಶಯ ಮತ್ತು ವಿಧಿ ನಿಷೇಧಗಳನ್ನು ಚರ್ಚಿಸುವುದು.

೧೫. ಜಿಲ್ಲೆಯ ಕೆರೆಗಳಿಗೆ ಸಂಬಂಧಿಸಿದ ಮಹತ್ವದ ಜಾನಪದ ಕಥೆಗಳು ಹಾಗೂ ಪ್ರಮುಖ ಜಾನಪದ ಹಾಡುಗಳನ್ನು ಈ ಅಧ್ಯಯನಕ್ಕೆ ಪೂರಕವಾಗಿ ವಿವರಿಸುವುದು

೧೬. ಜಿಲ್ಲೆಯಲ್ಲಿನ ಕೆರೆಗಳಿಗೆ ಸಂಬಂಧಿಸಿದಂತೆ ನೀಡಿದ ದಾನ ದತ್ತಿ ಮೊದಲಾದ ಅಂಶಗಳನ್ನು ಇಲ್ಲಿ ದೊರೆತ ಪ್ರಮುಖ ಶಾಸನಗಳು ಯಾವ ರೀತಿ ಉಲ್ಲೇಖಿಸಿವೆ ಎನ್ನುವುದನ್ನು ವಿಶದೀಕರಿಸುವುದು.

### ೧.೨. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಪಾಶ್ಚಾತ್ಯ ವಿದ್ವಾಂಸರಿಂದ ಆರಂಭಗೊಂಡು ಇತ್ತೀಚಿನ ಸಂಶೋಧಕರವರೆಗೆ ಈ ಜಿಲ್ಲೆಯಲ್ಲಿ ವಿವಿಧ ಆಯಾಮಗಳಲ್ಲಿ ಹಲವಾರು ಅಧ್ಯಯನಗಳಾಗಿವೆ. ಹಲವು ವಿದ್ವಾಂಸರು ಮತ್ತು ಸಂಶೋಧಕರು ತಮ್ಮ ಅಧ್ಯಯನದ ಪರಿಮಿತಿಯಲ್ಲಿ ಚಿತ್ರದುರ್ಗ ಜಿಲ್ಲೆಯ ಕುರಿತು ಗ್ರಂಥ, ಪ್ರಬಂಧ, ಲೇಖನಗಳನ್ನು ರಚಿಸಿದ್ದಾರೆ. ಆದರೆ ಕೆರೆಗಳ ಕುರಿತು ಇಡೀ ಕರ್ನಾಟಕವನ್ನೊಳಗೊಂಡಂತೆ ವಿರಳ ಅಧ್ಯಯನಗಳು ಮತ್ತು ಪೂರಕ ಮತ್ತು ಬಿಡಿ ಅಧ್ಯಯನಗಳು ಮಾತ್ರ ಇದುವರೆಗೆ ನಡೆದಿವೆ. ಅದರಂತೆ ಚಿತ್ರದುರ್ಗ ಜಿಲ್ಲೆಯ ಕೆರೆಗಳ ಕುರಿತು ಚಾರಿತ್ರಿಕವಾಗಿಯಾಗಲೀ ಅಥವಾ ಬೇರೆ ಆಯಾಮದಿಂದಾಗಲಿ ಅಧ್ಯಯನಗಳು ಇದುವರೆಗೂ ಸಮಗ್ರವಾಗಿ ನಡೆದಿಲ್ಲ. ಅವುಗಳನ್ನು ಈ ಮುಂದೆ ವಿವರಿಸಲಾಗಿದೆ.

ಕೆ.ಕುಪ್ಪುಸ್ವಾಮಿಯವರು 'ಟ್ಯಾಂಕ್ ಇರಿಗೇಶನ್ ಇನ್ ಕರ್ನಾಟಕ ಹಿಸ್ಟಾರಿಕಲ್ ಸರ್ವೆ' ಎನ್ನುವ ಕೃತಿಯಲ್ಲಿ ಕರ್ನಾಟಕದ ಕೆರೆಗಳ ಪ್ರಾಚೀನತೆಯನ್ನು ಮತ್ತು ಅವುಗಳ ವಿಶೇಷತೆಯನ್ನು ವಿಭಿನ್ನ ಆಕರಗಳ ಸಹಾಯದಿಂದ ಬಣ್ಣಿಸಿದ್ದಾರೆ. ಸಿ.ಟಿ.ಎಂ. ಕೊಟ್ರಯ್ಯನವರು(ಮೂಲ) ಧ್ರುವನಾರಾಯಣ ಎಂ.(ಅನುವಾದ) 'ಇರಿಗೇಶನ್ ಇನ್ ಅಂಡರ್ ವಿಜಯನಗರ ಎಂಪೈಯರ್ ಎಂಬ ಕೃತಿಯಲ್ಲಿ ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿನ ಕೆರೆ-ಬಾವಿ, ಕಾಲುವೆಗಳನ್ನು ಉಲ್ಲೇಖಿಸುತ್ತ, ಕೆರೆಗಳನ್ನು ಕಟ್ಟುವ ಉದ್ದೇಶ, ಭೌಗೋಳಿಕ ಪರಿಸರದ ಹಿನ್ನೆಲೆ, ಕೆರೆಗಳನ್ನು ಕಟ್ಟುವಲ್ಲಿ ಮುಂದಾದ ರಾಜರು, ಗ್ರಾಮಗಳ ಸ್ಥಾನಿಕ ಅಧಿಕಾರಿಗಳು, ದಂಡನಾಯಕರ ಬಗ್ಗೆ ಶಾಸನಾಧಾರಗಳ ಮೂಲಕ ಪರಿಚಯಿಸಿದ್ದಾರೆ. ಜಿ.ಎಸ್. ದೀಕ್ಷಿತ್, ಜಿ ಆರ್ ಕುಪ್ಪುಸ್ವಾಮಿ, ಎಸ್.ಕೆ ಮೋಹನ ಅವರು ಸಂಯುಕ್ತವಾಗಿ ಬರೆದ 'ಕರ್ನಾಟಕದಲ್ಲಿ ಕೆರೆ ನೀರಾವರಿ' ಎಂಬ ಗ್ರಂಥದಲ್ಲಿ (ಇದನ್ನು ನೀಲತ್ತಳ್ಳಿ ಕಸ್ತೂರಿಯವರು "ಕರ್ನಾಟಕದಲ್ಲಿ ಕೆರೆ ನೀರಾವರಿ" ಎಂಬ ಕೃತಿಯನ್ನು ೨೦೦೦ ರಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ) ಪ್ರಾಚೀನ ಕಾಲದಿಂದ ಬ್ರಿಟಿಷರ ಆಡಳಿತದವರೆಗಿನ ಕೆರೆಗಳ ಸಂರಕ್ಷಣೆ, ಜಲ ನಿರ್ವಹಣೆ ಮತ್ತು ಹಣಕಾಸು ಎಂಬಿತ್ಯಾದಿ ಮಹತ್ವದ ಅಂಶಗಳನ್ನು ಕುರಿತು ಚರ್ಚಿಸಿದ್ದಾರೆ. ಅದೇ ರೀತಿ ರಾಜಾರಾಮ ಹೆಗಡೆಯವರು ಸಂಪಾದಿಸಿರುವ 'ಕೆರೆ ನಿರ್ವಹಣೆಯ ಚಾರಿತ್ರಿಕ ಅಧ್ಯಯನ' ಎಂಬ ಕೃತಿಯಲ್ಲಿ ಪ್ರಾಚೀನ, ಮಧ್ಯಕಾಲೀನ ಕರ್ನಾಟಕದಲ್ಲಿ ಕೆರೆಗಳ ಚಾರಿತ್ರಿಕ ಅಂಶಗಳು. ತಾಂತ್ರಿಕತೆ ಮತ್ತು ಮಿತಿಗಳು ಹಾಗೂ ಕೆರೆಗಳ ನಿರ್ವಹಣೆ ಹಾಗೂ ಜಲ ನಿರ್ವಹಣೆಯಲ್ಲಿ ಜನಸಾಮಾನ್ಯರ ಪಾತ್ರಗಳ ಕುರಿತಾದ ಲೇಖನಗಳಿವೆ. ಸಿ.ಎಸ್ ವಾಸುದೇವನ್‌ರವರು "ಹಂಪಿ ಪರಿಸರದ ಕೆರೆಗಳು' ಪ್ರಾಚೀನ ಭಾರತದಲ್ಲಿದ್ದ ಕೆರೆ ನೀರಾವರಿ ಪದ್ಧತಿಯೊಂದಿಗೆ ಅಂದಿನ ಕಾಲದ ತೆರಿಗೆ ಪದ್ಧತಿ, ಕೆರೆ ಕಟ್ಟಲು ಇದ್ದ ನಂಬಿಕೆ, ಆಚರಣೆಗಳನ್ನು ಕುರಿತು ಚರ್ಚಿಸುತ್ತಾ ಬಳ್ಳಾರಿ ಜಿಲ್ಲೆಯಲ್ಲಿ ಕೆರೆಯ ಅಧಿದೇವತೆಯಾಗಿ ಪೂಜೆಗೊಳ್ಳುವ ಕನ್ನೀರಮ್ಮನ ಬಗ್ಗೆ ಸಂಕ್ಷಿಪ್ತವಾಗಿ ಬರೆದಿದ್ದಾರೆ.

ಅಲ್ಲದೇ ಜಿ.ಎಸ್. ದೀಕ್ಷಿತ್ ರವರು 'ಕೆರೆಗಳ ಬಗ್ಗೆ ಐತಿಹಾಸಿಕ ಸಂಶೋಧನೆಯ ಅವಶ್ಯಕತೆ' ಹಾಗೂ ಎಸ್.ಕೆ ಮೋಹನ್ ಅವರು 'ಕರ್ನಾಟಕದ ಕೆಲವು ಹಳೆಯ ಕೆರೆಗಳು' ಮತ್ತು ಎನ್.ಜಿ ಸಂತೋಷ್ ಮತ್ತು ಜೆ.ಬಿ. ನಾಗವೇಣಿಯವರು 'ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ನಾಯಕರ ಕಾಲದ ಕೆರೆ ನೀರಾವರಿ ವ್ಯವಸ್ಥೆ (ಕ್ರಿ.ಶ. ೧೩೩೬-೧೮೦೦) ಮತ್ತು ಶ್ರೀಧರ ಅವರು

'ತುಮಕೂರು ಪರಿಸರದ ಐತಿಹಸಿಕ ಕೆರೆಗಳು', ಕೆ.ಜಿ ವಸಂತ ಮಾಧವ ಅವರು 'ಕರ್ನಾಟಕ ಕರಾವಳಿಯ ನೀರಾವರಿ ಇತಿಹಾಸ', ಆರ್. ವೆಂಕಟೇಶ್ ಮೂರ್ತಿಯವರು 'ಕೆಲವು ಶಾಸನೋಕ್ತ ವ್ಯಕ್ತಿನಾಮಗಳ ಕೆರೆಗಳು' ಎನ್ನುವ ಲೇಖನಗಳು ಇತಿಹಾಸ ದರ್ಶನದ ವಿವಿಧ ಸಂಪುಟಗಳಲ್ಲಿ ಪ್ರಕಟಗೊಂಡಿವೆ.

ಬಿ.ಎಲ್.ರೈಸ್‌ರವರು ಸಂಪಾದಿಸಿರುವ 'ಎಪಿಗ್ರಾಫಿಯಾ ಕರ್ನಾಟಕ' ಸಂ–೯ರಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿರುವ ಶಾಸನಗಳನ್ನು ವಿವರಿಸಿದ್ದು, ಅದರಲ್ಲಿ ಶಾಸನೋಕ್ತ ಕೆರೆಗಳ ವಿವರಗಳನ್ನು ದಾಖಲಿಸಿದ್ದಾರೆ.

ಬಿ.ರಾಜಶೇಖರಪ್ಪನವರು 'ಚಿತ್ರದುರ್ಗ ಪ್ರದೇಶದ ಕೆರೆಗಳು' ಎಂಬ ಲೇಖನವನ್ನು ಪ್ರಕಟಿಸಿದ್ದಾರೆ. ಅವರೇ ಪ್ರಾಚೀನ ಚಿತ್ರದುರ್ಗ ಮತ್ತು ದುರ್ಗಶೋಧನ ಎನ್ನುವ ಕೃತಿಗಳಲ್ಲಿ ಈ ಭಾಗದ ಚರಿತ್ರೆ ಮತ್ತು ಸಾಹಿತ್ಯವನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಅದೇರೀತಿ ಪ್ರೊ ಲಕ್ಷ್ಮಣ್ ತೆಲಗಾವಿ ಅವರು ಇದು ಚಿತ್ರದುರ್ಗ, ಚಿತ್ರದುರ್ಗಕ್ಕೆ ಬನ್ನಿ (ಸಚಿತ್ರ ಪ್ರವಾಸಿ ಮಾರ್ಗದರ್ಶಿ) ಕೃತಿಗಳಲ್ಲಿ ದುರ್ಗದ ಸ್ಮಾರಕಗಳನ್ನು ಅನಾವರಣಗೊಳಿಸಿದ್ದಾರೆ. ಅವರ 'ಹರತಿ ಸಿರಿ', ಚಂದ್ರವಳ್ಳಿ, ದೊಡ್ಡೇರಿ ಕದನ (ಚರಿತ್ರೆ ಮತ್ತು ಜಾನಪದಗಳ ಹಿನ್ನೆಲೆಯಲ್ಲಿ), 'ಚಿತ್ರದುರ್ಗದ ಲಡಾಯಿ ಲಾವಣಿ' ಡಾ.ಎನ್.ಎಸ್ ಮಹಾಂತೇಶ್ ರವರು 'ಚಿತ್ರದುರ್ಗ ಕೋಟೆ ಪರಿಸರದ ದೇವಾಲಯಗಳು' ಎನ್ನುವ ಕೃತಿಯಲ್ಲಿ ಇಲ್ಲಿನ ದೇವಾಲಯಗಳ ಕುರಿತು ವಿಶ್ಲೇಷಿಸಿದ್ದಾರೆ. ಎಸ್.ಜಿ. ರಾಮದಾಸ ರೆಡ್ಡಿಯವರು 'ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ' ಮತ್ತು ಕ್ಷೇತ್ರಕಾರ್ಯ (ಇತಿಹಾಸ ಮತ್ತು ಪುರಾತತ್ವ ಶೋಧ ಕಾರ್ಯ) ಎನ್ನುವ ಕೃತಿಗಳಲ್ಲಿ ಈ ಜಿಲ್ಲೆಯಲ್ಲಿ ಅವರು ಶೋಧಿಸಿದ ಪ್ರಾಗೀತಿಹಾಸದ ನೆಲೆಗಳನ್ನು ವಿವರಿಸಿದ್ದಾರೆ.

ಆರ್. ಗೋಪಾಲ್‌ರವರು ಸಂಪಾದಿಸಿರುವ 'ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಎನ್ನುವ ಕೃತಿಯಲ್ಲಿ ಜಿಲ್ಲೆಯಲ್ಲಿನ ಇತಿಹಾಸವನ್ನು ವಿಶ್ಲೇಷಿಸಲಾಗಿದೆ. ಎಸ್.ವೈ. ಸೋಮಶೇಖರ್ ಅವರು ರಚಿಸಿರುವ 'ಜಟಂಗಿರಾಮೇಶ್ವರ' ಮತ್ತು 'ಚಿತ್ರದುರ್ಗ ಜಿಲ್ಲೆಯ ದೇವಾಲಯ ಕೋಶ'ದಲ್ಲಿ ಇಲ್ಲಿನ ದೇವಾಲಯಗಳ ಚಾರಿತ್ರಿಕ ಮಹತ್ವವನ್ನು ವಿವರಿಸಿದ್ದಾರೆ. ಮರಿಕುಂಟೆ ತಿಪ್ಪೇಸ್ವಾಮಿಯವರು 'ಮೊಳಕಾಲ್ಮೂರು ದರ್ಶನ' ಎನ್ನುವ ಪುಸ್ತಕದಲ್ಲಿ ಇಲ್ಲಿನ ವೀರಗಲ್ಲು, ಮಾಸ್ತಿಕಲ್ಲು ಹಾಗೂ ಶಾಸನಗಳ ವೈಶಿಷ್ಟ್ಯತೆಯನ್ನು ವಿವರಿಸಿದ್ದರೆ. ಎಂ.ಚಂದ್ರಪೂಜಾರಿಯವರು ಸಂಪಾದಿಸಿರುವ 'ಸಮುದಾಯ ಮತ್ತು ಸಹಭಾಗಿತ್ವ' ಕೃತಿಯಲ್ಲಿ ಕೆರೆಗಳ ನಿರ್ವಹಣೆ ಮತ್ತು ಸಮುದಾಯ ಸಹಭಾಗಿತ್ವ ಕುರಿತ ಲೇಖನಗಳಿವೆ.

ಚಿತ್ರದುರ್ಗದ ಕೆರೆಗಳ ವಿಷಯ ಲಕ್ಷ್ಮಣ್ ತೆಲಗಾವಿ ಮತ್ತು ಕೆ. ವೆಂಕಣ್ಣಾಚಾರ್ ಸಂಪಾದಿಸಿದ ಐತಿಹಾಸಿಕ ಚಿತ್ರದುರ್ಗದಲ್ಲಿ ಟಿ.ಎನ್.ಗಂಡುಗಲಿ ಅವರು ಚಿತ್ರದುರ್ಗದ ಜಲಾಶಯಗಳು ಎಂಬ ಲೇಖನವಿದೆ.

ಓ.ಎಸ್. ರಾಜಪ್ಪ ಅವರು ಸಂಪಾದಿಸಿರುವ 'ಕೆರೆ ಹೊನ್ನಮ್ಮ ಮತ್ತು ಇತರೆ ಲಾವಣಿಗಳು' ಎನ್ನುವ ಕೃತಿಯಲ್ಲಿ ಕೆರೆ ಹೊನ್ನಮ್ಮನ ಕುರಿತು ವಿವರಿಸಿದ್ದಾರೆ. ಟಿ. ಗಿರಿಜಾರವರು ರಚಿಸಿದ

ಭಾರತದ ನದಿಗಳು, ದುರ್ಗದ ನಾಗತಿಯರು, ಮತ್ತು ಚಿತ್ರದುರ್ಗ ಜಿಲ್ಲಾ ದರ್ಶಿನಿ ಎಂಬ ಕೃತಿಗಳಲ್ಲಿ ವಿವಿಧ ವಿಷಯಗಳ ಬಗ್ಗೆ ಪ್ರಸ್ತಾಪಿಸಿ ಇಲ್ಲಿರುವ ಕೆಲವು ಕೆರೆಗಳ ಹೆಸರುಗಳನ್ನು ಸಂಕ್ಷಿಪ್ತವಾಗಿ ಉಲ್ಲೇಖಿಸಿದ್ದಾರೆ. ಕೆ.ವಿ. ಸಂತೋಷ್‌ರವರು ಹೊಳಲ್ಕೆರೆ ತಾಲ್ಲೂಕು ದರ್ಶನ ಎನ್ನುವ ಕೃತಿಯಲ್ಲಿ ಆ ತಾಲ್ಲೂಕಿನ ಕೆರೆಗಳ ಮಾಹಿತಿ ನೀಡಿದ್ದಾರೆ. ಟಿ.ವಿ. ನಾಗರಾಜರವರು 'ಚಿತ್ರದುರ್ಗ ಜಿಲ್ಲೆಯ ಶಾಸನೋಕ್ತ ಕೆರೆ ನೀರಾವರಿ' ಮತ್ತು ಕೆರೆಗಳ ಸಾಂದ್ರತೆ–ಒಂದು ಅವಲೋಕನದ ಕುರಿತು ಇತಿಹಾಸ ದರ್ಶನದಲ್ಲಿ ಲೇಖನಗಳನ್ನು ಪ್ರಕಟಿಸಿದ್ದಾರೆ. ಅಥಣಿ ಎಸ್ ಶಂಕರ್‌ರವರು ಚಿತ್ರದುರ್ಗ ಏಳು ಸುತ್ತಿನಕೋಟೆ ಎಂಬ ಲೇಖನವನ್ನು ಬರೆದಿದ್ದಾರೆ.

ವಿರೂಪಾಕ್ಷಿ ಪೂಜಾರಹಳ್ಳಿ ಅವರ ಜಲಸಂಬಂಧಿ ಚಳುವಳಿಗಳು ಎಂಬ ಕೃತಿಯಲ್ಲಿ ಈ ಜಿಲ್ಲೆಯ ಕೆರೆ, ನದಿ, ಕೊಳ್ಳ, ಬಾವಿ, ಇತರ ವಿವರಗಳ ಸಮಗ್ರ ಮಾಹಿತಿಯಿದೆ. ಬಿ. ಸುರೇಶ್‌ರವರ 'ಚಿತ್ರದುರ್ಗ–ದಾವಣಗೆರೆ ಜಿಲ್ಲೆಯ ದೇವಾಲಯಗಳು' ಎನ್ನುವ ಕೃತಿಯಲ್ಲಿ ಈ ಭಾಗದ ದೇವಾಲಯಗಳ ಜೊತೆ ಕೆರೆಗಳ ಮಾಹಿತಿಗಳಿವೆ. ಹೆಚ್. ಗುಡ್ಡದೇಶ್ವರಪ್ಪನವರು, 'ಚಿತ್ರದುರ್ಗದ ಐತಿಹಾಸಿಕ ಸ್ಮಾರಕಗಳು' ಎನ್ನುವ ಕೃತಿಯಲ್ಲಿ ಇಲ್ಲಿನ ಸ್ಮಾರಕಗಳ ಕುರಿತು ಚರ್ಚಿಸಿದ್ದಾರೆ. ಅಲ್ಲದೇ ಅವರೇ ಚಂದ್ರವಳ್ಳಿ ಪ್ರದೇಶ ಮತ್ತು ಪ್ರಾಚ್ಯಾವಶೇಷಗಳು ಎನ್ನುವ ಲೇಖನವನ್ನು ಹಾಗೂ ಚಿನ್ಮೂಲಾದ್ರಿ(೭೫ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ)ಯಲ್ಲಿ 'ಐತಿಹಾಸಿಕ ಭೀಮಸಮುದ್ರದ ಕೆರೆ ಹಾಗೂ ನೀರಿಗಾಗಿ ರೈತರ ಹೋರಾಟ' ಮತ್ತು 'ಚಿತ್ರದುರ್ಗ ನಗರದ ಕೆರೆಗಳು' ಎನ್ನುವ ತಮ್ಮ ಪ್ರಬಂಧವನ್ನು ರಾಷ್ಟ್ರಮಟ್ಟದ ವಿಚಾರ ಸಂಕಿರಣದಲ್ಲಿ ಮಂಡಿಸಿದ್ದಾರೆ. ಮತ್ತು ಸಣ್ಣ ನೀರಾವರಿ ಇಲಾಖೆ, ಜಲಸಂಪನ್ಮೂಲ ಇಲಾಖೆಗಳು ಪ್ರಕಟಿಸಿರುವ ವಾರ್ಷಿಕ ವರದಿಗಳು ಹಾಗೂ ಚಿತ್ರದುರ್ಗ ಜಿಲ್ಲಾ ಅಂಕಿ ಅಂಶಗಳ ಕೈಪಿಡಿಗಳಲ್ಲಿ ಇಲ್ಲಿನ ಕೆರೆಗಳ ಮಾಹಿತಿ ಇದೆ.

ಕುಮಾರ್ ಎನ್. ಅವರು ತಮ್ಮ ಎಂ.ಎ. ಪದವಿಗಾಗಿ 'ಚಳ್ಳಕೆರೆ ತಾಲೂಕಿನ ಪ್ರಮುಖ ಕೆರೆಗಳು' ಎನ್ನುವ ಪ್ರಬಂಧ ಸಿದ್ಧಪಡಿಸಿ ಅದರಲ್ಲಿ ಕೆಲವು ಕೆರೆಗಳ ಮಾಹಿತಿ ನೀಡಿದ್ದಾರೆ. ಅದೇ ರೀತಿ ಮಾರುತಿ ಹೆಚ್. ಅವರು 'ಚಿತ್ರದುರ್ಗ ಐತಿಹಾಸಿಕ ಕೆರೆಗಳು' ಎನ್ನುವ ಪ್ರಬಂಧವನ್ನು ತಮ್ಮ ಎಂ.ಎ.ಪದವಿಗಾಗಿ ಸಿದ್ಧಪಡಿಸಿದ್ದು, ಅದರಲ್ಲಿ ಕೆಲ ಪ್ರಕಟಿತ ಕೆರೆಗಳ ಮಾಹಿತಿ ನೀಡಿದ್ದಾರೆ. ಇದಲ್ಲದೇ ಆರ್ ಜಗದೀಶರವರು 'ಮೊಳಕಾಲ್ಮೂರು ತಾಲೂಕಿನ ಕೆರೆಗಳು' ಎನ್ನುವ ಪ್ರಬಂಧವನ್ನು ತಮ್ಮ ಎಂ.ಎ.ಪದವಿಗಾಗಿ ಸಿದ್ಧಪಡಿಸಿದ್ದು, ಅದರಲ್ಲಿ ಕೆಲ ಪ್ರಕಟಿತ ಕೆರೆಗಳ ಮಾಹಿತಿ ನೀಡಿದ್ದಾರೆ. ಅಲ್ಲದೇ ಸತ್ಯನ್.ಬಿ. ಅವರು ಸಂಪಾದಿಸಿರುವ 'ಚಿತ್ರದುರ್ಗ ಡಿಸ್ಟ್ರಿಕ್ ಗ್ಯಾಸೆಟಿಯರ್'ನಲ್ಲಿ ಜಿಲ್ಲೆಯ ಸಮಗ್ರ ಮಾಹಿತಿ ಒದಗಿಸಿದ್ದಾರೆ. ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ಎಂ.ಎ. ಅಧ್ಯಯನದ ನಿಬಂಧಗಳನ್ನು ಕೆರೆಗಳ ಬಗ್ಗೆ ಅಧ್ಯಯನ ಮಾಡಿ ಸಲ್ಲಿಸಿರುತ್ತಾರೆ.

ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಇತಿಹಾಸ ಕುರಿತು ಅಧ್ಯಯನ ಮಾಡುವಾಗ ಕೆರೆಗಳು ಸಹಾ ಇದರ ಉನ್ನತಿಗೆ ಬರುತ್ತವೆ. ಕರ್ನಾಟಕದಲ್ಲಿ ಕೆರೆಗಳ ಬಗ್ಗೆ ಅಧ್ಯಯನ ಮಾಡಲು ಜಿ.ಎಸ್.ದೀಕ್ಷಿತ್, ಶ್ರೀನಿವಾಸ ಹಾವನೂರ, ಸೂರ್ಯನಾಥ ಕಾಮತ್, ಸಿ.ಟಿ.ಎಂ.ಕೊಟ್ರಯ್ಯ ಮೊದಲಾದ ವಿದ್ವಾಂಸರು ಅಗತ್ಯವಾದ ಚಾರಿತ್ರಿಕವಾಗಿ ಅಧ್ಯಯನ ಮಾಡಲು ಪ್ರೋತ್ಸಾಹಿಸಿದ್ದರು.

೧೯೯೨ರಲ್ಲಿ ಚಿತ್ರದುರ್ಗದಲ್ಲಿ ಕರ್ನಾಟಕ ಇತಿಹಾಸ ಅಕಾಡೆಮಿ ಸಮ್ಮೇಳನದಲ್ಲಿ ಜಿ.ಎಸ್.ದೀಕ್ಷಿತ್ ಅವರು ಕೆರೆಗಳ ಬಗ್ಗೆ ಐತಿಹಾಸಿಕ ಸಂಶೋಧನೆಯ ಅವಶ್ಯಕತೆ' ಬಗ್ಗೆ ಪ್ರಬಂಧ ಮಂಡಿಸಿರುತ್ತಾರೆ. ಇವರ ಮತ್ತೊಂದು ಪ್ರಬಂಧ ಕೆರೆಗಳು: ಚಾರಿತ್ರಿಕ ಅಂಶಗಳು ಎಂಬುದು. ಇಲ್ಲಿ ಚರಿತ್ರೆಯ ವಿವಿಧ ಕಾಲಘಟ್ಟದಲ್ಲಿ ನಿರ್ಮಾಣವಾದ ಕೆರೆಗಳ ಬಗ್ಗೆ ಚರ್ಚಿಸಿರುತ್ತಾರೆ. ಶ್ರೀನಿವಾಸ ಹಾವನೂರ(ಸಂ), ಮಧ್ಯಕಾಲೀನ ಕರ್ನಾಟಕ(ಜಿ.ಎಸ್.ದೀಕ್ಷಿತ್ ಅವರ ಆಯ್ದ ಬರಹಗಳು), ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು ಇವರು ೨೦೦೮ರಲ್ಲಿ ಪ್ರಕಟಿಸಿರುತ್ತಾರೆ.

ಈ ಮೇಲಿನ ಎಲ್ಲಾ ಅಧ್ಯಯನಗಳನ್ನು ಗಮನಿಸಿದರೆ ಚಿತ್ರದುರ್ಗ ಜಿಲ್ಲೆಯ ರಾಜಕೀಯ ಚರಿತ್ರೆ, ಜನಪದ, ಸಾಹಿತ್ಯ, ಐತಿಹಾಸಿಕ ಸ್ಥಳಗಳ ಪರಿಚಯಾತ್ಮಕ ಅಧ್ಯಯನಗಳು ನಡೆದಿವೆಯೇ ಹೊರತು ಇಡೀ ಚಿತ್ರದುರ್ಗ ಜಿಲ್ಲೆಯ ಕೆರೆ, ಬಾವಿ, ಹೊಂಡಗಳಿಗೆ ಸಂಬಂಧಿಸಿದ ಸಮಗ್ರವಾದ ಅಧ್ಯಯನ ನಡೆದಿಲ್ಲವೆಂದೇ ಹೇಳಬಹುದು. ಆದುದರಿಂದ ಪ್ರಸ್ತುತ ಅಧ್ಯಯನವು ಚಿತ್ರದುರ್ಗ ಜಿಲ್ಲೆಯ ಕೆರೆಗಳ ಚರಿತ್ರೆಯನ್ನು ಕಟ್ಟಿಕೊಡುವ ಉದ್ದೇಶವನ್ನು ಹೊಂದಿದೆ.

**೧.೩. ಅಧ್ಯಯನದ ವ್ಯಾಪ್ತಿ**

ಚರಿತ್ರೆ ವಿವಿಧ ಕಾಲಘಟ್ಟದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಕೆರೆಗಳು ಮಹಾತಿರುವೊಂದನ್ನು ಸೃಷ್ಟಿಸಿವೆ. ಈ ಹಿನ್ನೆಲೆಯಲ್ಲಿ ಪ್ರಾದೇಶಿಕ ಮತ್ತು ಸ್ಥಳೀಯ ಇತಿಹಾಸ ರಚನೆಯಲ್ಲಿ ಹಾಗೂ ಕೆಳಸ್ತರದ ಅಧ್ಯಯನದಲ್ಲಿ ಗಮನಾರ್ಹ ಎನಿಸುವ ಪ್ರಸಕ್ತ ವಿಷಯವನ್ನು ಚಿತ್ರದುರ್ಗ ಜಿಲ್ಲೆಯ ಆರು ತಾಲೂಕುಗಳಲ್ಲಿನ ವಿವಿಧ ಸ್ಥಳಗಳಲ್ಲಿರುವ ಕ್ರಿಪೂ. ೩ನೇ ಶತಮಾನದಿಂದ ಕ್ರಿ.ಶ. ೨೦೧೦ರವರೆಗಿನ ರಾಜಪ್ರಭುತ್ವ ಹಾಗೂ ಪ್ರಜಾಪ್ರಭುತ್ವದಲ್ಲಿ ನಿರ್ಮಾಣಗೊಂಡಿರುವ ಪ್ರಾಚೀನ, ಮಧ್ಯಕಾಲೀನ ಹಾಗೂ ಆಧುನಿಕ ಕಾಲದಲ್ಲಿ ೨೮೦ ಕೆರೆಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಮಾತ್ರ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ಅಧ್ಯಯನದ ಅನುಕೂಲಕ್ಕಾಗಿ ೬೯ ಕೆರೆಗಳನ್ನು ಮಾತ್ರ ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೆ ಮಾನವ ಸಂಸ್ಕೃತಿ ಹೇಗೆ ವಿಕಸನಗೊಂಡಿತೆಂಬುದನ್ನು ಹಾಗೂ ವಿಶೇಷವಾಗಿ ಚಾರಿತ್ರಿಕ ಮತ್ತು ಸಾಂಸ್ಕೃತಿಕ ವೈಶಿಷ್ಟ್ಯತೆಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

ಚಿತ್ರದುರ್ಗ ಜಿಲ್ಲೆಯ ಕೆರೆಗಳ ನಿರ್ಮಾಣಕ್ಕೆ ಕಾರಣ, ನಿರ್ಮಾಣ ಮಾಡಿದವರ ಕಾಲ, ಸ್ಥಳ, ತಂತ್ರಜ್ಞಾನ, ಇಂಜಿನಿಯರುಗಳ ಯೋಜನೆ, ಭೌತಿಕ, ಚಾರಿತ್ರಿಕ ಹಾಗೂ ಸಾಂಸ್ಕೃತಿಕ ವಿವರಗಳನ್ನು ಮೌರ್ಯರ ಆದಿಯಾಗಿ, ಆದಿ ಕದಂಬರರಿಂದ ಪ್ರಸ್ತುತದವರೆಗೆ ಕೆಲವು ಆಯ್ದ ಕೆರೆಗಳನ್ನು ಈ ಅಧ್ಯಯನ ವ್ಯಾಪ್ತಿಯನ್ನೊಳಗೊಂಡಿದೆ.

ಪಾಳೆಯಗಾರರು ಚಿತ್ರದುರ್ಗದ ಗಡಿಯ ಹೊರಗೂ ಕೆರೆಗಳನ್ನು ನಿರ್ಮಿಸಿದ್ದಾರೆ. ಉದಾಃ ಅಣಜಿ ಹೊನ್ನಮ್ಮಕೆರೆಯನ್ನು ಬಿಳಿಚೋಡು ಭರಮಪ್ಪನಾಯಕ ನಿರ್ಮಿಸಿರುತ್ತಾನೆ. ಆದರೆ ಈ ವ್ಯಾಪ್ತಿಯಿಂದ ಈಗಿನ ಜಿಲ್ಲೆಗೆ ಸೀಮಿತವಾಗಿಟ್ಟುಕೊಳ್ಳಲಾಗಿದೆ.

ದಾವಣಗೆರೆ ೧೯೯೭ರಲ್ಲಿ ಪ್ರತ್ಯೇಕ ಜಿಲ್ಲೆಯಾಗಿ ರಚನೆ ಪಡೆಯಿತು. ಪ್ರಸ್ತುತ ಚಿತ್ರದುರ್ಗ ಅವಿಭಜಿತ ಜಿಲ್ಲೆಯಾಗಿ ಪರಿಗಣಿಸಿದ್ದು, ದಾವಣಗೆರೆಯನ್ನು ಇಲ್ಲಿ ಅಧ್ಯಯನಕ್ಕೊಳಪಡಿಸಿಲ್ಲ. ಈ

ಜಿಲ್ಲೆಯಲ್ಲಿ ಪಾಳೆಯಗಾರರ ಕಾಲದ ಕೆರೆಗಳು ಸಾಕಷ್ಟು ಇವೆ. ಸ್ಥಳೀಯ ಹವ್ಯಾಸಿ ಸಂಶೋಧಕರು ಅಧ್ಯಯನ ಮಾಡಿದ್ದು ಶ್ಲಾಘನೀಯವಾಗಿದೆ.

### ೧.೪. ಅಧ್ಯಯನದ ವಿಧಾನ

'ಚಿತ್ರದುರ್ಗ ಜಿಲ್ಲೆಯ ಕೆರೆಗಳು: ಚಾರಿತ್ರಿಕ ಅಧ್ಯಯನ' ಎಂಬ ಪ್ರಸ್ತುತ ಸಂಶೋಧನಾ ಅಧ್ಯಯನಕ್ಕೆ ಪ್ರಾಥಮಿಕ, ಆನುಷಂಗಿಕ (ಚಾರಿತ್ರಿಕ ಮತ್ತು ಮೌಖಿಕ) ಆಕರಗಳನ್ನು ಬಳಸಿಕೊಳ್ಳಲಾಗಿದೆ. ಅವುಗಳೆಂದರೆ; ಶಾಸನಗಳು, ರಾಜರುಗಳು ಮತ್ತು ಪಾಳೆಯಗಾರರ ವಂಶಾವಳಿಗಳು, ಕಾಗದ ಪತ್ರ, ದಾಖಲೆಗಳು, ಬಖೈರು, ಚಿತ್ರದುರ್ಗ ಜಿಲ್ಲಾ ಗೆಝೆಟಿಯರ್‌ಗಳು ಇತ್ಯಾದಿ. ಪ್ರಸ್ತುತ ಅಧ್ಯಯನದಲ್ಲಿ ಚಾರಿತ್ರಿಕ ಸಂಶೋಧನೆಯ ವಿಧಿ-ವಿಧಾನಗಳನ್ನು ಅಳವಡಿಸಿಕೊಂಡಿದ್ದು, ಇದು ಬಹುತೇಕ ಕ್ಷೇತ್ರಕಾರ್ಯ ಆಧಾರಿತವಾಗಿದೆ. ಚಿತ್ರದುರ್ಗ ಮತ್ತು ಅದರ ವ್ಯಾಪ್ತಿಗೊಳಪಡುವ ಸುತ್ತಲಿನ ೨೮೦ ಕೆರೆಗಳನ್ನು ಈ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಕ್ಷೇತ್ರದ ಮೇಲೆ ಇದುವರೆಗೆ ಪ್ರಕಟವಾಗಿರುವ ಗ್ಯಾಸೆಟೀಯರ್, ಪುಸ್ತಕ ಮತ್ತು ಜನಸಂಖ್ಯೆ, ಕಂದಾಯ ಮತ್ತು ಇತರೆ ವಿವಿಧ ವರದಿಗಳನ್ನು ಕೂಲಂಕುಷವಾಗಿ ಪ್ರಥಮವಾಗಿ ಅಧ್ಯಯನ ಮಾಡಲಾಗುವುದು. ಇದರ ಆಧಾರದ ಮೇಲೆ ಪರಿಣಿತ ವಿದ್ವಾಂಸರು ನೀಡಿದ ಮಾಹಿತಿಯನ್ನು ಅನುಸರಿಸಿ ಕ್ಷೇತ್ರಕಾರ್ಯ ಮಾಡಬೇಕಾದ ಸ್ಥಳಗಳನ್ನು ಗುರುತಿಸಿಕೊಳ್ಳಲಾಯಿತು. ಆನಂತರ ಪ್ರಶ್ನಾವಳಿ ತಯಾರಿಸಿಕೊಂಡು (ಪ್ರಬಂಧದ ಅಂತ್ಯದಲ್ಲಿ ನೀಡಲಾಗಿರುವಂತೆ) ವಿವಿಧ ಕೆರೆಗಳ ಕ್ಷೇತ್ರಕಾರ್ಯ ಕೈಗೊಂಡು ಅಲ್ಲಿರುವ ಕೆರೆ ಮತ್ತಿತರ ಸ್ಮಾರಕಗಳನ್ನು ವಿಶೇಷವಾಗಿ ಅಧ್ಯಯನ ಮಾಡಿ ಅಗತ್ಯ ಮಾಹಿತಿಗಳನ್ನು ದಾಖಲಿಸಿಕೊಳ್ಳಲಾಗಿದೆ. ಅಗತ್ಯವಿದ್ದೆಡೆ ಸ್ಮಾರಕಗಳ ರೇಖಾಚಿತ್ರ, ನಕ್ಷೆ, ಛಾಯಚಿತ್ರ ತೆಗದುಕೊಂಡು ಹೆಚ್ಚಿನ ಮಾಹಿತಿಗಳನ್ನು ಟಿಪ್ಪಣಿ ಮಾಡಿಕೊಳ್ಳಲಾಗಿದೆ. ಅಲ್ಲದೇ ಆಯಾ ಗ್ರಾಮಗಳ ಹಿರಿಯರನ್ನು ಮತ್ತು ಪರಿಣಿತರನ್ನು ಸಂದರ್ಶಿಸಿ ಅವರಿಂದ ಪ್ರಬಂಧಕ್ಕೆ ಅಗತ್ಯವಾದ ಮಾಹಿತಿಗಳನ್ನು ಪಡೆದು ಆಡಿಯೋ ಮತ್ತು ವಿಡಿಯೋಗಳಲ್ಲಿ ದಾಖಲಿಸಿಕೊಳ್ಳಲಾಗಿದೆ. ಈ ರೀತಿ ವಿವಿಧ ಮೂಲಗಳಿಂದ ಸಂಗ್ರಹಿತವಾದ ಮಾಹಿತಿಯನ್ನು ಒಂದೆಡೆ ಕಲೆ ಹಾಕಿ ಅವುಗಳನ್ನು ತಾತ್ವಿಕವಾಗಿ ವಿಶ್ಲೇಷಿಸಲಾಗಿದೆ. ನಂತರ ಅವುಗಳ ಮೇಲೆ ತೌಲನಿಕ ಅಧ್ಯಯನ ನಡೆಸಿ, ವಿದ್ವಾಂಸರೊಟ್ಟಿಗೆ ಚರ್ಚಿಸಿ ಅಂತಿಮವಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಜಿಲ್ಲೆಯ ಆರು ತಾಲ್ಲೂಕುಗಳ ಪ್ರಮುಖ ಕೆರೆಗಳನ್ನು ಮಾತ್ರ ಅಧ್ಯಯನ ಮಾಡಲಾಗಿದೆ. ಪ್ರಾಚೀನ, ಮಧ್ಯಕಾಲೀನ ಹಾಗೂ ಆಧುನಿಕ ಕಾಲಘಟ್ಟದ ಕೆರೆಗಳನ್ನು ಕುರಿತು ಅಧ್ಯಯನ ಮಾಡುವುದರ ಜೊತೆಗೆ ಕೆರೆಗಳ ಇತಿಹಾಸ ಅವುಗಳ ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಂಬಂಧವನ್ನು ವಿಶ್ಲೇಷಿಸಲಾಗಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಸುಮಾರು ಒಟ್ಟು ೩೫೦ ಕೆರೆಗಳಿವೆ. ಅವುಗಳಲ್ಲಿ ಚಾರಿತ್ರಿಕವಾಗಿ ಮಹತ್ವ ಪಡೆದಿರುವ ೨೮೦ ಕೆರೆಗಳನ್ನು ಮಾತ್ರ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಕೇವಲ ಕೆರೆ-ಬಾವಿ, ಕಟ್ಟೆ, ಕಾಲುವೆಗಳ ನಿರ್ಮಾಣ, ನಿರ್ವಹಣೆಗೆ ಮಾತ್ರ ಸೀಮಿತವಾಗಿರದೇ, ತಂತ್ರಜ್ಞಾನ, ನೀರಾವರಿ, ಉದ್ದಿಮೆ, ಕಾರ್ಖಾನೆ, ಕೃಷಿ ನೀರಿನ ಬಳಕೆ, ಬೆಳೆಗಳು ಹಾಗೂ ಸಾಂಸ್ಕೃತಿಕ ಆಚರಣೆಗಳನ್ನು ವಿಶ್ಲೇಷಿಸಲಾಗಿದೆ. ಇಂದು ಅಸ್ತಿತ್ವದಲ್ಲಿರುವ ಕೆರೆಗಳ

ಉಗಮ, ಸ್ಥಾಪನೆ, ಅವುಗಳ ಚರಿತ್ರೆ, ಪ್ರಸ್ತುತ ಅವುಗಳ ಸ್ಥಿತಿಗತಿ, ಜಿಲ್ಲೆಯ ಅಭಿವೃದ್ಧಿ, ಕೃಷಿ, ಕೈಗಾರಿಕೆ ಹಾಗೂ ಸಂಸ್ಕೃತಿಯ ಬೆಳವಣಿಗೆಗೆ ಅವು ಹೇಗೆ ಕಾರಣವಾದವು ಎಂಬುದನ್ನು ಸವಿಸ್ತಾರವಾಗಿ ಅಧ್ಯಯನ ಮಾಡಲಾಗಿದೆ.

**೧.೫. ಅಧ್ಯಯನದ ಸ್ವರೂಪ**

'ಚಿತ್ರದುರ್ಗ ಜಿಲ್ಲೆಯ ಕೆರೆಗಳು: ಒಂದು ಚಾರಿತ್ರಿಕ ಅಧ್ಯಯನ' ಎನ್ನುವ ಪ್ರಸ್ತುತ ಸಂಶೋಧನ ಮಹಾಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಒಟ್ಟು ೯ ಅಧ್ಯಾಯಗಳನ್ನಾಗಿ ವಿಂಗಡಿಸಿ ಕೊಳ್ಳಲಾಗಿದೆ.

**ಮೊದಲನೆಯ ಅಧ್ಯಾಯವು** ಪ್ರಸ್ತಾವನೆಯಾಗಿದ್ದು, ಅದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮಹತ್ವ ಹಾಗೂ ಇದುವರೆಗೆ ನಡೆದಿರುವ ಅಧ್ಯಯನದ ಸಮೀಕ್ಷೆ ಹಾಗೂ ಅಧ್ಯಯನದ ಸ್ವರೂಪವನ್ನು ವಿವರಿಸಲಾಗಿದೆ.

**ಅಧ್ಯಾಯ ಎರಡರಲ್ಲಿ** ಚಿತ್ರದುರ್ಗ ಪರಿಸರದ ಭೌಗೋಳಿಕ ಹಿನ್ನೆಲೆಯಲ್ಲಿ ಅಲ್ಲಿನ ಪರಿಸರ ಹಾಗೂ ಮಹತ್ವ ಕುರಿತು ವಿವರಿಸಲಾಗಿದೆ. ಮಾನವ ಜನಾಂಗ ಹಾಗೂ ಜೀವಸಂಕುಲದ ಏಳ್ಗೆ ಮತ್ತು ಅವಸಾನದಲ್ಲಿ ಇಲ್ಲಿರುವ ಬೆಟ್ಟ, ಗುಡ್ಡ, ನದಿ, ಅರಣ್ಯ, ನೈಸರ್ಗಿಕ ಸಂಪತ್ತು ಯಾವ ರೀತಿ ಪ್ರಭಾವ ಬೀರಿದೆ ಎನ್ನುವುದನ್ನು ಮತ್ತು ಇಲ್ಲಿನ ಜನಸಂಖ್ಯೆ, ಹವಾಮಾನ, ಮಳೆ, ಮಣ್ಣಿನ ಫಲವತ್ತತೆ, ವ್ಯವಸಾಯ, ಬೆಳೆಗಳು, ಜಲಸಂಪನ್ಮೂಲಗಳ ಕುರಿತ ವಿವರಗಳನ್ನು ವಿಶೇಷವಾಗಿ ಈ ಆಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ಮೂರರಲ್ಲಿ** ಚಿತ್ರದುರ್ಗ ಪರಿಸರದ ಚಾರಿತ್ರಿಕ ಹಿನ್ನೆಲೆಯನ್ನು ವಿಶೇಷವಾಗಿ ಗುರುತಿಸಲಾಗಿದೆ. ಈ ಭಾಗದಲ್ಲಿ ಮಾನವ ಚಾರಿತ್ರಿಕ ಕಾಲಘಟ್ಟಕ್ಕೆ ಬರುವ ಪೂರ್ವದಲ್ಲಿ ಪ್ರಾಗೈತಿಹಾಸಿಕ ಕಾಲದ ವಿವಿಧ ಕಾಲಘಟ್ಟದಲ್ಲಿ ಅಂದರೆ ಹಳೆ, ಮಧ್ಯ/ಸೂಕ್ಷ್ಮ, ನವ ಹಾಗೂ ಬೃಹತ್ ಶಿಲಾಯುಗಗಳಲ್ಲಿ ಹೇಗೆ ಹಂತ ಹಂತವಾಗಿ ಮಾನವ ವಿಕಾಸವಾಗಿ, ಲೋಹಗಳ ಬಳಕೆಯನ್ನು ಹೇಗೆ ಕಂಡುಕೊಂಡ ಎನ್ನುವ ವಿಷಯಗಳ ಕುರಿತು ಚರ್ಚಿಸಲಾಗಿದೆ. ಚಿತ್ರದುರ್ಗ ಇತಿಹಾಸವನ್ನು ಪರಿಶೀಲಿಸಿದಾಗ ಶಿಲಾಯುಗದಿಂದ ಇತಿಹಾಸದ ಕಾಲದವರೆಗೂ ಈ ನಾಡು ಜನವಸತಿ ಪ್ರದೇಶವಾಗಿತ್ತು. ಜೊತೆಗೆ ವಿದೇಶದೊಂದಿಗೆ ಸಂಪರ್ಕ ಇತ್ತೆಂಬುದಕ್ಕೆ ಇಲ್ಲಿ ದೊರೆತ ರೋಮನ್ ನಾಣ್ಯಗಳು ಸಾಕ್ಷಿಯಾಗಿವೆ. ಈ ಪರಿಸರದಲ್ಲಿ ದೊರೆತಿರುವ ಅವಶೇಷಗಳು, ಅವುಗಳ ಪ್ರಕಾರ ವಿಸ್ತಾರಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಅಲ್ಲದೆ ಚಾರಿತ್ರಿಕ ಹಿನ್ನೆಲೆ ಎನ್ನುವ ಉಪ ಅಧ್ಯಾಯದಲ್ಲಿ ಈ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿರುವ ರಾಜಕೀಯ ಮನೆತನಗಳ ಸಾಧನೆಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಅವರ ರಾಜಕೀಯ ಚರಿತ್ರೆಯನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ಕೆರೆ, ಬಾವಿ, ಹೊಂಡಗಳನ್ನು ಕುರಿತು ಚರ್ಚಿಲಾಗಿದೆ. ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ನೊಳಂಬರು, ಹೊಯ್ಸಳರು, ವಿಜಯನಗರದ ಸಾಮ್ರಾಟರು, ಪಾಳೆಯಗಾರರು, ಮೈಸೂರು ಒಡೆಯರು, ಟಿಪ್ಪುಸುಲ್ತಾನ್, ನಂತರ ಬ್ರಿಟೀಷರು ಆಳ್ವಿಕೆ ನಡೆಸಿದ್ದಾರೆ. ಈ ಭೂಭಾಗದಲ್ಲಿ

ಆಳ್ವಿಕೆ ಮಾಡಿದ ವಿವಿಧ ರಾಜ ಮನೆತನಗಳು ಮತ್ತು ಅವರ ಕೊಡುಗೆಗಳನ್ನು ಕುರಿತು ಇಲ್ಲಿ ವಿಶ್ಲೇಷಿಸಲಾಗಿದೆ.[೬]

ಚಾರಿತ್ರಿಕ ಹಿನ್ನೆಲೆಯಲ್ಲಿ ಕರ್ನಾಟಕದ ಕೆರೆಗಳು ಎನ್ನುವ **ನಾಲ್ಕನೇ ಅಧ್ಯಾಯದಲ್ಲಿ**, ಕೆರೆಗಳ ಹುಟ್ಟು, ಅರ್ಥ, ವ್ಯಾಖ್ಯಾನಗಳು ಹಾಗೂ ಕೆರೆಗಳ ನಿರ್ಮಾಣದ ಹಿನ್ನೆಲೆ ಮತ್ತು ಮಹತ್ವವನ್ನು ವಿಶೇಷವಾಗಿ ಚರ್ಚಿಸಲಾಗಿದೆ. ಅಲ್ಲದೇ ಸಾಮಾನ್ಯವಾಗಿ ಸ್ವಾಭಾವಿಕ ಅಥವಾ ಕೃತಕವಾದ ತಗ್ಗುಗಳಲ್ಲಿ ಮಳೆಯ ನೀರು ಸಂಗ್ರಹಗೊಂಡ ಜಲಾಶಯಕ್ಕೆ ಕೆರೆ ಎನ್ನಬಹುದು. ಫ್ರಾನ್ಸಿಸ್ ಬುಕಾನನ್ ಭೂಮಿಗೆ ನೀರು ಹಾಯಿಸಲು ಉಪಯೋಗಿಸುವ ದೊಡ್ಡ ಜಲಾಶಯವೇ ಕೆರೆ ಎನ್ನುತ್ತಾನೆ. ಪ್ರಾಚೀನ ಕಾಲದಿಂದಲೂ ಕೆರೆಗೆ ಹಲವಾರು ಪರ್ಯಾಯ ನಾಮಗಳಿವೆ. ಕಟ್ಟೆ, ಸಾಗರ, ತಟಾಕ-ಸಮುದ್ರ ಕೊಳ, ಕುಂಟೆ ಎಂಬ ಮೊದಲಾದ ಪದಗಳಿವೆ. ಸಾಮಾನ್ಯವಾಗಿ ಕಣಿವೆಗೆ ಅಡ್ಡಲಾಗಿ ಕಟ್ಟಿರುವ ಚಿಕ್ಕ ಏರಿಯನ್ನು ಕೆರೆ ಎನ್ನಬಹುದು. ಇವು ಜಲಾನಯನ ಪ್ರದೇಶದಲ್ಲಿ ಹರಿದು ಬರುವ ಮಳೆ ನೀರನ್ನು ಹಿಡಿದಿಡುವ ಪರಸ್ಪರ ಸಂಪರ್ಕವುಳ್ಳ ಇಲ್ಲವೇ ಮಳೆ ನೀರಿನಿಂದ ತುಂಬುವ ಜಲಾಶಯಗಳನ್ನೇ ಕೆರೆಗಳೆಂದು ಕರೆಯಬಹುದು. ಈ ರೀತಿ ಸಂಗ್ರಹಿಸಿದ ಕೆರೆಯ ನೀರನ್ನು ತೂಬುಗಳು ಹಾಗೂ ಚಿಕ್ಕ ಕಾಲುವೆಗಳ ಮೂಲಕ ಕೃಷಿಭೂಮಿಗೆ ಸರಬರಾಜು ಮಾಡಲಾಗುವುದು. ಕರ್ನಾಟಕದಲ್ಲಿನ ಬಹುಪಾಲು ಕೆರೆಗಳು ಈ ವರ್ಗಕ್ಕೆ ಸೇರಿವೆ. ಕೆರೆಗಳು ವಿವಿಧ ಆಕರಗಳನ್ನು ಹೊಂದಿದ್ದು ಅವು ಬಹುತೇಕವಾಗಿ ಭೌಗೋಳಿಕ ಪರಿಸರವನ್ನು ಅವಲಂಬಿಸಿರುತ್ತಿದ್ದವು.

ಚಕ್ರಪಾಣಿ ಮಿಶ್ರನ 'ವಿಶ್ವವಲ್ಲಭ' ಕೃತಿಯು ವಿವಿಧ ಆಕಾರದ ಕೆರೆಗಳನ್ನು ಪ್ರಸ್ತಾಪಿಸುತ್ತದೆ. ಅವುಗಳಲ್ಲಿ ವೃತ್ತಾಕಾರ, ಚತುಷ್ಕೋನ, ಬಹುಕೋನಾಕೃತಿ, ಲಂಬಾಕಾರ, ಅರ್ಧಚಂದ್ರಾಕಾರಗಳು ಮತ್ತು ಅಯತಾಕಾರಗಳು ಮುಖ್ಯವಾಗಿವೆ. ಪ್ರಾಗೈತಿಹಾಸಿಕ ಕಾಲದಿಂದಲೂ ಸಹ ಜಲಸಂಪನ್ಮೂಲದ ಸಮರ್ಪಕ ವ್ಯವಸ್ಥೆಗಳಿಗಾಗಿ ಜಲಸಂಗ್ರಹಣಾ ವ್ಯವಸ್ಥೆಯನ್ನು ಒಂದಾದ ಕೆರೆಗಳು ನಿರ್ಮಾಣವಾಗುತ್ತಿದ್ದುದು ಕಂಡುಬರುತ್ತದೆ. ಕ್ರಿ.ಪೂ.೩೦೦ರ ನಂತರ ಕರ್ನಾಟಕದ ವಿವಿಧ ಸಮುದಾಯಗಳು ಕೆರೆ-ಕುಂಟೆಗಳನ್ನು ಕಟ್ಟಲು ಮತ್ತು ಅವುಗಳನ್ನು ನಿರ್ವಹಿಸುವ ತಿಳುವಳಿಕೆಯನ್ನು ಮೌರ್ಯರ ಮೂಲಕ ಸುಧಾರಿಸಿದವು ಎನ್ನುವುದಕ್ಕೆ ಪುರಾವೆಗಳಿವೆ. ಇದಕ್ಕೆ ಸಾಕ್ಷಿ ಎಂಬಂತೆ ಕೌಟಿಲ್ಯನ "ಅರ್ಥಶಾಸ್ತ್ರ"ವು ರಾಜನ ಕರ್ತವ್ಯದ ಬಗೆಗೆ ವಿವರವಾಗಿ ವಿವರಿಸುತ್ತಾ "ರಾಜ್ಯದಲ್ಲಿ ರಾಜನು ಹೊಸ ಗ್ರಾಮವನ್ನು ಸ್ಥಾಪಿಸಿದಾಗ ಆ ಗ್ರಾಮದಲ್ಲಿ ಕೆರೆ ಇರಬೇಕು ಎಂದು, ಆ ಕೆರೆಯ ನೀರು ಕುಡಿಯುವುದಕ್ಕೆ ಮತ್ತು ಬೇಸಾಯಕ್ಕೆ ಉಪಯೋಗವಾಗಬೇಕೆಂದು ಮತ್ತು ಆ ಕೆರೆಯ ನಿರ್ಮಾಣ ಕಾರ್ಯದಲ್ಲಿ ಸಹಕರಿಸಿದ ಪ್ರಜೆಗಳಿಗೆ ತೆರಿಗೆಯಲ್ಲಿ ವಿನಾಯಿತಿಯನ್ನು ಸಹ ನೀಡಬೇಕೆಂದು" ತಿಳಿಸುತ್ತದೆ. ಇದಲ್ಲದೆ ನಾಡಿನಲ್ಲಿ ದೊರೆತ ಶಾಸನಗಳು, ಕಾಲುವೆಗಳು, ಕೋಡಿಗಳು, ನೀರಿನ ಆಳ, ಹಣಕಾಸಿನ ನಿರ್ವಹಣೆ ಮುಂತಾಗಿ ಕೆರೆ ಸಂಬಂಧಿತ ಪ್ರತಿ ಅಂಶವನ್ನು ಇವು ವಿಶದಪಡಿಸುತ್ತವೆ. ಕೆರೆಗಳ ಪುನಾರಾಭಿವೃದ್ಧಿಯಿಂದ ಕಟ್ಟೆಯಿಂದ ನೀರು ಜಿನುಗುವಿಕೆ, ಸಾಮಾನ್ಯ ರಕ್ಷಣಾ ಕ್ರಮಗಳು, ಕೆರೆಗಳು ದುರಸ್ತಿ ಮತ್ತು ನಿರ್ವಹಣೆ, ಕೆರೆಗಳ ನೀರಿನ ಹಂಚಿಕೆ ಮತ್ತು ಬಳಕೆ ಮತ್ತು ಕೆರೆಗಳ ಸಂರಕ್ಷಣೆಗೆ ಯಾವ ಕ್ರಮಗಳನ್ನು ಅನುಸರಿಸುತ್ತಿದ್ದರು ಎನ್ನುವ ಹಲವಾರು ಸಂಗತಿಗಳನ್ನು ವಿಶ್ಲೇಷಿಸಲಾಗಿದೆ. ಅಲ್ಲದೇ ಇದೇ ಅಧ್ಯಾಯದ ಉಪ

ಅಧ್ಯಾಯಗಳಲ್ಲಿ ಕೆರೆಗಳ ಪ್ರಮುಖ ಅಂಗಗಳು ಮತ್ತು ತಾಂತ್ರಿಕತೆ, ಕೆರೆ ನೀರಾವರಿ ವ್ಯವಸ್ಥೆ ಮತ್ತು ನಿರ್ವಹಣೆ ಹಾಗೂ ಕೆರೆಗಳ ನಿರ್ಮಾಣ ಮತ್ತು ಸಂರಕ್ಷಣೆಯ ವಿವಿಧ ವಿಧಾನಗಳ ಕುರಿತು ಚರ್ಚಿಸಲಾಗಿದೆ. ನಮ್ಮ ನಾಡನ್ನು ಆಳ್ವಿಕೆ ಮಾಡಿದ ಹಲವಾರು ರಾಜ ಮಹಾರಾಜರುಗಳು, ದಂಡನಾಯಕರು, ಅಧಿಕಾರಿಗಳು ಹಾಗೂ ಜನಪರ ಕಾಳಜಿಯುಳ್ಳ ಬೇರೆ ಬೇರೆ ವ್ಯವಸ್ಥೆಯಲ್ಲಿದ್ದ ವ್ಯಕ್ತಿಗಳು, ಹಲವು ಜಲಸಂಗ್ರಹಕಗಳನ್ನು ನಿರ್ಮಿಸಿದ್ದಾರೆ. ಇದರಿಂದಾಗಿ ಕರ್ನಾಟಕದಲ್ಲಿ ೩೦,೦೦೦ಕ್ಕೂ ಹೆಚ್ಚು ಕೆರೆಗಳನ್ನು ನೋಡಬಹುದಾಗಿದೆ ಎನ್ನುವ ಮಹತ್ವದ ವಿವರಗಳನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ ಐದರಲ್ಲಿ** ಚಿತ್ರದುರ್ಗ ಜಿಲ್ಲೆಯ ಪ್ರಮುಖ ಐತಿಹಾಸಿಕ ಕೆರೆಗಳು ಮತ್ತು ಅವುಗಳ ಮಹತ್ವವನ್ನು ವಿವರಿಸುವುದರೊಂದಿಗೆ ಜಿಲ್ಲೆಯ ಮಹತ್ವದ ಪ್ರಾಚೀನ, ಮಧ್ಯಕಾಲೀನ, ಆಧುನಿಕ(ಸಮಕಾಲೀನ) ಕೆರೆಗಳ ಪ್ರಾಚೀನತೆ ಮತ್ತು ವೈಶಿಷ್ಟ್ಯತೆಯನ್ನು ಚರ್ಚಿಸಲಾಗಿದೆ. ಮೌರ್ಯರ ಕಾಲದಲ್ಲಿ ಕೆರೆ ನಿರ್ಮಾಣ ಮಾಡಿದ ಬಗ್ಗೆ ಯಾವುದೇ ಪುರಾವೆಗಳು ಸಿಗದೇ ಇದ್ದರೂ ಸಹ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಬ್ರಹ್ಮಗಿರಿ, ಸಿದ್ಧಾಪುರ, ಜಟಂಗಿರಾಮೇಶ್ವರ ಪ್ರದೇಶಗಳಲ್ಲಿ ಅಶೋಕನ ಶಾಸನಗಳು ದೊರೆತಿದ್ದು, ಇವುಗಳಿಂದ ಈ ಪ್ರದೇಶ ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಸ್ಪಷ್ಟಪಡಿಸುತ್ತದೆ. ಇವರ ಕಾಲದಲ್ಲಿ ಜನ-ಜಾನುವಾರುಗಳಿಗೆ ಬೇಕಾದ ನೀರಿನ ಸಂಗ್ರಹಕಗಳನ್ನು ನಿರ್ಮಾಣ ಮಾಡಿದರು. ಕದಂಬರ ಬಗ್ಗೆ ಚಂದ್ರವಳ್ಳಿಯಲ್ಲಿ ಪತ್ತೆಯಾಗಿರುವ ಮಯೂರವರ್ಮನ ಶಾಸನ ತಿಳಿಸುತ್ತದೆ. ಶಾಸನದಲ್ಲಿ ಇವನು ಪ್ರಜೆಗಳ ಅನುಕೂಲಕ್ಕಾಗಿ ಇಲ್ಲಿನ ತಟಾಕವನ್ನು ಜೀರ್ಣೋದ್ಧಾರಗೊಳಿಸಿದ ವಿಷಯ ತಿಳಿದುಬರುತ್ತದೆ. ಈ ತಟಾಕವು ಕದಂಬರರಿಗಿಂತ ಪೂರ್ವದಲ್ಲಿ ನಿರ್ಮಾಣವಾಗಿತ್ತೆಂದು ಸ್ಪಷ್ಟವಾಗುತ್ತದೆ. ಬಾದಾಮಿ ಚಾಲುಕ್ಯರ ರಾಜ ವಿಕ್ರಮಾದಿತ್ಯನ (ಕ್ರಿ.ಶ.೬೭೦) ಅನಗೋಡು ಶಾಸನದಲ್ಲಿ ಅಂದಿನ ಕೆರೆಗಳ ಬಗ್ಗೆ ಉಲ್ಲೇಖವಿದ್ದಾಗ್ಯೂ, ಚಿತ್ರದುರ್ಗದಲ್ಲಿ ನಿರ್ಮಾಣವಾದ ಕೆರೆಗಳ ಬಗ್ಗೆ ಐತಿಹಾಸಿಕ ಸ್ಪಷ್ಟತೆಯನ್ನು ಖಚಿತವಾಗಿ ಕಂಡುಕೊಳ್ಳಬಹುದಾದ ಮಾಹಿತಿಗಳಿಲ್ಲ.

ರಾಷ್ಟ್ರಕೂಟರ ಕಾಲದ ಚಿತ್ರದುರ್ಗ ತಾಲ್ಲೂಕು ಕ್ಯಾಸಾಪುರ ಶಾಸನದಲ್ಲಿ ಅಣ್ಣಯ್ಯನಿಂದ ನಿರ್ಮಿಸಲ್ಪಟ್ಟ ಕೆರೆಯ ಅಚ್ಚುಕಟ್ಟು ಭೂಮಿಯನ್ನು ಹಾಗೂ ಎರಡು ಗ್ರಾಮಗಳನ್ನು ಒಂದು ಅಗ್ರಹಾರವನ್ನಾಗಿಸಿ ಈ ಗ್ರಾಮದ ಕಲ್ಲೇಶ್ವರ ದೇವಾಲಯಕ್ಕೆ ದತ್ತಿ ಬಿಟ್ಟಿರುವುದಾಗಿ ತಿಳಿಯುತ್ತದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕೆರೆಗಳ ನಿರ್ಮಾಣಕ್ಕೆ ಹೆಚ್ಚಿನ ಗಮನ ನೀಡಿದರು. ಹೊಯ್ಸಳರ ಕಾಲದಲ್ಲಿ ಚಿತ್ರದುರ್ಗ ಭಾಗದಲ್ಲಿ ಹಲವಾರು ಕೆರೆಗಳು ನಿರ್ಮಾಣವಾದವು. ಕ್ರಿ.ಶ. ೧೨೮೫ರಲ್ಲಿ ಹೊಯ್ಸಳ ಮುಮ್ಮಡಿ ನರಸಿಂಹನ ಮಂತ್ರಿ ಪೆರುಮಾಳೆದಂಡನಾಯಕನು ಚಿತ್ರದುರ್ಗದಲ್ಲಿ "ಪೇರಮಾಳೆಪುರ"ವನ್ನು ಸ್ಥಾಪಿಸಿದನು. ಇವನು ಇಲ್ಲಿಯೇ ಕೆರೆ ನಿರ್ಮಾಣ ಮತ್ತು ಜೀರ್ಣೋದ್ಧಾರ ಮಾಡಿ "ಪೆರುಮಾಳೆಸಮುದ್ರ" ಎಂದು ಹೆಸರಿಸಿದನು. ಇದೇ ಮಾದರಿಯಲ್ಲಿ ವಿಜಯನಗರದ ಅರಸರ ಕಾಲದಲ್ಲಿ ಹಲವಾರು ಕೆರೆ ಅಭಿವೃದ್ಧಿ ಕೆಲಸ ಕಾರ್ಯಗಳು ನಡೆದವು.

ಕ್ರಿ.ಶ. ೧೫೬೭-೧೭೭೯ರ ವರೆಗೆ ಚಿತ್ರದುರ್ಗವನ್ನಾಳಿದ ಪಾಳೆಯಗಾರರು ಕೇವಲ ಪರಾಕ್ರಮಕ್ಕೆ ಹೆಸರಾಗಿರದೆ ಜನಪರ ಕೆಲಸ-ಕಾರ್ಯಗಳತ್ತ ಗಮನಹರಿಸಿದ್ದರಿಂದಾಗಿ ಕೆರೆ, ಹೊಂಡ, ಬಾವಿ,

ಪುಷ್ಕರಣಿಗಳನ್ನು ನಿರ್ಮಾಣ ಮಾಡುವುದರ ಮೂಲಕ ಜಲ ಸಂಗ್ರಹಣೆ ಹಾಗೂ ನೀರಾವರಿಗೆ ವಿಶೇಷ ಪ್ರೋತ್ಸಾಹ ನೀಡಿದ್ದರು. ಒಂದು ಅಂದಾಜಿನಂತೆ ಪಾಳೆಯಗಾರರ ಕಾಲದಲ್ಲಿ ೩೦೦ ಕೆರೆಗಳು ನಿರ್ಮಾಣವಾದವು. ಚಿತ್ರದುರ್ಗ ಸಂಸ್ಥಾನದ ಮೊದಲ ಅರಸನಾದ ಮತ್ತಿ ತಿಮ್ಮಣ್ಣನಾಯಕನು ಅರಕೆರೆಯನ್ನು ದುರಸ್ಥಿಗೊಳಿಸಿ ಜೀರ್ಣೋದ್ಧಾರ ಮಾಡಿದನು. ಇದರಿಂದ ಈ ಕೆರೆಯನ್ನು ತಿಮ್ಮಣ್ಣನಾಯಕನ ಕೆರೆ ಎನ್ನಲಾಗಿದೆ. ಓಬಣ್ಣನ ಕಾಲದಲ್ಲಿ ಹೊಳಲ್ಕೆರೆ ತಾಲ್ಲೂಕು ಹೊರಕೆರೆದೇವರಪುರದ ಬಳಿ ಗುಂಡಿಕೆರೆ ಹಾಗೂ ಹುಲ್ಲೂರು ಗ್ರಾಮದ ಕೆರೆಗಳನ್ನು ದುರಸ್ಥಿಗೊಳಿಸಿದನು. ಭರಮಣ್ಣನಾಯಕನು ಕ್ರಿ.ಶ. ೧೬೮೯-೧೭೨೧ರ ಅವಧಿಯಲ್ಲಿ ೨೧ ಕೆರೆಗಳನ್ನು ನಿರ್ಮಾಣ ಮಾಡಿದನು. ಅಲ್ಲದೇ ಹೊಲತಿ ಹಾಳು ಕೆರೆಯನ್ನು ಪುನಃ ನಿರ್ಮಾಣ ಮಾಡಿ "ಭೀಮಸಮುದ್ರ" ವೆಂದು ಹೆಸರಿಟ್ಟನು. ಈ ಕೆರೆಯ ಏರಿಯ ಮೇಲೆ ಶಾಸನವನ್ನು ಹಾಕಿಸಿ ಭೀಮೇಶ್ವರ ದೇವಾಲಯವನ್ನು ನಿರ್ಮಿಸಿದನು. ಅಬ್ಬನಾಯಕನಹಳ್ಳಿ ಕೆರೆ, ಮುರುಘಾಮಠದ ಎರಡು ಕೆರೆಗಳು, ಇಟ್ಟಿಗೆಹಳ್ಳಿ ಕೆರೆ, ಲಿಂಗವ್ವನಾಗತಿ ಕೆರೆ, ಚಿತ್ರಹಳ್ಳಿ ಸೀಮೆಯ ಹಂಗನಾರದ ಕೆರೆ, ಅಣಜಿಕೆರೆ, ಜಂಪಣ್ಣನಾಯಕನ ಕೋಟೆಕೆರೆ, ಮದಕರಿನಾಯಕನ ಕೋಟೆ ಕೆರೆ, ಹುಚ್ಚವ್ವನಹಳ್ಳಿಕೆರೆ, ಜಗಳೂರು ಸೀಮೆಯ ಭರಮಸಮುದ್ರದ ಕೆರೆ, ಭರಮಸಾಗರದ ಎರಡು ಕೆರೆಗಳು, ಕುರುಬರ ಮರಡಿಕೆರೆ, ಚಿಕ್ಕಪಾಲವ್ವನಕೆರೆ, ದ್ಯಾಮವ್ವನಕೆರೆ, ಚಿತ್ರದುರ್ಗ ನಗರದ ಜನವಸತಿಗಾಗಿ ಐತಿಹಾಸಿಕ ಹೊಂಡ(ಸಂತೆಹೊಂಡ) ಸಿಹಿನೀರು ಹೊಂಡ, ಅನೇಕ ಬಾವಿಗಳು, ಕುಂಟೆಗಳನ್ನು ಕಟ್ಟಿಸಿದನು. ರಾಜವೀರ ಮದಕರಿನಾಯಕನ ಕಾಲದಲ್ಲಿ ಕ್ರಿ.ಶ. ೧೭೫೪-೧೭೭೯ರಲ್ಲಿ ಸಿದ್ದಾಪುರ ಕೆರೆ, ಲಿಂಗದಹಳ್ಳ ಕೆರೆ ನಿರ್ಮಿಸಲಾಯಿತು. ದಳವಾಯಿ ಮುದ್ದಣ್ಣನು ಮುದ್ದಾಪುರ ಕೆರೆ, ರಾಯಣ್ಣನು ಸಾದರಹಳ್ಳಿಯ ಕೆರೆಯನ್ನು ಕಟ್ಟಿಸಿದನು. ಕೆರೆಗಳ ನಿರ್ಮಾಣದಲ್ಲಿ ಉಪ್ಪಾರರು, ವಡ್ಡರು, ಇತರೆ ಕೆಳಸ್ತರದ ಜನರು ಕೆಲಸ ನಿರ್ವಹಿಸಿದ ಅತ್ಯಮೂಲ್ಯ ವಿವರಗಳನ್ನು ಸ್ಪಷ್ಟ ಆಕರಗಳೊಂದಿಗೆ ವಿವರಿಸಲಾಗಿದೆ.

**ಅಧ್ಯಾಯ ಆರರಲ್ಲಿ ಜಿಲ್ಲೆಯ** ಕೆರೆಗಳ ಆಡಳಿತ ನಿರ್ವಹಣಾ ವ್ಯವಸ್ಥೆ ಹಾಗೂ ಕೃಷಿ-ನೀರಾವರಿ ವ್ಯವಸ್ಥೆ ಮತ್ತು ನೀರಿನ ತೆರಿಗೆ ವ್ಯವಸ್ಥೆ ಬಳಕೆದಾರರು ಜಲ ನಿರ್ವಹಣೆ ಆಯಾಗಾರ ಪದ್ಧತಿಯ ಸ್ವರೂಪಗಳನ್ನು ಅವಲೋಕಿಸುವುದರೊಂದಿಗೆ ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ಕೆರೆಗಳ ಪಾತ್ರ ಕೆರೆ ಮೀನುಗಾರಿಕೆ ಇತರೆ ವೃತ್ತಿಗಳ ಮಹತ್ವ ಏನು? ಎನ್ನುವುದನ್ನು ವಿಶೇಷವಾಗಿ ವಿಶ್ಲೇಷಿಸಲಾಗಿದೆ.

**ಅಧ್ಯಾಯ ಏಳರಲ್ಲಿ** ಚಿತ್ರದುರ್ಗ ಜಿಲ್ಲೆಯ ಕೆರೆಗಳ ಸಂರಕ್ಷಣಾ ಕ್ರಮಗಳು ಹಾಗೂ ಕೆರೆಗಳ ಸಂರಕ್ಷಣೆಯ ವಿವಿಧ ಆಯಾಮಗಳನ್ನು ವಿಶ್ಲೇಷಿಸಲಾಗಿದೆ. ಕೆರೆಗಳ ಜೀರ್ಣೋದ್ಧಾರ ಮತ್ತು ದುರಸ್ಥಿ ಕಾರ್ಯಗಳು ಜಿಲ್ಲೆಯಲ್ಲಿ ನಡೆದು ಬಂದ ಹಾದಿ ಮತ್ತು ಕೆರೆಗಳ ಪುನರಾಭಿವೃದ್ಧಿ ಮಹತ್ವದ ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ ಎಂಟರಲ್ಲಿ** ಚಿತ್ರದುರ್ಗ ಜಿಲ್ಲೆಯ ಕೆರೆ ಸಂಬಂಧಿ ನಂಬಿಕೆ ಮತ್ತು ಆಚರಣೆಗಳು ಹಾಗೂ ಕೆರೆಗಳಿಗೆ ಸಂಬಂಧಿಸಿದ ಐತಿಹ್ಯ, ಪುರಾಣ ದಂತಕಥೆ, ಜಾನಪದ ಆಚರಣೆ, ಸಂಪ್ರದಾಯಗಳು, ಕೆರೆಗಳಿಗೆ ಸಂಬಂಧಿಸಿದ ಜಾನಪದ ಆಶಯ ಮತ್ತು ವಿಧಿ ನಿಷೇಧಗಳನ್ನು ವಿಶ್ಲೇಷಿಸಲಾಗಿದೆ. ಋಗ್ವೇದ, ಮತ್ತು ಯಜುರ್ವೇದಗಳು ಕೋಟೆ, ಊರ ಹೆಬ್ಬಾಗಿಲು ಮತ್ತು ಅಣೆಕಟ್ಟು ಕಟ್ಟುವಾಗ

ನರಬಲಿಯನ್ನು ನೀಡಿ ಬಲಿಯಾದ ವ್ಯಕ್ತಿಯ ದೇಹವನ್ನು ಅಂತಹ ರಚನೆಗಳ ಅಡಿಪಾಯದಲ್ಲಿಯೇ ಹೂಳಬೇಕು ಎಂದು ತಿಳಿಸುತ್ತದೆ. ಇದು ಮೂರ್ಖತನ ಮೌಢ್ಯತೆಯ ಪರಮಾವಧಿಯಾಗಿದೆ. ಜನಪದರದಲ್ಲಿ ಇಂತಹ ನಂಬಿಕೆಗಳು ಮತ್ತು ಆಚರಣೆಗಳು ಜಿಲ್ಲೆಯ ಕೆಲವೆಡೆಗಳಲ್ಲಿ ಪ್ರಚಲಿತದಲ್ಲಿರುವುದನ್ನು ಕಾಣಬಹುದು. ಅವುಗಳಲ್ಲಿ ಅಣಜಿಯ ಕೆರೆ ಸಮೀಪದ ಒಂದು ಚಿಕ್ಕ ಗುಡಿಯಲ್ಲಿ ಕನ್ಯಾವೀರಮ್ಮನ ಗುಡಿಯೆನ್ನುತ್ತಾರೆ. ಈಕೆ ಕನ್ಯೆಯಾಗಿದ್ದು ಕೆರೆಯ ಉಳಿವಿಗಾಗಿ ತನ್ನ ಪ್ರಾಣವನ್ನು ನೀಡಿದಳೆಂದು ಜನಪದರು ತಿಳಿಸುತ್ತಾರೆ. ಅಲ್ಲಿ ವಾರ್ಷಿಕ ಉತ್ಸವವನ್ನು ಆಚರಿಸುತ್ತಾರೆ. ಕೆರೆಯು ತುಂಬಿದಾಗ ಆ ಊರಿನ ಜನರು ಕೆರೆಯ ನೀರಿಗೆ ಪೂಜೆಯನ್ನು ಸಲ್ಲಿಸಿ ಒಂದು ಕುರಿಯನ್ನು ಬಲಿ ಕೊಡುತ್ತಾರೆ. ಈ ಆಚರಣೆಯನ್ನು "ಗಂಗಮ್ಮನ ಪೂಜೆ" ಮಾಡುವುದು ಎಂದು ಕರೆಯುತ್ತಾರೆ. ಇದೇ ರೀತಿ ಭಾಗೀರಥಿ ಕೆರೆ ಹೊನ್ನಮ್ಮ, ಕೆರೆಗೆ ಆಹುತಿಯಾಗಿದ್ದ ಸಂಗತಿಯನ್ನು ಸಹ ಜನಪದದಲ್ಲಿ ನೋಡಬಹುದು. ಈ ರೀತಿಯ ವಿವಿಧ ಜನಪದರ ಆಶಯಗಳನ್ನು ಇಲ್ಲಿ ಬಿಂಬಿಸಲಾಗಿದೆ.

ಈ ಮಹಾಪ್ರಬಂಧದ ಕೊನೆಯ ಅಧ್ಯಾಯವಾದ ಸಮಾರೋಪದಲ್ಲಿ ಇಡೀ ಅಧ್ಯಯನದಲ್ಲಿ ಕಂಡುಕೊಂಡ ಸಂಶೋಧನೆಯ ಫಲಿತಗಳನ್ನು ನಿರೂಪಿಸಲಾಗಿದೆ. ಅಧ್ಯಯನದ ಪೂರ್ವದಲ್ಲಿ ಹಾಕಿಕೊಂಡ ಯೋಜನೆಗಳನ್ನು ಸಮರ್ಪಕವಾಗಿ ಮುಕ್ತಾಯಗೊಳಿಸುವಲ್ಲಿ ಎದುರಾದ ಸಮಸ್ಯೆಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಅನುಬಂಧಗಳನ್ನು ಕೊಡಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡ ಕೃತಿ, ಲೇಖನ, ಶಾಸನ, ಕರ್ನಾಟಕದ ಸಣ್ಣ ನೀರಾವರಿ ಇಲಾಖೆಯ ದಾಖಲೆಗಳನ್ನು ಮತ್ತು ಮಹಾ ಪ್ರಬಂಧಗಳ ವಿವರಗಳನ್ನು ಗ್ರಂಥಋಣದಲ್ಲಿ ನೀಡಲಾಗಿದೆ. ಅಧ್ಯಯನಕ್ಕೆ ಸಂಬಂಧಿಸಿದಂತೆ ಜಿಲ್ಲೆಯ ಭೌಗೋಳಿಕ ನಕ್ಷೆ, ಕೆರೆಗಳ ನಕ್ಷೆಗಳು, ಪ್ರಶ್ನಾವಳಿ, ಛಾಯಚಿತ್ರಗಳನ್ನು ಅನುಬಂಧದಲ್ಲಿ ಅಳವಡಿಸಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಸರಸ್ವತಿ, ೨೦೦೭, **ಜೀವವಿಕಾಸ,** ಪು-೧-೬

೨. ನಾಗರಾಜ, ಟಿ.ವಿ., ೨೦೧೧, 'ಚಿತ್ರದುರ್ಗ ಜಿಲ್ಲೆಯ ಶಾಸನೋಕ್ತ ಕೆರೆ ನೀರಾವರಿ' ಇತಿಹಾಸ ದರ್ಶನ. ಸಂ.೧೨, ಪು.೨೪೯-೨೮೨

೩. ಅದೇ, ಪು.೨೪೯-೨೮೨

೪. ಶ್ರೀನಿವಾಸ ಹಾವನೂರು(ಸಂ), ಮಧ್ಯಕಾಲೀನ ಕರ್ನಾಟಕ, ೨೦೦೮, ಪು.೨೨೭

೫. ಚಿತ್ರದುರ್ಗ ಜಿಲ್ಲಾ ಜಲಾನಯನ ಕೈಪಿಡಿ-೨೦೧೫-೧೬ ಪು.೬

೬. ತಿಪ್ಪೇಸ್ವಾಮಿ. ಎಚ್., ೨೦೧೭, ಚರಿತ್ರೆ ಶಾಸ್ತ್ರ, ಪು.೨೮

೭. ಕೆರೆ ಇಲ್ಲದೆ ಬಾವಿ ಇಲ್ಲ, ಜಲವು ಪ್ರಪಂಚದಲ್ಲಿ ಮುಕ್ಕಾಲು ಭಾಗ ಆವರಿಸಿದೆ. ಪಂಚಭೂತಗಳಲ್ಲಿ ನೀರು ಶ್ರೇಷ್ಠವಾದದ್ದು. ನಾಗರೀಕತೆ ಬೆಳೆದಿರುವುದೇ ನದಿ, ಕೆರೆ, ಹಳ್ಳ-ಕೊಳ್ಳಗಳ ಪರಿಸರದಲ್ಲಿ ಎಂಬ ವಿಚಾರಗಳು ಕಂಡುಬಂದಿವೆ.

ಅಧ್ಯಾಯ ಎರಡು

# ಚಿತ್ರದುರ್ಗ ಜಿಲ್ಲೆಯ ಭೌಗೋಳಿಕ ಪರಿಸರ

೨.೧. ಚಿತ್ರದುರ್ಗ ಜಿಲ್ಲೆಯ ಭೌಗೋಳಿಕ ವಿವರ

೨.೨. ಚಿತ್ರದುರ್ಗ ಜಿಲ್ಲೆಯ ಭೌಗೋಳಿಕ ಲಕ್ಷಣಗಳು ಮತ್ತು ಮಹತ್ವ

# ಅಧ್ಯಾಯ ಎರಡು

# ಚಿತ್ರದುರ್ಗ ಜಿಲ್ಲೆಯ ಭೌಗೋಳಿಕ ಪರಿಸರ

**ಮಾನವ** ಸಂಸ್ಕೃತಿಯ ಏಳ್ಗೆ ಮತ್ತು ಅವನತಿಯಲ್ಲಿ ಪರಿಸರ ಅತ್ಯಂತ ಪ್ರಮುಖ ಪಾತ್ರವಹಿಸುತ್ತದೆ. ವಿವಿಧ ಅರಸು ಮನೆತನಗಳ ಏಳ್ಗೆ ಮತ್ತು ಅವನತಿ, ಅವರ ಕೀರ್ತಿ ಪತಾಕೆ, ಅಲ್ಲಿನ ಉತ್ತಮ ಭೌಗೋಳಿಕ ಪರಿಸರವನ್ನು ಅವಲಂಬಿಸಿರುತ್ತದೆ. ಒಂದು ದೇಶದ ಇತಿಹಾಸವನ್ನು ತಿಳಿಯಬೇಕಾದರೆ ಮೊದಲು ಅಲ್ಲಿನ ಭೌಗೋಳಿಕ ಅಂಶಗಳಾದ ಆ ಪ್ರದೇಶದ ಸ್ಥಾನ, ಜಲಾಶಯಗಳು, ನದಿ, ಕಣಿವೆಗಳು, ಕಾಡು, ಮರುಭೂಮಿ, ವಾಯುಗುಣ, ಪರ್ವತಗಳು, ಸಮುದ್ರಗಳು, ಆ ಪ್ರದೇಶದ ಆಕಾರ ಮತ್ತು ವಿಸ್ತಾರ ಇವುಗಳೆಲ್ಲವನ್ನು ಕೂಡ ತಿಳಿದುಕೊಳ್ಳಬೇಕಾಗುತ್ತದೆ. ಇವು ಒಂದು ಪ್ರದೇಶದಲ್ಲಿನ ನಾಗರಿಕತೆ ಬೆಳೆಯುವುದಕ್ಕೆ ಮತ್ತು ಇತಿಹಾಸ ಬೆಳವಣಿಗೆಗೆ ಪೂರಕವಾಗಿರುತ್ತವೆ. ಜೊತೆಗೆ ಇವು ಸಂಸ್ಕೃತಿಯ ಬೆಳವಣಿಗೆಗೂ ಕೂಡ ಸಹಕಾರಿಯಾಗುತ್ತವೆ. ಅದಕ್ಕಾಗಿಯೇ ಕ್ರಿ.ಪೂ. ಮೂರನೆಯ ಶತಮಾನದ ಗ್ರೀಕ್ ಇತಿಹಾಸಕಾರ ಪಾಲಿಬಿಯಸ್ "ಭೌಗೋಳಿಕ ಹಿನ್ನೆಲೆಯಲ್ಲಿ ಮಾತ್ರ ಇತಿಹಾಸವನ್ನು ಸರಿಯಾಗಿ ಅರಿಯಲು ಸಾಧ್ಯ" ಎಂದಿದ್ದಾರೆ.[೧] ಭೌಗೋಳಿಕ ಲಕ್ಷಣಗಳ ಮಹತ್ವವನ್ನು ಕುರಿತಂತೆ ವೀಲ್ ಮತ್ತು ಏರಿಯಲ್ ಡ್ಯೂರಂಟ್‌ರವರು ಈ ರೀತಿ ಹೇಳುತ್ತಾರೆ "ಮಳೆ ಬೀಳುವುದು ತೀರಾ ಅಪರೂಪವಾದರೆ ಮಧ್ಯ ಏಶಿಯಾದಲ್ಲಿ ಆದಂತೆ ನಾಗರಿಕತೆ ಮರುಳು ರಾಶಿಯಲ್ಲಿ ಮಾಯವಾಗುತ್ತದೆ; ತೀರಾ ಉಗ್ರವಾಗಿ ಬಿದ್ದರೆ ಮಧ್ಯ ಅಮೇರಿಕಾದಲ್ಲಿ ಆದಂತೆ ನಾಗರಿಕತೆ ಕಾಡಿನೊಡನೆಯೇ ಅಡಗಿ ಹೋಗುತ್ತದೆ. ನಮ್ಮ ವೃದ್ಧಿ ಹೊಂದುತ್ತಿರುವ ವಲಯಗಳಲ್ಲಿ ಇಪ್ಪತ್ತು ಡಿಗ್ರಿಯಷ್ಟು ಸರಾಸರಿ ಉಷ್ಣ ಏರಿದರೆ ನಾವು ಮತ್ತೆ ಜಡ ನಾಗರಿಕತೆಗೆ ಸರಿದು ಬಿಡುತ್ತೇವೆ".[೨] ಈ ಹೇಳಿಕೆಯನ್ನು ಚಿತ್ರದುರ್ಗ ಜಿಲ್ಲೆಗೂ ಅನ್ವಯಿಸಿಕೊಳ್ಳಬೇಕಾಗುತ್ತದೆ. ಏಕೆಂದರೆ ಈ ಜಿಲ್ಲೆಗೆ ಹಲವಾರು ಶತಶತಮಾನಗಳ ಕಾಲದ ಇತಿಹಾಸ ಇದೆ. ಇಲ್ಲಿನ ಚರಿತ್ರೆಯಲ್ಲಿ ಎಷ್ಟೋ ರಾಜವಂಶಸ್ಥರು ಅಳಿದು ಹೋಗಿದ್ದಾರೆ. ಹಾಗೆಯೇ ಇಲ್ಲಿ ಆದಿಮಾನವ ನೆಲೆಸಿದ್ದ ಎಂದು ಸಾಕ್ಷೀಕರಿಸಲು ಹಲವು ಪ್ರಾಗ್ಯೈತಿಹಾಸಿಕ ನೆಲೆಗಳು ಇಲ್ಲಿ ಕಂಡುಬಂದಿವೆ. ಇವುಗಳೆಲ್ಲವನ್ನು ವ್ಯವಸ್ಥಿತವಾಗಿ ಗುರುತಿಸದ ಹೊರತು ನಮ್ಮ ದೇಶ ಅಥವಾ ರಾಜ್ಯದ ಇತಿಹಾಸವನ್ನು ವ್ಯವಸ್ಥಿತವಾಗಿ ಕಟ್ಟಲು ಸಾಧ್ಯವಿಲ್ಲ.

ಕರ್ನಾಟಕ ರಾಜ್ಯದಲ್ಲಿರುವ ವಿವಿಧ ಜಿಲ್ಲೆಗಳಲ್ಲಿ ಚಿತ್ರದುರ್ಗ ಜಿಲ್ಲೆಯು ಒಂದಾಗಿದ್ದು, ಅದು ತನ್ನದೇ ಆದ ಭೌಗೋಳಿಕ ಇತಿಹಾಸವನ್ನು ಹೊಂದಿದೆ. ಇಲ್ಲಿನ ಮಾನವ ವಾಸಯೋಗ್ಯ ಭೌಗೋಳಿಕ

ಪರಿಸರದಿಂದಾಗಿ, ಇಲ್ಲಿ ಬಹು ಹಿಂದಿನಿಂದ ಮಾನವ ಸಂಸ್ಕೃತಿ ರೂಪುಗೊಂಡಿದೆ. ಇಲ್ಲಿನ ಭೌಗೋಳಿಕ ಪರಿಸರದಲ್ಲಿ ಕಾಣಬರುವ ಪ್ರಮುಖ ಭೌಗೋಳಿಕ ಅಂಶಗಳು ಯಾವುವು, ಅದರ ಭೂ-ಮೇರೆಗಳು ಯಾವುವು ಮತ್ತು ಅವು ಇಲ್ಲಿನ ಮಾನವ ಸಂಸ್ಕೃತಿಯ ಅಭಿವೃದ್ಧಿಯಲ್ಲಿ ಹೇಗೆ ತನ್ನ ಪಾತ್ರವನ್ನು ನಿರ್ವಹಿಸಿವೆ ಎಂಬುದನ್ನು ಅಧ್ಯಯನ ಮಾಡುವುದು ಮುಖ್ಯವೆನಿಸುತ್ತದೆ.

**೨.೧. ಚಿತ್ರದುರ್ಗ ಜಿಲ್ಲೆಯ ಭೌಗೋಳಿಕ ವಿವರ**

ಚಿತ್ರದುರ್ಗವು ಬಹು ಪ್ರಾಚೀನಕಾಲದಿಂದಲೂ ಮೌರ್ಯ, ಶಾತವಾಹನ, ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ, ಚಿತ್ರದುರ್ಗ ಪಾಳೆಯಗಾರರು ಮೊದಲಾದ ರಾಜ ಮನೆತನಗಳ ಆಳ್ವಿಕೆಗೆ ಒಳಗಾಗಿದೆ. ಚಿತ್ರದುರ್ಗ ಪಾಳೆಯಗಾರರ ಅವನತಿಯ ನಂತರ ಈ ಭೂಭಾಗವು ಹೈದರ್ ಮತ್ತು ಆತನ ಮಗ ಟಿಪ್ಪುವಿನ ಆಳ್ವಿಕೆಗೊಳಪಟ್ಟಿತು. ಟಿಪ್ಪುವಿನ ಅವನತಿಯ ತರುವಾಯ ಮೈಸೂರು ಅರಸರ ಅಧೀನಕ್ಕೊಳಪಟ್ಟು, ಕ್ರಮೇಣಾ ಬ್ರೀಟಿಷ್‌ರ ನೇರ ಆಳ್ವಿಕೆಗೆ ಒಳಗಾಯಿತು. ಬ್ರಿಟಿಷ್ ಕಮಿಷನರ್‌ಗಳು ಚಿತ್ರದುರ್ಗ ಮತ್ತು ತುಮಕೂರನ್ನು ಸೇರಿಸಿ ಒಂದು ಆಡಳಿತ ವಿಭಾಗವನ್ನಾಗಿ ಮಾಡಿ ತುಮಕೂರನ್ನು ಅದರ ಕೇಂದ್ರವನ್ನಾಗಿ ಮಾಡಿದರು. ಆನಂತರ ೧೮೫೩ರಲ್ಲಿ ಈ ವಿಭಾಗವನ್ನು ರದ್ದು ಮಾಡಿ ತುಮಕೂರನ್ನು ನಂದಿದುರ್ಗ ವಿಭಾಗಕ್ಕೆ ಸೇರಿಸಿ ಚಿತ್ರದುರ್ಗವನ್ನು ನಗರ ವಿಭಾಗಕ್ಕೆ ಸೇರ್ಪಡೆ ಮಾಡಿ ೧೮೭೯ರವರಗೆ ಈ ವ್ಯವಸ್ಥೆಯನ್ನು ಮುಂದುವರೆಸಿದರು, ಕ್ರಮೇಣ ಅಂದರೆ ೧೮೮೨ರಲ್ಲಿ ಚಿತ್ರದುರ್ಗವನ್ನು ತುಮಕೂರು ವಿಭಾಗದಲ್ಲಿ ಸೇರಿಸಿ ಅದನ್ನು ತುಮಕೂರಿನ ಒಂದು ಉಪವಿಭಾಗ ಎಂದು ಹೆಸರಿಸಿದರು. ೧೮೮೬ರಲ್ಲಿ ಚಿತ್ರದುರ್ಗದಲ್ಲಿದ್ದ ಪಾವಗಡವನ್ನು ತುಮಕೂರಿಗೆ ಸೇರಿಸಿ ಚಿತ್ರದುರ್ಗವನ್ನು ಪ್ರತ್ಯೇಕವಾಗಿ ನೂತನ ಜಿಲ್ಲೆಯನ್ನಾಗಿ ರಚಿಸಿದರು[೩]. ೧೯೯೭ರಲ್ಲಿ ಶ್ರೀ ಜೆ.ಎಚ್. ಪಟೇಲರು ಮುಖ್ಯಮಂತ್ರಿಯಾಗಿದ್ದಾಗ ಚಿತ್ರದುರ್ಗ ಜಿಲ್ಲೆಯನ್ನು ಪುನಃ ವಿಭಜಿಸಿ ಮೂಲತಃ ಇಲ್ಲಿಯೇ ಇದ್ದ ಹರಿಹರ, ದಾವಣಗೆರೆ, ಜಗಲೂರು ತಾಲೂಕುಗಳನ್ನು ದಾವಣಗೆರೆಗೆ ಸೇರಿಸಿ ದಾವಣಗೆರೆ ಜಿಲ್ಲೆಯನ್ನು ರಚಿಸಲಾಯಿತು[೪]. ಇದರಿಂದಾಗಿ ಮೊದಲು ಒಂಭತ್ತು ತಾಲೂಕುಗಳನ್ನು ಹೊಂದಿದ್ದ ಚಿತ್ರದುರ್ಗ ಜಿಲ್ಲೆಯಲ್ಲಿ ಕೇವಲ ಆರು ತಾಲೂಕುಗಳು ಮಾತ್ರ ಉಳಿದವು.

ತ್ರೇತ್ರಾಯುಗದಲ್ಲಿ 'ಚಿನ್ಮೂಲಾದ್ರಿ' ಮತ್ತು ದ್ವಾಪರಯುಗದಲ್ಲಿ 'ಹಿಡಂಬಾಪಟ್ಟಣ' ಎಂದು ಕರೆಯಲ್ಪಡುತ್ತಿದ್ದ ಚಿತ್ರದುರ್ಗದಲ್ಲಿ ಪಾಂಡವರ ವಂಶಿಕ ಜನಮೇಜರಾಯ ಇಲ್ಲಿನ ಬೆಟ್ಟದ ಮೇಲೆ ಸರ್ಪಯಾಗ ಮಾಡಿ ಅಲ್ಲಿ ಗೋಪಾಲಸ್ವಾಮಿ ದೇವಾಲಯವನ್ನು ಕಟ್ಟಿಸಿದ ಎನ್ನುವ ಪೌರಾಣಿಕ ಪ್ರತೀತಿ ಇಲ್ಲಿದೆ. ನಂತರ ಕಾಲದಲ್ಲಿ ಇದನ್ನು ಸೂಳ್ಗಲ್, ಚಿನ್ಮತ್ತನೂರುಪಟ್ಟಣ, ಪೆರುಮಾಳೆಪುರ, ಬ್ರಹ್ಮಪುರಿ ಎಂದು ಕರೆಯಲಾಗುತ್ತಿತ್ತು[೫].

ಚಿತ್ರದುರ್ಗ ಎನ್ನುವ ಹೆಸರು ಹೇಗೆ ಬಂತು ಎನ್ನುವುದನ್ನು ಪ್ರೊ ಲಕ್ಷ್ಮಣ್ ತೆಲಗಾವಿ, ಪ್ರೊ ರಾಜಶೇಖರಪ್ಪ, ಹಿ.ಚಿ. ಶಾಂತವೀರಯ್ಯ ಮೊದಲಾದ ವಿದ್ವಾಂಸರು ತಮ್ಮದೇ ಆದ ದೃಷ್ಟಿಕೋನದಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ. ಅದೇ ರೀತಿ ಚಾರಿತ್ರಿಕ ಕೃತಿಗಳು, ಶಾಸನಗಳು, ವಂಶಾವಳಿಗಳು, ಕೈಫಿಯತ್ತುಗಳು ಈ ಪ್ರದೇಶವನ್ನು ಬೇರೆ ಬೇರೆ ಹೆಸರುಗಳಿಂದ ಗುರುತಿಸಿವೆ. ಇಲ್ಲಿನ ಪಾಳೆಗಾರರ

ಮೂಲ ಪುರುಷ ಚಿತ್ರನಾಯಕನಿಂದಾಗಿ ಈ ಊರಿಗೆ ಚಿತ್ರದುರ್ಗ ಎಂಬ ಹೆಸರು ಬಂತೆಂದು ಸಾಮಾನ್ಯವಾಗಿ ನಂಬಲಾಗಿದೆ. ಆದರೆ ಚಿತ್ರದುರ್ಗ ಅರಸರ ವಂಶಾವಳಿಯೊಂದು ಇದನ್ನು 'ಚಿಂಚನಕಲ್ಲು' ಎಂದು ದಾಖಲಿಸಿದೆ. ಆದರೆ ಇಲ್ಲಿ ದೊರೆತ ಕ್ರಿ.ಶ. ೧೨೮೬ರ ಶಾಸನವೊಂದು ಈ ಪ್ರದೇಶವನ್ನು 'ಬೆ(ಬಿ)ಮ್ಮತ್ತನೂರುದುರ್ಗ' ಎಂದು ಉಲ್ಲೇಖಿಸಿದೆ. ಅದೇರೀತಿ ಕ್ರಿ.ಶ. ೧೪೯೮ರ ನೀರ್ಥಡಿ ಶಾಸನವು 'ಚಿಂನ್ಮನಗಿರಿದುರ್ಗ' ಎಂದು ಕರೆದಿದೆ. ಮೆದಕರಿಪುರದ ಕ್ರಿ.ಶ. ೧೭೧೪ ಶಾಸನವು 'ಶಿಂಗನಗಿರಿದುರ್ಗ'ವೆಂದು ಇದನ್ನು ಗುರುತಿಸಿದೆ. ಕ್ರಿ.ಶ. ೧೭೩೦ರ ಸಿರಿಗೆರೆ ಶಾಸನವು ಇದನ್ನು 'ಚಿಂತಲಕಲದುರ್ಗ' ಎಂದು ಉಲ್ಲೇಖಿಸಿರುವುದು ಗಮನಾರ್ಹವಾಗಿದೆ. ಇನ್ನು ಕೆಲವರು ಶಾಸನಗಳು ಈ ಭಾಗವನ್ನು 'ದುರ್ಗದ ಸೀಮೆ', 'ದುರ್ಗದ ರಾಜ್ಯ' ಎಂದೆಲ್ಲಾ ಉಲ್ಲೇಖಿಸಿವೆ. ವಿಜಯನಗರದ ಅರಸ ಶ್ರೀಕೃಷ್ಣದೇವರಾಯ ತನ್ನ ದಿನಚರಿಯಲ್ಲಿ 'ಚಿಮಟದುರ್ಗ' ಎಂದು ಕರೆದಿದ್ದು, ಚಿತ್ರದುರ್ಗದ ಆಯಗಾರರ ವಿವರ ಎನ್ನುವ ದಾಖಲೆಯಲ್ಲಿ 'ಚಿನ್ಮೂಲಗಿರಿದುರ್ಗ' ಎಂದು ಈ ಊರನ್ನು ದಾಖಲಿಸಲಾಗಿದೆ. ಹಿಂದೊಮ್ಮೆ 'ಚಿನ್ಮೂಲಾದ್ರಿಪುರ' ಎಂದು ಕರೆಯಲ್ಪಡುತ್ತಿದ್ದ ಇದು ಶಾತವಾಹನರ ಕಾಲದಲ್ಲಿ 'ಚಂದವಳ್ಳಿ' ಎಂದು ಕರೆಯಲ್ಪಟ್ಟಿತು. ಮುಂದೆ ಟಿಪ್ಪುವಿನ ಕಾಲದಲ್ಲಿ 'ಫರಕಾಬಾದ್' ಎಂದು ಹೆಸರಾಯಿತು.[೬] ಬಹುಶಃ ಶಾಸನೋಕ್ತ **ಚಿಂತಲಕಲದುರ್ಗ** ಎನ್ನುವುದನ್ನೇ ಮುಂದೆ ಬ್ರಿಟೀಷರು **'ಚಿಟಲುದ್ರುಗ್'** ಎಂದು ಕರೆಯುತ್ತಿದ್ದಿರಬಹುದು. ಅದುವೇ ಮುಂದೆ ಜನರ ಬಾಯಲ್ಲಿ ಚಿತ್ರದುರ್ಗ ಎಂದಾಗಿರುವ ಸಾಧ್ಯತೆ ಇದೆ.

ದಖನ್ ಪ್ರಸ್ಥಭೂಮಿಯ ಭಾಗವಾಗಿರುವ ಚಿತ್ರದುರ್ಗವು ಕರ್ನಾಟಕ ರಾಜ್ಯದ ಮಧ್ಯಭಾಗದಲ್ಲಿದ್ದು, ಅದರ ಒಟ್ಟು ವಿಸ್ತೀರ್ಣ ೭.೭೦.೦೦೦ ಹೆಕ್ಟೇರ್ ಆಗಿದೆ. ಕರ್ನಾಟಕದ ಪೀಠಭೂಮಿಯ ಕೇಂದ್ರ ಎನಿಸಿರುವ ಇದು ಸಮುದ್ರ ಮಟ್ಟಕ್ಕಿಂತ ಸರಾಸರಿ ೨೮೦೦ ಅಡಿ (೬೦೨.೬ಮೀ.) ಎತ್ತರದಲ್ಲಿದೆ.[೭] ೧೪°.೨೮ ಅಕ್ಷಾಂಶ ಮತ್ತು ೭೫°.೫೯ ರೇಖಾಂಶದಲ್ಲಿರುವ ಚಿತ್ರದುರ್ಗ ನಗರವು ಬಯಲು ಹಾಗೂ ಸಮತಲದಲ್ಲಿರುವುದರಿಂದ ವರ್ಷದ ಬಹುಕಾಲದ ಒಣಹವೆಯಿಂದ ಕೂಡಿರುತ್ತದೆ. ಜನವರಿ ಕೊನೆಯಿಂದ ಪ್ರಾರಂಭವಾದ ಬೇಸಿಗೆಯ ತಾಪಮಾನ ಮಾರ್ಚ್, ಏಪ್ರಿಲ್, ಮೇ ತಿಂಗಳಲ್ಲಿ ಹೆಚ್ಚಿರುತ್ತದೆ. ೭೭.೩° ಪ್ಯಾರಾನೇಟ್‌ನಷ್ಟು ವರ್ಷದ ಸರಾಸರಿ ಉಷ್ಣಾಂಶವಿರುತ್ತದೆ. ೫೦% ಸಾಪೇಕ್ಷ ಆರ್ದ್ರತೆಯು ಮಾರ್ಚ್ ತಿಂಗಳಿನಲ್ಲಿರುತ್ತದೆ. ಆದರೆ ಜುಲೈ, ಆಗಸ್ಟ್, ಸೆಪ್ಟಂಬರ್‌ನಲ್ಲಿ ಹೆಚ್ಚು ಮಳೆಯಾಗಿ ಅಕ್ಟೋಬರ್‌ವರೆಗೂ ಮಳೆ ಬರುತ್ತದೆ. ಸರಾಸರಿ ೪೫೦–೪೭೮.ಮಿ.ಮೀ. ಮಳೆ ಬೀಳುತ್ತದೆ.[೮] ಪೂರ್ವಕ್ಕೆ ಆಂಧ್ರದ ಅನಂತಪುರ ಜಿಲ್ಲೆ, ಪಶ್ಚಿಮದಲ್ಲಿ ದಾವಣಗೆರೆ ಜಿಲ್ಲೆ ವಾಯುವ್ಯಕ್ಕೆ ಶಿವಮೊಗ್ಗ ಜಿಲ್ಲೆ, ಉತ್ತರಕ್ಕೆ ಬಳ್ಳಾರಿ ಜಿಲ್ಲೆ, ದಕ್ಷಿಣ ಮತ್ತು ನೈರುತ್ಯಕ್ಕೆ ಚಿಕ್ಕಮಗಳೂರು ಜಿಲ್ಲೆ, ವಾಯುವ್ಯದಲ್ಲಿ ಧಾರವಾಡ, ಆಗ್ನೇಯ ದಿಕ್ಕಿನಲ್ಲಿ ತುಮಕೂರು ಜಿಲ್ಲೆಗಳಿಂದ ಚಿತ್ರದುರ್ಗ ಜಿಲ್ಲೆ ಸುತ್ತುವರಿದಿದೆ.[೯]

ಚಿತ್ರದುರ್ಗ, ಹೊಸದುರ್ಗ, ಹೊಳಲ್ಕೆರೆ, ಮೊಳಕಾಲ್ಮೂರು, ಹೊಸದುರ್ಗ, ಚಳ್ಳಕೆರೆಗಳು ಜಿಲ್ಲೆಯ ಪ್ರಸಕ್ತ ಆರು ತಾಲೂಕು ಕೇಂದ್ರಗಳಾಗಿವೆ.[೧೦] ಜಿಲ್ಲೆಯಲ್ಲಿ **೨೨ ನಾಡ ಕಚೇರಿಗಳು, ೨೨ ಹೋಬಳಿಗಳು ಮತ್ತು** ೧೮೯ ಗ್ರಾಮ ಪಂಚಾಯಿತಿಗಳಿದ್ದು, ಸುಮಾರು ೧೪೬೦ ಗ್ರಾಮಗಳಿವೆ.

ಅವುಗಳಲ್ಲಿ ೯೪೮ ಗ್ರಾಮಗಳಲ್ಲಿ ಮಾತ್ರ ಜನವಸತಿ ಇದ್ದು, ಉಳಿದ ೧೧೨ ಗ್ರಾಮಗಳಲ್ಲಿ ಜನವಸತಿ ಇಲ್ಲ. ಈ ಎಲ್ಲಾ ತಾಲೂಕು ಮತ್ತು ಗ್ರಾಮಗಳನ್ನೊಳಗೊಂಡಂತೆ ಈ ಜಿಲ್ಲೆಯ ಒಟ್ಟು ವ್ಯಾಪ್ತಿ ೧೦೮೨೫ ಚ.ಕಿ.ಮೀ. ಇದೆ. ತುರವನೂರು, ಚಿತ್ರದುರ್ಗ, ಭರಮಸಾಗರ, ಹಿರೇಗುಂಟನೂರು (ಚಿತ್ರದುರ್ಗ ತಾಲೂಕು), ಹೊಳಲ್ಕರೆ, ತಾಳ್ಯ, ರಾಮಗಿರಿ, ಭರಮಣ್ಣ ನಾಯ್ಕನದುರ್ಗ (ಹೊಳಲ್ಕೆರೆ ತಾಲೂಕು), ತುರವನೂರು, ಪರುಶುರಾಂಪುರ, ತಳಕು, ಚಳ್ಳಕೆರೆ, ನಾಯಕನಹಟ್ಟಿ (ಚಳ್ಳಕೆರೆ ತಾಲೂಕು) ಮೊಳಕಾಲ್ಮೂರು, ಬಿ.ಜಿ.ಕೆರೆ, ರಾಂಪುರ, (ಮೊಳಕಾಲ್ಮೂರು ತಾಲೂಕು), ಹಿರಿಯೂರು, ಜವಗೊಂಡನಹಳ್ಳಿ, ಧರ್ಮಪುರ, ಐಮಂಗಲ (ಹಿರಿಯೂರು ತಾಲೂಕು), ಹೊಸದುರ್ಗ, ಮಾಡದಕೆರೆ, ಮತ್ತೋಡು, ಹೊಸದುರ್ಗ, ಶ್ರೀರಾಂಪುರ (ಹೊಸದುರ್ಗ ತಾಲೂಕು) ಇವು ಈ ಜಿಲ್ಲೆಯ ಹೋಬಳಿ ಕೇಂದ್ರಗಳಾಗಿವೆ.[೧೧]

### ೨.೨. ಚಿತ್ರದುರ್ಗ ಜಿಲ್ಲೆಯ ಭೌಗೋಳಿಕ ಲಕ್ಷಣಗಳು ಮತ್ತು ಮಹತ್ವ

ಚಿತ್ರದುರ್ಗ ಜಿಲ್ಲೆಯ ಪರಿಸರ ಹಲವು ಬಗೆಯ ವೈಶಿಷ್ಟ್ಯಗಳಿಗೆ ಹೆಸರುವಾಸಿಯಾಗಿದೆ. ಮಾನವ ಸಂಸ್ಕೃತಿಯ ಏಳ್ಗೆ ಮತ್ತು ಅವನತಿಯಲ್ಲಿ ಇಲ್ಲಿನ ಭೌಗೋಳಿಕ ಅಂಶಗಳು ತನ್ನದೇ ಆದ ಪ್ರಭಾವ ಬೀರಿದ್ದು, ಆ ಕುರಿತ ವಿವರ ಮತ್ತು ವೈಶಿಷ್ಟ್ಯತೆ ಈ ಮುಂದಿನಂತಿದೆ.

**ಮಾನವ ಸಂಪನ್ಮೂಲ ಮತ್ತು ವೃತ್ತಿ**

ರಾಜ್ಯದ ಜನಸಾಂದ್ರತೆಯಲ್ಲಿ ಜಿಲ್ಲೆ ೨೭ನೇ ಸ್ಥಾನದಲ್ಲಿದೆ. ರಾಜ್ಯದ ಜನಸಾಂದ್ರತೆ ಪ್ರತಿ ಚ.ಕೀ.ಗೆ ೩೧೯ ಇದ್ದರೆ ಜಿಲ್ಲೆಯಲ್ಲಿನ ಪ್ರತಿ ಚ.ಕೀ. ಜನಸಾಂದ್ರತೆಯು ೨೯೭ ಇದೆ. ೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೬೫೯೪೫೬ ರಷ್ಟಿದೆ. ಇದರಲ್ಲಿ ೮೪೦೮೪೩ ಪುರುಷರು ಮತ್ತು ೮೧೮೬೧೩ ಮಹಿಳೆಯರಿದ್ದು, ಪ್ರತಿ ಸಾವಿರ ಪುರುಷರಿಗೆ ಶೇ.೯೭೪ರಷ್ಟು ಮಹಿಳೆಯರಿದ್ದಾರೆ. ಇದರಲ್ಲಿ ನಗರ ಪ್ರದೇಶದಲ್ಲಿ ವಾಸಿಸುವ ಜನರ ಸಂಖ್ಯೆ ೧೩೯೯೨೩ರಷ್ಟಿದ್ದರೆ, ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಜನರ ಸಂಖ್ಯೆ ೩೯೫೩೩ರಷ್ಟಿದೆ. ಜಿಲ್ಲೆಯ ಒಟ್ಟು ಸಾಕ್ಷರತೆಯ ಪ್ರಮಾಣ ಶೇ. ೬೦.೪೩ರಷ್ಟಿದ್ದು ಇದರಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣ ಶೇ. ೭೧.೬೯ರಷ್ಟಿದೆ ಮತ್ತು ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ. ೪೮.೮೯ರಷ್ಟಿದೆ[೧೨]. ಈ ಮೇಲಿನ ಅಂಕಿ-ಸಂಖ್ಯೆಗಳನ್ನು ಗಮನಿಸಿದರೆ ನಗರ ಪ್ರದೇಶಕ್ಕಿಂತ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಜನರ ಸಂಖ್ಯೆ ಹೆಚ್ಚಾಗಿದೆ. ಜೊತೆಗೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ಪುರುಷರ ಸಾಕ್ಷರತೆಯ ಪ್ರಮಾಣಕ್ಕಿಂತ ಕಡಿಮೆ ಇರುವುದು ಕಂಡುಬರುತ್ತದೆ.

ಜಿಲ್ಲೆಯಾದ್ಯಂತ ಹಲವಾರು ಜಾತಿ/ಜನಾಂಗದವರು ವಾಸವಾಗಿದ್ದು, ಕೃಷಿ ಆಧಾರಿತ ಕುಶಲಕರ್ಮಿಗಳು ಸಹ ಇರುವುದನ್ನು ಕಾಣುತ್ತೇವೆ. ಅಂದರೆ ಕುಂಬಾರಿಕೆ, ಚಮ್ಮಾರಿಕೆ, ಬಡಿಗತನ ಹೀಗೆ ಹಲವಾರು ವೃತ್ತಿಗಳನ್ನು ಮಾಡುವ ಜನರಿದ್ದಾರೆ. ಹಾಗೆಯೇ ಕೂಲಿ ನಾಲಿ ಮಾಡಿಕೊಂಡು ಜೀವನ ಸಾಗಿಸುವವರೂ ಇದ್ದಾರೆ. ಇಲ್ಲಿ ಕೃಷಿಯೇ ಪ್ರಮುಖ ಕಸುಬಾಗಿರುವುದರಿಂದ ಕೃಷಿ ಕೂಲಿ ಕಾರ್ಮಿಕರು ಹೆಚ್ಚಾಗಿ ಕಂಡುಬರುತ್ತಾರೆ. ಜೊತೆಗೆ ಕೂಲಿಯನ್ನರಸಿ ವಲಸೆ ಹೋಗುವ ಜನರು ಸಹ

ಇರುವುದನ್ನು ನಾವು ಕಾಣುತ್ತೇವೆ. ಒಟ್ಟಾರೆಯಾಗಿ ಇಲ್ಲಿನ ಜನರ ಆರ್ಥಿಕ ಸ್ಥಿತಿಗತಿ ಬೇರೆ ಜಿಲ್ಲೆಯ ಪ್ರದೇಶಗಳಿಗೆ ಹೋಲಿಸಿಕೊಂಡರೆ ಸಾಧಾರಣವಾಗಿದೆ ಎಂದು ಹೇಳಬಹುದು. ಏಕೆಂದರೆ ಜಿಲ್ಲಾ ಕೇಂದ್ರ ಹೊರತುಪಡಿಸಿದರೆ ಉಳಿದೆಡೆ ಕೈಗಾರಿಕಾ ಕೇಂದ್ರಗಳು ಬಹು ಕಡಿಮೆ ಇವೆ. ಜಿಲ್ಲೆಯಲ್ಲಿ ನಿರಂತರವಾಗಿ ಜನರಿಗೆ ಉದ್ಯೋಗ ಒದಗಿಸುವ ಬೃಹತ್ ಕೈಗಾರಿಕೆಗಳು ಸ್ಥಾಪನೆಯಾಗಿಲ್ಲ. ಹಾಗಾಗಿ ಜಿಲ್ಲೆಯ ಗ್ರಾಮೀಣ ಪ್ರದೇಶದ ಕೆಲವು ಜನರು ಕೆಲಸವನ್ನರಸಿ ಬೆಂಗಳೂರಿನಂತಹ ಮಹಾನಗರಗಳಿಗೆ ವಲಸೆ ಹೋಗುತ್ತಾರೆ. ಅಲ್ಲದೇ ಬೆರಳೆಣಿಕೆಯಷ್ಟು ಜನರು ವಾಣಿಜ್ಯ–ವ್ಯಾಪಾರದಲ್ಲಿ ತೊಡಗಿಕೊಂಡಿದ್ದಾರೆ. ಇದರೊಂದಿಗೆ ಜಿಲ್ಲೆಯಲ್ಲಿ ವ್ಯವಸಾಯವೇ ಪ್ರಮುಖವಾಗಿದ್ದು. ಅದನ್ನೇ ಹೆಚ್ಚು ಜನರು ನಂಬಿಕೊಂಡಿರುವುದನ್ನು ಸಹ ನಾವು ಕಾಣುತ್ತೇವೆ.

**ನೈಸರ್ಗಿಕ ಸಂಪನ್ಮೂಲ (ಭೌಗೋಳಿಕ ಲಕ್ಷಣಗಳು)**

ಚಿತ್ರದುರ್ಗ ಮತ್ತು ಅದರ ಸುತ್ತಲಿನ ಭೂ–ಭಾಗಗಳು ಇಲ್ಲಿನ ಮಾನವ ಸಂಸ್ಕೃತಿಯ ವಿಕಾಸದಲ್ಲಿ ಬಹು ಮುಖ್ಯವಾದ ಪಾತ್ರ ನಿರ್ವಹಿಸಿವೆ. ಆದ್ದರಿಂದ ಚಿತ್ರದುರ್ಗದ ಕೇಂದ್ರಭಾಗವನ್ನು ಮುಖ್ಯಭಾಗವೆಂದು ಪರಿಗಣಿಸಿ, ಅಧ್ಯಯನದ ಅನುಕೂಲಕ್ಕಾಗಿ ಅದರ ಸುತ್ತಲಿನ ವಿವಿಧ ತಾಲೂಕಿನ ಭೂ–ಪ್ರದೇಶವನ್ನು ಚಿತ್ರದುರ್ಗ ಜಿಲ್ಲೆಯ ಪರಿಸರ ಎಂದು ಪ್ರಾಸಂಗಿಕವಾಗಿ ಪರಿಗಣಿಸಲಾಗಿದೆ. ಇಲ್ಲಿನ ಭೂ–ಭಾಗದ ಲಕ್ಷಣಗಳನ್ನು ಈ ಮುಂದಿನಂತೆ ವಿಭಾಗಿಸಿಕೊಂಡು ಅಧ್ಯಯನ ಮಾಡಬಹುಲಾಗಿದೆ.

**ಭೂಮಿಯ ರಚನೆ ಮತ್ತು ಶಿಲಾ ಸಂಪನ್ಮೂಲ**

ಇಲ್ಲಿನ ಭೌಗೋಳಿಕ ಪರಿಸರವು ಬೆಟ್ಟ, ಖನಿಜಗಳಿಂದ ಮತ್ತು ಗ್ರಾನೈಟ್(ಕಣ) ಶಿಲೆಗಳಿಂದ ಕಂಗೊಳಿಸುತ್ತಿದೆ. ಸಾಮಾನ್ಯವಾಗಿ ಕ್ರಿಸ್ಟಸ್ ಲೈನ್‌ಸಿಸ್ಟ್ (ಸ್ಪಟಿಕಾತ್ಮಕ ಪದರು ಶಿಲೆ) ಎಪಿಡಿಯೋರಾಯಿಟ್ಸ, ಜಂಬಿಟ್ಟಿಗೆ ಮತ್ತು ಲೇಟಾರಯಟ್ಸ್, ಗ್ರಾನೈಟ್ ಶಿಲಾ ಪದರುಗಳಿಂದ ಕೂಡಿದೆ. ಅಲ್ಲಲ್ಲಿ ಡೈಕ್ ಶಿಲೆ ಕಂಡುಬರುತ್ತದೆ. ಕ್ರಿಸ್ಟಲೈನ್‌ಸಿಸ್ಟ್, ಎಪಿಡೊರಾಯಿಟ್ಸ್, ಗ್ರಾನೈಟ್‌ಮೊದಲಾದ ಶಿಲೆಗಳು ಇಲ್ಲಿ ದೊರೆಯುತ್ತವೆ. ಇವುಗಳನ್ನು ಧಾರವಾಡ ಪ್ರದೇಶದಲ್ಲಿರುವಂತೆ ಹಳೆ ಮಾದರಿಯೆಂದು ಗುರುತಿಸಲಾಗಿದೆ.

ಚಿತ್ರದುರ್ಗ ಜಿಲ್ಲೆಯ ಹೆಚ್ಚು ಭಾಗ ಬೋಳು ಬೆಟ್ಟಗಳಿಂದ ಕೂಡಿದ್ದು, ಅಲ್ಲಲ್ಲಿ ಕೆಲ ಕಣಿವೆಗಳಿವೆ. ಇಲ್ಲಿನ ಬೆಟ್ಟಗಳು ದಕ್ಷಿಣ ಆಗ್ನೇಯದಿಂದ ಉತ್ತರ ವಾಯುವ್ಯದ ಕಡೆಗೆ ಸಮಾನಾಂತರದಲ್ಲಿ ಸಾಗಿವೆ. ಅದರಲ್ಲಿ ಚಿತ್ರದುರ್ಗ ಬೆಟ್ಟ ಪ್ರದೇಶವು ದಕ್ಷಿಣದಿಂದ ಉತ್ತರಕ್ಕೆ ಇಳಿಜಾರಾಗಿದೆ. ಇಲ್ಲಿನ ಹಲವು ಪರ್ವತಗಳು ತನ್ನದೇ ಆದ ವೈಶಿಷ್ಟ್ಯತೆಗಳನ್ನು ಹೊಂದಿವೆ. ಅವುಗಳಲ್ಲಿ ಚಿತ್ರದುರ್ಗ ತಾಲೂಕಿನಲ್ಲಿನ ಭೈರನ ಕಲ್ಲುಗುಡ್ಡ ೩,೮೬೩ ಅಡಿ ಎತ್ತರವಾಗಿದ್ದು, ಈಚಲ ಗುಡ್ಡವು ೩,೮೦೪ ಅಡಿ ಎತ್ತರವಾಗಿದೆ. ಅದೇ ರೀತಿ ಜೋಗಿಮಟ್ಟಿ ಗುಡ್ಡವು ೩,೮೦೪ ಅಡಿ, ಓಬಳದೇವರ ಗುಡ್ಡವು ೩,೭೦೦ ಅಡಿ ಹಾಗೂ ಧವಳಪ್ಪನ ಗುಡ್ಡವು ೩೨೮೫ ಅಡಿ ಎತ್ತರವನ್ನು ಹೊಂದಿವೆ. ಅದೇ ರೀತಿ ಮೊಳಕಾಲ್ಮೂರು ತಾಲೂಕಿನ ಜಟ್ಟಂಗಿ ರಾಮೇಶ್ವರ ಗುಡ್ಡವು ೩೪೮೯ ಅಡಿ, ನುಂಕೇಮಲೆ ಗುಡ್ಡವು ೩೦೨೨ ಅಡಿ, ಬ್ರಹ್ಮಗಿರಿ ೨೩೪೭ ಅಡಿ ಮತ್ತು ಜೋಗಪ್ಪನಗುಡ್ಡ ೯೩೬ ಅಡಿ ಎತ್ತರವನ್ನು ಹೊಂದಿವೆ. ಅಲ್ಲದೇ ಹೊಳಲ್ಕೆರೆ ತಾಲೂಕಿನ ದೊಡ್ಡ ಹೊಟ್ಟೆ ರಂಗಪ್ಪನ ಗುಡ್ಡವು ೩೭೫೧ ಅಡಿ,

ಬಡೇರ ಗುಡ್ಡ ೩೧೩೮ ಅಡಿ ಎತ್ತರವನ್ನೊಂದಿದೆ. ಹೊಸದುರ್ಗ ತಾಲೂಕಿನ ಹಾಲುರಾಮೇಶ್ವರ ಗುಡ್ಡ ೩೮೭೫ ಅಡಿ, ಕೋಟೆಕಲ್ಲುಗುಡ್ಡ ೩೩೨೨ ಅಡಿ ಎತ್ತರವನ್ನೊಂದಿವೆ. ಅದೇ ರೀತಿ ಹಿರಿಯೂರು ತಾಲೂಕಿನ ಮಾರಿಕಣಿವೆ ಪರ್ವತವು ೩೬೭೫ ಅಡಿ ಎತ್ತರವನ್ನು ಹೊಂದಿದ್ದು ಅವು ಇಲ್ಲಿನ ಎತ್ತರದ ಪ್ರದೇಶಗಳಾಗಿವೆ.[೧೩] ಇಲ್ಲಿನ ಹೇರಳವಾದ ಬೆಟ್ಟರಾಶಿಯನ್ನು ಗಮನಿಸಿದಾಗ ಈ ಪ್ರದೇಶವು ಹಿಂದೆ ಸಮೃದ್ಧಿ ಸಸ್ಯರಾಶಿಯ ತಾಣವಾಗಿತ್ತೆಂಬುದಾಗಿ ತಿಳಿದುಬರುತ್ತದೆ. ಅಲ್ಲದೆ, ಇಲ್ಲಿನ ಆದಿಮ ಸಂಸ್ಕೃತಿಯ ಜನರು ಚಿತ್ರಿಸಿರುವ ಹುಲಿ, ಚಿರತೆ, ಆನೆಯಂತಹ ಚಿತ್ರಗಳು, ಆನೆಗಳು ಈ ದಟ್ಟ ಅರಣ್ಯದಲ್ಲಿ ವಾಸಿಸುತ್ತಿದ್ದ ಸ್ಥಿತಿಯನ್ನು ಸ್ಪಷ್ಟಪಡಿಸುತ್ತವೆ.

ಜಿಲ್ಲೆಯ ಪೂರ್ವದ ಭಾಗ ಬಯಲು ಪ್ರದೇಶವಾಗಿದೆ. ಈ ಪ್ರದೇಶವು ಸಮತಟ್ಟಾಗಿರುವುದರಿಂದ ಯಾವುದೇ ಹೆಚ್ಚಿನ ಗಿಡಮರಗಳು ಇರುವುದಿಲ್ಲ. ಅಲ್ಲದೇ ಈ ಪ್ರದೇಶ ಹೆಚ್ಚು ಕೆಂಪು ಮಿಶ್ರಿತವಾಗಿದೆ. ಕೆಲವು ಕಡೆ ಕಪ್ಪು ಎರೆ ಮಣ್ಣಿನಿಂದ ಕೂಡಿದೆ. ಸಮತಟ್ಟಾದ ಪ್ರದೇಶದಲ್ಲಿ ಅಲ್ಲಲ್ಲಿ ಸಣ್ಣ ಬೆಟ್ಟಗಳ ಸಾಲುಗಳನ್ನು ಕಾಣಬಹುದು. ಈ ಸಾಲು ಒಂದು ತುದಿಯಿಂದ ಇನ್ನೊಂದು ತುದಿಯವರೆಗೂ ಅಂದರೆ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣಕ್ಕೆ ಹಬ್ಬಿವೆ. ಇವು ಅಲ್ಲಲ್ಲಿ ಸಣ್ಣ ದ್ವೀಪಗಳ ರೀತಿಯಾಗಿ ಮೇಲೆದ್ದಿರುವುದನ್ನು ಕಾಣಬಹುದು. ಈ ರೀತಿ ಅಲ್ಲಲ್ಲಿ ಬೆಟ್ಟಗಳು ಗುಂಪುಗಳಾಗಿರುವುದನ್ನು ಸಾಮಾನ್ಯವಾಗಿ ದಖ್ಖನ್ ಪ್ರಸ್ತಭೂಮಿಯ ಹಲವೆಡೆ ಕಾಣಬಹುದು. ಈ ಲಕ್ಷಣಗಳು ಜಿಲ್ಲೆಯ ಉದ್ದಕ್ಕೂ ಸಾಮಾನ್ಯವಾಗಿ ಕಂಡು ಬರುತ್ತವೆ. ಬೆಟ್ಟಗುಡ್ಡಗಳಿರುವುದರಿಂದ ಇಲ್ಲಿ ಸ್ವಲ್ಪ ಮಳೆ ಜಾಸ್ತಿ ಬೀಳುತ್ತದೆ. ಒರಟಾದ ನೆಲ ಹಾಗೂ ಎತ್ತರದ ದಿಣ್ಣೆಗಳು ಇಲ್ಲಿವೆ. ಇವು ಇಳಿಜಾರನ್ನು ಉತ್ತರದ ಕಡೆ ಹೊಂದಿವೆ. ಇದರಿಂದಾಗಿ ಮಳೆಯ ನೀರು ಉತ್ತರದಲ್ಲಿರುವ ಜೀವನದಿ ತುಂಗಭದ್ರೆಗೆ ಹರಿಯುತ್ತದೆ.

ಪಶ್ಚಿಮದಲ್ಲಿ ಭೂ ಮೇಲ್ಮೈ ಎತ್ತರದಲ್ಲಿರುವುದರಿಂದ ಕುರುಚಲು ಗಿಡದ ಸಣ್ಣ ಕಾಂಡಗಳಿವೆ. ಮೇಲೆ ತಿಳಿಸಿದ ಬೆಟ್ಟಗಳ ಸಾಲುಗಳಲ್ಲದೆ ಇಲ್ಲಿ ಕೆಲವು ಬಿಡಿ ಬಿಡಿಯಾದ ಬೆಟ್ಟಗಳ ಗುಂಪುಗಳಿವೆ. ಇಲ್ಲಿನ ಬೆಟ್ಟಗಳ ನಡುವೆ ಕಣಿವೆ ಪ್ರದೇಶವಿದ್ದು ವ್ಯವಸಾಯಕ್ಕೆ ಅನುಕೂಲಕರವಾಗಿದೆ. ಅಲ್ಲದೆ ಫಲವತ್ತಾದ ಭೂಮಿಯನ್ನು ಹೊಂದಿದೆ. ಅಲ್ಲದೆ ಚಿತ್ರದುರ್ಗ ತಾಲೂಕಿನ ಗಡಿಗಳಿಗೆ ಹೊಂದಿಕೊಂಡಿರುವ ಬೆಟ್ಟಗಳು ಚಿನ್ನ ಹಗರಿ ನದಿ ದಾಟಿ ಚಿತ್ರದುರ್ಗ ಜಿಲ್ಲೆಯ ಸೆರಗಿನಲ್ಲಿ ಹಾದು ಹೋಗಿ ನೈಸರ್ಗಿಕವಾಗಿ ಚಿತ್ರದುರ್ಗಕ್ಕೆ ರಕ್ಷಣೆ ಒದಗಿಸಿವೆ.

ಇಲ್ಲಿನ ಬೆಟ್ಟಗಳಲ್ಲಿನ ಶಿಲೆಯು ಧಾರವಾಡ ಶಿಸ್ಟ್ ಶಿಲಾ ಶ್ರೇಣಿಯನ್ನು ಹೊಂದಿವೆ. ಇಲ್ಲಿನ ಬೆಟ್ಟಗಳಲ್ಲಿ ಗ್ರಾನೈಟ್ ಶಿಲೆಗಳನ್ನು ಕಾಣಬಹುದು. ಇಲ್ಲಿನ ಶಿಸ್ಟ್ ಶಿಲಾ ವರ್ಗದ ಶ್ರೇಣಿಗಳಲ್ಲಿ ಎತ್ತರದ ಕೋಡು ಬೆಟ್ಟಗಳನ್ನು ಕಾಣಬಹುದು. ಅದರೊಡನೆ ದೊಡ್ಡ ಕೋರಕಲ್ಲಿನ ಕಣಿವೆಗಳು ಇರುವವು. ಸಾಮಾನ್ಯ ಈ ಗ್ರಾನೈಟ್ ಬೆಟ್ಟಗಳಲ್ಲಿ ಕಲ್ಲುಗಳ ಕುಪ್ಪಿಗಳು ದೊಡ್ಡ ದೊಡ್ಡ ರಾಶಿಯಾಗಿದ್ದು ಇಲ್ಲಿ ಬೆಟ್ಟಗಳ ಗುಂಪನ್ನು ಕಾಣಬಹುದಾಗಿದೆ. ಈ ರೀತಿಯ ಬೆಟ್ಟಗಳ ಗುಂಪನ್ನು ರಾಯಚೂರು-ಚಿತ್ರದುರ್ಗ ಮತ್ತು ಬಳ್ಳಾರಿಯ ಕೆಲವು ಪ್ರದೇಶಗಳಲ್ಲಿ ಕಾಣಬಹುದು. ಈ ಬೆಟ್ಟಗಳು ಅಸಾಮಾನ್ಯ ಕಂದು ಇಲ್ಲವೆ ಬೂದು ವರ್ಣದ, ಈಗಾಗಲೇ ತಿಳಿಸಿರುವ ಗ್ರಾನೈಟ್ ಶಿಲಾ ವರ್ಗಕ್ಕೆ ಸೇರಿವೆ.[೧೪]

ಈ ಪ್ರದೇಶದಲ್ಲಿ ಸಾಮಾನ್ಯವಾಗಿ ದೊಡ್ಡ ಬಂಡೆಗಳು ಸೀಳಿವೆ. ಹೀಗೆ ಬಿರುಕು ಬಿಟ್ಟು ಸೀಳಿದವುಗಳಲ್ಲಿ ಕೆಲವು ಮುಂಚಾಚಿ ಕಲ್ಲಾಸರೆಗಳಾದರೆ ಇನ್ನು ಕೆಲವು ಗುಹೆಗಳಾಗಿವೆ. ಸಹಸ್ರಾರು ವರ್ಷಗಳ ನಿರಂತರವಾದ ಸವಕಳಿಯಿಂದ ಗುಹೆಗಳು ಹೆಚ್ಚಾಗಿ ಕಂಡುಬಂದಿವೆ. ಇವು ಆದಿಮಾನವನ ವಸತಿಗೆ ಆಸರೆಯಾಗಿದ್ದವು. ಈ ಬೆಟ್ಟಗುಡ್ಡಗಳಲ್ಲಿನ ಗುಹೆಗಳು, ಕಲ್ಲಾಸರೆಗಳು ಆದಿಮಾನವನ ವಾಸಕ್ಕೆ ಒಂದೆಡೆ ಸಹಕಾರಿಯಾದರೆ, ಇನ್ನೊಂದೆಡೆ ಇಲ್ಲಿನ ಶಿಲೆ ತನಗೆ ಅಗತ್ಯವಾದ ಆಯುಧೋಪಕರಣಗಳನ್ನು ತಯಾರಿಸಿಕೊಳ್ಳಲು ಸಹಕಾರಿಯಾಗಿದ್ದರಿಂದ ಈ ಪರಿಸರದಲ್ಲಿ ಅಂದಿನ ಮಾನವ ನೆಲೆ ನಿಲ್ಲಲು ಸಹಕಾರಿಯಾಯಿತು.

**ನದಿ ಮತ್ತು ನೀರಿನ ಸೌಕರ್ಯಗಳು**

ಚಿತ್ರದುರ್ಗ ಜಿಲ್ಲೆಯ ಒಟ್ಟು ವಿಸ್ತೀರ್ಣ ೭,೭೦,೭೦೦ ಹೆಕ್ಟೇರ್ಗಳಿದ್ದು, ೭೭,೨೫೫ ಹೆಕ್ಟೇರ್ ನೀರಾವರಿ ಮತ್ತು ೭೩,೭೧೯ ಹೆಕ್ಟೇರ್ ಅರಣ್ಯ ಭೂಮಿಯನ್ನೊಂದಿದೆ. ಇಲ್ಲಿ ಪ್ರತಿ ವರ್ಷ ೪೫೦–೪೬೮ ಮಿ. ಮೀಟರ್ ಮಳೆ ಬೀಳುತ್ತದೆ. ಇಲ್ಲಿನ ಬಹುತೇಕ ಪ್ರದೇಶವು ಮಳೆಯನ್ನು ಆಧರಿಸಿದೆ. ಈ ಜಿಲ್ಲೆಯ ಪ್ರಮುಖ ನದಿಯೆಂದರೆ ವೇದಾವತಿ. ತುಂಗಭದ್ರೆಯ ಉಪನದಿಯಾಗಿರುವ ಇದು ಚಿಕ್ಕಮಗಳೂರು ಜಿಲ್ಲೆಯ ಬಾಬಾಬುಡನ್‌ಗಿರಿ ಬೆಟ್ಟದ ಪೂರ್ವದಲ್ಲಿ ಹುಟ್ಟುತ್ತದೆ. ಇಲ್ಲಿನ ಮುಳ್ಳಯ್ಯನಗಿರಿಯಿಂದ ಹರಿಯುವ 'ಗೌರಿಹಳ್ಳವು' ಹೆಚ್ಚು ನೀರನ್ನು ಒದಗಿಸುತ್ತದೆ. ಮಲ್ಲಯ್ಯನಗಿರಿ ಮತ್ತು ತಂಗಲಿಯಲ್ಲಿ ಹರಿಯುವ ಎರಡು ನದಿಗಳನ್ನು ವೇದ ಮತ್ತು ಆವತಿ ಎಂದು ಕ್ರಮವಾಗಿ ಕರೆಯಲಾಗುತ್ತದೆ. ಇವೆರಡೂ ಚಿತ್ರದುರ್ಗ ಜಿಲ್ಲೆಯಲ್ಲಿ ಸೇರಿ ವೇದಾವತಿ ಎಂದು ಕರೆಸಿಕೊಂಡು ನಂತರ ಬಳ್ಳಾರಿ ಜಿಲ್ಲೆಯನ್ನು (ರೂಪನಗುಡಿಯಲ್ಲಿ) ಪ್ರವೇಶಿಸುತ್ತದೆ.[೧೫] ಇದು ಜಿಲ್ಲೆಯ ಹೊಸದುರ್ಗ, ಹಿರಿಯೂರು, ಚಳ್ಳಕೆರೆ ತಾಲೂಕುಗಳಲ್ಲಿ ಒಟ್ಟು ೨೦೯ ಕಿ.ಮೀ. ಹರಿಯುತ್ತದೆ. ಬಳ್ಳಾರಿ ಪ್ರದೇಶದ ಶಾಸನಗಳು ಈ ನದಿಯನ್ನು 'ಅಹರಿ' 'ಅಗ–ಹರಿ' (ಅಘಹರಿ) (ಪಾಪವನ್ನು ತೊಳೆಯುವ) ಎಂದು ಕರೆದಿವೆ. ಈ ಪ್ರದೇಶದಲ್ಲಿ ೯೨.೮ ಕಿ.ಮೀ ಸಾಗಿ ಸಿರಗುಪ್ಪ ತಾಲೂಕಿನ ಸಿದ್ಧರಗಡ್ಡೆ ಹಳ್ಳಿಯಲ್ಲಿ ತುಂಗಭದ್ರಾ ನದಿಯನ್ನು ಸೇರುತ್ತದೆ. ವಿಶಾಲವಾಗಿ ಹರಿದಿರುವ ಈ ನದಿ ನೀರನ್ನು ಪ್ರಾಚೀನ ಕಾಲದಿಂದಲೂ ತೋಟ ಗದ್ದೆಗಳಿಗೆ ಬಳಸಿಕೊಳ್ಳಲಾಗಿದೆ[೧೬].

ತುಂಗಭದ್ರೆಯ ಇನ್ನೊಂದು ಉಪನದಿ ಚಿನ್ನ ಹಗರಿ. ಇದು ಚಿತ್ರದುರ್ಗದ ಬೆಟ್ಟದಲ್ಲಿ ಹುಟ್ಟಿ ಕಾತ್ರಾಳು, ಹಿರೇಗುಂಟನೂರು, ಮಲ್ಲಾಪುರ, ಗೊನೂರು ಕೆರೆಗಳ ಮುಖಾಂತರ ಸಂಗೇನಹಳ್ಳಿ ಕೆರೆಗೆ ಸೇರಿ ಆನಂತರ ಬೆಣ್ಣೆಹಳ್ಳಿ, ದೊಣ್ಣೆಹಳ್ಳಿ ಮೂಲಕ ಹಾಲಹಳ್ಳಿ, ಪಾಲಹಳ್ಳ, ಮಲ್ಲಾಪುರ, ತೊರೆ ಕೊಲಮ್ಮನಹಳ್ಳಿ ಮೂಲಕ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿಯ ದಕ್ಷಿಣಕ್ಕೆ ಕಲ್ಲಹಳ್ಳಿಯಲ್ಲಿ ಈ ಪ್ರದೇಶವನ್ನು ಪ್ರವೇಶಿಸಿ ಮುಂದೆ ಮೊಳಕಾಲ್ಮೂರು ತಾಲೂಕಿನ ವಿವಿಧ ಹಳ್ಳಿಗಳಲ್ಲಿ ಪ್ರವಹಿಸುತ್ತದೆ. ಇದನ್ನು ಚಿತ್ರದುರ್ಗ ಜಿಲ್ಲೆಯಲ್ಲಿ ಜನಗಿಹಳ್ಳ ಎಂದು ಕರೆಯಲಾಗುತ್ತದೆ. ಬಳ್ಳಾರಿ–ಚಿತ್ರದುರ್ಗ ಜಿಲ್ಲೆಗಳ ಗಡಿಯಾಗಿ ಪರಿಣಮಿಸಿರುವ ಇದು ಆಂಧ್ರಪ್ರದೇಶದ ರಾಯದುರ್ಗ ತಾಲೂಕಿನ ಉತ್ತರದಲ್ಲಿ ಹಗರಿ ನದಿಗೆ ಬಂದು ಕೂಡುತ್ತದೆ. ಪೆದ್ದವಂಕಾ(ದೊಡ್ಡಹಳ್ಳ) ಎಂದು ಕರೆಯುವ ಒಂದು ನೀರಿನ ಹರಿಯು ತಾಮ್ರ ಪರ್ವತದಲ್ಲಿ ಹುಟ್ಟಿ, ಕುಮತಿಯಲ್ಲಿ ಈ ಚಿನ್ನ ಹಗರಿ ಉಪನದಿಗೆ ಬಂದು

ಸೇರುತ್ತದೆ. ವೇದಾವತಿಯ ಉಪನದಿಯಾದ 'ಸ್ವರ್ಣಮುಖಿ' ನದಿಯು ತುಮಕೂರು ಜಿಲ್ಲೆಯಲ್ಲಿ ಹುಟ್ಟಿ ಹಿರಿಯೂರು ಬಳಿ ೧೧ ಕಿ.ಮೀ. ಹರಿದು ವೇದಾವತಿಗೆ ಬಂದು ಸೇರುತ್ತದೆ. ಅದೇ ರೀತಿ ಚಿತ್ರದುರ್ಗದ ಬಳಿ ಹುಟ್ಟುವ ಗರುಣಿ ಹಳ್ಳವು ವೇದಾವತಿಗೆ ಬಂದು ಸೇರುತ್ತದೆ.[೧೭] ನಾಯಕನಹಟ್ಟಿಯ ತೊರೆಯು ಚಳ್ಳಕೆರೆ ತಾಲೂಕಿನಲ್ಲಿ ಪ್ರವಹಿಸಿ ವೇದಾವತಿಯನ್ನು ಸೇರಿಕೊಳ್ಳುತ್ತದೆ. ತುಂಗಭದ್ರಾನದಿಗೆ ಬಂದು ಸೇರುವ ಹಗರಿ, ಚಿಕ್ಕ ಹಗರಿ ನದಿಗಳು ಮತ್ತು ಅನೇಕ ಹಳ್ಳಗಳು ಈ ಪ್ರದೇಶದಲ್ಲಿ ಹರಿಯುತ್ತವೆ. ಇವುಗಳಲ್ಲದೇ ಹೊಳಲ್ಕೆರೆ ತಾಲೂಕಿನಲ್ಲಿ ಸಿಂಗನಹಳ್ಳಿ ಗುಡ್ಡಗಳಲ್ಲಿ ಹುಟ್ಟುವ ಹಿರೇಹಳ್ಳ (ಅರುಂಧತಿ–ಹರಿದ್ರಾವತಿ ನದಿ) ಮಲ್ಲಾಡಿಹಳ್ಳಿ, ರಾಮಘಟ್ಟ ಮಾರ್ಗವಾಗಿ ಹರಿದು ಸೂಳೆಕೆರೆಯನ್ನು ಸೇರುತ್ತದೆ. ಇದೇ ತಾಲೂಕಿನ ಹಿರೇಕಂದವಾಡಿ ಹಳ್ಳವು ಸಾಸಲು ಮಾರ್ಗವಾಗಿ ಹರಿದು, ಹರಿಹರದ ಬಳಿ ತುಂಗಾಭದ್ರ ನದಿಯನ್ನು ಸೇರುತ್ತದೆ. ಚಳ್ಳಕೆರೆ ತಾಲೂಕಿನಲ್ಲಿ ಗರಣಿ ಮತ್ತು ನಾಯಕನಹಟ್ಟಿ ಹಳ್ಳಗಳು ಪ್ರಮುಖವಾಗಿವೆ. ಇವು ಪ್ರಾಚೀನ ಕಾಲದಿಂದಲೂ ಕೃಷಿ ಅಭಿವೃದ್ಧಿಗೆ ನೀರನ್ನೊದಗಿಸುತ್ತಿವೆ. ಚಿತ್ರದುರ್ಗ ಸಮೀಪದಲ್ಲಿ ಹರಿಯುವ ಜಿನಗಿಹಳ್ಳಕ್ಕೆ ಸಂಗೇನಹಳ್ಳಿಯ ಬಳಿ ಚಿಕ್ಕ ಆಣೆಕಟ್ಟೆ ನಿರ್ಮಿಸಿ ದೊಡ್ಡ ಕೆರೆಯನ್ನಾಗಿಸಲಾಗಿದ್ದು, ಚಿತ್ರದುರ್ಗ ತಾಲೂಕಿನ ಕೆಲ ಹಳ್ಳಿಗಳ ನೀರಾವರಿಗೆ ಅನುಕೂಲ ಕಲ್ಪಿಸಲಾಗಿದೆ. ಅದೇ ರೀತಿ ಜಿಲ್ಲೆಯ ಚಂದ್ರವಳ್ಳಿ, ಗೋನೂರು, ಮೈಲನಹಳ್ಳಿ, ಭೀಮಸಮುದ್ರ, ನೀರುಗುಂದ, ದೊಡ್ಡೇರಿ, ಮಧುರೆ, ನಗರಂಗೇರೆ, ತಳಕು, ದೊಡ್ಡ ಉಳ್ಳಾರ್ತಿ, ಸಾಣೇಕೆರೆ, ಪರುಶುರಾಂಪುರ, ರಾಣಿಕೆರೆ, ಕ್ಯಾದಿಗುಂಟೆ, ಗೌರಸಮುದ್ರ, ಬಿ.ಜಿ.ಕೆರೆ. ಹೊಳಲ್ಕೆರೆ, ಹೀರೇಕೆರೆನಹಳ್ಳಿ, ತಮ್ಮೇನಹಳ್ಳಿ, ಗುಡ್ಡದ ರಂಗನಹಳ್ಳಿ, ರಂಗಯ್ಯನದುರ್ಗ, ನಾಯಕನಹಟ್ಟಿ, ಬೋಸೇದೇವರಟ್ಟಿ, ಮಲ್ಲಾಪುರ, ಮುತ್ತುಗದೂರು, ಶಿವಗಂಗೆ, ತಾಳ್ಯ, ರಾಮಗಿರಿ, ಗಂಗಸಮುದ್ರ, ಚಿಕ್ಕಜಾಜೂರು, ಚಿಕ್ಕ ಎಮ್ಮಿಗನೂರು, ಕುಡಿನೀರುಕಟ್ಟೆ ಮುಂತಾದೆಡೆ ಪ್ರಾಚೀನವಾದ ಅನೇಕ ಕೆರೆಗಳಿದ್ದು, ಇಲ್ಲಿನ ಭೂಪ್ರದೇಶಕ್ಕೆ ನೀರನ್ನು ಒದಗಿಸುತ್ತೇವೆ.[೧೮]

ಇಷ್ಟೆಲ್ಲ ಜಲಸಂಪತ್ತನ್ನು ಹೊಂದಿದ ಈ ಪ್ರದೇಶ ಪ್ರಾಗೈತಿಹಾಸಿಕ ಕಾಲದಿಂದಲೂ ಜನರಿಗೆ ಅವಶ್ಯಕವಾಗಿದ್ದ ಜೀವಸೆಲೆ(ನೀರನ್ನು)ಯನ್ನು ಒದಗಿಸುತ್ತಾ ಬಂದಿದೆ. ಪರಿಣಾಮವಾಗಿ ಇಲ್ಲಿನ ನದಿ, ಹಳ್ಳ, ಕೆರೆಗಳ ಸನಿಹದಲ್ಲಿ ಪ್ರಾಗೃತಿಹಾಸಿಕ ಕಾಲದ ಜನ ವಸತಿಯ ತಾಣಗಳು ಕಂಡುಬಂದಿವೆ. ಪ್ರಕೃತಿಯ ಅಧೀನದಲ್ಲೇ ಬದುಕುತ್ತಿದ್ದ ಮಾನವನಿಗೆ ಶಿಲಾಯುಧಗಳನ್ನು ತಯಾರಿಸಲು ಉಪಯುಕ್ತವಾದ ಉಂಡೆಕಲ್ಲುಗಳು ಸಹ ನದಿಯ ಇಕ್ಕೆಲೆಗಳಲ್ಲಿ ಸ್ವಾಭಾವಿಕವಾಗಿ ದೊರೆಯುತ್ತಿದ್ದರಿಂದಾಗಿ ಪ್ರಾಗೈತಿಹಾಸಿಕ ಕಾಲದ ಮನುಷ್ಯ ಈ ಜಿಲ್ಲೆಯ ವಿವಿಧೆಡೆ ನೆಲೆಯೂರಿದ್ದ ಬಗೆಗೆ ಮಾಹಿತಿಗಳು ದೊರಕುತ್ತವೆ. ಹಾಗೆಯೇ ಈ ಭಾಗದಲ್ಲಿ ಅನೇಕ ರಾಜವಂಶಗಳು ಆಳಿ ಅಳಿದು ಅವರ ಸಂಸ್ಕೃತಿಯ ಪ್ರತೀಕಗಳಾದ ದೇವಾಲಯಗಳನ್ನು ನದಿಯ ಇಲ್ಲವೇ ಕೆರೆಯ ದಂಡೆಯ ಮೇಲೆ ಕಟ್ಟಿಸಿ ನಮಗೆ ಕಲಾ ಕಾಣಿಕೆಯಾಗಿ ಬಿಟ್ಟು ಹೋಗಿದ್ದಾರೆ.

**ವಾಯುಗುಣ ಮತ್ತು ಜೀವ ಸಂಕುಲ**

ಬಯಲುಸೀಮೆ ಎಂದೇ ಪ್ರಸಿದ್ಧಿಯಾಗಿರುವ ಚಿತ್ರದುರ್ಗವು ಕರ್ನಾಟಕದ ಅತಿ ಕಡಿಮೆ ಮಳೆ ಬೀಳುವ ಜಿಲ್ಲೆಗಳಲ್ಲಿ ಒಂದಾಗಿದ್ದು, ಇದು ರಾಜ್ಯದಲ್ಲಿ ೨ನೇ ಸ್ಥಾನದಲ್ಲಿದೆ.[೧೯] ಇಲ್ಲಿನ ಬಹುತೇಕ

ಪ್ರದೇಶವು ಮಳೆಯಾಶ್ರಿತ ಪ್ರದೇಶವಾಗಿದ್ದು, ವಾರ್ಷಿಕವಾಗಿ ಸರಾಸರಿ ಕೇವಲ ೬೫೫ ಮಿ.ಮೀ. ಮಾತ್ರ ಮಳೆ ಬೀಳುತ್ತದೆ. ಇದರಿಂದ ಆಗಿದಾಂಗ್ಗೆ ಜಿಲ್ಲೆಯ ಬಹುತೇಕ ಹಳ್ಳಿಗಳು ಅನಾವೃಷ್ಟಿಯನ್ನು ಅನುಭವಿಸುತ್ತವೆ. ಬಳ್ಳಾರಿ ಜಿಲ್ಲೆಯಂತೆ ಚಿತ್ರದುರ್ಗ ಜಿಲ್ಲೆಯು ಹೆಚ್ಚು ಬಿಸಿಲಿಗೆ ತುಂಬಾ ಪ್ರಸಿದ್ಧಿಯಾಗಿದೆ. ಇಲ್ಲಿನ ತಾಪಮಾನ ಗರಿಷ್ಠ ಮಟ್ಟಕ್ಕಿದ್ದಾಗ ಹೊರಗಿನಿಂದ ಬಂದವರು ಇಲ್ಲಿರುವುದು ಕಷ್ಟ ಚಿತ್ರದುರ್ಗದಲ್ಲಿ ಬೇಸಿಗೆ ಕಾಲವು ಫೆಬ್ರವರಿ ಅಂತ್ಯದಿಂದ ಆರಂಭವಾಗಿ ಜೂನ್ ತಿಂಗಳವರೆಗೆ ಇರುತ್ತದೆ. ಆಗ ಶಾಖವು ಸರಾಸರಿ ೧೬.೭೦ ಸೆ. ದಿಂದ ೩೨.೯೦ ಸೆ. ವರೆಗೆ ಇರುತ್ತದೆ. ಕೆಲವು ಸಲ ಇದು ೩೨೦ ರಿಂದ ೩೮೦ ಸೆ. ವರೆಗೆ ಏರುತ್ತದೆ[೨೦]. ಜುಲೈ ತಿಂಗಳಲ್ಲಿ ಆರಂಭವಾಗುವ ಮಳೆಗಾಲ ನವೆಂಬರ್ ತಿಂಗಳವರೆಗೆ ಇರುತ್ತದೆ. ನವೆಂಬರ್ ಕೊನೆಯಿಂದ ಫೆಬ್ರವರಿಯವರೆಗೆ ಇಲ್ಲಿ ಚಳಿಗಾಲವಿರುತ್ತದೆ. ಶುಷ್ಕ ವಾತಾವರಣವಿರುವ ಈ ಪ್ರದೇಶ ಮನುಷ್ಯನ ವಾಸಕ್ಕೆ ಅತ್ಯಂತ ಯೋಗ್ಯವಾಗಿದೆ.

ಈ ಪ್ರದೇಶದ ಕಾಡು ಹಾಗೂ ಬೆಟ್ಟ ಗುಡ್ಡಗಳಲ್ಲಿ ಚಿರತೆ, ಕರಡಿ, ಕಾಡುಹಂದಿ, ಮುಳ್ಳುಹಂದಿ, ನರಿ, ಜಿಂಕೆ, ತೋಳ ಮೊದಲಾದ ಕಾಡು ಪ್ರಾಣಿಗಳು ಹಾಗು ನವಿಲು, ಕಾಗೆ, ಗೂಗೆ, ಗೊರವಂಕ, ಕೌಜ, ಗುಡ್ಡಪೀರೆಡೆ, ನೀರುಕೋಳಿ, ನೀರುಹಂದಿ, ಮುಳ್ಳು ಹಂದಿ, ಗುಬ್ಬಿ, ಕಿಂಗ್‌ಫಿಷರ್ ಮುಂತಾದ ಬಗೆಯ ಪಕ್ಷಿಗಳು ಕಂಡುಬರುತ್ತವೆ. ಅಲ್ಲದೆ ಇಲ್ಲಿನ ಕೆರೆ ಮತ್ತು ನದಿಗಳ ನೀರಿನಲ್ಲಿ ಮೊಸಳೆ, ಮೀನು, ಕಪ್ಪೆ ಮೊದಲಾದ ಜಲಚರಗಳಿವೆ. ಅಲ್ಲದೆ ಮೊಲ, ಜಿಂಕೆಯಂತಹ ಸಣ್ಣ ಸಸ್ತನಿ ಪ್ರಾಣಿಗಳು ಇಲ್ಲಿ ಕಂಡುಬರುತ್ತವೆ. ಹಾಗು ನಾಗರ, ಮಿಡಿನಾಗರ, ಕೆರೆ, ಹಸಿರು, ಬಿಲ್ಲುರಗ, ನೂಲಾವು, ಪೆಂಜರ, ಹೆಬ್ಬಾವು, ಮಣ್ಣಮುಕ್ಕಿನಾವು ಹಾಗು ಕಪ್ಪು ಮತ್ತು ಕೆಂಪು ಚೇಳು, ಜರಿ ಮೊದಲಾದ ವಿಷಜಂತುಗಳಿವೆ.

**ಅರಣ್ಯ ಮತ್ತು ಖನಿಜ ಸಂಪನ್ಮೂಲ**

ಈ ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ ಅರಣ್ಯ ಪ್ರದೇಶ ೭೩,೭೮೯ ಹೆಕ್ಟೇರ್ ಮಾತ್ರ ಅರಣ್ಯ ಭೂಮಿಯನ್ನೊಂದಿದೆ. ಅಂದರೆ ಇಲ್ಲಿ ಶೇ. ೪೦ ರಷ್ಟು ಅರಣ್ಯವಿದೆ[೨೧]. ಇಲ್ಲಿ ಜೋಗಿಮಟ್ಟಿ, ಗರಗ, ನುಂಕೇಮಲೆ, ಜಟ್ಟಂಗರಾಮೇಶ್ವರ, ತೀರ್ಥರಾಮೇಶ್ವರ, ಮೇಲುಕೋಟೆ, ಗರಣಿ, ಬಿ.ಜಿ.ಕೆರೆ, ಮುತ್ತಗಾರಹಳ್ಳಿ ಮುಂತಾದೆಡೆ ದಟ್ಟ ಅರಣ್ಯವಿದೆ. ಈ ಪ್ರದೇಶವು ಮುಂಗಾರು ಹಾಗು ಹಿಂಗಾರು ಮಳೆಯ ಸೆರಗಿನ ಪ್ರದೇಶ. ಆದುದರಿಂದ ಅಲ್ಬೇಜಿಯ, ಅಕೇಶಿಯ, ಅರಾಬಿಕ್, ಯುರೋಪ್, ಹುಣಸೆ, ಬೇವು, ಜಾಲಿಗಿಡ, ಕುರುಚಲು, ಬಿಯಾಸ ಜಾತಿಗಳಿಗೆ ಸೇರಿದ ಗಿಡಮರಗಳು ಇಲ್ಲಿ ಹೆಚ್ಚಾಗಿ ಬೆಳೆಯುತ್ತವೆ. ಆದ್ದರಿಂದ ಇಂತಹ ಮರಗಿಡಗಳನ್ನು ಅವಲಂಬಿಸುವ ಪ್ರಾಣಿಗಳಾದ ಮೊಲ, ಜಿಂಕೆಯಂತಹ ಸಣ್ಣ ಸಸ್ತನಿ ಪ್ರಾಣಿಗಳು ಇಲ್ಲಿ ಕಂಡುಬರುತ್ತವೆ. ಇದಕ್ಕೆ ಪೂರಕವಾಗಿ ಹೇಳುವುದಾದರೆ ಚಿತ್ರದುರ್ಗದ ಸಮೀಪವಿರುವ ಚಂದ್ರವಳ್ಳಿ ಮತ್ತು ಇಲ್ಲಿಗೆ ಅನತಿ ದೂರದಲ್ಲಿರುವ ಬ್ರಹ್ಮಗಿರಿ, ತೆಕ್ಕಲಕೋಟೆ, ಸಂಗನಕಲ್ಲು, ಹಳ್ಳೂರಿನಲ್ಲಿ ಆಲ್ವಿಯುಯಾ, ಅಕಾಹಿಯ ಗುಂಪಿಗೆ ಸೇರಿದ ಸಸ್ಯಗಳು ಪ್ರಾಗೈತಿಹಾಸಿಕ ಕಾಲಘಟ್ಟದಲ್ಲಿ ಬೆಳೆಯುತ್ತಿದ್ದವು. ತೆಕ್ಕಲಕೋಟೆ, ಸಂಗನಕಲ್ಲು, ಹಳ್ಳೂರಿನಲ್ಲಿ ದೊರೆತಿರುವ ಇದ್ದಿಲಿನಿಂದ ಈ ಸಸ್ಯಗಳನ್ನು ಗುರುತಿಸಲಾಗಿದೆ.[೨೨] ಇಂದಿಗೂ ಸಹ ಉರುವಲು ಮತ್ತು ಬೇಸಾಯದ ಉಪಕರಣಗಳಿಗೆ ಇವುಗಳನ್ನು ಬಳಸುತ್ತಾರೆ. ಈ ಪ್ರದೇಶದ ಸಲ್ಪ ಭಾಗವು

ಕಪ್ಪು ಎರೆ ಮಣ್ಣಿನಿಂದ ಕೂಡಿದ್ದು, ಇದು ಮೇಲೆ ತಿಳಿಸಿದ ಕುರುಚಲು ಗಿಡಗಳ ಪ್ರದೇಶದಿಂದ ಆವೃತವಾಗಿದೆ. ಹಿಂದೆ ಮೊಳಕಾಲ್ಮೂರು, ಚಳ್ಳಕೆರೆ, ಚಿತ್ರದುರ್ಗದ ಅರಣ್ಯಗಳಲ್ಲಿ ಹಲಸು, ಬೀಟೆ, ತೇಗ, ಹೊನ್ನೆ, ನಂದಿ, ಶ್ರೀಗಂಧ, ಸಂಪಿಗೆ ಮತ್ತು ದಿಂಡಿಗ, ಬಿದಿರು ಮರಗಳು ಅಲ್ಲಲ್ಲಿ ಹೆಚ್ಚಾಗಿ ಬೆಳೆಯುತ್ತಿದ್ದವು. ಈಗ ಅವುಗಳ ಪ್ರಮಾಣ ಸ್ವಲ್ಪ ಕಡಿಮೆಯಾಗಿದೆ. ಇದೇ ಅರಣ್ಯಗಳಲ್ಲಿ ಹೆಚ್ಚಾಗಿ ಕುರುಚಲು ಗಿಡಗಂಟೆ ಮತ್ತು ಹುಲ್ಲು ಹೆಚ್ಚಾಗಿ ಬೆಳೆಯುತ್ತವೆ. ಜಿಲ್ಲೆಯಲ್ಲಿನ ಕಾಡುಗಳು ಕೈಗಾರಿಕೆಗಳಿಗೆ ಬೇಕಾಗುವ ಕಚ್ಚಾ ಪದಾರ್ಥಗಳನ್ನು ಪೂರೈಸುತ್ತಿದ್ದು, ಅವುಗಳಲ್ಲಿ ಮುಖ್ಯವಾಗಿ ಕಾಗದ, ಗಂಧ ಮತ್ತು ಬೆಂಕಿ ಕಡ್ಡಿ ಕಾರ್ಖಾನೆಗಳಿಗೆ ಕಚ್ಚಾ ವಸ್ತುಗಳನ್ನು ಪೂರೈಸುತ್ತವೆ. ಕಟ್ಟಡ ನಿರ್ಮಾಣಕ್ಕೆ ಬೇಕಾದ ಮರ ಮುಟ್ಟುಗಳು, ಉರುವಲು ಕಟ್ಟಿಗೆ, ಬೊಂಬುಗಳು ಮತ್ತು ಬೆತ್ತಗಳು ಪ್ರಮುಖವಾದ ಅರಣ್ಯ ಉತ್ಪಾದನೆಗಳಾಗಿವೆ. ಬೀಡಿ, ಎಲೆ, ಎಣ್ಣೆ ಬೀಜ, ಹುಣಿಸೆ ಹಣ್ಣು, ಸೀಗೆಕಾಯಿ, ಹಾಲುವಾಣ, ಅಂಟುವಾಳದ ಕಾಯಿ, ಗೇರು ಬೀಜಗಳು ಸಣ್ಣ ಪ್ರಮಾಣದ ಅರಣ್ಯ ಉತ್ಪಾದನೆ ವಸ್ತುಗಳಾಗಿವೆ. ಈ ಪ್ರದೇಶದಲ್ಲಿ ಮರಳು ಮಿಶ್ರಿತ ಕೆಂಪುಮಣ್ಣು ಮತ್ತು ಫಲವತ್ತಾದ ಕಪ್ಪು ಜೇಡಿಮಣ್ಣು ಹರಡಿದೆ. ಮರಳು ಮಿಶ್ರಿತ ಕೆಂಪುಮಣ್ಣು ಸಾಮಾನ್ಯವಾಗಿ ವೇದಾವತಿ ಮತ್ತು ಹಗರಿ ನದಿ ಪ್ರದೇಶಗಳಲ್ಲಿ ಕಂಡುಬರುತ್ತದೆ.

ನೈಸರ್ಗಿಕವಾಗಿ ಇಷ್ಟೆಲ್ಲ ಬೆಟ್ಟಗುಡ್ಡಗಳನ್ನು ಹೊಂದಿದ ಈ ಜಿಲ್ಲೆಯ ವಿವಿಧ ಕಡೆಗಳಲ್ಲಿ ವಿಭಿನ್ನ ರೀತಿಯ ಶಿಲಾ ಸಂಪತ್ತನ್ನು, ಖನಿಜ ಸಂಪತ್ತನ್ನು ನೋಡಬಹುದು. ಮೇಲೆ ವಿವರಿಸಿದ ಈ ಭಾಗವು ಪ್ರಾಚೀನ ಆರ್ಕಿಯನ್ ಕಾಂಪ್ಲೆಕ್ಸ್‌ಗೆ ಸೇರಿದ್ದು,[೨೨] ಇಲ್ಲಿನ ಶಿಲೆಯನ್ನು ಧಾರವಾಡ ಶಿಲಾವರ್ಗ ಮತ್ತು ಜಿರಾಸಿಕ್ ಶಿಲಾ ವರ್ಗವೆಂದು ಎರಡು ಭಾಗ ಮಾಡಬಹುದು. ಈ ಮೇಲಿನ ಬೆಟ್ಟಗಳಲ್ಲಿ ಗ್ರಾನೈಟ್(ಹರಳುಶಿಲೆ) ಹೇರಳವಾಗಿ ದೊರೆಯುತ್ತದೆ, ಹಾಗೆಯೇ ಅಲ್ಲಲ್ಲಿ ಕಾಂಗ್ಲಾಮರೇಟ್, ಬೆಣಚುಕಲ್ಲು ಅಥವಾ ಸ್ಪಟಿಕಾಂತರ ಶಿಲೆ (ಕ್ವಾರ್ಟಜೈಟ್), ಡೊಲರೈಟ್ ಡೈಕ್ (ಕಪ್ಪು ಶಿಲೆ), ವಾಲ್ಕನಿಕ್‌ರಾಕ್ಸ (ಅಗ್ನಿಜನ್ಯ ಶಿಲೆ) ಸುಣ್ಣದಕಲ್ಲು, ಸೋಪ್‌ಸ್ಟೋನ್ (ನೀಲಿ ಛಾಯೆಯ ಹಸಿರು ಬಳಪದ ಕಲ್ಲು)ಗಳು ದೊರೆಯುತ್ತವೆ. ಈ ಜಿಲ್ಲೆಯ ವಿವಿಧ ಭಾಗದಲ್ಲಿ ಹೇರಳವಾದ ಖನಿಜ ಸಂಪತ್ತು ದೊರೆಯುತ್ತದೆ. ಈ ಭೂ ಭಾಗವನ್ನು "ಖನಿಜಗಳ ನಿಧಿ" ಎಂದರೂ ತಪ್ಪಲ್ಲ. ಖನಿಜಗಳಲ್ಲೆ ಅತಿ ಮುಖ್ಯವಾದುದೆಂದರೆ ಕಬ್ಬಿಣದ ಅದಿರು. ಪ್ರಾಚೀನ ಕಾಲದಿಂದಲೂ ಇದರ ಉಪಯೋಗದಿಂದ ಮಾನವನು ನಗರೀಕೃತ ಸಂಸ್ಕೃತಿಯೆಡೆಗೆ ಹೆಜ್ಜೆ ಹಾಕಿದನು. ಇಲ್ಲಿ ದೊರೆಯುವ ವಿವಿಧ ಬಗೆಯ ಖನಿಜಗಳ ವಿವರ ಇಂತಿದೆ.

ಚಿತ್ರದುರ್ಗದಲ್ಲಿ ಪ್ರಧಾನವಾಗಿ ಗ್ರಾನೈಟ್ ಶಿಲೆ ದೊರೆಯುತ್ತದೆ. ಹಾಲುರಾಮೇಶ್ವರ, ನುಂಕಪ್ಪನಗುಡ್ಡ, ಬಾಗೂರು, ಮೈಲಳ್ಳಿ, ಜಾನ ಕಲ್ಲು, ಲೋಕದೊಳಲು, ಗುತ್ತಿಗನೂರುಗಳಲ್ಲಿ ಬೆಣಚಕಲ್ಲು ದೊರೆಯುತ್ತದೆ. **ಹನುಮನಕಟ್ಟೆ, ಅಂಚಿನಕಲ್ಲು, ಜೋಗಿಮಟ್ಟಿ,** ಮರಡಿಹಳ್ಳಿ, ಶಿವಗಂಗ, ತಣಿಗೇಹಳ್ಳಿ, ಹಿರೇಕಂದವಾಡಿ, ಕೇಶವಪುರ, ಗಟ್ಟಿಹೊಸಳ್ಳಿ, ಇಂಗಾಳದಾಳುವಿನಲ್ಲಿ ಕಬ್ಬಿಣ, ತಾಮ್ರ, ಮ್ಯಾಂಗನೀಸ್ ದೊರೆಯುತ್ತದೆ. ಬಂಗಾರಕ್ಕನಹಳ್ಳಿ ಮತ್ತು ಗುಡ್ಡದರಂಗವ್ವನಹಳ್ಳಿಗಳಲ್ಲಿ ಬಂಗಾರದ ನಿಕ್ಷೇಪವಿದೆ. ಭೀಮಸಮುದ್ರ, ಆಕನೂರು ಸುತ್ತಮುತ್ತ **ಕಬ್ಬಿಣದ ಅದಿರು ಸಿಗುತ್ತದೆ**. ಬಾಗೂರು ಬಳಿ **ಸತು**, ಹೀರೇಗುಂಟನೂರು, ಮಠದಟ್ಟಿ, ಹೊಸದುರ್ಗ ರೋಡ್‌ಗಳಲ್ಲಿ **ಜಿಪ್ಸಮ್**, ಮಾಡನಾಯ್ಕನಹಳ್ಳಿ, ಕಲ್ಲೇದೇವರಪುರ,

ವರಕೇರಿದೇವರಪುರಗಳಲ್ಲಿ **ಜೇಡಿಮಣ್ಣು ಹಾಗು** ಚಿಕ್ಕಜಾಜೂರು, ರಾಮಗಿರಿ ಗುಡ್ಡಗಳಲ್ಲಿ **ಹಳದಿ ಓಕರ್**, ತಿಮ್ಮಾಪುರದಲ್ಲಿ **ಬೆಸಾಲ್ಟ್ ಶಿಲೆ** ದೊರೆಯುತ್ತದೆ. ತಾಳಿಕಟ್ಟೆಯಲ್ಲಿ **ಸುಣ್ಣಕಲ್ಲು** ತೋರಣಗಲ್ಲು, ಹರ್ತಿಕೋಟೆ, ವಾಣಿವಿಲಾಸ ಸಾಗರದ ಗುಡ್ಡಗಳಲ್ಲಿ ದೊರೆಯುತ್ತದೆ. ಅದೇ ರೀತಿ **ಮಿನರಲ್ ವಾಟರ್** ಭರಮಸಾಗರ ಬಳಿಯ ಬಹೋದ್ಧರಘಟ್ಟ, ಜೇನುಕಲ್ಲು, ತುರವನೂರುಗಳಲ್ಲಿ ಹಾಗೂ **ಬಳಪದ ಕಲ್ಲು** ಲಿಂಗದಹಳ್ಳಿ, ದೊಡ್ಡೇರಿ, ಗುಂಟನೂರುಗಳಲ್ಲಿ ದೊರೆಯುತ್ತದೆ. ಅದೇ ರೀತಿ ಗಟ್ಟಿ ಕಲ್ನಾರು(ಆಯಾಸ್ ಬೆಸ್ಟೋಸಿಸ್) ಜಾತಿಯ ಶಿಲಾಪದರ, ಅಲಂಕಾರಿಕ ಶಿಲೆಗಳು ತಾಲೂಕಿನ ಕುಡಿನೀರುಕಟ್ಟೆ, ಲಂಬಾಣಿಹಟ್ಟಿಗಳಲ್ಲಿ ದೊರೆಯುತ್ತದೆ. ಅಲ್ಲದೇ ವರ್ಮಿಕ್ಯೋಲೇಟ್ ಲೋಹದ ಶಿಲಾಪಟ್ಟಿಯು ಕುಡಿವನೀರುಕಟ್ಟೆ ಮತ್ತು ಬಾಕ್ಸೈಟ್ ಶಿವಗಂಗ ಬಳಿ ದೊರೆಯುತ್ತದೆ.[೨೪]

ಇಲ್ಲಿನ ಅರಣ್ಯ ಮನುಷ್ಯನಿಗೆ ಅವಶ್ಯಕವಾದ ಹಣ್ಣುಹಂಪಲು, ಮರಮುಟ್ಟು, ಉರುವಲು, ಔಷಧಿಗೆ ಉಪಯುಕ್ತವಾದ ಗಿಡ, ನಾರು-ಬೇರುಗಳನ್ನು ಒದಗಿಸಿವೆ. ಇಲ್ಲಿನ ನದಿ, ಹಳ್ಳಗಳು ಮನುಷ್ಯನಿಗೆ ಅವಶ್ಯಕವಾಗಿ ಬೇಕಾದ ಜೀವಸೆಲೆ (ನೀರು)ಯನ್ನು ಒದಗಿಸಿ ಅವನ ಅವಶ್ಯಕತೆಗಳನ್ನು ಪೊರೈಸಿ ತನ್ನ ಸಂಸ್ಕೃತಿಯನ್ನು ರೂಪಿಸಿಕೊಳ್ಳಲು ಸಹಾಯಕವಾಗಿದೆ. ಇಲ್ಲಿನ ಮಣ್ಣು ಅವನು ಕೃಷಿ ಚಟುವಟಿಕೆಗಳನ್ನು ಮಾಡಲು ಸಹಕಾರಿಯಾಯಿತು. ಇಲ್ಲಿ ದೊರೆಯುವ ಖನಿಜ ಸಂಪತ್ತು ಅಂದಿನಿಂದ ಇಂದಿನವರೆಗೆ ವಿವಿಧ ರೀತಿಯಲ್ಲಿ, ಅಂದರೆ ಮಾನವ ಸಂಸ್ಕೃತಿಯ ವಿಕಾಸಕ್ಕೆ ಉಪಯುಕ್ತವಾಗಿದೆ.

**ಕೃಷಿ ಉತ್ಪನ್ನಗಳು**

ಚಿತ್ರದುರ್ಗ ಜಿಲ್ಲೆಯಲ್ಲಿನ ಜನರ ಪ್ರಮುಖ ವೃತ್ತಿ ಕೃಷಿಯಾಗಿದೆ. ಇಲ್ಲಿನ ಭೂಮಿಯು ಉಸುಕು ಮಿಶ್ರಿತ ಕೆಂಪು ಮಣ್ಣು ಮತ್ತು ಜಿಗುಟು ಮಣ್ಣಿನಿಂದ ಕೂಡಿದೆ. ಅಂದರೆ ವೇದಾವತಿ ನದಿಯ ಬಯಲು ಪ್ರದೇಶದಲ್ಲಿ ಕೆಂಪು ಮಿಶ್ರಿತ ಮರಳಿನಿಂದ ಕೂಡಿದ ಜೇಡಿ ಮಣ್ಣಿನ ಫಲವತ್ತಾದ ಪ್ರದೇಶವಿದ್ದರೆ, ಉಳಿದಂತೆ ಕಪ್ಪು ಮಣ್ಣಿನ ಪ್ರದೇಶವಿದೆ. ಈ ಪ್ರದೇಶದಲ್ಲಿ ವಾರ್ಷಿಕ ಮಳೆಯ ಪ್ರಮಾಣವು ೬೫೫.೫.ಮಿ. ಮೀಟರ್‌ನಷ್ಟಿದೆ.[೨೫] ಇಲ್ಲಿನ ರೈತರು ಹೆಚ್ಚಾಗಿ ಮಳೆಯನ್ನೇ ಆಧರಿಸಿದ್ದಾರೆ. ಉಳಿದಂತೆ ಕೆರೆಗಳು, ಬಾವಿಗಳು ಮತ್ತು ಕೊಳವೆ ಬಾವಿಗಳಿಂದ ನೀರನ್ನು ಪಡೆದು ಕೃಷಿಯಲ್ಲಿ ತೊಡಗಿದ್ದಾರೆ. ಇತ್ತೀಚಿನ ಅಂಕಿ-ಅಂಶಗಳ ಪ್ರಕಾರ ಚಿತ್ರದುರ್ಗ ತಾಲೂಕು ಒಟ್ಟು ೯೪,೮೫೩ ಹೆಕ್ಟೇರ್ ಭೂಮಿಯನ್ನು ಹೊಂದಿದ್ದು, ಇದರಲ್ಲಿ ೪,೭೩೮ ಹೆಕ್ಟೇರ್ ಭೂಮಿ ಅರಣ್ಯದಿಂದ ಆವೃತವಾಗಿದೆ. ಸಾಗುವಳಿಗೆ ಲಭ್ಯವಿಲ್ಲದ ಭೂಮಿ ೯,೩೮೪ ಹೆಕ್ಟೇರ್ ಇದೆ. ಬಂಜರುಭೂಮಿ ೨,೭೮೯ ಹೆಕ್ಟೇರ್ ಇದೆ. ಸಾಗುವಳಿಗೆ ಯೋಗ್ಯವಾದ ಬಂಜರುಭೂಮಿ ೧೭,೪೮೧ ಹೆಕ್ಟೇರ್ ಇದ್ದರೆ, ಒಟ್ಟು ಸಾಗುವಳಿಗೆ ಲಭ್ಯವಿರುವ ಭೂಮಿ ೬೯,೯೨೩ ಹೆಕ್ಟೇರ್ ಇದೆ. ಹಾಗೆಯೇ ತಾಲೂಕಿನ ಒಟ್ಟು ಭೂಮಿಯಲ್ಲಿ ೫,೦೫೨ ಹೆಕ್ಟೇರ್ ಪ್ರದೇಶದಲ್ಲಿ ಏತ ನೀರಾವರಿ, ೧೯೪ ಹೆಕ್ಟೇರ್ ಪ್ರದೇಶದಲ್ಲಿ ಕೆರೆ ನೀರಾವರಿ, ೩,೩೭೫ ಹೆಕ್ಟೇರ್ ಪ್ರದೇಶದಲ್ಲಿ ಕೊಳವೆ ಬಾವಿಯಿಂದ ಮತ್ತು ೫೯,೫೫೭ ಹೆಕ್ಟೇರ್ ಪ್ರದೇಶವು ಮಳೆಯಾಶ್ರಯಿತ ಕೃಷಿಯನ್ನು ಕೈಗೊಂಡಿರುವುದು ಕಂಡುಬರುತ್ತದೆ ಹಾಗೂ ಬೇಸಿಗೆ ನೀರಾವರಿ ಯೋಜನೆಯಡಿ ೪,೪೫೦ ಹೆಕ್ಟೇರ್ ಭೂಮಿಯನ್ನು ಮೀಸಲಿಡಲಾಗಿದೆ.[೨೬] ಇವುಗಳೆಲ್ಲವನ್ನೂ ಗಮನಿಸಿದಾಗ ಇಲ್ಲಿ ಹೆಚ್ಚಾಗಿ ಒಣ ಬೇಸಾಯ ಪದ್ಧತಿ ಹೆಚ್ಚಾಗಿರುವುದು ಕಂಡುಬರುತ್ತದೆ. ಏತ ನೀರಾವರಿ ವ್ಯವಸ್ಥೆ, ಕೆರೆ ನೀರಾವರಿ ವ್ಯವಸ್ಥೆ, ಕೊಳವೆ ಬಾವಿಗಳಿಂದ ನೀರನ್ನು ಪಡೆಯುವ ವ್ಯವಸ್ಥೆ

ಇದೆಯಾದರೂ ಈ ವ್ಯವಸ್ಥೆಯನ್ನು ಹೊಂದಿರುವ ಜನ ವರ್ಗವೇ ಬೇರೆಯಿದೆ. ಇಲ್ಲಿ ಮುಖ್ಯವಾಗಿ ಏಕದಳ, ದ್ವಿದಳ ಧಾನ್ಯಗಳನ್ನು ಹೆಚ್ಚಾಗಿ ಬೆಳೆಯುತ್ತಾರೆ. ಹತ್ತಿ, ಜೋಳ, ಭತ್ತ, ಕಬ್ಬು, ಅಡಿಕೆ, ಶೇಂಗಾ, ಮೆಣಸಿನಕಾಯಿ, ಸೂರ್ಯಕಾಂತಿ, ರಾಗಿ, ಈರುಳ್ಳಿ, ಅವರೇಕಾಯಿ, ಹಲಸಂದಿ, ಉರುಳಿ, ಸಜ್ಜೆ, ಗೋಧಿ, ಮುಸುಕಿನ ಜೋಳ, ತೊಗರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಜೊತೆಗೆ ತೋಟಗಾರಿಕಾ ಬೆಳೆಗಳಾದ ಹಣ್ಣು, ತರಕಾರಿ, ವೀಳ್ಯದ ಎಲೆ, ಬಾಳೆ, ಮಲ್ಲಿಗೆ ಹೂವು ಮುಂತಾದವುಗಳನ್ನು ಸಹ ಬೆಳೆಯುತ್ತಾರೆ. ಕಾಲ ಬದಲಾದಂತೆ ಜನರ ಜೀವನ ಕ್ರಮವೂ ಬದಲಾಗತೊಡಗುತ್ತದೆ. ಹಾಗಾಗಿ ಇಂದು ಎಲ್ಲ ಬೆಳೆಗಳು ಸಹ ವಾಣಿಜ್ಯೀಕರಣದ ದೃಷ್ಟಿಯಿಂದ ಬೆಳೆಯುತ್ತಾರೆ. ಇಲ್ಲಿನ ಬಹುತೇಕ ಜನರ ಮುಖ್ಯ ಉದ್ಯೋಗ ಕೃಷಿಯಾಗಿದೆ. ತುಂಗಭದ್ರಾ ಮತ್ತು ಅದರ ಉಪನದಿಗಳ ಹಾಗು ಹಳ್ಳ, ಕೆರೆಗಳ ನೀರನ್ನು ಬಳಸಿಕೊಂಡು, ಇಲ್ಲವೆ ಮಳೆಯಾಶ್ರಿತ ನೀರಿನ ಸಹಾಯದಿಂದ ಕೃಷಿಕರು ವ್ಯವಸಾಯ ಕೈಗೊಂಡಿದ್ದಾರೆ.

ಈ ರೀತಿಯ ಎಲ್ಲ ಸವಲತ್ತುಗಳು ಈ ಭೂ ಭಾಗದಲ್ಲಿ ಇದ್ದಿದ್ದರಿಂದ ಚಿತ್ರದುರ್ಗ, ಚಂದ್ರವಳ್ಳಿ, ನುಂಕಪ್ಪನಗುಡ್ಡ, ಬ್ರಹ್ಮಗಿರಿ, ಜಟ್ಟಂಗರಾಮೇಶ್ವರ, ಹಾನ್ಗಲ್, ಹಳೆಕೆರೆ ಮೊದಲಾದ ಸ್ಥಳಗಳಲ್ಲಿ ಆದಿ ಶಿಲಾಯುಗದಿಂದ ಆದಿಮಾನವನು ವಾಸಿಸಿದ್ದಾನೆ. ಅಲ್ಲದೆ ಮುಂದೆ ಅಂದರೆ ಚಾರಿತ್ರಿಕ ಕಾಲದಲ್ಲಿ ವಿಜಯನಗರ ಹಾಗೂ ಚಿತ್ರದುರ್ಗದ ಪಾಳೆಯಗಾರರು ಸೇರಿದಂತೆ ಇತರೆ ಪ್ರಬಲ ರಾಜ್ಯಗಳನ್ನು ಕಟ್ಟಲು ಇಲ್ಲಿನ ಭೌಗೋಳಿಕ ಪರಿಸರವು ಸಹಕಾರಿಯಾಯಿತು. ಇದರಿಂದಾಗಿಯೇ ಚಿತ್ರದುರ್ಗ ಮತ್ತು ಅದರ ಸುತ್ತಲಿನ ನೆಲೆಗಳಲ್ಲಿ ಮನುಷ್ಯ ಪ್ರಾಗೈತಿಹಾಸಿಕ ಕಾಲದಿಂದ ಇತಿಹಾಸ ಕಾಲದಲ್ಲು ವಾಸಿಸುತ್ತ ಆ ಪರಂಪರೆ ಇಂದಿಗೂ ಮುಂದುವರಿಯಲು ಕಾರಣವಾಗಿದೆ.[೨]

ಬೆಟ್ಟಗಳಿಂದ ಸುತ್ತುವರಿದ ಎತ್ತರವಾದ ಈ ಭೂ ಪ್ರದೇಶ ಪ್ರಕೃತಿದತ್ತವಾದ ಸುರಕ್ಷತೆಯನ್ನು ನೀಡಿವೆ. ಇಂತಹ ಬೆಟ್ಟಗಳ ಸಾಲಿನಲ್ಲಿ ನದಿ, ಸಣ್ಣನದಿ, ಹಳ್ಳಗಳು ಹರಿಯುವುದು ಸಾಮಾನ್ಯ, ಈ ನೀರಿನ ಪ್ರದೇಶದ ಆಸುಪಾಸಿನಲ್ಲಿ ಇರುವ ಫಲವತ್ತಾದ ಮಣ್ಣಿನಿಂದಾಗಿ ಕೃಷಿಗೆ ಯೋಗ್ಯವಾದ ಪ್ರದೇಶ ದೊರಕಿದೆ. ಮಣ್ಣು ಫಲವತ್ತಾದರೂ ಇಲ್ಲಿ ಮಳೆ ಕಡಿಮೆಯಾದ್ದರಿಂದ ಇತ್ತೀಚಿನವರೆಗೂ ಈ ಪ್ರದೇಶ ಒಣ ಬೇಸಾಯಕ್ಕೆ ಒಳಪಟ್ಟಿತ್ತು. ಆದರೆ ವೇದಾವತಿ ಅಣೆಕಟ್ಟು ಮತ್ತು ಕೆಲ ಕೆರೆಗಳ ನಿರ್ಮಾಣದಿಂದ ಹಾಗು ಕೊಳವೆ ಬಾವಿಗಳಿಂದಾಗಿ/ ತೋಡಿದ ಕಾಲುವೆಗಳಿಂದಾಗಿ ಇಂದು ಈ ಭೂಭಾಗ ನೀರಾವರಿ ಭೂಮಿಯಾಗಿದೆ. ಇಲ್ಲಿಯ ಭೂ ಭೌತಿಕ ಸ್ವರೂಪ ಇಲ್ಲಿ ದೊರೆಯುವ ಅದಿರು, ಖನಿಜ, ಶಿಲಾಸ್ತೋಮ, ಮಣ್ಣು, ಸಸ್ಯಗಳು ಮಾನವನಿಗೆ ಸಹಕಾರಿಯಾಗಿದ್ದವು. ಇದುವೇ ಪ್ರಾಚೀನ ಮನುಷ್ಯ ಒಕ್ಕಲು ಸಂಸ್ಕೃತಿ ಆರಂಭಿಸಲು ಪ್ರೇರಣೆಯಾಯಿತು.

ಒಟ್ಟಾರೆ ಹೇಳುವುದಾದರೆ ಭೌಗೋಳಿಕವಾಗಿ ಇದು ಪ್ರಾಚೀನ ಪ್ರದೇಶವಾಗಿದ್ದು, ವಿಶಾಲವಾಗಿ ಹರಡಿಕೊಂಡಿದೆ. ಇಲ್ಲಿ ಹರಿಯುವ ವೇದಾವತಿ, ಹಗರಿ, ಚಿಕ್ಕ ಹಗರಿ ನದಿಗಳು ಹಲವು ರೀತಿಯಲ್ಲಿ ಜನಜೀವನದ ಮೇಲೆ ಪ್ರಭಾವ ಬೀರಿದೆ. ಅಲ್ಲದೆ ಅನೇಕ ಸಂಸ್ಕೃತಿಗಳ ಏಳಿಗೆಗೂ ಕಾರಣವಾಗಿದೆ. ಇಲ್ಲಿನ ಬೆಟ್ಟಗುಡ್ಡಗಳಲ್ಲಿ ದೊರೆಯುವ ನೀರನ್ನು ಆಧರಿಸಿ ಆದಿಮಾನವ ಈ ಸ್ಥಳವನ್ನು ಆಯ್ಕೆ ಮಾಡಿಕೊಂಡನು. ವ್ಯವಸಾಯದ ಕಸುಬನ್ನು ಆತ ಕರಗತ ಮಾಡಿಕೊಂಡ ನಂತರ ಈ ಸ್ಥಳಗಳಲ್ಲಿದ್ದ

ಉತ್ತಮವಾದ ಭೂಮಿ ವ್ಯವಸಾಯಕ್ಕೆ ಆಸರೆಯಾಯಿತು. ಇದು ಮುಂದೆ ಹಲವು ಸಂಸ್ಕೃತಿಗಳ ಉಗಮಕ್ಕೆ ಕಾರಣವಾಯಿತು. ಫಲವತ್ತಾದ ಭೂಮಿ, ದೊಡ್ಡ ದೊಡ್ಡ ಬಂಡೆಗಳನ್ನು ಹೊತ್ತ ಬೆಟ್ಟಗಳು, ನಿಸರ್ಗ ನಿರ್ಮಿತ ಮತ್ತು ಕೊರೆದು ತಯಾರಿಸಿದ ಗವಿಗಳು, ತಾಮ್ರ, ಕಬ್ಬಿಣ, ಚಿನ್ನದ ಅದಿರು, ತುಂಗಭದ್ರಾ ಮತ್ತು ಅದರ ಉಪನದಿಗಳ ನೀರಿನ ಸರಬರಾಜು, ಕಾಡು ಮೊದಲಾದ ಭೌಗೋಳಿಕ ಅನುಕೂಲತೆಗಳಿಂದ ಇಲ್ಲಿ ಪ್ರಾಗಿತಿಹಾಸ ಕಾಲದಿಂದಲೂ ಮಾನವ ವಾಸಿಸಿದ. ಮುಂದೆ ರಾಜ್ಯ, ಸಾಮ್ರಾಜ್ಯಗಳನ್ನು ಕಟ್ಟಿದ ಅರಸರಿಗೆ ಇಲ್ಲಿನ ಭೌಗೋಳಿಕ ಪರಿಸರವೇ ಅವರ ಕೀರ್ತಿಪತಾಕೆ ಹೆಚ್ಚಿಸಿಕೊಳ್ಳಲು ಸಹಾಯಕವಾಯಿತು. ಅವರು ದೇವಾಲಯ, ಅರಮನೆ, ಗುರುಮನೆ, ವಾಸದ ಕಟ್ಟಡಗಳನ್ನು ಶಿಲ್ಪಗಳನ್ನು ನಿರ್ಮಿಸಲು, ತನಗೆ ಬೇಕಾದ ಆಯುಧೋಪಕರಣಗಳನ್ನು ತಯಾರಿಸಿಕೊಳ್ಳಲು ಹಾಗು ತಮ್ಮ ರಾಜಾಜ್ಞೆಗಳನ್ನು ಹೊರಡಿಸಲು ಬೇಕಾದ ಕಚ್ಚಾವಸ್ತುಗಳಾದ ಶಿಲೆ, ಲೋಹ, ಮಣ್ಣು ಹಾಗು ಮರ ಮುಟ್ಟುಗಳನ್ನು ಒಂದೆಡೆ ಒದಗಿಸಿತು. ಇನ್ನೊಂದೆಡೆ ಇಲ್ಲಿನ ಫಲವತ್ತದ ಭೂ ಪ್ರದೇಶ, ಕೃಷಿಯ ಮೂಲಕ ವಿವಿಧ ಆಹಾರದ ಬೆಳೆಗಳನ್ನು ಬೆಳೆಯಲು ಸಹಾಯಕವಾಯಿತು. ಮತ್ತೊಂದೆಡೆ ಇಲ್ಲಿನ ನೈಸರ್ಗಿಕ ಪರಿಸರ ತಾಯಿ ಮಗುವನ್ನು ತನ್ನ ಗರ್ಭದಲ್ಲಿಟ್ಟುಕೊಂಡು ಸಂರಕ್ಷಿಸುವಂತೆ ಇಡೀ ಮನುಕುಲವನ್ನು ಇಲ್ಲಿನ ಬೆಟ್ಟ ಗುಡ್ಡಗಳು ರಕ್ಷಿಸಿ, ಮಾನವನ ಅಭಿವೃದ್ಧಿಗೆ ಮತ್ತು ಸಂಸ್ಕೃತಿ ಪ್ರಸರಣಕ್ಕೆ ನೇರವಾಗಿ ಕಾರಣವಾಯಿತು. ಅದರಂತೆ ಇಲ್ಲಿನ ಪರಿಸರದಲ್ಲಿರುವ ಬೃಹತ್ ಏಕಶಿಲಾ ಬೆಟ್ಟಗಳು, ದೊಡ್ಡ ದೊಡ್ಡ ಗ್ರಾನೈಟ್ ಕಲ್ಲು ಗುಂಡುಗಳ ರಾಶಿಯನ್ನು ಹೊದ್ದುಕೊಂಡಿರುವ ಬೆಟ್ಟಸಾಲುಗಳು, ನಿಸರ್ಗ ನಿರ್ಮಿತವಾದ ಬೃಹತ್ ಗವಿಗಳು, ಕಂದರಗಳು, ಏಕಶಿಲಾ ಬೆಟ್ಟಗಳು, ಬಂಡೆಗಳ ಕಡಿದಾದ ಇಳಿಜಾರುಗಳು ಇಲ್ಲಿನ ನಿಸರ್ಗ ಸೌಂದರ್ಯವನ್ನು ಮತ್ತಷ್ಟು ಹೆಚ್ಚಿಸಿವೆ. ಬೆಟ್ಟ ಗುಡ್ಡಗಳ ನಡುವೆ ನುಸುಳಿ ಹರಿಯುವ ಇಲ್ಲಿನ ಹಳ್ಳ ಮತ್ತು ನದಿಗಳು ಹಾಗೂ ಮಾನವ ನಿರ್ಮಿತ ಕೆರೆಗಳು ಈ ಪ್ರದೇಶಕ್ಕೆ ಮತ್ತೊಂದು ವರದಾನವಾಗಿವೆ.

ಈ ಪ್ರದೇಶದಲ್ಲಿ ಹಲವಾರು ಅಪರೂಪದ ಪ್ರಾಣಿವರ್ಗ ಹಾಗೂ ಸಸ್ಯವರ್ಗ ಕಂಡುಬರುತ್ತವೆ. ಇಲ್ಲಿ ಹಲವಾರು ಅಪರೂಪದ ಗಿಡಮೂಲಿಕೆಗಳು ಇರುವುದಾಗಿ ಹಲವಾರು ದೇಶ ವಿದೇಶಗಳ ಔಷಧ ತಜ್ಞರು ಹಾಗೂ ಸಂಶೋಧಕರು ದೃಢಪಡಿಸುತ್ತಾರೆ. ಇದರಿಂದಾಗಿ ಈ ಪ್ರದೇಶದಲ್ಲಿ ಹಲವಾರು ಸಾಧು ಸಂತರು ಮತ್ತು ಜನಪದರು ನಾಟಿ ವೈದ್ಯ ಪದ್ಧತಿಯನ್ನು ಇಂದಿಗೂ ಮುಂದುವರಿಸಿಕೊಂಡು ಬಂದಿದ್ದಾರೆ. ಇದಕ್ಕೆ ಇಲ್ಲಿನ ಉತ್ತಮ ಪರಿಸರವೇ ಕಾರಣವಾಗಿದೆ. ಈ ಪ್ರದೇಶವು ನದಿ ಬಯಲಿನ ಪ್ರದೇಶವಾದ್ದರಿಂದ ಇಲ್ಲಿ ವಿವಿಧ ಸಮುದಾಯಗಳು ತಮ್ಮ ನೆಲೆಯನ್ನು ಕಂಡುಕೊಂಡಿವೆ. ಅವರಲ್ಲಿ ವಿಶೇಷವಾಗಿ ಪಶುಸಂಗೋಪನಾ ವೃತ್ತಿಯ ಮತ್ತು ಬುಡಕಟ್ಟು ಸಂಸ್ಕೃತಿಯನ್ನು ಮೈಗೂಡಿಸಿಕೊಂಡ ಬೇಡರು(ವಾಲ್ಮಿಕಿ) ಕುರುಬರು, ಗೊಲ್ಲರು ಈ ಪ್ರದೇಶದಲ್ಲಿ ಹೇರಳವಾಗಿ ಕಂಡುಬರುತ್ತಾರೆ. ಕಾರಣ ಅವರಿಗೆ ಅನುಕೂಲವಾದ ನೀರು ಮತ್ತು ಹುಲ್ಲು ಇಲ್ಲಿನ ಪರಿಸರದಲ್ಲಿ ಹೇರಳವಾಗಿ ದೊರೆಯುತ್ತದೆ. ಅದೇ ರೀತಿ ಬೇಟೆಯಾಡಲು ಅನುಕೂಲವಾದ ಅರಣ್ಯ ಪ್ರದೇಶ ಹಾಗೂ ಪ್ರಾಣಿವರ್ಗ ಇಲ್ಲಿ ಹೆಚ್ಚಾಗಿದುದ್ದರಿಂದ ಬೇಡರು, ಅಡವಿ ಚೆಂಚರು, ಮ್ಯಾಸ ಬೇಡರು, ಹಕ್ಕಿ ಪಿಕ್ಕಿಗಳು, ಕೊರಚರು ಮುಂತಾದ ಬುಡಕಟ್ಟು ಹಾಗೂ ಅರೆ ಅಲೆಮಾರಿ ಸಮುದಾಯಗಳು

ಮತ್ತು ಪಶುಪಾಲಕ ಸಮುದಾಯಗಳು ಈ ಪ್ರದೇಶದಲ್ಲಿ ಬಹು ಹಿಂದಿನಿಂದ ಇಲ್ಲಿ ನೆಲೆನಿಂತಿವೆ. ಇದಕ್ಕೆ ಇಲ್ಲಿನ ಭೌಗೋಳಿಕ ಪರಿಸರವೇ ಬಹು ಮುಖ್ಯ ಕಾರಣವಾಗಿದೆ.

ಪ್ರಕೃತಿ ಮಾನವನಿಗೆ ಸದಾ ಉಪಕಾರವನ್ನು ಮಾಡುತ್ತಲೇ ಬಂದಿದೆ. ಇಲ್ಲಿನ ಭೌಗೋಳಿಕ ಪರಿಸರದಲ್ಲಿ ದೊರೆಯುವ ಶಿಲೆ (ಗ್ರಾನೈಟ್, ಸೋಪ್ ಸ್ಟೋನ್ ಇತ್ಯಾದಿ)ಮರ (ಹೊನ್ನೆ, ಬೀಟೆ, ಶ್ರೀಗಂಧ ಇತ್ಯಾದಿ) ಸುಣ್ಣದಕಲ್ಲು, ಜೇಡಿಮಣ್ಣು ಇವುಗಳು ಒಂದಲ್ಲ ಒಂದು ರೀತಿ ದೇವಾಲಯದ ನಿರ್ಮಾಣದಲ್ಲಿ ಸಹಕಾರಿಯಾಗಿವೆ. ಹಾಗೆ ಅನೇಕ ದೇವಾಲಯ ಮತ್ತು ಮೂರ್ತಿ ಶಿಲ್ಪಗಳನ್ನು ನಿರ್ಮಿಸಲು ಈ ಭೌತಿಕ ಪರಿಸರವೇ ಸ್ಫೂರ್ತಿ ನೀಡಿದೆ. ಅಂದಿನಿಂದ ಇಂದಿನವರೆಗೂ ಪರಿಸರವನ್ನು ಅವಲಂಬಿಸಿಯೇ ಮಾನವ ಜೀವನ ಸಾಗಿಸುತ್ತಿದ್ದಾನೆ. ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಯಲ್ಲಿ ಇರುವ ಅಸಂಖ್ಯಾತ ಸ್ಮಾರಕ/ದೇವಾಲಯಗಳು ಹಾಗೂ ಮೂರ್ತಿಗಳ ನಿರ್ಮಾಣಕ್ಕೆ ರಾಜರು, ಶಿಲ್ಪಿಗಳು, ಕೂಲಿಗಳು ನೇರವಾಗಿ ಕಾರಣಕರ್ತರಾದರೆ, ಅದಕ್ಕಿಂತಲೂ ಹೆಚ್ಚಾಗಿ ಪರೋಕ್ಷವಾಗಿ ಪ್ರಕೃತಿ ತನ್ನಲ್ಲಿನ ಕಚ್ಚಾ ವಸ್ತುಗಳನ್ನು ಇಂತಹ ಕೆಲಸಕ್ಕಾಗಿ ಒದಗಿಸಿದೆ. ಈ ಭೌಗೋಳಿಕ ಪರಿಸರದ ಪ್ರಭಾವ ಇಲ್ಲಿನ ಸ್ಮಾರಕ ನಿರ್ಮಾಣದಲ್ಲಿ ಬಿಂಬಿತವಾಗಿರುವುದನ್ನು ನಾವು ಕಾಣಬಹುದು.

ಕೊನೆ ಟಿಪ್ಪಣಿಗಳು

೧. ಚರಿತ್ರೆ ಸಂಶೋಧನ ಮತ್ತು ಬರವಣಿಗೆ ಕ್ರಮಗಳು, ೨೦೧೭

೨. ಅಂಜಿನಪ್ಪ. ಬಿ, ೨೦೧೩, ಹಡಗಲಿ ತಾಲೂಕಿನ ಪ್ರವಾಸೋದ್ಯಮ, ಅಪ್ರಕಟಿತ ಎಂ.ಎ. ಸಂಶೋಧನಾ ಪ್ರಬಂಧ ಪು. ೧

೩. ಗಿರಿಜಾ.ಟಿ. ಚಿತ್ರದುರ್ಗ ಜಿಲ್ಲಾ ದರ್ಶನ, ಪು. ೬–೭

೪. ತಿಪ್ಪೇಸ್ವಾಮಿ. ಎಚ್., ೨೦೧೪, ದಾವಣಗೆರೆ ದೇವಾಲಯಗಳು, ಪು.೮

೫. ಗಿರಿಜಾ.ಟಿ. ಪೂರ್ವೋಕ್ತ, ಪು. ೯

೬. ಅದೇ., ಪು. ೧೦–೧೧

೭. ಸತ್ಯನ್, ಬಿ.ಎನ್. ಚಿತ್ರದುರ್ಗ ಜಿಲ್ಲಾ ಗೆಸೆಟಿಯರ್, ೧೯೭೫, ಪು. ೮–೧೨

೮. ಅದೇ. ಪು. ೮–೧೨

೯. ಚಿತ್ರದುರ್ಗ ಜಿಲ್ಲೆಯ ಜಿಲ್ಲಾ ವೆಬ್ ಮಾಹಿತಿ.

೧೦. ಜಗಲೂರು, ದಾವಣಗೆರೆ ಮತ್ತು ಹರಿಹರ ತಾಲೂಕುಗಳು ೧೯೯೭ಕ್ಕೂ ಮೊದಲು ಚಿತ್ರದುರ್ಗ ಜಿಲ್ಲೆಯಲ್ಲಿದ್ದವು. ಆನಂತರ ಅಂದರೆ ದಾವಣಗೆರೆ ಜಿಲ್ಲೆ ೧೯೯೭ರಲ್ಲಿ ಹೊಸದಾಗಿ ರಚನೆಯಾದಾಗ ಇವು ದಾವಣಗೆರೆ ಜಿಲ್ಲೆಗೆ ಸೇರ್ಪಡೆಯಾದವು.

೧೧. ಸತ್ಯನ್, ಬಿ.ಎನ್. ಪೂರ್ವೋಕ್ತ. ಪು. ೧೨

೧೨. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ ಹೊರಡಿಸಿರುವ ಚಿತ್ರದುರ್ಗ ಜಿಲ್ಲಾ ಅಂಕಿ ಅಂಶಗಳ ನೋಟ ೨೦೧೫–೧೬. ಪು. ೧–೩ & "Census of India 2011: Data from

the 20011 Census, including cities, villages and towns (Provisional)". Census Commission of India. Archive,

೧೩. ಗಿರಿಜಾ.ಟಿ. ಪೂರ್ವೋಕ್ತ, ಪು. ೨-೪ ಮತ್ತು ಸಂತೋಷ್, ಕೆ.ವಿ., ಹೊಳಲ್ಕೆರೆ ತಾಲ್ಲೂಕು ದರ್ಶನ, ೨೦೧೬, ಪು. ೨

೧೪. ಅದೇ, ಪು. ೪-೫

೧೫. ಸತ್ಯನ್, ಬಿ.ಎನ್. ಪೂರ್ವೋಕ್ತ ಮತ್ತು Gazetteer of India, Bellary District. ಪು. ೮

೧೬. ಅದೇ, ಪೂರ್ವೋಕ್ತ, ಪು. ೮

೧೭. ಅದೇ, ಪೂರ್ವೋಕ್ತ, ಪು. ೮

೧೮. ಶಾಸನೋಕ್ತ ಕೆರೆಗಳ ಮಾಹಿತಿಗಾಗಿ *ಎಪಿಗ್ರಾಫಿಯಾ ಕರ್ನಾಟಿಕ,* (ಸಂ) ಬಿ.ಎಲ್. ರೈಸ್, ಸಂ. XI ಚಿತ್ರದುರ್ಗ ಜಿಲ್ಲೆ; ಹಿರಿಯೂರು ಶಾಸನ ಸಂಖ್ಯೆ ೩೩., ಚಿತ್ರದುರ್ಗ. ೫೦. ೮. ಹೊಳಲ್ಕೆರೆ. ೬೫. ಚಳ್ಳಕೆರೆ. ೪೦. ೧೦. ೧೨. ೨೬, ೩೮, ೪೯, ೮೮ ಹರಿಹರ, ೨೦, ೨೫, ೩೫, ೫೨. ೧೨. ಮೊಳಕಾಲ್ಮೂರು ೪, ೫, ೧೪, ೧೫, ೧೮, ೩೨. ಚಿತ್ರದುರ್ಗ ೭೩. ಹೊಳಲ್ಕೆರೆ, ೩, ೨೨, ೨೪, ೩೩, ೩೪, ೭೨, ೧೨೬ ಮತ್ತು ಗಿರಿಜಾ.ಟಿ. ಪೂರ್ವೋಕ್ತ, ಪು.೪-೫

೧೯ ಗಿರಿಜಾ.ಟಿ. ಪೂರ್ವೋಕ್ತ, ಪು.೪-೫

೨೦. ಸತ್ಯನ್, ಬಿ.ಎನ್. ಪೂರ್ವೋಕ್ತ. ಪು.೮

೨೧. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ ಹೊರಡಿಸಿರುವ ಚಿತ್ರದುರ್ಗ ಜಿಲ್ಲಾ ಅಂಕಿ ಅಂಶಗಳ ನೋಟ ೨೦೧೫-೧೬. ಪು.೮

೨೨. ನಾಗರಾಜರಾವ್ ಎಂ.ಎಸ್. ಪ್ರೋಟೋ ಹಿಸ್ಟಾರಿಕ್ ಕಲ್ಚರ್ ಆಫ್ ದಿ ತುಂಗಾಭದ್ರ ವ್ಯಾಲಿ, ೧೯೭೧ ಪು. ೧೪-೧೫.

೨೩. ಕರ್ನಾಟಕ ಚರಿತ್ರೆ, ೧೯೯೭, ಸಂಪುಟ-೧ ಪು. ೩೪

೨೪. ಸತ್ಯನ್, ಬಿ.ಎನ್. ಪೂರ್ವೋಕ್ತ. ಪು. ೧೩ ಮತ್ತು ಡಾ.ಕೆ.ವಿ.ಸಂತೋಷ್, ಪೂರ್ವೋಕ್ತ. ಪು.೩

೨೫. ಅದೇ, ಪು.೩-೪

೨೬. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ ಹೊರಡಿಸಿರುವ ಚಿತ್ರದುರ್ಗ ಜಿಲ್ಲಾ ಅಂಕಿ ಅಂಶಗಳ ನೋಟ ೨೦೧೫-೧೬. ಪೂರ್ವೋಕ್ತ, ಪು.೮

೨೭. ಸತ್ಯನ್, ಬಿ.ಎನ್. ಪೂರ್ವೋಕ್ತ. ಪು.೧೩, ಮತ್ತು ಶಿವತಾರಕ್, ಕೆ.ಬಿ., ಕರ್ನಾಟಕ ಪುರಾತತ್ವ ನೆಲೆಗಳು. ಪು.೨೩-೧೭೮

## ಅಧ್ಯಾಯ ಮೂರು

# ಚಿತ್ರದುರ್ಗ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

**೩.೧. ಪ್ರಾಗೈತಿಹಾಸಿಕ ಸಂಸ್ಕೃತಿ**

೩.೧.೧. ಹಳೆ ಶಿಲಾಯುಗ

೩.೧.೨. ಮಧ್ಯ ಶಿಲಾಯುಗ

೩.೧.೩. ನವ ಶಿಲಾಯುಗ

೩.೧.೪. ಶಿಲಾ ತಾಮ್ರಯುಗ

೩.೧.೫. ಬೃಹತ್ ಶಿಲಾಯುಗ

**೩.೨. ಚಾರಿತ್ರಿಕ ಸಂಸ್ಕೃತಿ**

೩.೨.೧. ಪ್ರಾಚೀನ ಕಾಲದ ರಾಜ ಮನೆತನಗಳು

೩.೨.೨. ಮಧ್ಯಯುಗೀನ ಕಾಲದ ರಾಜ ಮನೆತನಗಳು

೩.೨.೩. ಮಧ್ಯಯುಗದ ನಂತರ ಕಾಲದ ಪಾಳೆಯಗಾರರು

## ಅಧ್ಯಾಯ ಮೂರು

# ಚಿತ್ರದುರ್ಗ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

ಸೃಷ್ಟಿಯಲ್ಲಿ ಮಾನವನಿಗೆ ಒಂದು ವಿಶಿಷ್ಟ ಸ್ಥಾನವಿದೆ. ಮೂಲತಃ ಮಾನವ ಪ್ರಕೃತಿಯನ್ನು ಅವಲಂಬಿಸಿಕೊಂಡು ಜೀವಿಸಲೇಬೇಕಾದ ಪರಿಸ್ಥಿತಿ ಅವನಿಗಿತ್ತು. ಇಂದಿಗೆ ಸುಮಾರು ನಾಲ್ಕು ಮಿಲಿಯನ್ ವರ್ಷಗಳ ಹಿಂದೆ ಮನುಷ್ಯ ಜೀವಿಸಿದ್ದ ಎನ್ನುವುದಕ್ಕೆ ಸಾಕ್ಷ್ಯಾಧಾರಗಳಿವೆ.[೧] ಅಂದಿನಿಂದಲೂ ಮನುಷ್ಯ ಶಿಲೆಯೊಡನೆ ನಿಕಟ ಸಂಬಂಧ ಹೊಂದಿದ್ದಾನೆ. ಪ್ರಕೃತಿ ಮಾನವನಿಗೆ ಗೆಡ್ಡೆ ಗೆಣಸುಗಳನ್ನು, ಕಂಟಿಗಳನ್ನು ಅಗೆದು, ತೆಗೆಯಲು, ಗಿಡಗಳನ್ನು ಕಡಿಯಲು, ಬೇಟೆಯಾಡಲು, ಬೇಟೆಯಾಡಿದ ಪ್ರಾಣಿ ಮಾಂಸವನ್ನು ತುಂಡು ಮಾಡಲು, ಮೃತ ಪ್ರಾಣಿಗಳ ಚರ್ಮವನ್ನು ಬೇರ್ಪಡಿಸಲು, ಕಟ್ಟಿಗೆಯ ಉಪಕರಣಗಳನ್ನು, ಆಯುಧಗಳನ್ನು ತಯಾರಿಸಲು, ಶಿಲೆ ಮಾನವನಿಗೆ ನೆರವಾಗಿದೆ. ಒಟ್ಟಿನಲ್ಲಿ ಅಂದು ಮಾನವನ ಜೀವನದ ಒಂದು ಭಾಗವಾಗಿ ಶಿಲೆ ಬಳಕೆಯಾಗುತ್ತಿತ್ತು. ಅಂದರೆ ಲೋಹದ ಬಳಕೆ ಆರಂಭವಾಗುವವರೆಗೆ ಶಿಲೆಯನ್ನೇ ಮಾನವ ಅವಲಂಬಿಸಿದ್ದ ಈ ಕಾಲಾವಧಿಯನ್ನು ಶಿಲಾಯುಗ (ಸ್ಟೋನೇಜ್) ಎಂದು ಕರೆಯುತ್ತಾರೆ. ಮಾನವ ಆದಿಮ ಹಂತದಿಂದ ನಾಗರಿಕ ಹಂತಕ್ಕೆ ತಲುಪುವವರೆಗಿನ ಕಾಲವನ್ನು ಪ್ರಾಗೈತಿಹಾಸಿಕ ಕಾಲವೆಂದು ಅಥವಾ ಇತಿಹಾಸ ಪೂರ್ವ ಕಾಲವೆಂದು ಸಹ ಕರೆಯುತ್ತಾರೆ. ಮಾನವನ ಅಕ್ಷರ ಜ್ಞಾನವನ್ನು ಕಂಡುಕೊಂಡ ನಂತರದ ಕಾಲವನ್ನು ಚಾರಿತ್ರಿಕ ಕಾಲ ಎನ್ನುತ್ತಾರೆ.[೨] ಏಷ್ಯಾ ಖಂಡದಲ್ಲಿಯೇ ಅತಿ ಪ್ರಾಚೀನ ಪ್ರಾಗೈತಿಹಾಸಿಕ ನಿವೇಶನ ಮತ್ತು ಚರಿತ್ರೆ ಹೊಂದಿದ ಹೆಗ್ಗಳಿಕೆ ಚಿತ್ರದುರ್ಗ ಜಿಲ್ಲೆಗಿದೆ. ಈ ಜಿಲ್ಲೆಯ ವ್ಯಾಪ್ತಿಯಲ್ಲಿನ ಕೆಲ ಪ್ರಾಗೈತಿಹಾಸಿಕ ನೆಲೆಗಳಲ್ಲಿ ದೊರೆತ ಕೆಲವು ಅವಶೇಷಗಳು ಅಂದಿನ ಕಾಲದ ಜನ ಜೀವನಕ್ಕೆ ಸಾಕ್ಷಿಗಳಾಗಿವೆ. ಅದೇ ರೀತಿ ಈ ಜಿಲ್ಲೆಯ ವ್ಯಾಪ್ತಿಯಲ್ಲಿ ಹಲವು ರಾಜ ಮನೆತನಗಳು ಹಾಗೂ ಸಾಮಂತರು ಚಾರಿತ್ರಿಕ ಕಾಲದಲ್ಲಿ ಆಳ್ವಿಕೆ ನಡೆಸಿ ಅಮರರಾಗಿದ್ದಾರೆ. ಚಿತ್ರದುರ್ಗ ಎಂದೊಡನೆ ಕೋಟೆ ಕೊತ್ತಲಗಳ ನಗರ ಎಂದೇ ಖ್ಯಾತಿ ಪಡೆದಿದೆ. ಇಲ್ಲಿನ ಅಸಂಖ್ಯಾತ ಸ್ಮಾರಕಗಳಿಂದಾಗಿ ಈ ಜಿಲ್ಲೆ "ಚರಿತ್ರೆಯ ಕಣಜ" ಎಂದು ಕರ್ನಾಟಕದಲ್ಲಿ ಹೆಸರಾಗಿದೆ. ಇಲ್ಲಿ ಮೌರ್ಯರು, ಶಾತವಾಹನರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ನೊಳಂಬರು ಸೇವುಣರು, ಹೊಯ್ಸಳರು, ವಿಜಯನಗರದರಸರು, ಪಾಳೆಯಗಾರರು, ಹೈದರ್, ಟಿಪ್ಪು ಹಾಗೂ ಮೈಸೂರಿನ ಒಡೆಯರು ಆಳ್ವಿಕೆ

ಮಾಡಿ ಚರಿತ್ರೆಯಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನಗಳನ್ನು ಗಳಿಸಿಕೊಂಡಿದ್ದಾರೆ. ಅಲ್ಲದೇ ಅವರು ಕೈಗೊಂಡ ಅನೇಕ ಪ್ರಜಾಹಿತ ಕಾರ್ಯಗಳ ಮೂಲಕ ಚರಿತ್ರೆಯಲ್ಲಿ ಸ್ಮರಣಾರ್ಹರಾಗಿದ್ದಾರೆ.

ಇಲ್ಲಿ ಅಪಾರ ಪ್ರಮಾಣದ ಶಾಸನಗಳು, ದೇವಾಲಯಗಳು, ಮೂರ್ತಿಶಿಲ್ಪಗಳು, ಅರಮನೆ ಅವಶೇಷಗಳು, ಕೋಟೆ ಕೊತ್ತಲಗಳು, ಹೊಂಡ, ಬಾವಿ, ಕೆರೆಕಟ್ಟೆ ಮುಂತಾದ ಸ್ಮಾರಕಗಳಿದ್ದು, ಅವು ಚರಿತ್ರೆಯ ಪುನರ್ ರಚನೆಗೆ ಪ್ರಮುಖ ಆಕರಗಳಾಗಿವೆ. ಇಲ್ಲಿನ ಪೌರಾಣಿಕ ಸಂಗತಿಗಳು, ಐತಿಹ್ಯಗಳು, ಜನಪದ ನಂಬಿಕೆಗಳು, ಜಾತ್ರಾ ಉತ್ಸವಗಳು ಇಲ್ಲಿನ ಬಹುಮುಖಿ ಸಾಂಸ್ಕೃತಿಕ ಪರಂಪರೆಗೆ ಹಿಡಿದ ಕೈಗನ್ನಡಿಗಳಾಗಿವೆ. ಚಿತ್ರದುರ್ಗ ಜಿಲ್ಲೆಯ ಪ್ರಾಗೈತಿಹಾಸಿಕ ವೈಶಿಷ್ಟ್ಯತೆ ಮತ್ತು ಚಾರಿತ್ರಿಕ ಕಾಲಘಟ್ಟದಲ್ಲಿ ವಿವಿಧ ರಾಜ ಮನೆತನಗಳು ಹೊಂದಿದ್ದ ಸ್ಥಾನ ಮಾನಗಳ ಕುರಿತು ಈ ಮುಂದೆ ವಿವರಿಸಲಾಗಿದೆ.

**೩.೧. ಪ್ರಾಗೈತಿಹಾಸಿಕ ಸಂಸ್ಕೃತಿ**

ಮನುಷ್ಯ ಬರವಣಿಗೆಯನ್ನು ಕಂಡುಕೊಳ್ಳುವ ಮೊದಲು ಹಾಗೂ ಅವನ ಜೀವನದ ರೀತಿ ನೀತಿಗಳು ಅಷ್ಟೇನು ಸುಧಾರಿಸದೇ ಇದ್ದ ಕಾಲಾವಧಿಯನ್ನು ಸರಳವಾಗಿ ಪ್ರಾಗೈತಿಹಾಸಿಕ ಕಾಲವೆಂದು ಕರೆಯಲಾಗುತ್ತದೆ. ಈ ಕಾಲದಲ್ಲಿ ಅರಣ್ಯದಲ್ಲಿ ವಾಸವಾಗಿದ್ದ ಮಾನವ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಆಹಾರಕ್ಕಾಗಿ ಅಲೆಯುತ್ತಿದ್ದನು. ಇದನ್ನು **'ಫುಡ್ ಅಂಡ್ ಗ್ಯಾದರಿಂಗ್ ಸ್ಟೇಜ್'** ಎಂದು ಗುರುತಿಸಲಾಗಿದೆ. ಒಂದು ಸ್ಥಳದಲ್ಲಿ ನೆಲೆ ನಿಲ್ಲಬೇಕೆಂಬ ಪ್ರಸಂಗ ಆದಿಮಾನವನಿಗೆ ಬಂದಾಗ ಅಲ್ಲಿ ಸ್ವಲ್ಪ ದಿನಗಳ ಕಾಲ ತಂಗಿ ಮತ್ತೆ ತನ್ನ ಅಲೆಮಾರಿತನವನ್ನು ಮುಂದುವರೆಸುತ್ತಿದ್ದ. ಈ ಕಾಲವನ್ನು ಪ್ರಾಗಿತಿಹಾಸ ಕಾಲ ಅಥವಾ ಪೂರ್ವೇತಿಹಾಸ ಕಾಲ ಎಂದು ಸಹ ಕರೆಯಲಾಗಿದೆ. ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಯಲ್ಲಿ ಕೆಲವು ಪ್ರಾಗೈತಿಹಾಸಿಕ ನೆಲೆಗಳು ಕಂಡುಬಂದಿದ್ದು, ಅವುಗಳಲ್ಲಿ ಆ ಕಾಲದ ಮನುಷ್ಯ ಉಪಯೋಗಿಸಿ ಬಿಟ್ಟು ಹೋದ ಕೆಲವು ಅವಶೇಷಗಳು ದೊರೆತಿದ್ದು, ಅವು ಅವನ ಜೀವನ ಕ್ರಮದ ಕುರುಹುಗಳಾಗಿವೆ.

ಮಾನವನ ಪ್ರಾಗೈತಿಹಾಸಿಕ ಕಾಲಘಟ್ಟವನ್ನು (ಸುಮಾರು ೫ ಲಕ್ಷ ವರ್ಷಗಳ ಹಿಂದಿನಿಂದ ಆದಿ ಇತಿಹಾಸ ಕಾಲದವರೆಗೆ) ಅಧ್ಯಯನದ ಅನುಕೂಲಕ್ಕಾಗಿ ಶಿಲಾಯುಗ (ಸ್ಟೋನೇಜ್) ಮತ್ತು ಲೋಹಯುಗ (ಮೆಟಲ್ ಏಜ್) ಎಂಬ ಎರಡು ಪ್ರಧಾನ ಕಾಲ ಘಟ್ಟಗಳಾಗಿ ವಿಭಾಗಿಸಲಾಗಿದೆ. ಲೋಹದ ಬಳಕೆ ಆರಂಭವಾಗುವವರೆಗೆ ಶಿಲೆಯನ್ನೇ ಮಾನವ ಅವಲಂಬಿಸಿದ್ದ ಕಾಲಾವಧಿಯನ್ನು ಶಿಲಾಯುಗ(ಸ್ಟೋನೇಜ್) ಎಂದು ಕರೆಯುತ್ತಾರೆ. ಈ ಎರಡು ಯುಗಗಳನ್ನು ಹಳೇ ಶಿಲಾಯುಗ (ಪೆಲಿಯೋಲಿಥಿಕ್), ಸೂಕ್ಷ್ಮ ಶಿಲಾಯುಗ(ಮೆಸೋಲಿಥಿಕ್), ನವಶಿಲಾಯುಗ(ನಿಯೋಲಿಥಿಕ್), ಶಿಲಾ ತಾಮ್ರಯುಗ(ಚಾಲ್ಕೋಲಿಥೀಕ್), ಬೃಹತ್ ಶಿಲಾಯುಗ(ಮೆಗಾಲಿಥಿಕ್/ಕಬ್ಬಿಣಯುಗ) ಎನ್ನುವ ಕಾಲ ಘಟ್ಟಗಳಾಗಿ ವಿಭಾಗಿಸಲಾಗಿದೆ.[೩]

ಚಿತ್ರದುರ್ಗ ಜಿಲ್ಲೆಯಲ್ಲಿ ೧೮೭೨ರಿಂದಲೇ ಪ್ರಾಗೈತಿಹಾಸಿಕ ಸಂಶೋಧನೆಗಳು ಆರಂಭವಾಗಿವೆ. ಕ್ರಿ.ಶ. ೧೮೮೮ರಲ್ಲಿ ರಾಬರ್ಟ್ ಬ್ರೂಸ್ ಫೂಟ್ ಎಂಬ ಆಂಗ್ಲ ಅಧಿಕಾರಿಯು ಪಕ್ಕದ ಬಳ್ಳಾರಿ ಜಿಲ್ಲೆಯಲ್ಲಿ ಪ್ರಥಮ ಬಾರಿಗೆ ವ್ಯವಸ್ಥಿತ ರೀತಿಯಲ್ಲಿ ಭೌಗೋಳಿಕ ಸರ್ವೇಕ್ಷಣಾ ಕಾರ್ಯವನ್ನು

ನಡೆಸಿದನು. ಇದರಿಂದ ಪ್ರೇರಿತರಾದ ಎಂ.ಎಚ್. ಕೃಷ್ಣ, ಮಾರ್ಟಿಮರ್ ವ್ಹೀಲರ್, ಪ್ರೊ ಲಕ್ಷ್ಮಣ್ ತೆಲಗಾವಿ, ಡಾ ರಾಜಶೇಖರಪ್ಪ, ಡಾ. ವಿರೂಪಾಕ್ಷಿ ಪೂಜಾರಹಳ್ಳಿ, ಡಾ ಎಸ್ ವೈ ಸೋಮಶೇಖರ, ಡಾ. ಎಚ್. ತಿಪ್ಪೇಸ್ವಾಮಿ ಮೊದಲಾದ ವಿದ್ವಾಂಸರು ಹಾಗೂ ಸಂಶೋಧಕರು ಜಿಲ್ಲೆಯ ಚಿತ್ರದುರ್ಗ, ಹಿರಿಯೂರು, ಚಳ್ಳಕೆರೆ, ಹೊಸದುರ್ಗ, (ಹಿಂದಿನ ಜಗಲೂರು, ಹರಿಹರ ತಾಲೂಕು ಸೇರಿದಂತೆ) ತಾಲೂಕಿನ ವಿವಿಧೆಡೆ ಸಂಶೋಧನೆ ಕೈಗೊಂಡು ಹಲವಾರು ಪ್ರಾಗೈತಿಹಾಸಿಕ ನೆಲೆಗಳನ್ನು ಗುರುತಿಸಿ ಬೆಳಕಿಗೆ ತಂದಿರುತ್ತಾರೆ. ಈ ಪ್ರಯತ್ನ ಇಂದಿನವರೆಗೂ ಸಹ ನಿರಂತರವಾಗಿ ಮುಂದುವರಿದಿದೆ. ಇದರಿಂದಾಗಿ ಪ್ರಾಗೈತಿಹಾಸಿಕ ಸಂಸ್ಕೃತಿಗೆ ಸಂಬಂಧಿಸಿದಂತೆ ಒಂದು ಸ್ಪಷ್ಟ ಚಿತ್ರಣ ಲಭ್ಯವಾಗಿದೆ.[೪]

ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರಾಗೈತಿಹಾಸಿಕ ಕಾಲದ ಅನೇಕ ಪುರಾವೆಗಳು ನಮಗೆ ಲಭ್ಯವಾಗಿವೆ. ಜಿಲ್ಲೆಯ ವಿವಿದೆಡೆ ಅಂದರೆ ಚಂದ್ರವಳ್ಳಿ, ಹುಲ್ಲೂರು, ಕಬ್ಬಿಗೆರೆ, ಚಿಪ್ಪನಕೆರೆ, ಸಂಗೇನಹಳ್ಳಿ, ಗೋಡಬನಾಳು, ಗೋನೂರು, ತುರುವನೂರು, ಚಿಕ್ಕಲಘಟ್ಟ, ಪಾಳ್ಯ, ನೆಲ್ಲಿಕಟ್ಟೆ, ಬಳಘಟ್ಟೆ, ಮಾನಂಗಿ, ಮದಕೆರೆಪುರ, ಸುಲ್ತಾನಿಪುರ, ಸೊಂಡೇಕೊಳ್ಳ, ಇಸಾಸಮುದ್ರ, ಜೋಗಿಮಟ್ಟಿ, ಅಮಕುಂದಿ, ಭಟ್ರಹಳ್ಳಿ, ಚಿಕ್ಕೇರೆಹಳ್ಳಿ, ಚಿಕ್ಕುಮ್ಮಿ, ತಮ್ಮೇನಹಳ್ಳಿ, ಜಾಗೀರಬುಡ್ಡೇನಹಳ್ಳಿ, ನಾಗಸಮುದ್ರ, ಕಣಕುಪ್ಪೆ, ಕೋನಸಾಗರ, ಮೊಗಲಹಳ್ಳಿ, ಮೇಲಿನಕಣಿವೆ, ಪಕ್ಕುರುತಿ, ನೇತ್ರನಹಳ್ಳಿ, ಸಂತೆಗುಡ್ಡ, ನುಂಕೇಮಲೆ, ಜಟ್ಟಿಂಗರಾಮೇಶ್ವರ, ಹಾನಗಲ್, ರಾಯಾಪುರ, ಬ್ರಹ್ಮಗಿರಿ ಕೊಡದಬೊಮ್ಮನಕೋಟೆ, ಅಮೃತಾಪುರ, ಕ್ಯಾದಿಗುಂಟೆ, ಮನ್ನೆಕೋಟೆ, ಮಹದೇವಪುರ, ಸೋಮಗುದ್ದು, ಸಾಣಿಕೆರೆ, ರಾಮಸಾಗರ, ಗೋಸಿಕೆರೆ, ಗೌಡಗೆರೆ, ಗೌರಸಮುದ್ರ, ಚಿಕ್ಕಮಧುರೆ, ದೊಡ್ಡ ಉಳ್ಳಾರ್ತಿ, ದಾಸರಮುತ್ತೇನಹಳ್ಳಿ, ದೊಡ್ಡೇರಿ, ದೇವರಹಳ್ಳಿ, ನನ್ನಿಹಾಳ, ನೇರಲಗುಂಟೆ, ಪಗಡಲಬಂಡೆ, ನೇರ್ಲಕುಂಟೆ, ನಗರಂಗೆರೆ, ಜಡೆಕುಂಟೆ, ತಳಕು, ಬಿ.ಜಿ.ಕೆರೆ, ಅರಬಗಟ್ಟೆ, ಕಾಸಿಪುರ, ಕೊಳಹಾಳು, ಗುಂಡೇರಿ, ಬೀರನಕಟ್ಟೆ, ತಾಳಿಕಟ್ಟೆ, ದುಮ್ಮಿ, ತಾಳ್ಯ, ಜಾನಕಲ್, ನುಲೇನೂರು, ಬಿದರಿಕೆರೆ, ಶಿವಗಂಗೆ, ಹುಲಿಕೆರೆ, ಹೊರಕೆ ದೇವರಪುರ, ಕಡವೆಗೆರೆ, ಕೊಂಡಜ್ಜಿ, ಗಿರಿಯಾಪುರ, ಗುತ್ತಿಕಟ್ಟೆ, ಬೆಲಗೂರು, ಸೀರನಕಟ್ಟೆ, ಹೇರೂರು, ಕಬ್ಬಳ, ಗವಿರಂಗಾಪುರ, ಮತ್ತೋಡು, ನಿಡುಗುಂದಿ, ಬೆಟ್ಟದಮಲ್ಲೇಶ್ವರ ಮೊದಲಾದೆಡೆ ಆದಿ ಹಳೆ ಶಿಲಾಯುಗ, ನೂತನ ಶಿಲಾಯುಗ, ಶಿಲಾ ತಾಮ್ರ ಯುಗ ಮತ್ತು ಬೃಹತ್ ಶಿಲಾ ಯುಗಗಳ ಸಂಸ್ಕೃತಿಯ ಕುರುಹುಗಳು ದೊರೆತಿವೆ. ಇವುಗಳ ಆಧಾರದಿಂದ ಮೇಲಿನ ನೆಲೆಗಳು ಪ್ರಾಚೀನ ಮಾನವನ ಆವಾಸ ಸ್ಥಾನವಾಗಿತ್ತೆಂದು ತಿಳಿದುಬರುವುದು[೫] ಶಿಲಾಯುಗದ ಮಾನವನು ಇಲ್ಲಿನ ವಿವಿಧ ಸ್ಥಳಗಳನ್ನು ತನ್ನ ನಿವಾಸಕ್ಕಾಗಿ ಆರಿಸಿಕೊಳ್ಳುವಲ್ಲಿ ಇಲ್ಲಿಯ ನಿಸರ್ಗದತ್ತ ಪರಿಸರವೇ ಮುಖ್ಯ ಕಾರಣ. ಇಲ್ಲಿನ ಭೂ-ಭಾಗವೂ ದೊಡ್ಡ, ಸಣ್ಣ ಬಂಡೆಗಳು, ಗುಡ್ಡಗಳು, ಗುಡ್ಡ, ಬೆಟ್ಟಗಳು, ವಿಸ್ತಾರವಾದ ಹಾಸು ಬಂಡೆಗಳ ನಡುವೆ ಗುಡ್ಡಗಳಿದ್ದು, ಶಿಲಾಯುಗದ ಮಾನವನಿಗೆ ಅನುಕೂಲಕರವಾದ ನೆರಳಾಶ್ರಯವನ್ನು ಒದಗಿಸಿದ್ದವು. ಅಲ್ಲದೇ ಇಲ್ಲಿ ಹರಿಯುವ ನದಿ ಮತ್ತು ಅದನ್ನು ಕೂಡಿಕೊಳ್ಳುವ ಚಿಕ್ಕ-ಚಿಕ್ಕ ಹಳ್ಳ, ತೊರೆಗಳು ಅವರ ಜೀವನಾವಶ್ಯಗಳಲ್ಲೊಂದಾದ ನೀರನ್ನು ಒದಗಿಸುತ್ತಿದ್ದವು. ಹಿಂದೆ ಇಲ್ಲಿನ ಹಳ್ಳ, ಕೊಳ್ಳ, ಕಣಿವೆ, ಗುಡ್ಡ ಗುಹೆ ಮುಂತಾದವುಗಳಲ್ಲಿ ಬಳ್ಳಿ, ಎಲೆ, ಗಡ್ಡೆ, ಗೆಣಸು, ಹಣ್ಣು, ನೀರು ಮುಂತಾದವುಗಳು ಹೇರಳವಾಗಿ ಹಾಗೂ ಸುಲಭವಾಗಿ ದೊರೆಯುತ್ತಿದ್ದಿರಬೇಕು ಮತ್ತು ತನ್ನ ಉಪಯೋಗಕ್ಕೆ ಬೇಕಾದ

ಕಲ್ಲಿನ ಆಯುಧಗಳನ್ನು ನಿರ್ಮಿಸಲು ಸರಿಯಾದ ಗಟ್ಟಿಯಾದ ಕಲ್ಲುಗಳು ಬೆಣಚು ಕಲ್ಲುಗಳು ಮುಂತಾದವುಗಳು ಹೇರಳವಾಗಿ ಸ್ಥಳದಲ್ಲಿಯೇ ಲಭಿಸುತ್ತಿದ್ದವು. ಅಲ್ಲಲ್ಲಿ ಕಾಣಬರುವ ಗುಹೆಗಳು ಛಾವಣಿ ಇರುವ ಬಂಡೆಗಳು ಅವನನ್ನು ಮಳೆ, ಗಾಳಿ, ಬಿಸಿಲುಗಳಿಂದ ರಕ್ಷಿಸುತ್ತಿದ್ದವು ಮತ್ತು ವಿಶ್ರಾಂತಿ ಸಮಯದ ಚಟುವಟಿಕೆಗಳಿಗೆ ಅನುಕೂಲ ತಾಣಗಳಾಗಿದ್ದವು ಈ ಎಲ್ಲಾ ಕಾರಣಗಳಿಂದಾಗಿ ಚಿತ್ರದುರ್ಗ ಜಿಲ್ಲೆ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳು ಶಿಲಾಯುಗದ ಮಾನವನ ಚಟುವಟಿಕೆಗಳ ಆಶ್ರಯ ತಾಣಗಳಾದವು.

ಚಿತ್ರದುರ್ಗದ ಚಂದ್ರವಳ್ಳಿ, ಬ್ರಹ್ಮಗಿರಿ ಮತ್ತು ಈ ಜಿಲ್ಲೆಯ ಗಡಿಗೆ ಹೊಂದಿಕೊಂಡಿರುವ ಬಳ್ಳಾರಿ ಜಿಲ್ಲೆಯ ನಿಟ್ಟೂರು ಹಾಗೂ ತೆಕ್ಕಲಕೋಟೆ, ಸಂಗನಕಲ್ಲುಗಳಲ್ಲಿ ನಡೆದ ಉತ್ಖನನಗಳಿಂದ ಇವು ನವಶಿಲಾಯುಗಕ್ಕೂ ಪೂರ್ವದ ಮತ್ತು ನಂತರದ ನೆಲೆಗಳೆಂದು ತಿಳಿದು ಬಂದಿದೆ. ಇಲ್ಲಿ ಚಕ್ಕೆ, ಅಲಗುಗಳು[೭] ಹಾಗೂ ಮೊನಚುಗಳು, ಹೆರೆಯುವ ಚಕ್ಕೆಗಳು, ತಿರಳಗಲ್ಲು ಚಕ್ಕೆಗಳು ಸೂಕ್ಷ್ಮ ಶಿಲಾಯುಗದ ಸಂಸ್ಕೃತಿಗೆ ಸೇರಿವೆ.[೮] ಚಿತ್ರದುರ್ಗ ಜಿಲ್ಲೆ ಮತ್ತು ಕರ್ನಾಟಕದಲ್ಲಿ ಆದಿ ಮಾನವ ಸಂಸ್ಕೃತಿ ಹೇಗೆ ಬೆಳವಣಿಗೆ ಹೊಂದಿತು ಎಂಬುದನ್ನು ಈ ಮುಂದಿನಂತೆ ಗಮನಿಸಬಹುದಾಗಿದೆ.

**೩.೧.೧. ಹಳೇ ಶಿಲಾಯುಗ (ಪ್ಯಾಲಿಯೋಲಿಥಿಕ್)**

ಪ್ಯಾಲಿಯೋ ಮತ್ತು ಲಿಥಿಕ್ ಎನ್ನುವ ಗ್ರೀಕ್ ಭಾಷೆಯ ಎರಡು ಪದಗಳಿಂದ ಈ ಪದ ಉಗಮಗೊಂಡಿದ್ದು, ಇದನ್ನು ಹಳೆ ಶಿಲಾಯುಗ ಸಂಸ್ಕೃತಿ ಎನ್ನಲಾಗುತ್ತದೆ. ಇತಿಹಾಸ ತಜ್ಞರು ಈ ಸಂಸ್ಕೃತಿಯ ಕಾಲವನ್ನು ಕ್ರಿ.ಪೂ ಸುಮಾರು ೨,೫೦,೦೦೦ ದಿಂದ ಕ್ರಿ.ಪೂ. ೧,೦೦,೦೦೦ದ ವರೆಗಿನ ಅವಧಿಯನ್ನು ಗುರುತಿಸಿದ್ದಾರೆ. ಅಧ್ಯಯನದ ಅನುಕೂಲಕ್ಕಾಗಿ ಆದಿ ಮಾನವನ ಈ ಜೀವನ ಕ್ರಮವನ್ನು ಪುನಃ ಆದಿ ಹಳೇ ಶಿಲಾಯುಗ-(೭ಲಕ್ಷ ಅಥವಾ ಅದಕ್ಕೂ ಮುಂಚೆ), ಮದ್ಯ ಹಳೇ ಶಿಲಾಯುಗ-(ಕಿ.ಪೂ. ೭೦,೦೦೦-೩೦,೦೦೦), ಅಂತ್ಯ ಹಳೇ ಶಿಲಾಯುಗ (ಕ್ರಿ.ಪೂ. ೪೦,೦೦೦ -೧೦,೦೦೦) ಎಂದು ಮೂರು ಭಾಗಗಳಾಗಿ ವಿಭಾಗಿಸಲಾಗಿದೆ.

ಈ ಯುಗದಲ್ಲಿ ಮಾನವನು ಪ್ರಾಣಿಯಂತೆ ಜೀವನ ನಡೆಸುತ್ತಿದ್ದು, ಒರಟಾದ ಕಚ್ಚಾ ಶಿಲಾ ಆಯುಧಗಳನ್ನು ಬಳಸುತ್ತಿದ್ದನು. ಸಾಮಾನ್ಯವಾಗಿ ಬೆಣಚು ಕಲ್ಲುಗಳನ್ನು ಅದಕ್ಕಾಗಿ ಬಳಸುತ್ತಿದ್ದರಿಂದ ಅವನನ್ನು "ಬೆಣಚು ಕಲ್ಲಿನ ಮಾನವ" ಎಂಬುದಾಗಿ ವಿದ್ವಾಂಸರು ಕರೆದಿದ್ದಾರೆ. ಈ ಯುಗದ ಮಾನವನ ಮುಖ್ಯ ಆಯುಧಗಳೆಂದರೆ ಅಬ್ಬೆ ವಿಲಿಯನ್, ಅಷೂಲಿಯನ್ ಮಾದರಿಯ ಕೈಗೊಡಲಿ, ಭರ್ಚಿ, ಸೀಳುಗತ್ತಿ, ಮಚ್ಚುಗತ್ತಿ, ಕೊರೆಗ, ಬಾಣದ ಮೊನೆ ಮುಂತಾದವು. ಇವುಗಳಲ್ಲಿ ಅತ್ಯಂತ ವೈಶಿಷ್ಟ್ಯವಾದ ಆಯುಧವೆಂದರೆ ಕೈಗೊಡಲಿ.

ಭಾರತದಲ್ಲಿ ಆದಿ ಹಳೆಶಿಲಾಯುಗದ ಸಂಸ್ಕೃತಿಯ ಅವಶೇಷಗಳು ಮೊದಲಿಗೆ ೧೮೬೩ರಲ್ಲಿ ಬೆಳಕಿಗೆ ಬಂದಿವೆ. ಇದೇ ಸಮಯದಲ್ಲಿ ಕರ್ನಾಟಕದ ಮಲಪ್ರಭಾ ನದಿ ಕೊಳ್ಳದಲ್ಲಿಯೂ ಈ ಸಂಸ್ಕೃತಿಯ ಅವಶೇಷಗಳು ದೊರೆತಿವೆ. ಈ ರೀತಿಯ ನೆಲೆಗಳು ಉತ್ತರಕರ್ನಾಟಕದ ನದಿ ಪಾತ್ರದಲ್ಲಿಯೇ ಹೆಚ್ಚಾಗಿ ಕಂಡುಬರುತ್ತಿದ್ದು ಇಂತಹ ಮೊಟ್ಟಮೊದಲ ಅಧ್ಯಯನವನ್ನು ಆರ್.ಪಿ. ಜೋಷಿಯವರು (೧೯೫೫) ಮಲಪ್ರಭಾ ನದಿ ಕೊಳ್ಳದಲ್ಲಿ ಕೈಗೊಂಡರು. ಕರ್ನಾಟಕದ ಚಿತ್ರದುರ್ಗ

ಜಿಲ್ಲೆಯ ನುಂಕೇಮಲೆ, ಬ್ರಹ್ಮಗಿರಿ, ಮಾಡದಕಟ್ಟೆ, ತಾಳ್ಯ, ಜಾನಕಲ್, ನಿಡುಗುಂದಿ, ಎಂಬಲ್ಲಿ ಈ ಸಂಸ್ಕೃತಿಯ ಉಪಕರಣಗಳು ದೊರೆತಿವೆ.[೮]

**ಆದಿ ಹಳೇಶಿಲಾಯುಗ/ಲೇಟರ್ ಪ್ಯಾಲೋಲಿಥಿಕ್** ಕಾಲದ ಅವಶೇಷಗಳು ಭಾರತದ ಇತರೆಡೆಯಂತೆ ಕರ್ನಾಟಕದ ವಿವಿಧೆಡೆ ದೊರೆಕಿವೆ. ಅವುಗಳಲ್ಲಿ ಕೃಷ್ಣಾ, ಘಟಪ್ರಭಾದ ೧೫ ಸ್ಥಳಗಳು ಮತ್ತು ಕಲಾದಗಿ, ಅನಗವಾಡಿ, (ಬಿಜಾಪುರ) ಗುಲಬಾಳ್ ಕಿಬ್ಬನ ಹಳ್ಳಿ (ತುಮಕೂರ್ ಜಿಲ್ಲೆ) ಗುಲಬಾಳ್ (ಸುರಪುರ ತಾಲೂಕ್ ಗುಲ್ಬರ್ಗ. ಜಿ.) ನಿಟ್ಟೂರ್ (ಸಿರುಗುಪ್ಪ.ತಾ. ಬಳ್ಳಾರಿ.ಜಿ.) ಹುಣಸಗಿ, (ಸುರಪುರ ತಾ. ಗುಲ್ಬರ್ಗ ಜಿ.)ನೆಲೆಗಳು ಪ್ರಮುಖವಾಗಿವೆ. ಇಲ್ಲಿ ನಡೆದ ಉತ್ಖನನಗಳಿಂದ ಹಿಮಯುಗದ ಕೊನೆಯ ಕಾಲಕ್ಕೆ ಹೋಲುವಂತಹ ಹಲವು ಉಪಕರಣಗಳು ದೊರೆತಿವೆ. ಅವುಗಳಲ್ಲಿ ಕೊಡಲಿ, ಮಚ್ಚುಗತ್ತಿ, ಸೀಳುಗತ್ತಿ, ಹೆರೆಯುವ ಚಕ್ಕೆ ಮುಖ್ಯವಾಗಿ ದೊರೆತಿದ್ದು, ಅವು ಫ್ರಾನ್ಸ್ ದೇಶದ ಆದಿ ಹಳೇ ಶಿಲಾಯುಗದ ಮಾದರಿ ನೆಲೆಯಾದ ಸ್ಯೆಂಟ್ ಅಶೂಲ್ ನಲ್ಲಿ ದೊರೆತ ಆಯುಧಗಳಿಗೆ ಹೋಲಿಕೆಯಾಗುತ್ತವೆ. ಅಲ್ಲದೆ ಬಲು ದೂರದಿಂದ ಬುದ್ಧಿಪೂರ್ವಕವಾಗಿ ತಂದ ಕೆಮ್ಮಣ್ಣು ಗಟ್ಟಿಗಳು ಇಲ್ಲಿ ದೊರೆತಿವೆ. ಇದನ್ನು ಬಣ್ಣ ಹಾಕುವುದಕ್ಕೆ ಅಥವಾ ಬರೆಯುವುದಕ್ಕೆ ಬಳಸಿಕೊಂಡಿರಬಹುದು.[೯] ಇಲ್ಲಿಯೇ ಮುಖ್ಯವಾಗಿ ಬೆಣಚು ಕಲ್ಲಿನಿಂದ ಮತ್ತು ತಿರುಳುಗಲ್ಲಿನಿಂದ ತಯಾರಿಸಿದ ಕೈಕೊಡಲಿ, ಸೀಳುಗತ್ತಿ, ಚಕ್ರದಂತಹ ಆಯುಧಗಳು ಮುಖ್ಯವಾಗಿದ್ದು ಕೊಕ್ಕಿನ ಆಕೃತಿಯ ಆಯುಧವೊಂದು ಇಲ್ಲಿ ದೊರೆತಿದ್ದು ಮುಖ್ಯವಾಗಿದೆ.[೧೦]

ಚಿತ್ರದುರ್ಗ ಜಿಲ್ಲೆಯಲ್ಲಿ ತಾಳಿಕಟ್ಟೆ, ದುಮ್ಮಿ, ತಾಳ್ಯ, ಜಾನಕಲ್ ಮೊದಲಾದ ಸ್ಥಳಗಳಲ್ಲಿ ಈ ಕಾಲಘಟ್ಟದಲ್ಲಿ ಮಾನವನು ಬಳಸಿ ಬಿಟ್ಟುಹೋದ ಶಿಲಾ ಉಪಕರಣ ಮತ್ತು ಇತರೆ ಅವಶೇಷಗಳು ಕಂಡುಬಂದಿವೆ. ಈ ಮೇಲಿನ ನೆಲೆಗಳಲ್ಲಿ ದೊರೆತ ಆಯುಧೋಪಕರಣಗಳು ಫ್ರಾನ್ಸ್, ದಕ್ಷಿಣ ಆಫ್ರಿಕಾದ ವಿವಿಧ ನೆಲೆಗಳಲ್ಲಿ ಮತ್ತು ಮಹಾರಾಷ್ಟ್ರ(ಚರ್ಕಿ) ಮತ್ತು ಪಂಜಾಬಿನ(ಸೋನಾರಗಾಂ) ವಿವಿಧ ನೆಲೆಗಳಲ್ಲಿ ದೊರೆತ ಆಯುಧಗಳಿಗೆ ಹೋಲಿಕೆಯಾಗುತ್ತವೆ.[೧೧]

ಇಲ್ಲಿ ದೊರೆತ ಉಪಕರಣಗಳನ್ನು ವಿವಿಧ ಕೆಲಸ ಕಾರ್ಯಗಳಿಗಾಗಿ ಆದಿ ಮಾನವ ಉಪಯೋಗಿಸಿಕೊಂಡಿದ್ದಾನೆ. ಈ ಕಾಲದ ಆದಿ ಮಾನವನ ಆಸ್ತಿ, ಅವಶೇಷಗಳನ್ನು ಇದುವರೆಗೂ ಭಾರತದ ಯಾವ ಭಾಗದಲ್ಲೂ ದೊರೆಯದೇ ಇರುವುದರಿಂದ ಆ ಜನರ ವಿಶಿಷ್ಟ ದೈಹಿಕ ಲಕ್ಷಣಗಳಾಗಲೀ ವಿಕಾಸಗಳಾಗಲೀ, ಇಲ್ಲಿಯವರೆಗೆ ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಈ ಹಂತದ ಮಾನವನ ದೈನಂದಿನ ಕಾರ್ಯ ಚಟುವಟಿಕೆಯನ್ನು ಆಹಾರ ಸಂಗ್ರಹಣೆ ಮತ್ತು ಬೇಟೆಗಾರಿಕೆ ಸಂಸ್ಕೃತಿಯೆಂದು ಕರೆಯಲಾಗಿದೆ.[೧೨] ಈ ಕುರಿತಂತೆ ಹೆಚ್ಚಿನ ಶೋಧನೆಯಾದಲ್ಲಿ ಮಾತ್ರ ಹೆಚ್ಚು ಸ್ಪಷ್ಟ ಆಧಾರಗಳು ದೊರಕಬಹುದು.

**ಮಧ್ಯ ಹಳೇ ಶಿಲಾಯುಗ (ಮಿಡಲ್ ಪ್ಯಾಲೋಲಿಥಿಕ್)** ಸಂಸ್ಕೃತಿಗೆ ಸೇರಿದ ನಿವೇಶನಗಳು ಕರ್ನಾಟಕದ ಕೃಷ್ಣ, ತುಂಗಭದ್ರ ಪ್ರದೇಶಗಳಲ್ಲಿ ಹೆಚ್ಚಾಗಿ ದೊರೆತಿವೆ. ಅವುಗಳಲ್ಲಿ ಸಂಗನಕಲ್ಲು, ಬ್ರಹ್ಮಗಿರಿ, ನಿಟ್ಟೂರು, ಸಾಲ್ವಡಗಿ, ಮಟಕದೇವನಹಳ್ಳಿ(ಬುಡಪನಹಳ್ಳಿ) ಮತ್ತು ಬೈಚಬಾಳು ಕೋವಳ್ಳಿ(ಮುದ್ದೇಬಿಹಾಳು ತಾಲೂಕು ಈಗ ಬಾಗಲಕೋಟೆ ಜಿಲ್ಲೆ) ಮೊದಲಾದೆಡೆ ದೊರೆತಿವೆ.

ಜೋಗಿಮಟ್ಟಿ, ಗೌಡಗೆರೆ, ಗೌರಸಮುದ್ರ, ಚಿಕ್ಕಮಧುರೆ, ದೊಡ್ಡ ಉಳ್ಳಾರ್ತಿ ಮೊದಲಾದೆಡೆ ಈ ಸಂಸ್ಕೃತಿಯ ಚಿತ್ರದುರ್ಗ ಜಿಲ್ಲೆಯ ದೊರೆತಿವೆ.[೧೩] ಈ ಕಾಲದಲ್ಲಿ ಆದಿ ಹಳೇ ಶಿಲಾಯುಗ ಕಾಲಕ್ಕಿಂತಲೂ ಭಿನ್ನವಾಗಿ ಉತ್ತಮ ಜಾತಿಯಲ್ಲಿ ಜಾಸ್ಪರ್, ಚರ್ಟ್ ಮೊದಲಾದ ಶಿಲೆಗಳನ್ನು ಬಳಸಿ ವಿವಿಧ ಆಯುಧೋಪಕರಣಗಳನ್ನು ತಯಾರಿಸಿ ಬಳಸುವುದು, ಬಯಲುಗಳಲ್ಲಿ ವಾಸ ಮಾಡುವುದು, ಬೇಟೆಗಾಗಿ ಬಿಲ್ಲು ಬಾಣಗಳ ಪ್ರಯೋಗ, ಮೈ ಮುಚ್ಚಿಕೊಳ್ಳಲು ಮರದ ತೊಗಟೆ/ಇಲ್ಲವೆ ಪ್ರಾಣಿಗಳ ಚರ್ಮಗಳ ಬಳಕೆ, ನದಿ, ಹಳ್ಳಗಳನ್ನು ದಾಟಲು ಬುಟ್ಟಿಯಾಕಾರದ ಕಿರು ದೋಣಿಗಳನ್ನು ಬಳಕೆ ಮಾಡಿಕೊಂಡಿದ್ದು ಈ ಕಾಲದ ಕೆಲವು ಮುಖ್ಯ ಬದಲಾವಣೆಗಳಾಗಿವೆ.[೧೪]

**ಅಂತ್ಯ ಹಳೇ ಶಿಲಾಯುಗ ಸಂಸ್ಕೃತಿಗೆ(ಅಪ್ಪರ್ ಪ್ಯಾಲೋಲಿಥಿಕ್) ಸೇರಿದ** ಉಪಕರಣ ಉತ್ಪಾದನಾ ನೆಲೆಯನ್ನು ಕರ್ನಾಟಕದಲ್ಲಿ ಮೊಟ್ಟ ಮೊದಲಿಗೆ ೧೯೪೯ರಲ್ಲಿ ಸಾಲ್ವಡಿಗೆಯಲ್ಲಿ (ತಾಳಿಕೋಟೆ ತಾಲೂಕು) ಅ. ಸುಂದರ ಅವರು ಗುರುತಿಸಿದರು. ಇದೇ ನಿವೇಶನದಲ್ಲಿ ಸಂಗ್ರಹಿಸಿದ ಉಪಕರಣಗಳ ವಿಷಯವಾಗಿ ಎಂ.ಶೇಷಾದ್ರಿಯವರು ವಿವರಣಾತ್ಮಕ ಅಧ್ಯಯನವನ್ನು ಮಾಡಿದ್ದಾರೆ. ಮಾಂಜ್ರಾ, ಡೋಣಿ, ಕೃಷ್ಣ, ತುಂಗಾ, ಶಿಂಷಾ ಹಾಗೂ ಪನ್ನಾರ್ ನದಿ ಕೊಳ್ಳಗಳಲ್ಲಿ ಈ ನೆಲೆಗಳು ಹೆಚ್ಚಾಗಿ ಕಂಡು ಬಂದಿವೆ. ಅದೇ ರೀತಿ ಚಿತ್ರದುರ್ಗ ಸಮೀಪದ ಜಾನಕುಂಟೆ, ಮರಿಕುಂಟೆ, ನುಂಕೆಮಲೆ, ಜಟಂಗಿ ರಾಮೇಶ್ವರಗಳಲ್ಲಿ ಈ ಸಂಸ್ಕೃತಿಯ ಕೆಲ ಸಾಕ್ಷ್ಯಗಳು ದೊರೆತಿವೆ.[೧೫]

ನೀಳ ಅಲಗುಗಳು ಹೆರೆಯುವ ವಿವಿಧ ಮಾದರಿಗಳು, ಮೊನೆ ಹೊಂದಿರುವ ಮಾದರಿಗಳು, ಅಲಗುಗಳು, ಚೂರಿ ತರಹದ ಚೆಕ್ಕೆ, ಪೊರೆಯುಳಿ, ಕೊರಗ ಮೊದಲಾದ ಮಾದರಿಯ ಆಯುಧಗಳು ಈ ಹಂತದ ವೈಶಿಷ್ಟ್ಯ ಉಪಕರಣಗಳಾಗಿವೆ. ಕೇವಲ ಶಿಲಾಯುಧಗಳೇ ಅಷ್ಟೆ ಅಲ್ಲದೇ ಎಲುಬು, ದಂತ ಮತ್ತು ಜಿಂಕೆಯ ಕವಲು ಕೊಂಬು ಮೊದಲಾದವುಗಳಿಂದ ಉಪಕರಣಗಳನ್ನು ತಯಾರಿಸಿ ಬಳಸಿದ ಉದಾಹರಣೆಗಳಿವೆ. ಈ ಹಂತದಲ್ಲಿ ಮೂರು ತಂತ್ರಗಳನ್ನು ಅಳವಡಿಸಿಕೊಂಡು ಉಪಕರಣಗಳನ್ನು ತಯಾರಿಸುತ್ತಿದ್ದರು. ಅವುಗಳೆಂದರೆ ೧) ಪರೋಕ್ಷ ಒತ್ತಡ ತಂತ್ರ ೨) ವೃಕ್ಷ ಸ್ಥಳ ಒತ್ತಡ ೩) ನೇರ ಒತ್ತಡ ತಂತ್ರ. ಈ ಹಂತದ ತಂತ್ರ ಜ್ಞಾನವು ಹೆಚ್ಚು ಸುದಾರಿಸಿತ್ತು. ಈ ಕಾಲಕ್ಕೆ ಸೇರಿದ ಅವಶೇಷಗಳನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇಂಗಾಲ – ೧೪ ಪರೀಕ್ಷೆಯಂತೆ ಈ ಹಂತದ ಕಾಲಮಾನವು ಇಂದಿಗೆ ಸುಮಾರು ೧೦,೦೦೦ ವರ್ಷಗಳಿಂದ ೨೫,೦೦೦ ವರ್ಷಗಳಷ್ಟು ಪೂರ್ವದಲ್ಲಿ ಇದ್ದಿತೆಂದು ತಿಳಿಯುತ್ತದೆ.[೧೬]

### ೩.೧.೨. ಸೂಕ್ಷ್ಮ ಶಿಲಾಯುಗ ಸಂಸ್ಕೃತಿ(ಕ್ರಿ.ಪೂ.೧೦,೦೦೦-೩,೦೦೦)

ಹಳೆಯ ಶಿಲಾಯುಗ ಮತ್ತು ನೂತನ ಶಿಲಾಯುಗದ ನಡುವಿನ ಸಾಂಸ್ಕೃತಿಕ ಹಂತವನ್ನು ಮಧ್ಯ ಇಲ್ಲವೆ ಸೂಕ್ಷ್ಮ ಶಿಲಾಯುಗವೆಂದು ಕರೆಯಲಾಗಿದೆ. **ಗ್ರೀಕ್ ಭಾಷೆಯಲ್ಲಿ ಮೆಸೋ ಎಂದರೆ ಸೂಕ್ಷ್ಮ ಎಂದು, ಲಿಥಿಕ್ ಎಂದರೆ ಶಿಲೆ ಎಂಬ ಅರ್ಥಗಳಿವೆ. ಈ ಕಾಲದಲ್ಲಿ ಮಾನವ ಶಿಲೆಯಿಂದ ಬಹಳ ಸೂಕ್ಷ್ಮ ಉಪಕರಣಗಳನ್ನು ತಯಾರಿಸಿಕೊಂಡು ಅವುಗಳನ್ನು ತನ್ನ ಬಳಕೆಗೆ ಬಳಸಿಕೊಂಡಿದ್ದರಿಂದ ಈ ಕಾಲಘಟ್ಟವನ್ನು ಸೂಕ್ಷ್ಮ ಶಿಲಾಯುಗ ಸಂಸ್ಕೃತಿ (ಮೆಸೋಲಿಥಿಕ್ ಕಲ್ಚರ್) ಎಂದು ಕರೆಯಲಾಗುತ್ತದೆ.**

ಈ ಸಂಸ್ಕೃತಿಯ ಹಂತದಲ್ಲಿ ಮಾನವನು ತನ್ನ ಅಲೆಮಾರಿ ಜೀವನ ಕೈಬಿಟ್ಟು, ಒಂದೆಡೆ ನೆಲೆನಿಂತಿದ್ದೂ ಅಲ್ಲದೆ ಬೇಟೆ, ಮೀನುಗಾರಿಕೆ ಆಹಾರ ಸಂಗ್ರಹಣೆಯ ಜೊತೆಗೆ ಆಹಾರ ಉತ್ಪಾದನೆಯನ್ನೂ ಸಹ ಆರಂಭಿಸಿದನು. ಆದ್ದರಿಂದ ಈ ಕಾಲಮಾನವು ಮಾನವನ ಸ್ಥಿತ್ಯಂತರದ ಹಂತವಾಗಿದೆ. ಈ ಅಲ್ಪ ಸಮಯದ ಮುನ್ನಡೆಯು ಮಾನವ ಇತಿಹಾಸದಲ್ಲಿ ಗಮನಾರ್ಹವಾಗಿದೆ. ಆ ಕಾಲದ ಬಂಡೆಯ ಮೇಲಿನ ವರ್ಣಚಿತ್ರಗಳು ಇವರ ಸಾಂಸ್ಕೃತಿಕ ಸಾಮಾಜಿಕ ಆರ್ಥಿಕ ಪದ್ಧತಿ ಹಾಗೂ ನಂಬಿಕೆಗಳ ಬಗೆಗೆ ತಿಳಿಸುವುದರ ಜೊತೆಗೆ ಅವರ ಕಲೆಗಾರಿಕೆಯ ವೈಶಿಷ್ಟ್ಯತೆಯನ್ನು ತಿಳಿಯಪಡಿಸುತ್ತದೆ ಎಂದು ಅ.ಸುಂದರ ರವರು ಅಭಿಪ್ರಾಯ ಪಟ್ಟಿದ್ದಾರೆ.[೧೭] ಈ ಸಂಸ್ಕೃತಿಯು ಇಂದಿಗೆ ಸುಮಾರು ೨೫೦೦೦ ವರ್ಷದಿಂದ ೧೦೦೦೦ ವರ್ಷಗಳಷ್ಟು ಪೂರ್ವದಲ್ಲಿದ್ದಿತೆಂದು ತಿಳಿದು ಬರುತ್ತದೆ.

**ಚಿತ್ರದುರ್ಗ ಜಿಲ್ಲೆಯ** ಬ್ರಹ್ಮಗಿರಿ ಉತ್ಖನನದಲ್ಲಿ[೧೮] ಈ ಹಂತದ ಉಪಕರಣಗಳು ಗಮನಾರ್ಹ ಪ್ರಮಾಣದಲ್ಲಿ ದೊರಕಿದ್ದರೂ ಸಹ ಅವುಗಳನ್ನು ನಿರ್ದಿಷ್ಟ ಹಾಗೂ ಪ್ರತ್ಯೇಕ ಸ್ಥಳದಲ್ಲಿದ್ದುದನ್ನು ಗುರುತಿಸದೆ ನೂತನ ಶಿಲಾಯುಗಕ್ಕೆ ಸೇರಿದವೆಂದು ಆರಂಭದಲ್ಲಿ ಭಾವಿಸಲಾಗಿತ್ತು. ಇದೇ ಪರಿಸರದ ನುಂಕೇಮಲೆ, ಜಟ್ಟಂಗಿ ರಾಮೇಶ್ವರ, ಮೇಲುಕೋಟೆ, ನಿಡಘಟ್ಟ, ಮುಂತಾದ ಸ್ಥಳಗಳಲ್ಲಿ ಈ ಹಂತದ ನೆಲೆಗಳಿದ್ದು, ಇಲ್ಲಿ ಚರ್ಟ್, ಕ್ವಾರ್ಟ್ಜ್, ವೈಟ್ ಕ್ವಾರ್ಟ್ಜ್ ಶಿಲೆಯಲ್ಲಿ ತಯಾರಿಸಿದ ಸೂಕ್ಷ್ಮ ಉಪಕರಣಗಳು ಮತ್ತು ಇವುಗಳ ತಯಾರಿಕೆಗಾಗಿ ಬಳಸಿದ ಶಿಲಾಗಟ್ಟಿಗಳು ಕಂಡುಬಂದಿವೆ. ಕೊಡದಬೊಮ್ಮನಕೋಟೆಯಲ್ಲಿ ವಿವಿಧ ಮಾದರಿಯ ಉಪಕರಣಗಳನ್ನು ಚರ್ಟ್‌ಶಿಲೆಯಲ್ಲಿ ತಯಾರಿಸಲಾಗಿದೆ. ಅವುಗಳಲ್ಲಿ ಸಮಾನಾಂತರ ಅಂಚುಗಳುಳ್ಳ ಅಲಗುಗಳು, ಚಿಕ್ಕ ಅಲಗುಗಳು, ಬಾಗಿದ ಅಲಗುಗಳು, ಮೊನೆಗಳು, ಸಣ್ಣ ಬೈರಿಗೆಗಳು, ಆಹಾರ ಕತ್ತರಿಸುವ ಚಿಕ್ಕ ಮಚ್ಚುಗಳು ಮೊದಲಾದವು ಪ್ರಮುಖವಾಗಿವೆ.[೧೯] ಈ ಸಂಸ್ಕೃತಿಯ ಕುರಿತು ಹೆಚ್ಚಿನ ಅಧ್ಯಯನಗಳಾದಲ್ಲಿ ಹೆಚ್ಚಿನ ಮಾಹಿತಿ ದೊರಕುತ್ತದೆ.

**೩.೧.೩. ನೂತನ ಶಿಲಾಯುಗ ಸಂಸ್ಕೃತಿ (ಕ್ರಿಪೂ. ೩೦೦೦-೧೫೦೦)**

ಗ್ರೀಕ್ ಭಾಷೆಯಲ್ಲಿ **ನಿಯೋ ಎಂದರೆ ನವೀನ/ಹೊಸದು ಎಂದು, ಲಿಥಿಕ್ ಎಂದರೆ ಸ್ಟೋನ್ ಎಂಬ ಅರ್ಥವಿದೆ.** ಈ ಹಂತದಲ್ಲಿ ಮನುಷ್ಯ ಜೀವನದ ರೀತಿ ನೀತಿಗಳು ಸಾಕಷ್ಟು ಬದಲಾವಣೆಗೊಂಡವು ಅಲ್ಲದೆ ಈ ಕಾಲಘಟ್ಟದಲ್ಲಿ ಶಿಲಾಯುದಗಳನ್ನು ಉಜ್ಜಿ ನಯಗೊಳಿಸಿ ತಯಾರಿಸುತ್ತಿದ್ದರಿಂದಾಗಿ ಈ ಯುಗವನ್ನು ನೂತನ ಶಿಲಾಯುಗ ಸಂಸ್ಕೃತಿ (ನಿಯೋಲಿಥಿಕ್ ಕಲ್ಚರ್) ಎಂದು ಕರೆಯಲಾಗುತ್ತದೆ. ಈ ಸಂಸ್ಕೃತಿಯ ಹಂತವನ್ನು ಗುರುತಿಸುವಾಗ ಉಜ್ಜಿ ನಯಗೊಳಿಸಿದ ಮೇಲ್ಮೈಯುಳ್ಳ ಕೊಡಲಿಗಳು ಹಾಗೂ ಬೂದು ವರ್ಣದ ಮಡಿಕೆಗಳನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತದೆ.

ಈ ಉಪಕರಣಗಳು ಪ್ರಾಚೀನ ಶಿಲಾಯುಧಗಳಂತೆ ಒರಟಾಗಿರದೆ, ಉಜ್ಜಿ ನಯಗೊಳಸಿದ ಶಿಲಾಯುಧಗಳಾಗಿವೆ. ಅಲ್ಲದೆ ಈ ಹಿಂದಿನ ಕಾಲದಲ್ಲಿ(ಸೂಕ್ಷ್ಮ ಶಿಲಾಯುಗ) ಆರಂಭವಾಗಿದ್ದ ಪಶುಪಾಲನೆ ಮತ್ತು ಕೃಷಿ ಪದ್ಧತಿಗಳು ಈ ಕಾಲದಲ್ಲಿ ಸಾಕಷ್ಟು ಅಭಿವೃದ್ಧಿ ಹೊಂದಿದವು. ಬೂದು ವರ್ಣದ ಪಾತ್ರೆಗಳ ತಯಾರಿಕೆ, ವ್ಯವಸ್ಥಿತವಾದ ವಾಸದ ಮನೆಗಳ ನಿರ್ಮಾಣ ಈ ಕಾಲದ

ನವೀನತೆಗಳಾಗಿವೆ. ಇದನ್ನು ಆರಂಭಿಕ ಸಂಘಟಿತ ಸಮಾಜವೆಂದು ಕರೆಯಬಹುದಾಗಿದೆ. ಈ ಕಾರಣಕ್ಕಾಗಿಯೇ ಈ ಎಲ್ಲ ಬದಲಾವಣೆಗಳನ್ನು ಗಮನದಲ್ಲಿಟ್ಟು ಕೊಂಡ ಗೋರ್ಡಾನ್ ಚೈಲ್ಡ್ ಮತ್ತು ಸಿ.ಜೆ. ಮಾರ್ಗನ್‌ರವರು ಈ ಕಾಲಘಟ್ಟವನ್ನು **"ಕ್ರಾಂತಿಕಾರಕ ಕಾಲ ಘಟ್ಟ"** (ಎ ರೆವಲೂಷನರಿ ಪಿರಿಯಡ್) ಎಂದು ಕರೆದಿದ್ದಾರೆ.[೨೦]

ಚಿತ್ರದುರ್ಗ ಜಿಲ್ಲೆಯ ತುರುವನೂರು, ಹುಲ್ಲೂರು, ಕಬ್ಬಿಗೆರೆ, ಚಿಪ್ಪನಕೆರೆ, ಸಂಗೇನಹಳ್ಳಿ, ಗೋಡಬನಾಳು, ಗೋನೂರು, ಚಿಕ್ಕಲಘಟ್ಟ, ಪಾಳ್ಯ, ನೆಲ್ಲಿಕಟ್ಟೆ, ಬಳಘಟ್ಟೆ, ಮಾನಂಗಿ, ಮದಕೆರೆಪುರ, ಬೆಳಗಟ್ಟ, ಅಮಕುಂದಿ, ಭಟ್ರಹಳ್ಳಿ, ಚಿಕ್ಕೇರೆಹಳ್ಳಿ, ಚಿಕ್ಕುಮ್ತಿ, ತಮ್ಮೇನಹಳ್ಳಿ, ಜಾಗೀರುಬುಡ್ಡೇನಹಳ್ಳಿ, ನಾಗಸಮುದ್ರ, ಕಣಕುಪ್ಪೆ, ಕೋನಸಾಗರ, ಮೊಗಲಹಳ್ಳಿ, ಮೇಲಿನ ಕಣಿವೆ, ಪಕ್ಕುರುತಿ, ನೇತ್ರನಹಳ್ಳಿ, ಸಂತೆಗುಡ್ಡ, ನುಂಕೇಮಲೆ, ಜಟ್ಟಂಗರಾಮೇಶ್ವರ, ಹಾನಗಲ್, ರಾಯಪುರ, ಮೊದಲಾದೆಡೆ ಈ ಸಂಸ್ಕೃತಿಯ ಕುರುಹುಗಳು ಪತ್ತೆಯಾಗಿವೆ.[೨೧] ಜಿಲ್ಲೆಯ ಬ್ರಹ್ಮಗಿರಿಯಲ್ಲಿ ಉತ್ಖನನ ಮಾಡಿದ ಮಾರ್ಟಿಮರ್ ವ್ಹಿಲರ್ ಅವರು ನವ ಶಿಲಾಯುಗದಿಂದ ಮೊದಲ್ಗೊಂಡು ಒಟ್ಟು ನಾಲ್ಕು ಹಂತಗಳನ್ನು ಗುರುತಿಸಿದ್ದಾರೆ.[೨೨] ತುರವನೂರು, ಹಾನಗಲ್, ಭೈರಾಪುರ, ಭಟ್ರಹಳ್ಳಿಗಳ ಬಳಿ ಈ ಕಾಲದ ಬೂದಿದಿಬ್ಬಗಳಿವೆ.[೨೩] ಚಿತ್ರದುರ್ಗ ತಾಲೂಕಿನ ಸಂಗೇನಹಳ್ಳಿ ಕೆರೆಯ ಸುತ್ತಲೂ ೧೯೯೭ರಲ್ಲಿ ಚಿತ್ರದುರ್ಗದ ಸಂಶೋಧನಾ ತಂಡದ ಪ್ರೊ. ಲಕ್ಷ್ಮಣ್ ತೆಲಗಾವಿ ಮತ್ತು ಇತರೆ ಸದಸ್ಯರು ಅನ್ವೇಷಣೆ ಕೈಗೊಂಡು ಹೊಸ ಅಂಶಗಳನ್ನು ಬೆಳಕಿಗೆ ತಂದಿದ್ದಾರೆ. ಇಲ್ಲಿಯ ಕೆರೆಯಲ್ಲಿನ ದಿಬ್ಬಗಳನ್ನು ಸಾಮಾನ್ಯ ಮಣ್ಣಿನ ಗುಡ್ಡೆಗಳೆಂದು ಜನ ಭಾವಿಸಿದ್ದರು. ಆದರೆ ಅಲ್ಲಿರುವ ಸ್ತರಗಳಲ್ಲಿ ದೊರೆತ ಬೂದು ಮಣ್ಣನ್ನು ಹಾಗೂ ಅದೇ ದಿಬ್ಬದಲ್ಲಿ ದೊರೆತ ಎಲುಬಿನ ಅವಶೇಷಗಳನ್ನು ಆಧಾರವಾಗಿಟ್ಟುಕೊಂಡು ಇವುಗಳು ನವ ಶಿಲಾಯುಗ ಕಾಲಕ್ಕೆ ಸೇರಿದ ಬೂದಿ ದಿಬ್ಬಗಳೆಂದು ಹೇಳಿದ್ದಾರೆ.[೨೪] ಇದೇ ನೆಲೆಯಲ್ಲಿ ಕೈಕೊಡಲಿಗಳು, ಕಪ್ಪು ಬಣ್ಣದ ಮಡಿಕೆ ಚೂರುಗಳು ದೊರೆತಿವೆ. ಮೊದಲು ಇದೇ ಜಿಲ್ಲೆಯ ಭಾಗವಾಗಿದ್ದ (ಈಗ ದಾವಣಗೆರೆ ಜಿಲ್ಲೆಯ ಭಾಗವಾಗಿರುವ) ಹರಿಹರ ತಾಲೂಕಿನ ಕೊಮಾರನಹಳ್ಳಿಯಲ್ಲಿ ನಡೆಸಿದ ಉತ್ಖನನದಿಂದಾಗಿ ರಾಗಿ, ನವಣೆಗಳನ್ನು ಬೆಳೆದ ಬಗ್ಗೆ ಆಧಾರಗಳು ದೊರತಿವೆ.[೨೫] ನವಶಿಲಾಯುಗದ ವೇಳೆಗೆ ರಾಗಿ ಮತ್ತು ನವಣೆಗಳನ್ನು ಮನುಷ್ಯ ವ್ಯವಸಾಯ ಮಾಡಿ ಬೆಳೆಯುತ್ತಿದ್ದ, ಜೊತೆಗೆ ಅವುಗಳನ್ನು ಆಹಾರ ಧಾನ್ಯಗಳಿಗಾಗಿ ಪ್ರತಿನಿತ್ಯ ಬಳಸುತ್ತಿದ್ದರೆಂದು ಸ್ಪಷ್ಟವಾಗುತ್ತದೆ.[೨೬]

**೩.೧.೪. ಶಿಲಾ ತಾಮ್ರ ಯುಗ ಸಂಸ್ಕೃತಿ (ಕ್ರಿ.ಪೂ. ೨೨೦೦-೮೦೦)**

ತಾಮ್ರದ ಅದಿರಿನಿಂದ ಲೋಹವನ್ನು ತಯಾರಿಸಿ ಅದರಿಂದ ಆಭರಣ, ಗೊಂಬೆ, ಆಯುಧ ಮೊದಲಾದವುಗಳನ್ನು ಮಾಡಲಾಗುತ್ತಿತ್ತು. ಈ ಅವಧಿಯಲ್ಲಿ ಶಿಲಾಯುಧಗಳ ಜೊತೆಗೆ ತಾಮ್ರ ಅಥವಾ ಕಂಚಿನ ಉಪಕರಣಗಳನ್ನು ಬಳಸಲಾಗುತ್ತಿತ್ತು. ಆದ್ದರಿಂದ ಈ ಸಂಸ್ಕೃತಿಯನ್ನು ಶಿಲಾ ತಾಮ್ರ ಯುಗವೆಂದು (ಚಾಲ್ಕೋಲಿಥಿಕ್ ಪಿರಿಯಡ್) ಕರೆಯಲಾಗುತ್ತದೆ.

ಭಾರತದಾದ್ಯಂತ ಈ ಕಾಲದ ಅನೇಕ ನೆಲೆಗಳು ಕಂಡುಬಂದಿವೆ. ಕರ್ನಾಟಕದಲ್ಲಿ ಕೆಲವು ಕಡೆ ಈ ಸಂಸ್ಕೃತಿಯ ಕುರುಹುಗಳು ದೊರೆತಿದ್ದು ಅಧ್ಯಯನಕ್ಕೆ ಯೋಗ್ಯವಾಗಿವೆ. ನೂತನ ಶಿಲಾಯುಗದ ಸಂಸ್ಕೃತಿಯು ನಂತರ ವಿಕಸನಗೊಂಡ ಈ ಹಂತದಲ್ಲಿ ತಾಮ್ರದ ಆಯುಧಗಳ ಬಳಕೆ, ಸುಟ್ಟ

ಮಣ್ಣಿನ ಪಾತ್ರೆಗಳ ಬಳಕೆ, ಸುಧಾರಿಸಿದ ಬೇಸಾಯ ಪದ್ಧತಿಯ ಅಳವಡಿಕೆ ಈ ಸಾಂಸ್ಕೃತಿಕ ಹಂತದ ಮುಖ್ಯ ಲಕ್ಷಣಗಳು.[೨೭]

ಶಿಲಾ ತಾಮ್ರಯುಗದ ಜನರು ಸೌಂದರ್ಯ ಪ್ರಜ್ಞೆಯುಳ್ಳವರಾಗಿದ್ದರೆಂದು ಅವರು ಮಣ್ಣಿನ ಗೊಂಬೆ ಹಾಗು ದೊರೆತ ವರ್ಣಚಿತ್ರಗಳಿಂದ ತಿಳಿಯಬಹುದಾಗಿದೆ. ರಾಯಚೂರು, ಬಳ್ಳಾರಿ, ಚಿತ್ರದುರ್ಗ ಪ್ರದೇಶದ ಬೆಟ್ಟಗಳಲ್ಲಿ ಹಾಗು ಬಯಲು ಬಂಡೆಗಳ ಮೇಲೆ ಈ ಕಾಲದ ಚಿತ್ರಗಳು ದೊರೆತಿವೆ.[೨೮]

**ಚಿತ್ರದುರ್ಗ ಜಿಲ್ಲೆಯ ಪರಿಸರದಲ್ಲಿ** ಹುಲ್ಲೂರು, ಇಂಗಳದಾಳು, ಗುಡ್ಡದರಂಗವ್ವನಹಳ್ಳಿ, ಮಾಡನಾಯ್ಕನಹಳ್ಳಿ, ಬಾಗೂರು, ನುಂಕೆಮಲೆ, ಬ್ರಹ್ಮಗಿರಿ, ಕಾಮಗೇತಿಪುರ, ಮೊದಲಾದೆಡೆ ಈ ಸಂಸ್ಕೃತಿಯ ಕೆಲ ಕುರುಹುಗಳು ದೊರೆತಿವೆ. ಬ್ರಹ್ಮಗಿರಿಯಲ್ಲಿ ತಾಮ್ರದ ಚಾಕು ದೊರೆತಿದೆ. ಇವುಗಳ ಆಧಾರದ ಮೇಲೆ ಅಂದಿನ ಜನ ಜೀವನ ಅರಿಯಬಹುದಾಗಿದೆ. ಇದೇ ರೀತಿ ರಾಜ್ಯದ ಇತರೆಡೆಯೂ ಈ ಕಾಲಘಟ್ಟದ ಅವಶೇಷಗಳು ದೊರೆತಿವೆ. ಇವುಗಳ ಆಧಾರದ ಮೇಲೆ ಚಿತ್ರದುರ್ಗ ಜಿಲ್ಲೆ ಮತ್ತು ಅದರ ಸುತ್ತಲಿನ ನೆಲೆಗಳು ನವ ಶಿಲಾಯುಗ ಕಾಲದ ಮನುಷ್ಯನ ಆವಾಸ ತಾಣವಾಗಿತ್ತೆಂದು ಹೇಳಬಹುದಾಗಿದೆ.

**೩.೧.೫. ಕಬ್ಬಿಣಯುಗ ಅಥವಾ ಬೃಹತ್ ಶಿಲಾಯುಗ ಸಂಸ್ಕೃತಿ (ಕ್ರಿಪೂ. ೧೨೦೦-೨೦೦)**

ವಿವಿಧ ಮಾದರಿಯ ಬೃಹತ್ ಕಲ್ಗೋರಿ(ಶಿಲಾಗೋರಿ)ಗಳನ್ನು ಮೃತ ವ್ಯಕ್ತಿಗಳಿಗಾಗಿ ನಿರ್ಮಿಸುತ್ತಿದ್ದರಿಂದ ಈ ಸಂಸ್ಕೃತಿಯನ್ನು ಬೃಹತ್ ಶಿಲಾಯುಗ ಸಂಸ್ಕೃತಿ(ಮೆಗಾಲಿಥಿಕ್ ಏಜ್) ಎಂದು ಕರೆಯಲಾಗುತ್ತಿದೆ. ಜೊತೆಗೆ ಈ ಹಂತದಲ್ಲಿ ಕಬ್ಬಿಣದ ಬಳಕೆ ಆರಂಭಗೊಂಡಿದ್ದರಿಂದ ಈ ಕಾಲವನ್ನು ಕಬ್ಬಿಣ ಯುಗವೆಂತಲೂ(ಐರನ್ ಏಜ್) ಕರೆಯಲಾಗುತ್ತದೆ.

ಭಾರತದಲ್ಲಿ ಇತರ ಸಂಸ್ಕೃತಿಗಳಂತೆ ಬೃಹತ್ ಶಿಲಾಯುಗ ಸಂಸ್ಕೃತಿಯು ಸವಿಸ್ತಾರವಾಗಿ ಹರಡಿದ್ದು, ವಿವಿಧ ಕಾಲಘಟ್ಟಗಳಲ್ಲಿ ಅನೇಕ ಪ್ರಾದೇಶಿಕ ಲಕ್ಷ್ಮಣಗಳೊಂದಿಗೆ ಪ್ರಸಾರವಾಗಿದೆ. ಕರ್ನಾಟಕದಲ್ಲಿ ಈ ಸಂಸ್ಕೃತಿಯು ವಿಶಿಷ್ಟವಾಗಿರುವುದನ್ನು ಕಾಣಬಹುದು. ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಕಲ್ಗೋರಿಗಳು ಮತ್ತು ವಸತಿ ನೆಲೆಗಳು ಕಂಡುಬಂದಿವೆ. ಹಲವು ನೆಲೆಗಳ ಉತ್ಖನನವೂ ನಡೆದಿದೆ. ಬ್ರಹ್ಮಗಿರಿ, ನುಂಕೆಮಲೆ, ಜಟಂಗಿರಾಮೇಶ್ವರ, ಕಪ್ಪಗಲ್ಲು, ಸಂಗನಕಲ್ಲು, ಹಿರೆಬೆನಕಲ್, ಕುಮತಿ, ಹುಲಿಕುಂಟೆ, ವಟಗಲ್ ಮೊದಲಾದವು ಈ ಕಾಲದ ರಾಜ್ಯದ ಪ್ರಮುಖ ನೆಲೆಗಳಾಗಿವೆ. ಈ ಹಂತದಲ್ಲಿ ಕಬ್ಬಿಣದ ಜೊತೆಗೆ ಅತಿ ಹೆಚ್ಚು ಪ್ರಮಾಣದಲ್ಲಿ ಕಪ್ಪು ವರ್ಣದ, ಪೂರ್ಣ ಕಪ್ಪು ಮತ್ತು ಪೂರ್ಣ ಕೆಂಪು ವರ್ಣದ ಮಡಿಕೆಗಳ ಉಪಯೋಗವಿದ್ದದ್ದನ್ನು ಗುರುತಿಸಲಾಗಿದೆ.

**ಚಿತ್ರದುರ್ಗ ಜಿಲ್ಲೆಯ ಪರಿಸರದಲ್ಲಿ** ಕಬ್ಬಿಗೆರೆ, ಚಿಪ್ಪನಕೆರೆ, ಸಂಗೇನಹಳ್ಳಿ, ಗೋಡಬನಾಳು, ಗೋನೂರು, ಚಿಕ್ಕ ಆಲಘಟ್ಟ, ಪಾಳ್ಯ, ಮಾನಂಗಿ, ಮದಕೆರೆಪುರ, ಸುಲ್ತಾನಿಪುರ, ಸೊಂಡೇಕೊಳ್ಳ, ಇಸಾಸಮುದ್ರ, ಜೋಗಿಮಟ್ಟಿ, ಅಮಕುಂದಿ, ಭಟ್ರಹಳ್ಳಿ, ಚಿಕ್ಕೇರೆಹಳ್ಳಿ, ಚಿಕ್ಕುಮ್ಮಿ, ತಮ್ಮೇನಹಳ್ಳಿ, ಜಾಗೀರುಬುಡ್ಡೇನಹಳ್ಳಿ, ನಾಗಸಮುದ್ರ, ಕಣಕುಪ್ಪೆ, ಮೇಲಿನ ಕಣಿವೆ, ಪಕ್ಕುರುತಿ, ನೇತ್ರನಹಳ್ಳಿ, ಸಂತೆಗುಡ್ಡ, ನುಂಕೇಮಲೆ, ಜಟಂಗಿರಾಮೇಶ್ವರ, ಹಾನಗಲ್, ರಾಯಪುರ, ಬ್ರಹ್ಮಗಿರಿ ಮಹದೇವಪುರ,

ಸೋಮಗುದ್ದು, ಸಾಣಿಕೆರೆ, ರಾಮಸಾಗರ, ಚಿಕ್ಕಮಧುರೆ, ದೊಡ್ಡ ಉಳ್ಳಾರ್ತಿ, ದಾಸರಮುತ್ತೇನಹಳ್ಳಿ, ದೊಡ್ಡೇರಿ, ದೇವರಹಳ್ಳಿ, ಮೊದಲಾದೆಡೆ ಈ ಸಂಸ್ಕೃತಿಯ ಕುರುಹುಗಳು ದೊರೆತಿದ್ದು, ಈ ಸಂಸ್ಕೃತಿಯ ಮೇಲೆ ಹೆಚ್ಚಿನ ಬೆಳಕು ಬೀರಿವೆ.[೨೯] ಬ್ರಹ್ಮಗಿರಿಯಲ್ಲಿ ನಡೆದ ಉತ್ಖನನದಲ್ಲಿ ಮಾರ್ಟಿಮರ್‌ವ್ಹೀರ್ ಅವರು ಈ ಹಂತದ ವಾಸ್ತವ್ಯದ ನೆಲೆಗಳನ್ನು ಮತ್ತು ಸುಮಾರು ೧೨ಕ್ಕಿಂತಲೂ ಹೆಚ್ಚಿನ ಶಿಲಾ ಸಮಾಧಿಗಳನ್ನು ಗುರುತಿಸಿದರು.

ಈ ಕಲ್ಗೋರಿಗಳಲ್ಲಿ ಅಲ್ಲೊಂದು ಇಲ್ಲೊಂದು ಅಪರೂಪವಾಗಿ ಬೃಹದಾಕಾರದ ಕಲ್ಲಿನ ಗೊಂಬೆಗಳಿವೆ. ಚಪ್ಪಟೆ ಕಲ್ಲಿನಲ್ಲಿ ಮನುಷ್ಯಾಕೃತಿಯನ್ನು ಹೋಲುವ ಗೊಂಬೆಗಳನ್ನು ಬಿಡಿಸಲಾಗಿದೆ. ಇಂಥ ಗೊಂಬೆಗಳು ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶಗಳಲ್ಲಿ ಸುಮಾರು ೧೬ಕ್ಕಿಂತಲೂ ಹೆಚ್ಚಿನ ಸ್ಥಳಗಳಲ್ಲಿವೆ.[೩೦] ರಾಜ್ಯದ ಹಿರೆಬೆಣಕಲ್ಲು, ಕುಮತಿ, ಹುಲಿಕುಂಟೆಗಳಲ್ಲಿರುವ ಇಂಥ ಗೊಂಬೆಗಳಿಗೆ ಸಾಮಾನ್ಯವಾಗಿ ಅರ್ಧ ಗೋಲಾಕೃತಿಯ ತಲೆ, ಕಿರಿದಾದ ಕಂಠ, ಮುಂಚಾಚಿದ ಮೊಂಡು ಭುಜಗಳು, ನೀಳವಾದ ಮುಂಡವಿದೆ. ಬುಡವು ಚೂಪಾಗಿರುತ್ತದೆ. ಹಿರೆಬೆಣಕಲ್ಲಿನ ಗೊಂಬೆಯ ತಲೆ ದೊಡ್ಡದು. ಅದರ ಮೂರನೆಯ ಎರಡು ಭಾಗ ಭೂಮಿಯಲ್ಲಿ ಹುದಿಗಿದೆ. ಒಬ್ಬ ಮನುಷ್ಯ ರಟ್ಟೆಗಳನ್ನು ಅಡ್ಡಚಾಚಿ ಕೈಗಳನ್ನು ಮೇಲೆತ್ತಿ ನಿಂತಂತಿದೆ. ಮೊಳಕಾಲ್ಮೂರು ಸಮೀಪದ ಚಿಕ್ಕುಮ್ಮಿ ವ್ಯಾಪ್ತಿಯ ಕೂಡ್ಲಿಗಿ ತಾಲೂಕಿನ ಕುಮತಿ ಮತ್ತು ಹುಲಿಕುಂಟೆಯಲ್ಲಿ ಏಕಾಶಿಲಾ ಮಾನವಾಕೃತಿಯ ಗೊಂಬೆಗಳಿದ್ದು ಅವು ವಿಶೇಷ ಮಹತ್ವವನ್ನು ಪಡೆದಿವೆ.[೩೧]

ಬೃಹತ್ ಶಿಲಾಯುಗದ ಸಂಸ್ಕೃತಿಯ ಕುರುಹುಗಳು ಚಿತ್ರದುರ್ಗ ಜಿಲ್ಲೆಯಲ್ಲಿ ದೊರೆತಿದ್ದರಿಂದ ಈ ಪ್ರದೇಶದಲ್ಲಿ ಮಾನವ ವಾಸವಾಗಿದ್ದನು ಎಂಬುದು ವೇದ್ಯವಾಗುತ್ತದೆ. ಚಿತ್ರದುರ್ಗ ಪ್ರದೇಶದ ಸಿದ್ದಯ್ಯನಕೋಟೆ, ಚಿಕಮ್ಮಿ, ಘಟ್ಟಪರ್ತಿ, ತಾಳ್ಯ, ಜಾನ್ಕಲ್ ಮೊದಲಾದೆಡೆ ದೊರೆತ ಕಬ್ಬಿಣದ ಅವಶೇಷಗಳು ನಿರಂತರವಾಗಿ ಇಲ್ಲಿ ಕಬ್ಬಿಣದ ಉತ್ಪಾದನೆ ನಡೆದು ಬಂದಿರುವುದನ್ನು ಸೂಚಿಸುತ್ತವೆ. ಈ ಪ್ರದೇಶಗಳಲ್ಲಿ ಕಬ್ಬಿಣ ಉತ್ಪಾದನೆಯಿಂದ ದೊಡ್ಡ ದಿಬ್ಬವೇ ಉಂಟಾಗಿದ್ದು, ಅದರಲ್ಲಿ ಕಬ್ಬಿಣದ ಅದಿರು ಕರಗಿಸಿ ಲೋಹದ ರಸವನ್ನು ಸಂಗ್ರಹಿಸುತ್ತಿದ್ದ ಬಟ್ಟಲುಗಳು ಮತ್ತು ಕುಲುಮೆ ಅವಶೇಷಗಳು ಕಂಡುಬಂದಿವೆ.[೩೨] ಇದರಿಂದ ಬೆಟ್ಟದ ಆಶ್ರಯದಲ್ಲಿ ಅಲ್ಲಲ್ಲಿ ಕಬ್ಬಿಣದ ಉತ್ಪಾದನೆ ನಡೆಯುತ್ತ ಬಂದಿದ್ದು ಇಲ್ಲಿಯ ಅನೇಕ ನೆಲೆಗಳಿಂದ ಕಂಡುಕೊಳ್ಳಬಹುದು.[೩೩]

ಒಟ್ಟಿನಲ್ಲಿ ಆದಿಮ ಸಂಸ್ಕೃತಿಯು ಕಾಲದಿಂದ ಕಾಲಕ್ಕೆ ವಿಕಾಸ ಹೊಂದಿತ್ತೆಂಬುದನ್ನು ಮೇಲಿನ ವಿವರಗಳಿಂದ ತಿಳಿಯಬಹುದಾಗಿದೆ. ಈ ಜಿಲ್ಲೆಯೊಳಗಡೆ ದೊರೆತ ಮಡಿಕೆ ಚೂರು, ಆಯುಧೋಪಕರಣಗಳು ಮತ್ತು ಇತರ ಅವಶೇಷಗಳಿಗೆ ಹೆಚ್ಚು ಸಾಮಿಪ್ಯವಾಗಿವೆ. ಹಾಗೆಯೇ ನೆರೆಯ ಬಳ್ಳಾರಿ, ಶಿವಮೊಗ್ಗ, ಧಾರವಾಡ ಜಿಲ್ಲೆಯ ವಿವಿಧ ನೆಲೆಗಳಲ್ಲಿ ದೊರೆತ ಅವಶೇಷಗಳಿಗೂ ಹೋಲಿಕೆಯಾಗುತ್ತವೆ. ಆದುದರಿಂದ ಚಿತ್ರದುರ್ಗ ಜಿಲ್ಲೆ ಪ್ರಾಗೈತಿಹಾಸಿಕ ಸಂಸ್ಕೃತಿಯ ಜನರ ಆವಾಸಸ್ಥಾನವಾಗಿತ್ತವೆ ಎಂಬುದರಲ್ಲಿ ಸಂಶಯವಿಲ್ಲ. ಮುಂದೆ ಈ ಜಿಲ್ಲೆಯೊಳಗೆ ಹೆಚ್ಚು ಅಧ್ಯಯನ ನಡೆದಲ್ಲಿ ಹೊಸ ನೆಲೆಗಳು ಬೆಳಕಿಗೆ ಬರುವ ಸಾಧ್ಯತೆಗಳು ಹೆಚ್ಚಾಗಿವೆ.

ಪ್ರಾಗೈತಿಹಾಸಿಕ ಕಾಲದ ಮಾನವನ ಜೀವನಕ್ಕೆ ಸಹಕಾರಿಯಾದ ಇಲ್ಲಿನ ಭೌಗೋಳಿಕ ಅಂಶಗಳು ಮುಂದೆ ತಮ್ಮ ರಾಜ್ಯ ವಿಸ್ತರಿಸಿದ ರಾಜರಿಗೂ ಸಹಕಾರಿಯಾದವು. ಈ ಹಿನ್ನೆಲೆಯಲ್ಲಿ ಐತಿಹಾಸಿಕ ಯುಗದಲ್ಲಿ ಇಲ್ಲಿನ ರಾಜರು. ಸಾಮಂತರು ಯಾವ ರೀತಿ ಅಧಿಕಾರ ನಿರ್ವಹಿಸಿದರು? ಈ ಕುರಿತು ಸಂಕ್ಷಿಪ್ತವಾಗಿ ಮುಂದಿನಂತೆ ವಿವರಿಸಲಾಗಿದೆ.

**೩.೨. ಚಾರಿತ್ರಿಕ ಸಂಸ್ಕೃತಿ**

ಚಿತ್ರದುರ್ಗ ಪ್ರದೇಶವನ್ನು ಕ್ರಿ.ಶ. ಮೂರನೇ ಶತಮಾನದಿಂದ ಕ್ರಮವಾಗಿ ಮೌರ್ಯರು, ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಪಶ್ಚಿಮದ ಚಾಲುಕ್ಯರು, ಚೋಳರು, ಕಲಚೂರರು, ಹೊಯ್ಸಳರು, ಯಾದವರು, ಸಿಂಧರು, ನೊಳಂಬರು, ವಿಜಯನಗರ ಸಾಮ್ರಾಜ್ಯ, ಬಹಮನಿ ಸಾಮ್ರಾಜ್ಯ, ಪಾಳೆಯಗಾರರು, ಮರಾಠರು, ನಿಜಾಮ ಮತ್ತು ಹೈದರಾಲಿ ಹಾಗೂ ಟಿಪ್ಪುಸುಲ್ತಾನನವರೆಗೆ ಎಲ್ಲ ರಾಜ ವಂಶಸ್ಥರಿಂದ ಆಳ್ವಿಕೆಗೆ ಒಳಪಟ್ಟಿರುವುದು ಇಲ್ಲಿ ದೊರೆತಿರುವ ಶಾಸನಗಳಿಂದ ತಿಳಿದುಬರುತ್ತದೆ. ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳಿಂದ ಇಲ್ಲಿನ ಐತಿಹಾಸಿಕ ಹಿನ್ನೆಲೆಯನ್ನು ಗುರುತಿಸುವುದರ ಮೂಲಕ ಅಂದಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯಬಹುದಾಗಿದೆ. ಇಲ್ಲಿನ ರಾಜಕೀಯ ಇತಿಹಾಸವನ್ನು ಐತಿಹಾಸಿಕವಾಗಿ ಅಧ್ಯಯನ ಮಾಡಲು ಶಾಸನಗಳೇ ಮುಖ್ಯ ಮೂಲಾಧಾರಗಳಾಗಿವೆ. ದೊರೆತಿರುವ ಲಭ್ಯ ಆಧಾರಗಳ ಮೇಲೆ ಈ ಪ್ರದೇಶವನ್ನು ಆಳ್ವಿಕೆ ಮಾಡಿದ ವಿವಿಧ ರಾಜವಂಶಸ್ಥರು ಚರಿತ್ರೆಯನ್ನು ಈ ಮುಂದಿನಂತೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**೩.೨.೧. ಪ್ರಾಚೀನ ಕಾಲದ ರಾಜಮನೆತನಗಳು**

ಚಿತ್ರದುರ್ಗ ಪ್ರದೇಶವನ್ನು ಪ್ರಾಚೀನ ಕಾಲಘಟ್ಟದಲ್ಲಿ ಮೌರ್ಯರು, ಶಾತವಾಹನರು, ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಆಳ್ವಿಕೆ ಮಾಡಿದ್ದು, ತಮ್ಮದೇ ಆದ ಕೊಡುಗೆಗಳನ್ನು ಈ ಪ್ರದೇಶಕ್ಕೆ ನೀಡಿದ್ದಾರೆ. ಅದರ ಸಂಕ್ಷಿಪ್ತ ವಿವರಣೆಯ ಇಲ್ಲಿ ವಿವರಿಸಲಾಗಿದೆ.

**ಮೌರ್ಯರ ಆಳ್ವಿಕೆ**

ಮೌರ್ಯರಿಗಿಂತ ಮೊದಲು ನಂದರು, ಶೈಶುನಾಗರು(ಶಿಶುನಾಗರು) ಕರ್ನಾಟಕದ ಕೆಲವು ಭಾಗಗಳನ್ನು ಆಳಿರುವುದಕ್ಕೆ ಆಧಾರಗಳಿವೆ. ನಂದರನ್ನು ಕೆಳಗುರುಳಿಸಿದ ಮೌರ್ಯರು ಅನುಕ್ರಮವಾಗಿ ದಕ್ಷಿಣ ಭಾರತವನ್ನು ಒಳಗೊಂಡ ಮಗಧ ರಾಜ್ಯದ ಒಡೆಯರಾದರೆಂದು ತಿಳಿದು ಬರುತ್ತದೆ. ಹನ್ನೆರಡನೆಯ ಶತಮಾನದ ಶಿಕಾರಿಪುರದ ಶಾಸನಗಳು ಉಲ್ಲೇಖಿಸುವಂತೆ ಆ ಪ್ರದೇಶದಲ್ಲಿ ಹಿಂದೆ ನಂದರ ಆಳ್ವಿಕೆಯಿದ್ದಿತೆಂಬುದನ್ನು ಸೂಚಿಸುತ್ತವೆ.[೪೪]

ಸಂಗಂ ಸಾಹಿತ್ಯ ಕೃತಿಗಳಲ್ಲಿಯೂ ಮೌರ್ಯರು ದಕ್ಷಿಣ ಭಾರತದೊಂದಿಗೆ ಸಂಪರ್ಕವಿರಿಸಿ ಕೊಂಡಿದ್ದರ ಪ್ರಸ್ತಾಪವು ಬರುತ್ತದೆ. ಕರ್ನಾಟಕದಲ್ಲಿ ಚಂದ್ರವಳ್ಳಿ, ಬ್ರಹ್ಮಗಿರಿ, ಸಿದ್ಧಾಪುರ, ಜಟ್ಟಿಂಗ ರಾಮೇಶ್ವರ (ಚಿತ್ರದುರ್ಗ ಜಿಲ್ಲೆ) ಕೊಪ್ಪಳ ಜಿಲ್ಲೆ ಮಸ್ಕಿ(ರಾಯಚೂರು ಜಿಲ್ಲೆ) ಉದೆಗೊಳಂ, ನಿಟ್ಟೂರು (ಬಳ್ಳಾರಿ ಜಿಲ್ಲೆ) ಹಾಗು ಸನ್ನತಿ (ಗುಲ್ಬರ್ಗಾ ಜಿಲ್ಲೆ)ಗಳಲ್ಲಿ ಅಶೋಕನ ಕಾಲದ ಶಾಸನಗಳು

ದೊರತಿವೆ. ಇವುಗಳಿಂದ ಗುಲಬರ್ಗಾ, ರಾಯಚೂರು, ಬಳ್ಳಾರಿ, ಕೊಪ್ಪಳ ಮತ್ತು ಚಿತ್ರದುರ್ಗ ಪ್ರದೇಶಗಳು, ಮೌರ್ಯ ಸಾಮ್ರಾಜ್ಯದ ಅಧೀನದಲ್ಲಿದ್ದವೆಂದು ಹೇಳಬಹುದು. ಚಕ್ರವರ್ತಿ ಬಿಂದುಸಾರನು ದಕ್ಷಿಣಕ್ಕೆ ದಂಡೆತ್ತಿ ಬಂದಾಗ ತ್ರಿರಾಜ್ಯಗಳು ಅಂದರೆ ಚೋಳ, ಚೇರ, ಪಾಂಡ್ಯ ಅವನನ್ನು ತಡೆದವು. ಮೌರ್ಯ ಸಾಮ್ರಾಜ್ಯವು ದಕ್ಷಿಣದ ತುತ್ತ ತುದಿಗೆ ವ್ಯಾಪಿಸಲಿಲ್ಲ ಎಂದು ಇತಿಹಾಸಕಾರರು ತಿಳಿಸುತ್ತಾರೆ. ಒಟ್ಟಿನಲ್ಲಿ ಕುಂತಲವು ಅಶೋಕನ ಆಳ್ವಿಕೆಗೆ ಮೊದಲೇ ಮೌರ್ಯ ಸಾಮ್ರಾಜ್ಯಕ್ಕೆ ಸೇರಿದ್ದಿತೆಂಬುದು ನಿರ್ವಿವಾದವಾದ ವಿಷಯವಾಗಿದೆ.[೩೫] ಕುಂತಲ ಸೀಮೆಯು ಭೀಮಾ ಮತ್ತು ವೇದಾವತಿ ನದಿಗಳ ಮಧ್ಯದಲ್ಲಿದ್ದು ಪಶ್ಚಿಮ ಘಟ್ಟಗಳನ್ನು ಸರಹದ್ದನ್ನಾಗಿ ಹೊಂದಿದ್ದಿತು. ಚಿತ್ರದುರ್ಗ, ಶಿವಮೊಗ್ಗ, ಬಳ್ಳಾರಿ, ಧಾರವಾಡ, ಬಿಜಾಪುರ ಮೊದಲಾದ ಪ್ರದೇಶಗಳು ಕುಂತಲದಲ್ಲಿ ಸೇರಿದ್ದವು. ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಯ ಉತ್ತರ ಭಾಗದಲ್ಲಿ ದೊರೆತಿರುವ ಅಶೋಕನ ಶಾಸನಗಳು ಮೌರ್ಯರ ಆಳ್ವಿಕೆಯನ್ನು ಅಧಿಕೃತವಾಗಿ ಸ್ಪಷ್ಟಪಡಿಸುವ ಆಧಾರಗಳಾಗಿವೆ.

ಅಶೋಕನ ಶಾಸನಗಳು (ಎರಡು ಮತ್ತು ಹದಿಮೂರನೆಯ) ದಕ್ಷಿಣದ ರಾಜ್ಯಗಳ ಹೆಸರುಗಳನ್ನು ತಿಳಿಸುತ್ತವೆ. ಅಂತೆಯೇ ಬ್ರಹ್ಮಗಿರಿ, ಸಿದ್ಧಾಪುರ ಮತ್ತು ಜಟ್ಟಿಂಗ ರಾಮೇಶ್ವರದಲ್ಲಿನ ಶಾಸನಗಳು ಮೌರ್ಯ ಚಕ್ರವರ್ತಿ ಅಶೋಕನ ಸಾಮ್ರಾಜ್ಯದ ಗಡಿಗಳನ್ನು ಸೂಚಿಸುವ ಗುರುತುಗಳಾಗಿವೆ.[೩೬] ಇತ್ತೀಚೆಗೆ ನಡೆದ ಸಂಶೋಧನೆಗಳಿಂದ ಮೌರ್ಯ ಸಾಮ್ರಾಜ್ಯವು ಬಳ್ಳಾರಿ ಜಿಲ್ಲೆಯ ಸಿರುಗುಪ್ಪ, ಬಳ್ಳಾರಿ ತಾಲೂಕುಗಳ ಕೆಲವು ಭಾಗಗಳಲ್ಲದೆ. ಈಗೀನ ಚಿತ್ರದುರ್ಗ ಜಿಲ್ಲೆ ಸುತ್ತಲಿನ ಕೆಲ ಭಾಗಗಳನ್ನು ಒಳಗೊಂಡಿದ್ದುದಾಗಿ ತಿಳಿದು ಬಂದಿದೆ. ಇಲ್ಲಿಗೆ ಸಮೀಪದ ಬ್ರಹ್ಮಗಿರಿ ಮೊದಲಾದೆಡೆ ದೊರೆಯುವ ಬೃಹತ್ ಶಿಲಾಯುಗದ ಸಮಾಧಿಗಳನ್ನು ಜನರು ಮೋರಿಯರ ಮನೆ ಅಥವಾ ಮೌರ್ಯರ ಮನೆ ಎಂದು ಕರೆಯುತ್ತಿರುವುದು ಅರ್ಥಪೂರ್ಣವಾಗಿದೆ.

ಮೌರ್ಯರ ಆಡಳಿತದ ವ್ಯಾಪ್ತಿಗೆ ಈ ಪ್ರದೇಶ ಸೇರಿತ್ತೆಂಬುದು ಸಮೀಪದ ಕೊಪ್ಪಳ, ನಿಟ್ಟೂರು, ಉದೇಗೊಳಂ ಮುಂತಾದ ಪ್ರದೇಶಗಳಲ್ಲಿ ದೊರೆತ ಮೌರ್ಯರ ಶಾಸನಗಳಿಂದ ತಿಳಿದುಬರುತ್ತದೆ. ಚಿತ್ರದುರ್ಗ ಸಮೀಪದ ಜಗಲೂರು ತಾಲೂಕಿನ ಅಸಗೋಡು, ಹಿಂದೆ ಅಶೋಕ ಪಟ್ಟಣವೆಂದು ಕರೆಯಲ್ಪಡುತ್ತಿತ್ತು. ಇಲ್ಲಿ ಬೌದ್ಧ ಧರ್ಮವು ಇದ್ದುದರ ಸೂಚನೆಗಳು ಸಿಕ್ಕುತ್ತವೆ.[೩೭] ಮೌರ್ಯ ಸಾಮ್ರಾಟ ಅಶೋಕನ ಬ್ರಹ್ಮಗಿರಿ ಶಾಸನವು 'ಇಸಿಲಾ' ಸ್ಥಳವನ್ನು ಹೆಸರಿಸಿದ್ದು, ಇದು ಮೌರ್ಯ ಸಾಮ್ರಾಜ್ಯದ 'ಸುವರ್ಣಗಿರಿ' ಘಟಕದ ಆಡಳಿತ ಕೇಂದ್ರವಾಗಿತ್ತು. ಅಲ್ಲದೇ ಬ್ರಹ್ಮಗಿರಿಯ ಸಮೀಪದಲ್ಲಿ ಇಟ್ಟಿಗೆಗಳಿಂದ ಕಟ್ಟಿದ ಚೈತ್ಯಾಲಯ ಮತ್ತು ಮೌರ್ಯರ ಕಾಲದ ಹಲವಾರು ಅವಶೇಷಗಳು ದೊರಕಿದ್ದು, 'ಇಸಿಲ' ಬ್ರಹ್ಮಗಿರಿಯ ಬಳಿಯೇ ಇದ್ದ ನಗರವೆಂದು ಪ್ರಾಕ್ತನ ಶಾಸ್ತ್ರಜ್ಞರು ಅಭಿಪ್ರಾಯ ಪಟ್ಟಿದ್ದಾರೆ.[೩೮]

ಚಿತ್ರದುರ್ಗದ ಚಂದ್ರವಳ್ಳಿ ಉತ್ಖನನದಲ್ಲಿ ದೊರೆತ ನಾಣ್ಯಗಳ ಮೇಲೆ ಭೋಧಿವೃಕ್ಷ, ವೃಷಭ, ಸ್ವಾಸ್ತಿಕ, ಚೈತ್ಯ ಮುಂತಾದ ಚಿಹ್ನೆಗಳಿರುವುದರಿಂದ, ಮೌರ್ಯ ಚಕ್ರವರ್ತಿ ಅಶೋಕನ ಕಾಲದಿಂದ ಕದಂಬ ಮಯೂರವರ್ಮನ ಕಾಲದವರೆಗೆ ಈ ಪ್ರದೇಶದಲ್ಲಿ ಬೌದ್ಧ ಮತ ಪ್ರಚಾರದಲ್ಲಿತ್ತೆಂದು ತಿಳಿಯಬಹುದಾಗಿದೆ. ಈ ರೀತಿಯಲ್ಲಿ ಚಿತ್ರದುರ್ಗ ಹಾಗೂ ಸುತ್ತಲಿನ ಪ್ರದೇಶಗಳಲ್ಲಿ ಮೌರ್ಯರ

ಶಾಸನ ಮತ್ತಿತರ ಅವಶೇಷಗಳು ಹೆಚ್ಚು ದೊರೆಯದೆ ಹೋದರೂ ಸಹ ಆ ಸಾಮ್ರಾಟರ ಧಾರ್ಮಿಕ, ಸಾಂಸ್ಕೃತಿಕ ಪರಂಪರೆಯೂ ಮುಂದುವರೆಯಿತೆಂದು ಹೇಳಲು ಪಕ್ಕದ ಚಿತ್ರದುರ್ಗ ಪಕ್ಕದ ಬಳ್ಳಾರಿ, ಕೊಪ್ಪಳ ಪ್ರದೇಶದಲ್ಲಿ ಶಾಸನಗಳು, ಅವಶೇಷಗಳು ದೊರೆತಿವೆ. ಇದರಿಂದಾಗಿ ಈ ಪ್ರಾಂತ್ಯವು ಹಲವು ಶತಮಾನಗಳ ಕಾಲ ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದು.

**ಶಾತವಾಹನ ಆಳ್ವಿಕೆ (ಕ್ರಿಪೂ. ೨೨೦ರಿಂದ ಕ್ರಿಶ. ೨೩೦)**

ಸುಮಾರು ೪೫೦ ವರ್ಷಗಳ ದೀರ್ಘಕಾಲ ಶಾತವಾಹನರು ಭಾರತದಲ್ಲಿ ರಾಜ್ಯವಾಳಿದರು. ಡಾ. ಸುಕುಂಥಕರ್‌ರವರು ಶಾತವಾಹನರ ಕುಟುಂಬ ಕನ್ನಡ ಪ್ರದೇಶದಿಂದ ಬಂದಿದೆ ಎಂದು ಹೇಳಿದ್ದಾರೆ. ರಾಜಶೇಖರನ ಕಾವ್ಯ ಮೀಮಾಂಸೆಯಲ್ಲಿ. ವಾತ್ಸ್ಯಾಯನ ಕಾಮಸೂತ್ರದಲ್ಲಿ, ಪ್ರಾಕೃತ ಗಥ ಸಪ್ತಸತಿಯಲ್ಲಿ 'ಹಲ' ಕುಂತಲದ ರಾಜನೆಂದು ತಿಳಿಸಿದೆ. ಪುರಾಣದಲ್ಲಿ ಗೌತಮಿಪುತ್ರ ಶಾತಕರ್ಣಿ ಕುಂತಲ ಪ್ರದೇಶವನ್ನು ಆಳುತ್ತಿದ್ದ ಬಗ್ಗೆ ಗೊತ್ತಾಗುತ್ತದೆ. ಕರ್ನಾಟಕದ ಬಹುಭಾಗವನ್ನಾಳಿದ ಮೊಟ್ಟ ಮೊದಲನೆಯ ಪ್ರಮುಖ ರಾಜವಂಶದವರಾದ ಈ ಶಾತವಾಹನರು ತಮ್ಮನ್ನು 'ಕುಂತಳ ಸ್ವಾಮಿ'ಗಳೆಂದು ಕರೆದುಕೊಂಡದ್ದುಂಟು (ಇವರಿಗೆ ಆಂಧ್ರರು, ಆಂಧ್ರ ಭೃತ್ಯರು, ಶಾತಕರ್ಣಿಗಳು ಎಂದು ಕರೆಯಲಾಗಿದೆ).[೩೯] ಸುಮಾರು ಮೂವತ್ತು ಮಂದಿ ದೊರೆಗಳಿದ್ದ ಈ ಮನೆತನದ ಬಗ್ಗೆ ಇದುವರೆಗೆ ದೊರೆತಿರುವ ಶಾಸನಗಳು ಅತ್ಯಲ್ಪ.

ಚಿತ್ರದುರ್ಗ ಜಿಲ್ಲೆಯಲ್ಲಿ ಶಾತವಾಹನರ ಆಳ್ವಿಕೆ ಇತ್ತೆ? ಎಂಬುದರ ಬಗ್ಗೆ ಹೆಚ್ಚು ಶಾಸನಗಳು ದೊರೆತಿಲ್ಲ. ಆದರೆ ಚಂದ್ರವಳ್ಳಿಯ ಉತ್ಖನನದಿಂದ 1800 ವರ್ಷಗಳ ಹಿಂದೆ ಶಾತವಾಹನರು ಇಲ್ಲಿ ಆಳುತ್ತಿದ್ದರೆಂದು ತಿಳಿದುಬಂದಿದೆ. ಅಲ್ಲದೇ ಬಳ್ಳಾರಿ ಜಿಲ್ಲೆಯ ಹಿರೇಹಡಗಲಿ ಹಾಗೂ ಮ್ಯಾಖಡೋಣಿ ಶಾಸನದಿಂದ ಶಾತವಾಹನರ ಕೊನೆಯ ಅರಸರು ತಮ್ಮ ಆಳ್ವಿಕೆಯನ್ನು ಇಲ್ಲಿಯವರೆಗೆ ವಿಸ್ತರಿಸಿದ್ದರಂದು ಹೇಳಬಹುದು. ಪುರಾತತ್ವಕ ಆಧಾರಗಳಾದ ನಾಣ್ಯಗಳು. ಕಟ್ಟೆಗಳು. ದೇವಾಲಯಗಳು, ಅಲಂಕಾರಿಕ ವಸ್ತುಗಳು ಇತ್ಯಾದಿಗಳು ನಮಗೆ ದೊರೆತಿದ್ದರಿಂದ ಹಾಗೂ ಈಗೀನ ಚಿತ್ರದುರ್ಗ ಜಿಲ್ಲೆಯಲ್ಲಿ ಎರಡು ಕಡೆ ನಡೆದ ಭೂ-ಶೋಧನೆಯಿಂದ ಶಾತವಾಹನರ ಬಗೆಗೆ ಹಲಾವರು ಮಹತ್ವದಾಯಕ ಅಂಶಗಳು ಹೊರಬಿದ್ದಿವೆ. ಈ ಹಿನ್ನೆಲೆಯಿಂದ ತುಲನಾತ್ಮಕ ಅಧ್ಯಯನ ಮಾಡಿ ಶಾತವಾಹನರ ಚರಿತ್ರೆಯನ್ನು ನಿರೂಪಿಸಬಹುದು.

ಚಿಪ್ಪನಕೆರೆ ನೆಲೆಯಲ್ಲಿ ಶಾತವಾಹನರ ಕಾಲಕ್ಕೆ ಸೇರಿದ ಸೀಸದ ನಾಣ್ಯಗಳು. ಕಾರ್ಲೆನಿಯನ್, ಆಗೇಟ್‌ದಿಂದ ತಯಾರಿಸಲಾದ ಮಣಿಗಳು ಮತ್ತು ಕೆಲ ಬಿಳಿ ಬಣ್ಣದ ಮಡಿಕೆಗಳು ದೊರೆತಿವೆ. ಇದರಿಂದಾಗಿ ಚಿಪ್ಪನಕೆರೆ ಮತ್ತು ಅದರ ಸುತ್ತಲಿನ ಪ್ರದೇಶ ಶಾತವಾಹನರ ಕಾಲಕ್ಕೆ ಸೇರಿರಬಹುದೆಂದು ಊಹಿಸಿದ್ದಾರೆ.[೪೦] ಹಾಗೇ ಜಗಲೂರು ತಾಲೂಕಿನ ಆಕನೂರು ಗ್ರಾಮದ ಬಳಿ ಇದೇ ಕಾಲದ ಬಿಳಿ ಬಣ್ಣದ ರೇಖಾ ಚಿತ್ರಗಳನ್ನೊಳಗೊಂಡ ಮಡಿಕೆಗಳು ದೊರೆತಿವೆ.[೪೧] ಈಗಿನ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನಲ್ಲಿರುವ ಬ್ರಹ್ಮಗಿರಿ ಮತ್ತು ಚಿತ್ರದುರ್ಗ ನಗರದ ಪಶ್ಚಿಮಕ್ಕೆ ವಿಸ್ತಾರವಾದ ಕಲ್ಲುಗುಡ್ಡಗಳ ಸಾಲಿನಲ್ಲಿರುವ ಚಂದ್ರವಳ್ಳಿ ಉತ್ಖನನಗಳಿಂದಾಗಿ ಶಾತವಾಹನರ ಆಳ್ವಿಕೆಯ ಮೇಲೆ ಹೆಚ್ಚಿನ ಬೆಳಕು ಬೀರಿದಂತಾಗಿದೆ. ಡಾ.ಎಂ.ಎಚ್. ಕೃಷ್ಣರವರು ಚಂದ್ರವಳ್ಳಿಯಲ್ಲಿ ದೊರೆತ ಶಾತವಾಹನರ

ಮತ್ತು ಅವರ ಮಾಂಡಲೀಕರ ನಾಣ್ಯಗಳನ್ನು, ಪ್ರಾಚ್ಯವಸ್ತು ವಿಶೇಷಗಳನ್ನು ಕೂಲಂಕಷವಾಗಿ ಅಭ್ಯಾಸ ಮಾಡಿದ್ದಾರೆ.

ಚಂದವಳ್ಳಿಯಲ್ಲಿ ಶಾತವಾಹನರ ನಾಣ್ಯಗಳು. ರೋಮನ್ ಚಕ್ರವರ್ತಿಗಳಾದ ಅಗಸ್ಟಸ್ (ಕ್ರಿ.ಪೂ ೨೭–೧೪ ಕ್ರಿ.ಶ) ಮತ್ತು ಟೈಬೀರಿಯಸ್ (ಕ್ರಿ.ಶ. ೧೪–೩೭)ರ ನಾಣ್ಯಗಳು. ಅಚ್ಚೊತ್ತಿದ ನಾಣ್ಯಗಳು, 'ರೌಲೆಟೆಡ್' ಹಾಗೂ ಬಿಳಿಬಣ್ಣದ ಚಿತ್ರಗಳುಳ್ಳ ಮಣ್ಣಿನ ಪಾತ್ರೆಗಳು ನಂತರ ಮಾಡಿದ ಉತ್ಖನನದಲ್ಲಿ ಪುನಃ ದೊರೆತಿವೆ. ಇವರನ್ನು ಆಂಧ್ರ, ಆಂಧ್ರಭೃತರು, ಶಾತಕರ್ಣಿಗಳು ಎಂದು ಕರೆಯಲಾಗಿದೆ. ಈ ಶಾತಕರ್ಣಿಗಳ ಚುಡುಕುಡಾನಂದ, ಮುಡಾನಂದ, ಸಡಕಣಕಳಲಾಯಿ ಮುಂತಾದ ರಾಜ ಸಂತತಿಯವರನ್ನು ಹೆಸರಿಸಬಹುದಾಗಿದೆ. ಇಲ್ಲಿಯ ಚಂದ್ರವಳ್ಳಿ ಪ್ರದೇಶ (ಪಟ್ಟಣ) ಇವನ ರಾಜಧಾನಿಗಳಲ್ಲಿ ಒಂದಾಗಿದ್ದು, ಚೀನಾ ಹಾಗೂ ರೋಮ್ ದೇಶಗಳೊಡನೆ ವಾಣಿಜ್ಯ ಸಂಪರ್ಕವನ್ನು ಹೊಂದಿಲಿತೆಂದು ತಿಳಿದುಬರುತ್ತದೆ. ಅಲ್ಲದೇ ಇಲ್ಲಿ ದೊರೆತ ಶಾತವಾಹನರ ನಾಣ್ಯಗಳ ಮೇಲೆ 'ಪುಳುಮಾಯಿ' ಮಹಾರಥಿ, ಚುಡುಕಾನಂದ, ಮುಡಾನಂದ ಮುಂತಾದ ಹೆಸರುಗಳಿವೆ.

ಪಲ್ಲವರಿಗೆ ಸಂಬಂಧಿಸಿದ ಬಳ್ಳಾರಿ ಜಿಲ್ಲೆಯ ಹಿರೇಹಡಗಲಿಯ ಪ್ರಾಕೃತ ಶಾಸನದಲ್ಲಿ **"ಶಾತವಾಹನೀರಠ್ಠ"** ಎಂಬ ಉಲ್ಲೇಖವಿದೆ. ಶಾತವಾಹನೀ ರಾಷ್ಟ್ರದ **'ಚಿಲ್ಲರೇಕಕೋಡುಂಕೇ'** ಎಂಬ ಗ್ರಾಮವನ್ನು ಪಲ್ಲವ ರಾಜನು ದತ್ತಿಯಾಗಿ ನೀಡಿರುವಂತೆ ಹೇಳಿರುವುದರಿಂದ ಪಲ್ಲವರ ಕಾಲಕ್ಕೆ ಈ ಪ್ರದೇಶವು ಅವರ ಸಾಮ್ರಾಜ್ಯಕ್ಕೆ ಸೇರಿದ್ದರೂ ಪಲ್ಲವರು ತಮ್ಮ ಸಾಮ್ರಾಜ್ಯದ ಭಾಗಗಳನ್ನು ಗುರುತಿಸುವಾಗ ಈ ಭಾಗವನ್ನು **"ಶಾತವಾಹನೀರಠ್ಠ"** ಎಂಬ ಹೆಸರಿನಿಂದಲೇ ಕರೆದಿರುತ್ತಾರೆ ಎಂದು ಕರಣಂ ವಿರೂಪಾಕ್ಷಗೌಡರು ಅಭಿಪ್ರಾಯಪಡುತ್ತಾರೆ.[೪೨] ಶಾತವಾಹನೀರಠ್ಠ ಎಂಬುದು ಪಲ್ಲವರ ಸಾಮ್ರಾಜ್ಯದ ಭಾಗವಾಗಿತ್ತು ಎಂಬುದು ಇದರಿಂದ ವೇದ್ಯವಾಗುತ್ತದೆ.

ಒಟ್ಟಿನಲ್ಲಿ ಚಿತ್ರದುರ್ಗ ಜಿಲ್ಲೆ ಶಾತವಾಹನರ ಆಳ್ವಿಕೆಗೊಳಪಟ್ಟಿದ್ದು. ಕ್ರಿ.ಶ. ಸುಮಾರು ೨೦೦ರ ತರುವಾಯ ಈ ಜಿಲ್ಲೆಯ ಚಂದ್ರವಳ್ಳಿಯನ್ನು ಅವರು ವಾಸಸ್ಥಾನವನ್ನಾಗಿ ಮಾಡಿಕೊಂಡಿರಬಹುದೆಂದು ಹೇಳಬಹುದು. ಶಾತವಾಹನರ ಸಾಂಸ್ಕೃತಿಕ ಅವಶೇಷಗಳು ದೊರೆತ ಪ್ರಮಾಣವನ್ನು ಗಮನಿಸಿದರೆ, ಚಂದ್ರವಳ್ಳಿ ಅವರ ರಾಜಧಾನಿಗಳಲ್ಲಿ ಒಂದಾಗಿತ್ತೆಂದೂ ಊಹಿಸಬಹುದು.[೪೩] ಬನವಾಸಿಯಂತೆ ಚಂದ್ರವಳ್ಳಿಯೂ ಆ ಕಾಲದ ವಾಣಿಜ್ಯ ಕೇಂದ್ರವಾಗಿದ್ದಿರಬಹುದು. ಈ ವಾಣಿಜ್ಯ ಕೇಂದ್ರವು ರೋಮ ಮುಂತಾದ ಹೊರ ದೇಶಗಳೊಡನೆ ವ್ಯಾಪಾರ ಸಂಪರ್ಕವನ್ನಿಟ್ಟುಕೊಂಡಿದ್ದಿತ್ತೆಂದು ಅಲ್ಲಿ ದೊರೆತಿರುವ ಕೆಲ ನಾಣ್ಯಗಳ ಆಧಾರದಿಂದ ಹೇಳಬಹುದು. ಈಗಿನ ಜಗಳೂರು ತಾಲೂಕಿನ ಆಕನೂರು, ಹಾಗು ಹೊಸದುರ್ಗ ತಾಲೂಕಿನ ಮಾಡದಗೆರೆಯಲ್ಲಿ ಇವರ ಕಾಲಕ್ಕೆ ಸೇರಿದ ಮಡಿಕೆ ಚೂರುಗಳು ದೊರೆತಿವೆ. ಅವುಗಳಲ್ಲಿ ಕಪ್ಪು ಕೆಂಪು ಬಣ್ಣದ ಮಡಿಕೆಗಳು ಬಿಳಿ ವರ್ಣದ ರೇಖಾಚಿತ್ರಗಳನ್ನು, ಒಳಗೊಂಡಿವೆ. ಹೀಗೆ ಚಿತ್ರದುರ್ಗ ಜಿಲ್ಲೆಯಲ್ಲಿ ಶಾತವಾಹನರ ಆಳ್ವಿಕೆಗೆ ಸಂಬಂಧಿಸಿದಂತೆ ಹೆಚ್ಚು ಸ್ಪಷ್ಟವಾದ ಆಧಾರಗಳು ದೊರೆತಿವೆ. ಈ ಸಾಂಸ್ಕೃತಿಕ ಅವಶೇಷಗಳನ್ನು ಆಧಾರವಾಗಿಟ್ಟುಕೊಂಡು ಶಾತವಾಹನರ ಆಳ್ವಿಕೆ ಹಿಂದೆ ಈಗಿನ ಚಿತ್ರದುರ್ಗ ಜಿಲ್ಲೆಯ ಕೆಲ ಸ್ಥಳಗಳಿಗೂ ವಿಸ್ತರಿಸಿತ್ತು ಎಂದು ಹೇಳಬಹುದಾಗಿದೆ.

**ಕದಂಬರ ಆಳ್ವಿಕೆ**

ಕರ್ನಾಟಕದ ಚರಿತ್ರೆಯಲ್ಲಿ ಇತರೆ ರಾಜವಂಶಗಳಂತೆ ಕದಂಬರು ಕ್ರಿ.ಶ. ೪ ರಿಂದ ೬ನೇ ಶತಮಾನದವರೆಗೆ ಆಳ್ವಿಕೆ ನಡೆಸಿ, ತಮ್ಮದೇ ಆದ ಸ್ಥಾನವನ್ನು ಪಡೆದುಕೊಂಡಿದ್ದಾರೆ. ಇಲ್ಲಿ ಮುಖ್ಯವಾಗಿ ಚರ್ಚೆಗೆ ಗ್ರಾಸವಾಗಬೇಕಿರುವುದು ಚಿತ್ರದುರ್ಗ ಜಿಲ್ಲೆಯವರೆಗೆ ಇವರ ಆಳ್ವಿಕೆ ವಿಸ್ತರಿಸಿತ್ತೆಂಬುದು. ಇದಕ್ಕೆ ಆಧಾರವಾಗಿ ಇಲ್ಲಿ ಶಾಸನಗಳು ದೊರೆತಿವೆ. ಹಾಗೆಯೇ ಇವುಗಳಿಗೆ ಪೂರಕವೆಂಬಂತೆ ಕೆಲ ಸ್ಮಾರಕಗಳು ಸಹ ಉಳಿದುಕೊಂಡಿವೆ. ಹಾಗಾಗಿ ಲಭ್ಯ ಆಧಾರಗಳನ್ನು ಅನುಸರಿಸಿ, ಇವರ ಚರಿತ್ರೆಯನ್ನು ರಚಿಸುವುದು ಅನಿವಾರ್ಯವಾಗಿದೆ.

ಶಾತವಾಹನರ ಆಳ್ವಿಕೆ ೩ನೇ ಶತಮಾನದ ಹೊತ್ತಿಗೆ ಮುಕ್ತಾಯಗೊಂಡು ಅವರ ಸಾಮ್ರಾಜ್ಯ ಹರಿದು ಹಂಚಿ ಹೋಗುತ್ತಿದ್ದ ಹಾಗೆಯೇ ಈ ಸಾಮ್ರಾಜ್ಯದ ದಕ್ಷಿಣ ಮತ್ತು ಪಶ್ಚಿಮ ಭಾಗಗಳ ಒಡೆತನವು ಆಗತಾನೆ ತಲೆ ಎತ್ತಿದ ಕದಂಬರ ವಶವಾಯಿತು. ಹೀಗೆ ಕದಂಬರ ಅಧೀನಕ್ಕೊಳಪಟ್ಟ ಭಾಗಗಳಲ್ಲಿ ಚಿತ್ರದುರ್ಗ ಜಿಲ್ಲೆಯೂ ಒಂದು ಎನ್ನಬಹುದು. ನಂತರ ಬನವಾಸಿಯ ಕದಂಬರಿಗೆ ಸೇರಿ ಜಿಲ್ಲೆಯ ಬಹುಭಾಗ ಕದಂಬಾಳಿಗೆ ಸಾಸಿರದಲ್ಲಿ ವಿಲೀನವಾಯಿತು. ೩-೪ನೇ ಶತಮಾನದಲ್ಲಿ ಬನವಾಸಿ ಕದಂಬ ಶಾಖೆಯ ಮಯೂರಶರ್ಮನು ಈ ಪ್ರದೇಶದ ಮೇಲೆ ಒಡೆತನ ಪಡೆದು, ಚಂದ್ರವಳ್ಳಿ ಪ್ರದೇಶದಲ್ಲಿ (ಭೈರವೇಶ್ವರನ ದೇವಾಲಯದ ಬಳಿ) ಒಂದು ದೊಡ್ಡ ಕೆರೆ (ತಟಾಕ) ಕಟ್ಟಿಸಿ ಬಂಡೆ ಶಾಸನ ಹಾಕಿಸಿದ.[೪೪] ಕದಂಬರು ಸುಮಾರು ಆರನೇ ಶತಮಾನದವರೆಗೆ ಆಳ್ವಿಕೆ ನಡೆಸಿದರು.

ಈ ವಂಶದಲ್ಲಿ ಕೆಲ ಅರಸರು ಆರಂಭದಲ್ಲಿ ಆಳ್ವಿಕೆ ನಡೆಸಿದರೂ ಸಹ ಇವರಲ್ಲಿ ಅತ್ಯಂತ ಪರಾಕ್ರಮಿಯಾಗಿ ಅಂದು ಪ್ರಬಲರಾಗಿದ್ದ ಪಲ್ಲವರನ್ನು ಸದೆಬಡಿದು, ವಿಸ್ತಾರವಾದ ರಾಜ್ಯವನ್ನು ಕಟ್ಟಿ, ಕದಂಬ ರಾಜ್ಯ ಸಂಸ್ಥಾಪಕನೆಂದು ಮಯೂರಶರ್ಮ ಕೀರ್ತಿಪಡೆದನು, ಸೇಡು ತೀರಿಸಿಕೊಳ್ಳಲು ಪಲ್ಲವರೊಡನೆ ಹೋರಾಡಿ ಸ್ವತಂತ್ರವಾದ ರಾಜ್ಯ ಸ್ಥಾಪಿಸಿದ ವಿವರ ತಾಳಗುಂದದ ಶಾಂತಿವರ್ಮನ ಶಾಸನದಲ್ಲಿ ವರ್ಣಿತವಾಗಿದೆ. ಮೊಳಕಾಲ್ಮುರು ತಾಲೂಕಿನ ಒರಾರ ಗುಡ್ಡ ಮತ್ತು ನುಂಕಪ್ಪನಗುಡ್ಡ, ಕದಂಬ ಗುಡ್ಡಗಳನ್ನು ತ್ರಿಕೂಟ ಪರ್ವತಗಳೆಂದು ಕರೆಯಲಾಗುತ್ತದೆ. ಪಲ್ಲವರಿಂದ ಅವಮಾನಿತನಾದ ಮಯೂರಶರ್ಮನು ಮಯೂರ ವರ್ಮನಾಗಿ ತನ್ನ ಹೆಸರನ್ನು ಬದಲಿಸಿಕೊಂಡು ಈ ಮೇಲೆ ಹೇಳಿದ ಒರಾರ ಗುಡ್ಡದ ಮೇಲೆ ಕದಂಬ ರಾಜ್ಯ ಸ್ಥಾಪಿಸಿದ. ಆ ಗುಡ್ಡವನ್ನು ಹಿರೇ ಆರ್ಯರ ಗುಡ್ಡ ಇಲ್ಲವೇ ಕದಂಬ ಗುಡ್ಡ ಎಂದು ಕರೆಯುವ ಪ್ರತೀತಿ ಇದೆ.[೪೫] ಆದರೆ ಮಯೂರ ಶರ್ಮನ ಕಾಲದಲ್ಲಿಯೇ ಅವನು ಬರೆಯಿಸಿದ ಶಾಸನಗಳು ಬೇರೆಲ್ಲೂ ದೊರೆಯದಿದ್ದರೂ ಚಿತ್ರದುರ್ಗ ಬೆಟ್ಟದ ಪಶ್ಚಿಮ ತಪ್ಪಲಿನಲ್ಲಿನ ಚಂದ್ರವಳ್ಳಿಯ ಬಳಿ ಇರುವ ಎತ್ತರವಾದ ಬಂಡೆಯ ಮೇಲೆ ಈತನ ಶಾಸನ ದೊರಕಿದೆ. ಈ ಶಾಸನ ಚಿಕ್ಕದಾದರೂ ಕದಂಬರ ಆರಂಭದ ಇತಿಹಾಸವನ್ನು ತಿಳಿಸುವಲ್ಲಿ ಅಮೂಲ್ಯವೆನಿಸಿದೆ.[೪೬] ಕದಂಬರ ಶಾಸನಗಳು ಸಾಮಾನ್ಯವಾಗಿ ತಮ್ಮ ಮೂಲ ಪುರುಷನನ್ನು ಮಯೂರವರ್ಮನೆಂದೇ ಉಲ್ಲೇಖಿಸುತ್ತವೆ.

ಇತರೆಡೆಯಂತೆ ಕದಂಬರ ಮಹತ್ವದ ಶಾಸನಗಳು ಚಿತ್ರದುರ್ಗ ಜಿಲ್ಲೆಯೊಳಗಡೆ ದೊರೆತಿದ್ದು, ಕದಂಬರ ಆಳ್ವಿಕೆಯಲ್ಲಿ ಈ ಜಿಲ್ಲೆ ವಿಶಿಷ್ಟ ಸ್ಥಾನ ಪಡೆದುಕೊಂಡಿತ್ತೆಂದು ಹೇಳಬಹುದು. ಮೊಳಕಾಲ್ಮುರು ಸಮೀಪದ ನುಂಕಪ್ಪನ ಬೆಟ್ಟದಿಂದ ಈ ವಂಶಕ್ಕೆ ಸೇರಿದ ಅಜವರ್ಮನು ಚಾಲುಕ್ಯರ ಜಯಸಿಂಹನ ಸಾಮಾಂತನಾಗಿ ಆಳ್ವಿಕೆ ಮಾಡಿ ಅಲ್ಲಿ ಆತ ಮಲ್ಲಿಕಾರ್ಜುನ ಮೊದಲಾದ ದೇವಾಲಯಗಳನ್ನು ಕಟ್ಟಿಸಿದ ವಿವರಗಳನ್ನು ಆತನಿಂದ ಹೊರಡಿಸಿದ ಶಾಸನಗಳು ಉಲ್ಲೇಖಿಸುತ್ತವೆ.[೪೭] ಹಿಂದೆ ಈ ಜಿಲ್ಲೆಯ ಭಾಗವಾಗಿದ್ದ ಜಗಳೂರು ತಾಲೂಕು ಅಣಜಿಯಲ್ಲಿ ದೊರೆತಿರುವ ಶಿವಸ್ಕಂದವರ್ಮನ ಶಾಸನವು ಕದಂಬರ ಇತರೆ ಶಾಸನಗಳ ರಚನಾ ಶೈಲಿಯಲ್ಲಿಯೇ ರಚಿತವಾಗಿದೆ. ಈ ಶಾಸನವು ಐತಿಹಾಸಿಕವಾಗಿ ಹಾಗೂ ವಸ್ತು ವಿಶೇಷತೆಯಲ್ಲಿ ವಿಶಿಷ್ಟವಾದುದಾಗಿದೆ. ನೊಣಕ್ಕಸ ಪಲ್ಲವನಿಗೂ, ಕದಂಬ ಕೃಷ್ಣ ವರ್ಮನಿಗೂ ತುಮುಲ ಯುದ್ಧ ನಡೆದು ಆ ಯುದ್ಧದಲ್ಲಿ ಕೃಷ್ಣವರ್ಮನ ಸೈನವು ಸಂಪೂರ್ಣವಾಗಿ ಸೋತುಹೋದುದನ್ನು ಈ ಶಾಸನ ವರ್ಣಿಸುತ್ತದೆ. ಹಾಗೆ ಸೋಲುಂಟಾದಾಗ ಶಿವಾನಂದ ವರ್ಮನು ಭಗ್ನ ಹೃದಯನಾಗಿ, ದರ್ಭಶಯನನಾಗಿ, ಭೋಗ ವಿಶಕ್ತ ಮಾನಸನಾಗಿ ಸ್ವರ್ಗ ಪ್ರಾಪ್ತನಾದ ವಿಷಯವನ್ನು ಶಾಸನ ಹೃದಯಂಗಮವಾಗಿ ವರ್ಣಿಸುತ್ತದೆ.[೪೮] ಇಲ್ಲೆ ನೊಣಕ್ಕಸ ಪಲ್ಲವನೊಡನೆ ಯುದ್ಧವಾಡಿದ ಕದಂಬ ಕೃಷ್ಣವರ್ಮನು ತ್ರಿಪರ್ವತದಿಂದ ಆಳುತ್ತಿದ್ದ, ಈತ ಕದಂಬರ ಒಂದು ಶಾಖೆಗೆ ಸೇರಿದವನೆಂದು ತಿಳಿಯಲಾಗಿದೆ. ಈ ಸೋಲಿನ ಫಲವಾಗಿ ಮರಣ ಹೊಂದಿದ ಶಿವಾನಂದವರ್ಮ ಅಥವಾ ಶಿವಸ್ಕಂದವರ್ಮನು ಕೇಕೆಯ ಕುಲದವನೆಂದೂ, ಪರಮ ಮಹೇಶ್ವರನೆಂದೂ, ಸೋಮವಂಶಕ್ಕೆ ಸೇರಿದವನೆಂದೂ ಶಾಸನ ತಿಳಿಸುತ್ತದೆ. ಬಹುಶಃ ಕೇಕೆಯ ರಾಜಪುತ್ರಿಯನ್ನು ಮದುವೆಯಾಗಿದ್ದ ಕೃಷ್ಣವರ್ಮನಿಗೆ ಇವನು ಪಲ್ಲವರ ವಿರುದ್ಧ ಯುದ್ಧದಲ್ಲಿ ಸಹಯ ನೀಡಿ ಅಲ್ಲಿ ಉಂಟಾದ ಸೋಲಿನಿಂದ ನಿರಾಸೆಗೊಂಡು ತನ್ನ ಪ್ರಾಣಾರ್ಪಣೆ ಮಾಡಿದಂತೆ ತೋರುತ್ತದೆ. ಇವನನ್ನು 'ವೀರ್ಯ ಶೌರ್ಯ ವಿಕ್ರಮ ಪ್ರತಾಪ'ಗಳಿಂದ ಕೂಡಿದವನೆಂದು ಶಾಸನ ಶ್ಲಾಘಿಸುತ್ತದೆ.[೪೯] ಈ ಶಾಸನದ ಭಾಷೆ ಸಂಸ್ಕೃತವಾಗಿದ್ದರೂ ಶೈಲಿ ಸರಳವಾಗಿದೆ. ಈ ಶಾಸನದ ಕೊನೆಯಲ್ಲಿ ಬರುವ 'ಮನುಷ್ಯನ ಯಶಸ್ಸು ಎಲ್ಲಿಯವರೆಗೆ ಲೋಕದಲ್ಲಿ ಪ್ರಚಲಿತದಲ್ಲಿರುವುದೋ ಅಲ್ಲಿಯವರೆಗೆ ಅವನು ಸ್ವರ್ಗ ಸುಖವನ್ನು ಅನಭವಿಸುತ್ತಾನೆ' ಎಂಬ ವಾಕ್ಯ ಸಾರ್ವಕಾಲಿಕ ಸತ್ಯವಾಗಿದೆ. ರಾಜಕೀಯ ಚರಿತ್ರೆಯ ಜೊತೆಗೆ ಸಾಮಾಜಿಕ, ಧಾರ್ಮಿಕ ನಡವಳಿಕೆಗಳು ಹೇಗಿದ್ದವು ಎಂಬುದಕ್ಕೆ ಈ ಶಾಸನ ಕೈಗನ್ನಡಿ ಎನ್ನಬಹುದು. ಅಣಜಿಯಲ್ಲಿನ ಕೋಟೆ ಮತ್ತು ಇತರ ಕೆಲ ಅವಶೇಷಗಳು ಇವರ ಕಾಲದ್ದೆನ್ನಬಹುದು.[೫೦]

ಚಿತ್ರದುರ್ಗ ತಾಲೂಕಿನ 'ಕಾಶೀಪುರ' ಎಂಬ ಗ್ರಾಮದಲ್ಲಿ ಮೂರು ಹಲಗೆಯುಳ್ಳ ಸಿಂಹ ಲಾಂಛನವುಳ್ಳ ರವಿವರ್ಮನ ತಾಮ್ರ ಶಾಸನ ದೊರೆತಿದೆ. ಇವನ ಹಲವು ತಾಮ್ರ ಶಾಸನಗಳು, ಶಿಲಾ ಶಾಸನಗಳು ಬೇರೆಡೆ ದೊರೆತಿವೆ. ರವಿವರ್ಮನ ಕಾಲಕ್ಕೆ ಉಚ್ಚಂಗಿಯು ಬನವಾಸಿ ಕದಂಬರ ಮತ್ತೊಂದು ಮುಖ್ಯ ಪಟ್ಟಣವಾಗಿದ್ದಿತು. ರವಿವರ್ಮನ ತಾತ ಕುಮಾರವರ್ಮನು ಉಚ್ಚಂಗಿಯಿಂದ ಆಳಿದ ಮನೆತನದ ಮೂಲಪುರುಷನಾಗಿದ್ದಾನೆಂದು 'ಕದಂಬ ಕುಲ' ಬರೆದ ಮೊರೇಸ್ ಅವರ ಅಭಿಪ್ರಾಯ. ಅದರೆ ಬನವಾಸಿಯಿಂದಲೇ ಆಳಿದ ರವಿವರ್ಮನಂತೆ ಉಚ್ಚಂಗಿಯಿಂದಲೂ ಶಾಸನಗಳನ್ನು

ನೀಡಿರುವುದನ್ನು ನೋಡಿದರೆ ಉಚ್ಚಂಗಿಯು ಕದಂಬ ಪ್ರಾಂತ್ಯದ ಒಂದು ಮುಖ್ಯ ಪಟ್ಟಣವಾಗಿದ್ದು, ಮಾಂಧಾತ, ರವಿವರ್ಮ ಮೊದಲಾದವರು ಯುವರಾಜರಾಗಿದ್ದಾಗ ಇಲ್ಲಿ ಆಳುತ್ತಿದ್ದಿರಬೇಕು. ಕಾಶೀಮರದ ಶಾಸನವನ್ನು ರವಿವರ್ಮನು ತನ್ನ ಆಳ್ವಿಕೆಯ ಆರಂಭ ಕಾಲದಲ್ಲಿಯೇ ಬರೆಸಿರಬೇಕು. ಇದರಲ್ಲಿ ಅವನ ಬಿರುದು, ವರ್ಣನೆಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಈ ದುರ್ಮಾಯ ಎಂಬ ಗ್ರಾಮವು ಬಹುಶಃ ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲೂಕಿನಲ್ಲಿರುವ ದುಮ್ಮಿ ಆಗಿರಬೇಕು. ಆಸಂದಿ ವಿಷಯವು ಚಿತ್ರದುರ್ಗ ಜಿಲ್ಲೆಯ ದಕ್ಷಿಣ ಭಾಗಗಳನ್ನು ಅಂದರೆ ಕಡೂರು ತಾಲೂಕಿನ ಭಾಗಗಳನ್ನೊಳಗೊಂಡಿತ್ತು.

ಈ ಉಚ್ಚಂಗಿ ಪರ್ವತದ ಪಶ್ಚಿಮಕ್ಕೆ ಜಾಲಿಯ ಮರದಡಿಯಲ್ಲಿ ಅತ್ಯಂತ ಪ್ರಾಚೀನ ಕಾಲದ ಶಾಸನ ದೊರೆತಿದ್ದು, ಅದರ ಪ್ರಕಾರ ಕದಂಬ ರಾಜರಲ್ಲಿ ಒಂದನೇ ಕೃಷ್ಣನು ಅಶ್ವಮೇಧಯಾಗ ಮಾಡಿದ್ದು ತಿಳಿದು ಬರುತ್ತದೆ. ಕದಂಬರ ಆಳ್ವಿಕೆಯನ್ನು ನಿರ್ವಚಿಸುವಾಗ ಈ ಜಿಲ್ಲೆಯು ಅವರ ಅಧೀನಕ್ಕೊಳಪಟ್ಟಿತ್ತೆಂಬುದನ್ನು ಮನಗಾಣಬೇಕು.



**ಬಾದಾಮಿ ಚಾಲುಕ್ಯರ ಆಳ್ವಿಕೆ**

ಬಾದಾಮಿ ಚಾಲುಕ್ಯರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಚಿತ್ರದುರ್ಗ ಜಿಲ್ಲೆಯ ಕೆಲವು ಪ್ರದೇಶಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದರೆಂಬುವುದನ್ನು ಇಲ್ಲಿನ ಶಾಸನಗಳಿಂದ ತಿಳಿಯಬಹುದು. ಜಯಸಿಂಹನು ಬಾದಾಮಿ ಚಾಲುಕ್ಯ ವಂಶದ ಮೂಲ ಪುರುಷ. ಇವನ ಬಗ್ಗೆ ಖಚಿತ ಸಂಗತಿಗಳು ನಮಗೆ ತಿಳಿದು ಬಂದಿಲ್ಲ. ಇವನ ನಂತರ ಅಧಿಕಾರಕ್ಕೆ ಬಂದ ಮೊದಲನೆಯ ಪುಲಕೇಶಿಯು (ಕ್ರಿ.ಶ ೫೪೦ ರಿಂದ ೫೬೬ರವರೆಗೆ) ಸಮರ್ಥ ದೊರೆ ಎನಿಸಿ, ಉತ್ತಮ ಕಾರ್ಯಗಳನ್ನು ಕೈಗೊಂಡನೆಂದು ಬಾದಾಮಿ ಶಾಸನದಿಂದ ತಿಳಿದು ಬರುತ್ತದೆ.[೫೧] ಈತನಿಗೆ ಕೀರ್ತಿವರ್ಮ, ಮಂಗಳೇಶ ಎಂಬ ಇಬ್ಬರು ಮಕ್ಕಳಿದ್ದು, ತಂದೆಯ ಮರಣದ ನಂತರ ಆಳ್ವಿಕೆ ನಡೆಸಿದ್ದರೆಂದು ತಿಳಿದು ಬರುತ್ತದೆ. ಇವರಾದ ಬಳಿಕ ಪಟ್ಟಕ್ಕೆ ಬಂದ ಇಮ್ಮಡಿ ಪುಲಿಕೇಶಿಯು ಈ ವಂಶದಲ್ಲಿಯೇ ಶ್ರೇಷ್ಠ ಚಕ್ರವರ್ತಿ.[೫೨] ತಂದೆಯ ಸಾವಿನಿಂದ ನೊಂದ ಪಲ್ಲವರ ನರಸಿಂಹವರ್ಮನಿಗೂ ಮತ್ತು ಇಮ್ಮಡಿ ಪುಲಕೇಶಿಗೂ ನಡೆದ ಯುದ್ಧದಲ್ಲಿ ಪುಲಿಕೇಶಿ ಮರಣ ಹೊಂದಿದ.[೫೩]

ಇಮ್ಮಡಿ ಪುಲಕೇಶಿಯ ಮರಣದ ನಂತರ ಈತನ ಮಗ ಒಂದನೇ ವಿಕ್ರಮಾದಿತ್ಯನು (ಕ್ರಿ.ಶ ೬೫೫ ರಿಂದ ೬೮೧)ಆಳ್ವಿಕೆ ನಡೆಸಿ, ಚಾಲುಕ್ಯ ಮನೆತನದ ಕೀರ್ತಿ ಮತ್ತು ಪ್ರತಿಷ್ಠೆಗಳನ್ನು ಪುನಃ ಉಳಿಸಿಕೊಂಡನು.[೫೪] ಇವನ ನಂತರ ವಿನಯಾದಿತ್ಯನು (ಕ್ರಿ.ಶ.೬೮೧ ರಿಂದ ೬೯೬) ಅಧಿಕಾರಕ್ಕೆ ಬಂದನು. ಇವನ ಕಾಲಕ್ಕೆ ಸೇರಿದ ಶಾಸನವೊಂದು ಹರಿಹರದಲ್ಲಿ ದೊರೆತಿದೆ.[೫೫] ಈ ಶಾಸನವು ಇವರ ವಂಶದ ಮೂಲವನ್ನು ಈ ಮುಂದಿನಂತೆ ವಿವರಿಸುತ್ತದೆ. ಚಾಲುಕ್ಯರು ಮಾನವ್ಯ ಗೋತ್ರದವರು. ಹಾರತಿ ಪುತ್ರರು, ಏಳು ಲೋಕಗಳಿಗೂ ತಾಯಂದಿರಾದ, ಸಪ್ತಮಾತೃಕೆಯರಿಂದ ಏಳಿಗೆಯನ್ನು ಪಡೆದವರು. ಕಾರ್ತಿಕೇಯನಿಂದ ಕಲ್ಯಾಣ ಪರಂಪರೆಯುಳ್ಳವರು. ಭಗವಂತನಾದ ನಾರಾಯಣನ ಅನುಗ್ರಹದಿಂದ ಪಡೆದ ವರಹ ಲಾಂಛನವನ್ನು ಶತ್ರುಗಳನ್ನು ಕಂಡಾಕ್ಷಣವೇ ಸೋತ ಕಾರಣದಿಂದ ಸಮಸ್ತ ಭೂ-ಮಂಡಲವನ್ನು ಗೆದ್ದವರು. ಇಂತಹ ಚಾಲುಕ್ಯ ಕುಲದಲ್ಲಿ ಒಂದನೇ ಪುಲಕೇಶಿ ನಂತರ

ಇವನ ಮಗ ಒಂದನೇ ಕೀರ್ತಿವರ್ಮ ಇವನಾದ ಮೇಲೆ ಇಮ್ಮಡಿ ಪುಲಿಕೇಶಿ, ಇವನ ನಂತರ ಇವನ ಮಗ ವಿಕ್ರಮಾದಿತ್ಯ, ಇವನ ನಂತರ ಇವನ ಮಗ ವಿನಿಯಾದಿತ್ಯ ಅಧಿಕಾರಕ್ಕೆ ಬಂದರು. ಇತನು ಅನೇಕ ಬಿರುದುಗಳಂದ ರಾಜ್ಯವಾಳುತ್ತಿರುವಾಗ ಶಖವರ್ಷ ೬೧೬ರಲ್ಲಿ (ಕ್ರಿ.ಶ.೬೯೪) ಹರಿಹರದ ಸಮೀಪ ಕರಂಜಪತ್ರ ಗ್ರಾಮದಲ್ಲಿ ಸೈನ್ಯವನ್ನು ಬೀಡು ಬಿಟ್ಟಿರಲು ಅಲ್ಲಿನ ಸಾಮಂತ ಅಳುಪ ದೊರೆಯ ವಿಜ್ಞಾಪನೆಯಂತೆ ಕಾರ್ತಿಕ ಮಾಸದ ಹುಣ್ಣಿಮೆಯಂದು ವಾತ್ಸಸ ಗೋತ್ರದ ಸೋಮಯಾಜಿ ಶ್ರೀ ವರ್ಮನ ಮೊಮ್ಮಗ ಮಾರ ಶರ್ಮ ಪುತ್ರ ವೇದ ವೇದಾಂಗ ಪಾರಂಗತನಾದ ಈಶಾನ ಶರ್ಮನಿಗೆ ಬನವಾಸಿ ಪ್ರಾಂತ್ಯದ 'ಎಡೆವೊರಿಲ್' ಭಾಗದ, 'ಕಿರುಕಾಗಾಮಾಸಿ' ಎಂಬ ಗ್ರಾಮವನ್ನು ಎಲ್ಲಾ ಭಾಧೆಗಳಿಂದ ಪರಿಹಾರ ಮಾಡಿ ಹಲವು ದೇವಾಲಯಕ್ಕೆ ದಾನ ನೀಡಲಾಯಿತು. ಸಿರಿಗಾಳು, ಕವ್ವೆಸುರಿಗೊಳ, ಪುಲಿವುತು, ಪೆರ್ಬುತ್ತು, ಆಲ್ದೊದೆ, ನಿತ್ತಕೊಕಳ, ಆಲ್ಗೊಳ, ನೇತೆಲ್ಗೆರೆ, ಕುರುಪಕೆರೆ, ಅರಕಟ್ಟ ಇವು ದಾನ ನೀಡಿದ ಗ್ರಾಮದ ಮೇರೆಗಳಾಗಿವೆ. ಇದೇ ಶಾಸನದಲ್ಲಿ ಚಾಲುಕ್ಯ ರಾಜರ ಪರಾಕ್ರಮವನ್ನು ಹೇಳಿದೆ. ಮೊದಲನೆಯ ಪುಲಕೇಶಿ ಅಶ್ವಮೇಧವನ್ನು ಮಾಡಿದ ಆವನ ಸಾಮರ್ಥ್ಯಕ್ಕೆ ದ್ಯೋತಕವಾಗಿದೆ.

ಕ್ರಿಪೂ.೬೮೯ರ ಚಾಲುಕ್ಯ ವಿನಯಾದಿತ್ಯನ ಶಾಸನದಲ್ಲಿ ಅವನ ಪಂಪಾತೀರ್ಥ ವಾಸದ ಉಲ್ಲೇಖವಿದೆ. ಈತನ ಕ್ರಿಪೂ.೬೯೧ರ ತೆಗರ್ಚೆಡು ಮತ್ತೊಂದು ಶಾಸನವು ಸಹ ಚಿತ್ರದುರ್ಗ ಜಿಲ್ಲೆಯಲ್ಲಿ ದಾನ ನೀಡಿದ್ದನ್ನು ಉಲ್ಲೇಖಿಸಿದೆ. ಪ್ರಾಚೀನ ಕಾಲದಿಂದಲೂ ಚಿತ್ರದುರ್ಗ ಜಿಲ್ಲೆಯು ವಿದ್ಯಾ ಮತ್ತು ಧಾರ್ಮಿಕ ಕೇಂದ್ರವಾಗಿದೆ. ಇವನ ನಂತರ ಇವನ ಮಗ ವಿಕ್ರಮಾದಿತ್ಯ, ಇವನ ನಂತರ ಇವನ ಮಗ ವಿನಿಯಾದಿತ್ಯ ಅಧಿಕಾರಕ್ಕೆ ಬಂದನು.

ಇವನಾದ ಮೇಲೆ ಇಮ್ಮಡಿ ಪುಲಿಕೇಶಿ ಹರ್ಷನನ್ನು ಗೆದ್ದ ವಿಷಯ ಇಲ್ಲಿ ಗಂಭೀರವಾಗಿ ಉಲ್ಲೇಖಗೊಂಡಿದೆ. ಆದರೆ ಪುಲಕೇಶಿಯ ಕೊನೆಯ ದಿನಗಳು ಆತಂಕಕಾರಿಯಾಗಿದ್ದವು. ಪಲ್ಲವ ನರಸಿಂಹವರ್ಮನು ವಾತಾಪಿಯನ್ನು ಆಕ್ರಮಿಸಿಕೊಂಡು ಕೆಲವು ಕಾಲ ತಂಗಿದ್ದನು. ಪಲ್ಲವರಿಂದ ಚಾಲುಕ್ಯರಿಗೆ ಆದ ಅಪಮಾನವನ್ನು ಪರಿಹರಿಸಿ ಪಲ್ಲವರಾಜನನ್ನು ಹಿಮ್ಮೆಟ್ಟಿಸಿದವನು ಪುಲಕೇಶಿಯ ಮಗ ವಿಕ್ರಮಾದಿತ್ಯ. ಇವನಿಗೆ ಬಲಭುಜನಾಗಿ ನಿಂತು ಸಹಾಯ ಮಾಡಿದವನು ಅವನ ಮಗ ವಿನಿಯಾದಿತ್ಯ. ಈ ಶಾಸನದಿಂದ ವಿನಯಾದಿತ್ಯನ ರಾಜನೀತಿ ಮತ್ತು ಅವನ ಪರಾಕ್ರಮ, ರಾಜ ವಿಸ್ತಾರ ಸ್ವರೂಪಗಳು ಸ್ಪಷ್ಟವಾಗುತ್ತವೆ. ಎರಡನೇ ವಿಕ್ರಮಾದಿತ್ಯನ ಆಳ್ವಿಕೆ ನಂತರ ಎರಡನೆಯ ಕೀರ್ತಿವರ್ಮ (ಕ್ರಿ.ಶ.೭೪೪-೭೫೭) ಅಧಿಕಾರಕ್ಕೆ ಬಂದನು.[೫೬] ಚಾಲುಕ್ಯ ವಂಶ ಇವನ ಕಾಲದಲ್ಲಿ ಅವನತಿಯ ಹಾದಿಯನ್ನಿಡಿಯಿತು. ದಿನೇ ದಿನೇ ರಾಜ್ಯದ ಆಡಳಿತವು ಕುಸಿಯ ತೊಡಗಿದಾಗ ಅನೇಕ ಸಾಮಂತರು ಸ್ವತಂತ್ರ್ಯರಾಗತೊಡಗಿದರು. ರಾಷ್ಟ್ರಕೂಟ ಮನೆತನದ ದಂತಿದುರ್ಗನು ಕೀರ್ತಿವರ್ಮವನ್ನು ಸೋಲಿಸಿ, ತನ್ನ ಅಧಿಪತ್ಯವನ್ನು ಸ್ಥಾಪಿಸಿದನು. ಈ ಮೇಲಿನ ಶಾಸನಗಳ ಆಧಾರದಿಂದ ಬಾದಾಮಿ ಚಾಲುಕ್ಯರ ಆಳ್ವಿಕೆಯು ಈಗಿನ ಚಿತ್ರದುರ್ಗ ಜಿಲ್ಲೆಯವರೆಗೆ ವಿಸ್ತರಿಸಿತ್ತು ಎಂದು ಹೇಳಬಹುದು.

**ರಾಷ್ಟ್ರಕೂಟರ ಆಳ್ವಿಕೆ**

ಭಾರತದಲ್ಲೇ ಯಶಸ್ವಿ ರಾಜಕೀಯ ಶಕ್ತಿಯಾಗಿ ಮೆರೆದುದು ರಾಷ್ಟ್ರಕೂಟ ಸಾಮ್ರಾಟರ ಹಿರಿಮೆ. ಸಾಮ್ರಾಜ್ಯವು ಇಂದಿನ ಮಹಾರಾಷ್ಟ್ರ, ಕರ್ನಾಟಕ ಮಧ್ಯ ಪ್ರದೇಶದ ಹಲವು ಭಾಗಗಳು ಮತ್ತು ಆಂಧ್ರಪ್ರದೇಶ. ತಮಿಳುನಾಡಿನ ಕೆಲವು ಭಾಗಗಳನ್ನು ಒಳಗೊಂಡಿದ್ದಿತು. ರಾಷ್ಟ್ರಕೂಟರ ಪ್ರಾಬಲ್ಯವು ಎಂಟರಿಂದ ಹತ್ತನೆಯ ಶತಮಾನದ ಕೊನೆಯವರೆಗೂ ಮುಂದುವರಿದಿತ್ತು. ಇವರು ವಿಂಧ್ಯದ ಉತ್ತರ ಮತ್ತು ದಕ್ಷಿಣಗಳ ಅಸ್ಥಿರ ರಾಜಕೀಯದಲ್ಲಿ ನಿರ್ಣಾಯಕ ಪಾತ್ರವನ್ನು ನಿರ್ವಹಿಸಿದರು. ಉತ್ತರದಲ್ಲಿ ಅವರು ಮಾಡಿದ ಸಾಹಸಗಳು, ಪಡೆದ ಗೆಲುವುಗಳು ವಿಶೇಷವಾಗಿ ಮನ್ನಣೆಗೆ ಪಾತ್ರವಾದದ್ದೇ ಅಲ್ಲದೆ, ದಕ್ಷಿಣದ ಶಕ್ತಿಯು ಉತ್ತರದಲ್ಲಿ ಹತೋಟಿಯನ್ನು ಇಟ್ಟುಕೊಂಡ ಸಂದರ್ಭ ಅಪೂರ್ವ ನಿರ್ದೇಶನವಾಯಿತು. ಈ ಕಾಲದಲ್ಲಿ ಸಮಾಜೋ-ಧಾರ್ಮಿಕ, ಆರ್ಥಿಕ ಮತ್ತು ಕಲೆ, ಸಾಹಿತ್ಯ ಕ್ಷೇತ್ರಗಳು ಸಮೃದ್ಧವಾದುವು.

ರಾಷ್ಟ್ರಕೂಟ ಮನೆತನಗಳಲ್ಲಿ ಮಳಖೇಡದ ಶಾಖೆ ಪ್ರಮುಖವಾದುದು.[೫೭] ಚಿತ್ರದುರ್ಗ ಜಿಲ್ಲೆಯಲ್ಲಿ ಇವರ ಆಳ್ವಿಕೆ ಸುಮಾರು ಕ್ರಿ.ಶ.೭೯೮ರಿಂದ ಕ್ರಿ.ಶ.೯೮೨ರವರೆಗೆ ಇದ್ದಿತೆಂದು ಈ ಜಿಲ್ಲೆಯ ವಿವಿಧ ಕಡೆ ದೊರೆತ ಶಾಸನಗಳು ದೃಢಪಡಿಸಿವೆ. ಚಾಲುಕ್ಯ ಕುಟುಂಬದ ಎರಡನೇ ತ್ರೈಲೊಕ್ಯನಿಂದ ರಾಷ್ಟ್ರಕೂಟರ ಅರಸ ಎರಡನೇ ಕರ್ಕನು ಯುದ್ಧದಲ್ಲಿ ಸೋತು ರಾಜ್ಯ ಕಳೆದುಕೊಂಡನು. ಕ್ರಿ.ಶ.೯೫ರ ಬಾಗಳಿ ಶ್ರೀ ಕಲ್ಲೇಶ್ವರ ದೇವಾಲಯದ ಒಂದು ಶಾಸನದ ಪ್ರಕಾರ ಚಾಲುಕ್ಯರ ಸಾಮಂತ ಅರಸ ರಾಷ್ಟ್ರಕೂಟರ ಮೂರನೇ ಕೃಷ್ಣ ಕ್ರಿ.ಶ.೯೩೯ ರಿಂದ ೯೬೭ರವರೆಗೆ ಕೋಗಳಿ-೫೦೦ಕ್ಕೆ ಒಡೆಯನಾಗಿದ್ದನು. ಈ ಕೋಗಳಿ ಪ್ರದೇಶ ಈಗಿನ ಹರಪನಹಳ್ಳಿ, ಮತ್ತು ಬಳ್ಳಾರಿ ಜಿಲ್ಲೆಯ ಕೆಲ ಪ್ರದೇಶಗಳನ್ನು ಒಳಗೊಂಡಿತ್ತು. ಇದೇ ದೇವಾಲಯದ ಕ್ರಿ.ಶ.೯೭೨-೯೭೩ರ ಶಾಸನವು ಈ ವಂಶದ ಖೊಟ್ಟಿಗನ ವಿಚಾರವನ್ನು ತಿಳಿಸುತ್ತದೆ. ಕ್ರಿ.ಶ.೯೭೨-೭೩ ರವರೆಗೆ ಭೂತುಗದೇವನು ಖೊಟಗನ ಸಾಮಂತನಾಗಿ ಕೋಗಳಿಗೆ ರಾಜ್ಯಪಾಲನಾಗಿದ್ದನು. ಗಂಗರ ಸಾಮಂತ ಅರಸನಾದ ಪಾಂಚಾಲ ದೇವನು ಭೂತುಗನನ್ನು ಯುದ್ಧದಲ್ಲಿ ಸೋಲಿಸಿ ಕೋಗಳಿಯಿಂದ ಹೊರದಬ್ಬಿದನು. ತರುವಾಯ ಚಾಲುಕ್ಯರ ಎರಡನೇ ತೈಲಪನು ಭೂತುಗನ ಸಹಾಯ ಪಡೆದು ಪಾಂಚಾಲ ದೇವನನ್ನು ಯುದ್ಧದಲ್ಲಿ ಸೋಲಿಸಿ ಬಳ್ಳಾರಿ ಪ್ರದೇಶವನ್ನು ಚಾಲುಕ್ಯರ ಅಧೀನಕ್ಕೆ ಒಳಪಡಿಸಿದನು. ಎರಡನೇ ತೈಲಪನಿಗೆ ಅಹವಮಲ್ಲನೆಂಬ ಬಿರುದಿದ್ದಿತು. ಆಗ ಭೂತುಗ ದೇವನನ್ನು ಎರಡನೇ ತೈಲಪನು ತೋರುಗಲ್ಲಿಗೆ ರಾಜ್ಯಪಾಲನನ್ನಾಗಿ ನೇಮಿಸಿದನು.[೫೮] ನಂತರ ಕದಂಬರ ಆರ್ಯವರ್ಮ ಮತ್ತು ಆದಿತ್ಯವರ್ಮರು ಕೋಗಳಿಯ ರಾಜ್ಯಪಾಲರಾಗಿದ್ದರು.

ಅಂದು ದೇವಾಲಯಗಳಿಗೆ, ಬಸದಿಗಳಿಗೆ, ದೇವರ ಪ್ರೀತ್ಯರ್ಥವಾಗಿ ದಾನದತ್ತಿಗಳನ್ನು ಬಿಡುತ್ತಿದ್ದರು. ಆ ದತ್ತಿಗಳನ್ನು ಪಾಠ ಹೇಳುವ ಪಂಡಿತರಿಗೆ. ಅಲ್ಲಿ ವಿದ್ಯಾಭ್ಯಾಸಕ್ಕಾಗಿ ಬರುವ ವಿದ್ಯಾರ್ಥಿಗಳಿಗೆ (ಅನುಕೂಲಕ್ಕಾಗಿ) ನೀಡುತ್ತಿದ್ದರು. ಇಸಾಮುದ್ರದ ಭೋಗೇಶ್ವರ ದೇವಾಲಯ, ಅಲ್ಲಿನ ಮಠವನ್ನು ಓದಲು ಬರುವ ವಿದ್ಯಾರ್ಥಿಗಳಿಗೆ, ಗುರುಗಳಾದ ಬಾಳಚಂದ್ರ ಭಟ್ಟಾರಕರಿಗೆ ದತ್ತಿ ಬಿಟ್ಟ ಸಂಗತಿ ೩ನೆಯ ಅಮೋಘವರ್ಷನ ಶಾಸನವೊಂದರಲ್ಲಿ ವಿವರಿಸಿದೆ.[೫೯] ಮಾಂಡಲೀಕರು, ಅಧಿಕಾರಿಗಳು

ಜನತೆಯಿಂದ ತಾನು ಪಡೆಯುತ್ತಿದ್ದ ಸುಂಕಗಳನ್ನು ದೇವಾಲಯಗಳ ಸಹಯಾರ್ಥವಾಗಿ, ತಮಗೆ ಒಳ್ಳೆಯದಾಗಲೆಂದು, ಪುಣ್ಯವುಂಟಾಗಬೇಕೆಂದು ದತ್ತಿ, ಬಿಟ್ಟುಕೊಡುತ್ತಿದ್ದರು. ಈ ಸಂದರ್ಭದಲ್ಲಿ ಬಂದ 'ಗಾವುಂಡ ಸುಂಕ', 'ವಡ್ಡಾರಾವುಳದ ಪನ್ನಾಯದ ಸುಂಕ' 'ಪೆರ್ಜುಂಕ' ಎಂಬ ಮಾತುಗಳು ಆಗಿನ ಕಾಲದ ತೆರಿಗೆಗಳನ್ನು ವಿಷದಪಡಿಸುತ್ತವೆ.

ಕ್ಯಾಸಪುರದ ಶಾಸನದಲ್ಲಿ 'ಬಿವಿವೃತ್ತಿ'ಯ ಉಲ್ಲೇಖ ಬಂದಿದ್ದು, ಅಧೀನರಾಜರ ಹಾಗೂ ಸಾಮಂತರ ಸಂಬಂಧವನ್ನು ಅದು ಸೂಚಿಸುತ್ತದೆ.[೬೦] ಬೇವಿನಹಳ್ಳಿಯ ಶಾಸನದಲ್ಲಿ 'ಮೇಲ್ಕಾಳ್ಕೆ'ಯ ಉಲ್ಲೇಖವಿದ್ದು, ಅಂದಿನ ಆಡಳಿತದ ಬಗೆಯನ್ನು ವಿವರಿಸುತ್ತದೆ. ಅಲ್ಲಿದ್ದ 'ಕಿರುದೆರೆ'ಯ ಉಲ್ಲೇಖ ಇನ್ನೊಂದು ಬಗೆಯ ತೆರಿಗೆಯನ್ನು ಸೂಚಿಸುತ್ತದೆ. ವೇಶಾವೃತ್ತಿ ಆಗಿನ ಕಾಲದ ಪದ್ಧತಿಯಂತೆ ಶ್ರೇಷ್ಠವೆಂಬ ಒಂದು ಸಂಗತಿ ಕಾಡಜ್ಜಿಯ ಶಾಸನದಲ್ಲಿ ಬಂದಿದೆ.[೬೧] ದೊಡ್ಡೇರಿ, ಧರ್ಮಪುರ, ಕೊಡಗನೂರು, ಕೊಗ್ಗನೂರು, ಮಸಣಕೆರೆ, ಚದುರಗೂಳ, ಬಾಗೂರು, ಮತ್ತೂಡುಗಳಲ್ಲಿ ಇವರ ಶೈಲಿಯನ್ನು ಹೋಲುವ ದೇವಾಲಯಗಳು ಕಂಡು ಬಂದಿವೆ. ಇವುಗಳ ಆಧಾರದಿಂದಲೂ ರಾಷ್ಟ್ರಕೂಟರು ನೇರವಾಗಿ ಇಲ್ಲವೇ ತಮ್ಮ ಸಾಮಂತ ಅಧೀನಾಧಿಕಾರಿಗಳ ಮುಖೇನ ಈಗಿನ ಚಿತ್ರದುರ್ಗ ಜಿಲ್ಲೆಯ ಹಾಗೂ ಅದರ ಆಸು ಪಾಸಿನ ಪ್ರದೇಶಗಳಲ್ಲಿ ಅನೇಕ ಪ್ರಜಾಹಿತ ಕಾರ್ಯಗಳನ್ನು ಕೈಗೊಂಡು ಜನರಿಂದ ಮೆಚ್ಚಿಗೆ ಗಳಿಸಿದ್ದರೆಂದು ಹೇಳಬಹುದು.

**ಕಲ್ಯಾಣದ ಚಾಲುಕ್ಯರು**

ಕಲ್ಯಾಣವನ್ನು ರಾಜಧಾನಿಯನ್ನಾಗಿಟ್ಟುಕೊಂಡು ಕ್ರಿ.ಶ.೯೭೩ ರಿಂದ ೧೧೯೮ರವರೆಗೆ ಆಳ್ವಿಕೆ ಮಾಡಿದ ಇವರನ್ನು ಕಲ್ಯಾಣಿ ಚಾಲುಕ್ಯರೆಂದು ಕರೆಯಲಾಗುತ್ತದೆ. ರಾಷ್ಟ್ರಕೂಟ ದೊರೆ ೨ನೇ ಕರ್ಕನನ್ನು ಚಾಲುಕ್ಯ ವಂಶದ ಇಮ್ಮಡಿ ತೈಲಪನು ಅಧಿಕಾರದಿಂದ ಕೆಳಗಿಳಿಸಿ ಈ ವಂಶವನ್ನು ಸ್ಥಾಪಿಸಿದನು. ಮುಖ್ಯವಾಗಿ ಕಲ್ಯಾಣಿಯ ಚಾಲುಕ್ಯರು ಚಿತ್ರದುರ್ಗ ಜಿಲ್ಲೆಯಲ್ಲಿ ನೇರವಾಗಿ ಆಳ್ವಿಕೆ ಮಾಡಲಿಲ್ಲ. ಬದಲಾಗಿ ಇವರ ಸಾಮಂತರು, ಮಾಂಡಲೀಕರು ಆಳ್ವಿಕೆ ನಡೆಸಿದ್ದು ಶಾಸನಗಳಿಂದ ತಿಳಿದು ಬರುತ್ತದೆ. ಈ ಸಾಮ್ರಾಜ್ಯವು ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದ ಹಲವು ಭಾಗಗಳನ್ನೊಳಗೊಂಡಿತ್ತು. ಇವರು ಮೊದಲು ಮಾನ್ಯಖೇಟದಲ್ಲಿಯೇ ರಾಜ್ಯಭಾರ ಮಾಡುತ್ತಿದ್ದರು. ಅನಂತರ ಬೀದರ್ ಜಿಲ್ಲೆಯ ಕಲ್ಯಾಣವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು. ಆದುದರಿಂದ ಈ ಮನೆತನಕ್ಕೆ ಕಲ್ಯಾಣ ಚಾಲುಕ್ಯರು ಎಂದು ಹೆಸರು ಬಂದಿತು.

ಕಲ್ಯಾಣ ಚಾಲುಕ್ಯರು ಬಾದಾಮಿ ಚಾಲುಕ್ಯರ ವಂಶಜರೆಂದು ತಮ್ಮನ್ನು ತಾವು ಕರೆದುಕೊಂಡಿದ್ದಾರೆ. ಇವರು ಮೊದಲು ರಾಷ್ಟ್ರಕೂಟರ ಸಾಮಂತರಾಗಿದ್ದರು. ರಾಷ್ಟ್ರಕೂಟರ ಅರಸನಾದ ಕರ್ಕನು ತುಂಬಾ ಅಸಮರ್ಥನಾಗಿದ್ದನು. ಇದನ್ನು ಅರಿತ ಇಮ್ಮಡಿ ತೈಲಪನು ಇನ್ನಿತರ ಮಾಂಡಲೀಕ ಅರಸರ ಸಹಾಯದೊಂದಿಗೆ ಕರ್ಕನನ್ನು ಸೋಲಿಸಿ ಕಲ್ಯಾಣ ಚಾಲುಕ್ಯ ರಾಜ್ಯ ಸ್ಥಾಪನೆ ಮಾಡಿದನು. ಈ ವಂಶದ ಸ್ಥಾಪಕನಾದ ೨ನೇ ತೈಲಪನು ಕ್ರಿ.ಶ.೯೭೩ರಲ್ಲಿ ಪಟ್ಟಕ್ಕೆ ಬಂದ ವಿಷಯ ಆರನೇ ವಿಕ್ರಮಾದಿತ್ಯನ ಗದಗ ಶಾಸನದಿಂದ ತಿಳಿಯುತ್ತದೆ.[೬೨] ಚಿತ್ರದುರ್ಗ ಜಿಲ್ಲೆಯನ್ನು ಆಡಳಿತಕ್ಕೆ ಒಳಪಡಿಸಿಕೊಂಡ ಕಲ್ಯಾಣ ಚಾಲುಕ್ಯರ ರಾಜರುಗಳಲ್ಲಿ ಇಮ್ಮಡಿ ಜಯಸಿಂಹ ಮೊದಲಿಗನಾಗಿದ್ದಾನೆ.

ಈತನಿಗೆ ಜಗದೇಕ ಮಲ್ಲನೆಂಬ ಬಿರುದಿತ್ತು. ಇಮ್ಮಡಿ ತೈಲಪನು ೨೪ ವರ್ಷಗಳ ಕಾಲ (ಕ್ರಿ.ಶ. ೯೭೩ ರಿಂದ ೯೯೭ರವರೆಗೆ) ರಾಜ್ಯವಾಳಿದ. ಇವನಿಗೆ ಸುಗ್ಗಲದೇವಿ ಎಂಬ ಹೆಂಡತಿಯಿದ್ದಳು. ಈಕೆ ವೀರಶೈವ ಶರಣ ದೇವರದಾಸಿಮಯ್ಯನ ಭಕ್ತೆಯಾಗಿದ್ದಳು. "ದೇವರದಾಸಿಮಯ್ಯನ ಪುರಾಣದಲ್ಲಿ ದೇವರ ದಾಸಿಮಯ್ಯನು ಇಮ್ಮಡಿ ಜಯಸಿಂಹನನ್ನು ಲಿಂಗಾಯತ ಮತಕ್ಕೆ ಮತಾಂತರಗೊಳಿಸಿದನೆಂದೂ ಉಲ್ಲೇಖಿಸಲಾಗಿದೆ.[೬೩]

ಇವನ ನಂತರ ಕ್ರಿ.ಶ. ೯೯೭ ಸುಮಾರಿಗೆ ಈತನ ಹಿರಿಯ ಮಗ ಸತ್ಯಾಶ್ರಯನು ಪಟ್ಟಕ್ಕೆ ಬಂದನು. ಈತ ಕ್ರಿ.ಶ.೯೯೭ರಿಂದ ೧೦೦೮ರವರೆಗೆ ರಾಜ್ಯವಾಳಿದನು. ಸತ್ಯಾಶ್ರಯನಿಗೆ ಗಂಡು ಮಕ್ಕಳಿಲ್ಲದ ಕಾರಣ ಆತನ ಉತ್ತರಾಧಿಕಾರಿಯಾಗಿ ದಶವರ್ಮನ ಮಗನಾದ ಐದನೆಯ ವಿಕ್ರಮಾದಿತ್ಯನು ಕ್ರಿ.ಶ.೧೦೦೯ರಲ್ಲಿ ಪಟ್ಟಕ್ಕೆ ಬಂದನು. ಈತ ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದನು. ಇದು ಚಿತ್ರದುರ್ಗ ಪ್ರದೇಶದ ಒಂದು ಭಾಗವಾಗಿತ್ತು. ಈತನ ನಂತರ ಈತನ ತಮ್ಮನಾದ ಅಣ್ಣಯ್ಯನು ಪಟ್ಟಕ್ಕೆ ಬಂದನು. ಆದರೆ ಈತನ ಆಳ್ವಿಕೆಯ ಬಗೆಗೆ ಯಾವುದೇ ಶಾಸನಗಳಲ್ಲಿ ಉಲ್ಲೇಖಗಳಿಲ್ಲ. ಆದರೆ ವಿಕ್ರಮಾದಿತ್ಯನ ತಂಗಿಯು ಇಮ್ಮಡಿ ಜಯಸಿಂಹನ ಅಕ್ಕನೂ ಆಗಿದ್ದ ಅಕ್ಕಾದೇವಿ ಅಯ್ಯಣನ ತರುವಾಯ ರಾಜ್ಯವಾಳಿದ್ದಾಳೆಂದು ಅನೇಕ ಶಾಸನಗಳು ಉಲ್ಲೇಖಿಸಿವೆ.

ಕ್ರಿ.ಶ.೧೦೭೨ರಲ್ಲಿ ಪ್ರಥಮ ಸೋಮೇಶ್ವರ ಚಕ್ರವರ್ತಿಯ ಪುತ್ರನಾದ ಜಯಸಿಂಹನು, ಕೋಗಳಿ ಮತ್ತು ಬಲ್ಲಕುಂದೆ ನೊಳಂಬವಾಡಿಗಳ ಆಡಳಿತವನ್ನು ನಡೆಸಿದಂತೆ ತೋರುತ್ತದೆ. ಚಿತ್ರದುರ್ಗ ಸಮೀಪದ ಹದಡಿಯಲ್ಲಿನ ಕ್ರಿ.ಶ.೧೦೪೨ರ ಶಾಸನವು ೪೨ ತ್ರೈಲೋಕ್ಯಮಲ್ಲನು ಕದಂಬಳಿಗೆಯನ್ನು ಆಳುತ್ತಿದ್ದನೆಂಬುದಾಗಿ ತಿಳಿಸುತ್ತದೆ. ಸೋಮೇಶ್ವರನ ಮಕ್ಕಳಲ್ಲೊಬ್ಬನಾದ ವಿಷ್ಣುವರ್ಧನನು ಕ್ರಿ.ಶ.೧೦೬೮ ರಿಂದ ಕ್ರಿ.ಶ.೧೦೬೬ರವರೆಗೆ ನೊಳಂಬವಾಡಿ ಪ್ರಾಂತ್ಯವನ್ನಾಳುತ್ತಿದ್ದನೆಂದು ದೊರೆತ ಶಾಸನಗಳಿಂದ ತಿಳಿದುಬರುತ್ತದೆ. ಅಲ್ಲದೆ ಕ್ರಿ.ಶ.೧೦೬೪ ರಲ್ಲಿ ಚಾಲುಕ್ಯರ ಯುವರಾಜ ವಿಷ್ಣುವರ್ಧನ ವಿನಿಯಾದಿತ್ಯ (೧ನೇ ಸೋಮೇಶ್ವರನ ಪುತ್ರ) ಕಂಪಿಲಿ ನೆಲೆವೀಡಿನಿಂದ ನೊಳಂಬವಾಡಿಯನ್ನು ಆಳ್ವಿಕೆ ಮಾಡಿದ ವಿವರ ದೊರೆಯುತ್ತದೆ. ನನ್ನಿನೊಳಂಬ ಪಲ್ಲವ-ಪೆರ್ಮಾಡಿ-ದೇವನು ಈ ತ್ರೈಲೋಕ್ಯಮಲ್ಲನ ಕೆಲವು ಪ್ರಾಂತ್ಯಗಳ ರಾಜ್ಯಪಾಲನಾಗಿದ್ದನ್ನು ಕ್ರಿ.ಶ.೧೦೪೮ ಮತ್ತು ೧೦೫೪ರ ಎರಡು ಶಾಸನಗಳಿಂದ ತಿಳಿದುಬರುತ್ತದೆ.[೬೪]

ಆರನೇ ವಿಕ್ರಮಾದಿತ್ಯನ ನಂತರ ಸಿಂಹಾಸನಕ್ಕೆ ಬಂದ ಅವನ ಮಗ ಮುಮ್ಮಡಿ ಸೋಮೇಶ್ವರನು (ಕ್ರಿ.ಶ.೧೧೨೬- ಕ್ರಿ.ಶ.೧೧೩೮) ಶಾಂತ ರೀತಿಯಲ್ಲಿ ಆಳ್ವಿಕೆ ನಡೆಸಿದನು. ಈತನ ನಂತರ ೬ನೇ ವಿಕ್ರಮಾದಿತ್ಯನ ರಾಣಿ ಚಂದ್ರಲೇಖೆಯ ಮಗನಾದ ಮೂರನೇ ಸೋಮೇಶ್ವರನು ೧೧೨೭ರಲ್ಲಿ ಅಧಿಕಾರಕ್ಕೆ ಬಂದನು. ಈತನಿಗೆ 'ಭೂಲೋಕ ಮಲ್ಲ' ಎಂಬ ಬಿರುದಿದ್ದಿತು. ಈತನು ರಾಜಕೀಯಕ್ಕಿಂತ ಹೆಚ್ಚಿನ ಒಲವು ಸಾಹಿತ್ಯ ಕಲೆಗಳ ಕಡೆಗೆ ತೋರಿದ್ದನು. ಈತನು ಘನಪಂಡಿತನಾಗಿದ್ದು, ಕ್ರಿ.ಶ.೧೧೩೦ರಲ್ಲಿ 'ಅಭಿಲಾಷಿತಾರ್ಥ ಚಿಂತಾಮಣಿ' ಅಥವಾ 'ಮಾನಸೋಲ್ಲಾಸ' ಎಂಬ ಜ್ಞಾನಕೋಶದ ಉದ್ಗ್ರಂಥವನ್ನು ರಚಿಸಿದ್ದಾನೆ.[೬೫] ಈತನ ನಂತರ ಈತನ ರಾಣಿಯಾದ ಎಕ್ಕಲದೇವಿಯ ಮಕ್ಕಳಾದ ಇಮ್ಮಡಿ ಜಗದೇಕಮಲ್ಲ (ಕ್ರಿ.ಶ.೧೧೩೮-ಕ್ರಿ.ಶ.೧೧೫೧) ಮತ್ತು ಮುಮ್ಮಡಿ ತೈಲಪರು ರಾಜ್ಯವನ್ನಾಳಲು ಮುಂದಾದರು. ಇವರನ್ನು ಉಲ್ಲೇಖಿಸುವ ಕೆಲವು ಶಾಸನಗಳು ಈ ಜಿಲ್ಲೆಯಲ್ಲಿವೆ. ಕ್ರಿ.ಶ. ೧೧೭೩-

೭೪ರ ಬಾಡದ ಶಾಸನಗಳು ಜಗದೇಕಮಲ್ಲನನ್ನು ಉಲ್ಲೇಖಿಸಿವೆ. ಕ್ರಿ.ಶ.೧೧೪೩ರ ಶಾಸನವೊಂದು ಇವನು ಚೋಳರನ್ನು ರಾಜ್ಯದಿಂದೋಡಿಸಿದನೆಂದೂ, ಹೊಯ್ಸಳ ದೊರೆ ಮೊದಲನೇ ನರಸಿಂಹನ ಮೇಲೆ ದಾಳಿ ಮಾಡಿದನೆಂದೂ ಹೇಳುತ್ತದೆ. ವಿಕ್ರಮಾದಿತ್ಯ ಮತ್ತು ಸೋಮೇಶ್ವರ ದೊರೆಗಳ ಕಾಲದಲ್ಲಿ ವೀರ ಪಾಂಡ್ಯನು ನೊಳಂಬನಾಡಿಗೆ ಮಂಡಲೇಶ್ವರನಾಗಿದ್ದನು. ಇವನಾಳ್ವಿಕೆಯನ್ನು ನಿಖರವಾಗಿ ಸೂಚಿಸುವ ಶಾಸನಗಳು ದೊರೆತಿವೆ. ದಾವಣಗೆರೆಯ ಶಾಸನವೊಂದು ಇವನ ಶೌರ್ಯ ಪ್ರತಾಪಗಳನ್ನು ಈ ಮುಂದಿನಂತೆ ವರ್ಣಿಸುತ್ತದೆ.

ಚಿತ್ರದುರ್ಗ ಶಾಸನವೊಂದರಲ್ಲಿ ವಿಕ್ರಮಾದಿತ್ಯ ತ್ರಿಭುವನ ಮಲ್ಲನು ರಾಷ್ಟ್ರಪತಿ, ವಿಷಯಾಪತಿ, ಗ್ರಾಮ ಕೂಟಕ, ಆಯುಕ್ತಕ, ನಿಯುಕ್ತಕ, ಅಧಿಕಾರಿದ, ಮಹತ್ತರ ಮತ್ತಿತರರಿಗೆ ಆಜ್ಞಾಪಿಸಿದುದ್ದನ್ನು ಹೇಳಲಾಗಿದೆ.[೬೬] ಇವರೆಲ್ಲರೂ ಕೆಳದರ್ಜೆಯ ಅಧಿಕಾರಿಗಳಾಗಿರಬಹುದೆಂದು ತೋರುತ್ತದೆ. ಸಾಮಂತರಲೊಬ್ಬನಾದ ಕಳಚೂರ್ಯ ವಂಶದ ೨ನೆಯ ಬಿಜ್ಜಳನು ಕ್ರಿ.ಶ.೧೧೫೩ರಲ್ಲಿ ಸ್ವತಂತ್ರನಾಗಿ ಚಾಲುಕ್ಯ ದೊರೆ ಮುಮ್ಮಡಿ ತೈಲಪನನ್ನು ಬಂಧಿಸಿ, ಕಲ್ಯಾಣ ನಗರದಲ್ಲಿ ಕಳಚೂರ್ಯ ವಂಶವನ್ನು ಸ್ಥಾಪಿಸಿದನು. ಒಟ್ಟಾರೆಯಾಗಿ ಚಾಲುಕ್ಯ ಅರಸರು ಕ್ರಿ.ಶ.೯೭೩ ರಿಂದ ವಿಜೃಂಭಿಸಿದ್ದು ಕೆಲವೇ ವರ್ಷಗಳಲ್ಲಿಯೇ ಪತನವನ್ನು ಕಂಡರು.

**ಕಲ್ಯಾಣದ ಕಲಚೂರಿಗಳು**

ಕಲ್ಯಾಣದ ಚಾಲುಕ್ಯರ ನಂತರ ಅವರ ಸಾಮಂತರಲೊಬ್ಬನಾದ ಕಳಚೂರ್ಯ ವಂಶದ ೨ನೆಯ ಬಿಜ್ಜಳನು ಕ್ರಿ.ಶ.೧೧೫೩ರಲ್ಲಿ ಸ್ವತಂತ್ರನಾಗಿ ಕಲ್ಯಾಣಚಾಲುಕ್ಯ ದೊರೆ ಮುಮ್ಮಡಿ ತೈಲಪನನ್ನು ಬಂಧಿಸಿ, ಕಲ್ಯಾಣ ನಗರದಲ್ಲಿ ಕಳಚೂರ್ಯ ವಂಶವನ್ನು ಸ್ಥಾಪಿಸಿದನು. ಕಳಚೂರ್ಯರ ಕಾಲಾವಧಿಯಲ್ಲಿ ಪ್ರಮುಖ ಧಾರ್ಮಿಕ ಕ್ರಾಂತಿ ಉಂಟಾಯಿತಾದರು, ಅವರಿಗೆ ಸಂಬಂಧಪಟ್ಟ ಮಾಹಿತಿಗಳು ಜಿಲ್ಲೆಯಲ್ಲಿ ಅತಿ ಕಡಿಮೆ ದೊರೆತಿದ್ದೂ, ಅಷ್ಟೇನು ಗಮನಾರ್ಹವಾಗಿಲ್ಲ. ಈ ವಂಶದ ೪ನೇ ಸೋಮೇಶ್ವರನು (ಕ್ರಿ.ಶ.೧೧೫೮-೧೧೯೪) ತುರವನೂರ ಬಳಿಯ ಈಶ್ವರ ದೇವಾಲಯದ ಬಳಿ ಇರುವ ಶಾಸನವು ಆ ದೇವಾಲಯಕ್ಕೆ ಭೂಮಿಯನ್ನು ದಾನವಾಗಿ ನೀಡಿದ ವಿವರವನ್ನು ದಾಖಲಿಸಿದೆ.[೬೭] ಅದೇ ರೀತಿ ಆತನು ಚಿತ್ರದುರ್ಗ ಜಿಲ್ಲೆಯ ಅನತಿ ದೂರದ ಬಳ್ಳಾರಿ ಸಮೀಪದ ಕುರುಗೋಡುವಿನಲ್ಲಿ ನೆಲೆಸಿ, ಹೊಯ್ಸಳರನ್ನು ಮತ್ತು ಸೇವುಣರನ್ನು ಗೆದ್ದನು. ಈತ ರಾಜ್ಯವಾಳುತ್ತಿದ್ದಾಗ ಸಿಂಧವಾಡಿ ರಾಚಮಲ್ಲನು ಕುರುಗೋಡು ಕೋಟೆಯಿಂದ ಬಲ್ಲಕುಂದೆ ರಾಜ್ಯವನ್ನು ಆಳುತ್ತಿದ್ದನೆಂದು ಕುರುಗೋಡಿನ ಕ್ರಿ.ಶ.೧೧೮೧-೮೨ರ ಶಾಸನ ವಿವರಿಸುತ್ತದೆ. ಈ ಮೇಲಿನ ವಿವರಗಳು ಈ ಪರಿಸರದಲ್ಲಿ ಕಲ್ಯಾಣದ ಕಲಚೂರಿಗಳು ಆಳ್ವಿಕೆ ನಡೆಸಿದ್ದನ್ನು ಧೃಢಪಡಿಸಿವೆ.

ಕ್ರಿ.ಶ.೧೧೬೩ರಲ್ಲಿ ಕಲಚೂರಿ ಅರಸ ಬಿಜ್ಜಳನು ಬಳ್ಳಾರಿ ಜಿಲ್ಲೆಯ ಹಂಪಿಯ ವಿರೂಪಾಕ್ಷನ ಸನ್ನಿಧಾನದಲ್ಲಿ ಮಹಾದಾನಗಳನ್ನು ಮಾಡುತ್ತಿದ್ದ ಸಂದರ್ಭದಲ್ಲಿ ಬೆಳ್ವಲನಾಡು ಮತ್ತು ವತ್ಸೆಯನಾಡಿನ ಅಧಿಕಾರಿ ದಂಡನಾಯಕ ಅಮ್ಮಣಯ್ಯನು ಅರಸನ ಅನುಮತಿ ಪಡೆದು ಎಡೆಯಹಳ್ಳಿಯನ್ನು ಕುಕನೂರ ಮಲ್ಲಿಕಾರ್ಜುನ ದೇವರಿಗೆ ದಾನವಾಗಿ ಕೊಟ್ಟ ವಿವರವನ್ನು ಆ ಕಾಲದ ಶಾಸನವೊಂದು ದಾಖಲಿಸಿದೆ. ಕಲಚೂರಿಗಳು ಹಾಗೂ ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯಗಳ ಅಂತ್ಯದೊಂದಿಗೆ ಕರ್ನಾಟಕದಲ್ಲಿ ಸೇವುಣ ಮತ್ತು ಹೊಯ್ಸಳರು ಅಧಿಕಾರಕ್ಕೆ ಬಂದರು.

**ಉಚ್ಚಂಗಿ ಪಾಂಡ್ಯರು**

ಕರ್ನಾಟಕದ ಸಾಮಾಂತ ಅರಸರಲ್ಲಿ ಉಚ್ಚಂಗಿ ಪಾಂಡ್ಯರು ಒಬ್ಬರಾಗಿದ್ದಾರೆ. ಇವರು ತಮ್ಮನ್ನು ಚಂದ್ರವಂಶಿಯರೆಂದೇ ಹೇಳಿಕೊಂಡಿದ್ದಾರೆ. ಇವರು ಸಪ್ತ ಕೊಂಕಣಗಳಲ್ಲಿ ಒಂದಾದ ಹೈವೆಯ ಅರಸರೂ ಹೌದು.[೬೮] ಇವರ ರಾಜಧಾನಿ ಸಿಸುಗಳಿ. ಕ್ರಿ.ಶ.೧೧೧೩ರ ಪಾಂಡ್ಯ ರಾಜ ಗೋಕರ್ಣಪುರದ ಅರಸನೆಂದೂ, ಕೊಂಕಣ ರಕ್ಷಕನೆಂದು ಹೇಳಿಕೊಂಡಿದ್ದಾನೆ. ಪಶ್ಚಿಮ ಚಾಲುಕ್ಯ ರಾಜನಾದ ಜಯಸಿಂಹನು ಸಪ್ತ ಕೊಂಕಣಗಳನ್ನು ಜಯಸಿದ ಮೇಲೆ, ಪಾಂಡ್ಯರು (ಹಿಂದಿನ ಮೈಸೂರು ಸಂಸ್ಥಾನದ ಬಡಗಣ ಗಡಿಯ) ಗಿರಿದುರ್ಗವಾದ ಉಚ್ಚಂಗಿಗೆ ತೆರಳಿದನು.[೬೯]

**ಉಚ್ಚಂಗಿ ಪಾಂಡ್ಯರ ವಂಶ ವೃಕ್ಷ**



ಕಲ್ಯಾಣ ಚಾಲುಕ್ಯರು ಆಳ್ವಿಕೆ ಮಾಡುವಾಗ ನೊಳಂಬವಾಡಿ ಮೂವತ್ತೆರಡು ಸಾವಿರ ಆಡಳಿತದ ಒಂದು ಘಟಕವಾಗಿತ್ತು. ಇದರಲ್ಲಿ ಕದಂಬಳಿಗೆ ಸಾವಿರ, ಸಿಂದವಾಡಿ ಸಾವಿರ, ಕೋಗಳಿ ಐದುನೂರು ಇತ್ಯಾದಿ ಉಪ ಆಡಳಿತ ವಿಭಾಗಗಳಿದ್ದವು. ತ್ರಿಭುವನ ಮಲ್ಲ ರಾಯ ಪಾಂಡ್ಯನು ನೋಳಂಬವಾಡಿ, ಶಾಂತಲಗಿ ಪ್ರಾಂತ್ಯಗಳನ್ನು ಆಳಿದನೆಂದು ಕ್ರಿ.ಶ.೧೧೨೫ರ ಶಾಸನವೊಂದರಿಂದ ತಿಳಿದುಬರುತ್ತದೆ.[೭೦]

ಉಚ್ಚಂಗಿಯ ಪಾಂಡ್ಯರಲ್ಲಿ ಖ್ಯಾತನಾದ ವಿಜಯಪಾಂಡ್ಯನು ಆಳ್ವಿಕೆ ನಡೆಸುತ್ತಿರುವಾಗ ಕ್ರಿ.ಶ.೧೧೭೭ರಲ್ಲಿ ಹೊಯ್ಸಳರ ೩ನೇ ಬಲ್ಲಾಳನು ತುಂಬಾ ಪರಿಶ್ರಮದಿಂದ ಆಕ್ರಮಣ ಮಾಡಿ, ಕೊನೆಗೆ ವಿಜಯ ಪಾಂಡ್ಯನನ್ನು ಸೋಲಿಸಿ, ಉಚ್ಚಂಗಿದುರ್ಗವನ್ನು ವಶಪಡಿಸಿಕೊಂಡನು. ಮುಂದೆ ಕಾಲಾಂತರದಲ್ಲಿ ಉಚ್ಚಂಗಿದುರ್ಗವು ಹೊಯ್ಸಳರಲ್ಲೇ ಉಳಿಯಿತು.

ಉಚ್ಚಂಗಿಯ ಪಾಂಡ್ಯರೆಂದೇ ಕರೆಸಿಕೊಂಡ ಇವರು ಸುಮಾರು ೧೩೭ ವರ್ಷಗಳ ಕಾಲ ಉಚ್ಚಂಗಿ ನೆಲೆವೀಡಿನಿಂದ ನೊಳಂಬವಾಡಿ ೩೨೦೦೦ದಲ್ಲಿ ಆಳ್ವಿಕೆಯನ್ನು ಮಾಡಿದರು. ಚಾಲುಕ್ಯರ ನಂತರ ಈ ನಾಡು ಹೊಯ್ಸಳರಿಗೆ ಹಸ್ತಾಂತರವಾಯಿತು. ಇದರಿಂದಾಗಿ ಒಂದು ಪ್ರಬಲವಾದ ಕರ್ನಾಟಕದ ರಾಜ ಸಂತತಿಯಾದ ಚಾಲುಕ್ಯರ ಪತನದ ಹಾದಿ ಮತ್ತು ಅವರ ರಾಜ್ಯದಲ್ಲಿ ಹೊಯ್ಸಳರ ಪ್ರವೇಶವು ಪ್ರಮುಖ ಘಟ್ಟವೊಂದು ರೂಪು ಪಡೆಯಿತು.

**ನೊಳಂಬರ ಆಳ್ವಿಕೆ**

ಗಂಗ, ಚಾಲುಕ್ಯ, ಚೋಳ ಮತ್ತು ಹೊಯ್ಸಳರ ಮಹಾಸಾಮಂತರಾಗಿ ಆಳಿದ ನೊಳಂಬರು ಖ್ಯಾತಿವೆತ್ತ ಸಾಮಂತ ಕುಲದವರಾಗಿದ್ದು, ಇವರು ಆಳುತ್ತಿದ್ದ ಒಟ್ಟು ಪ್ರದೇಶವನ್ನು ನೊಳಂಬವಾಡಿ ಅಥವಾ ನೊಳಂಬವಾಡಿ ೩೨೦೦೦ ನಾಡು ಎಂದು ಕರೆಯುತ್ತಿದ್ದರು. ಚಿತ್ರದುರ್ಗ ಜಿಲ್ಲೆಯು ಇದರ ಒಂದು ಭಾಗವಾಗಿತ್ತು. ಉಚ್ಚಂಗಿದುರ್ಗ, ಆಂಧ್ರದ ಮಡಕಶಿರಾ ತಾಲೂಕಿನ ಹೇಂಜೇರು, ಬಳ್ಳಾರಿ ಜಿಲ್ಲೆಯ ಹೊಸಪೇಟೆ ಸಮೀಪದ ಕಂಪ್ಲಿ ಅಂದಿನ ಪ್ರಮುಖ ಪಟ್ಟಣಗಳಾಗಿದ್ದವು. ಅಲ್ಲದೇ ಚಿತ್ರದುರ್ಗ ಜಿಲ್ಲೆಯ ಗಡಿಗೆ ಹೊಂದಿಕೊಂಡಿರುವ ಬಳ್ಳಾರಿ ಸಮೀಪದ ಕೋಗಳಿ(ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲೂಕು) ಮತ್ತು ಕಣೆಕಲ್ಲು (ಆಂಧ್ರದ ರಾಯದುರ್ಗ ತಾಲೂಕು) ನೊಳಂಬವಾಡಿಯ ಎರಡು ಮುಖ್ಯ ಆಡಳಿತದ ವಿಭಾಗಗಳಾಗಿದ್ದವು.

ನೊಳಂಬರು ತಾವು ಪಲ್ಲವರೆಂದು ಹೇಳಿಕೊಂಡಿದ್ದಾರೆ. ಆದರೆ ನೊಳಂಬರಿಗೂ, ಪಲ್ಲವರಿಗೂ ಇದ್ದ ನಿರ್ದಿಷ್ಟ ಸಂಬಂಧವೇನೆಂಬುದು ಖಚಿತವಾಗಿ ತಿಳಿದುಬಂದಿಲ್ಲ. ನೊಳಂಬ ಮನೆತನದ ಅರಸರಿಗೆ ನೊಳಂಬ ಪಲ್ಲವರೆಂದು ಹೆಸರು. ಚಿತ್ರದುರ್ಗ ಮತ್ತು ಇತರ ಭಾಗಗಳಲ್ಲಿ ಕಂಡುಬರುವ ನೊಳಂಬರು, ಈ ಸಂತತಿಯ ರಾಜ ಕುಲದ ಪೀಳಿಗೆಯರೆಂಬುದಾಗಿ ಭಾವಿಸಲಾಗಿದೆ.

ನೊಳಂಬರಿಗೆ ಸಂಬಂಧಿಸಿದ ಅತ್ಯಂತ ಪ್ರಾಚೀನ ಶಿಲಾ ಶಾಸನವು ಅಣಜಿಯ ಚಿತ್ರದುರ್ಗ-೧೬೧ ಗುಡ್ಡಪ್ಪನ ಹೊಲದಲ್ಲಿ ದೊರೆತಿದೆ.[೭೧] ಇದರ ಕಾಲ ಕ್ರಿ.ಶ. ೪೫೦ ಆಗಿದ್ದು. ಇದರಲ್ಲಿ ಪಲ್ಲವ ನನಕ್ಕಸ ರಾಜನು ಕೃಷ್ಣ ವರ್ಮರಾಜನ ಸೈನ್ಯವನ್ನು ಪರಾಭವಗೊಳಿಸಿದನೆಂದು ಉಲ್ಲೇಖಿತವಾಗಿದೆ. ಕೃಷ್ಣವರ್ಮ ರಾಜ ಕದಂಬ ಶಾಂತಿವರ್ಮನ ತಮ್ಮನಾಗಿದ್ದು, ಕದಂಬ ಸಾಮ್ರಾಜ್ಯದ ಒಂದು ಪ್ರಾಂತ್ಯದಲ್ಲಿ ಸಾಮಂತನಾಗಿ ಆಳುತ್ತಿದ್ದನು. ಪಲ್ಲವ ನನಕ್ಕಸರಾಜ ಹೆಸರು ಮತ್ತ್ಯಾವ ಶಾಸನದಲ್ಲಿಯೂ

ಕಾಣಬರುವುದಿಲ್ಲ. ಈತನು ಬೇರೆಯ ಹೆಸರಿನಿಂದ ನಮಗೆ ತಿಳಿದು ಬರುವ ಪಲ್ಲವ ನೊಳಂಬ. ಪಲ್ಲವ ಆಳ್ವಕೆಯ ಆರಂಭದ ಕಾಲ ಕ್ರಿ.ಶ. ೭೪೦ ಎಂದು ವ್ಯಕ್ತವಾಗುವುದು. ಕ್ರಿ.ಶ.೪೫೦-ಕ್ರಿ.ಶ.೮೧೫ರ ಕಾಲಕ್ಕೆ ಸಂಬಂಧಸಿದ ಚಿಕ್ಕ ಮಧುರೆ ಮಲ್ಲೇಶ್ವರ ದೇವಾಲಯದಲ್ಲಿರುವ ಸ್ತಂಭ ಶಾಸನಗಳು ಸಿಂಹಪೋತನ ಮಗ ಪರಮೇಶ್ವರ ಪಲ್ಲವಾಧಿರಾಜ ಮತ್ತು ಅವನ ಮಗ ಪಲ್ಲವಮಲ್ಲ ಇವರು ರಾಷ್ಟ್ರಕೂಟರ ಸಾಮಂತರಿಂದ ಪರಾಭವಗೊಂಡ ನಂತರ ಗಂಗವಾಡಿಯು ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿ ವಿಲೀನಗೊಂಡಿತು.[೨] ಇದರಿಂದ ನೊಳಂಬರು ರಾಷ್ಟ್ರಕೂಟರ ಆಶ್ರಯ ಪಡೆದು ಅವರ ಸಾಮಂತರಾಗಬೇಕಾಯಿತು.

ಮೊದಲನೆಯ ಶಾಸನವು ಜಗತ್ತುಂಗ ಪ್ರಭು ವರ್ಷ ಪ್ರತಾಪವಲೋಕ ಶ್ರೀವಲ್ಲಹ ತನ್ನ ಚಕ್ರಾದಿಪತ್ಯವನ್ನಾಳುತ್ತಿರಲು, ಪರಮೇಶ್ವರ ಪಲ್ಲವಾಧಿ ನೊಳಂಬಾಳಿಗೆ ೧೦೦೦ ಮತ್ತು ನೀರ್ಗುಂದ ೩೦೦ ನಾಡುಗಳನ್ನು ಸಾಮಂತನಾಗಿ ಆಳುತ್ತಿದ್ದು, ಪರಮೇಶ್ವರನ ರಾಣಿ ಗಾವಗನಬ್ಬೆ ಸಂಕ್ರಾಂತಿಯಂದು ವಿಷ್ಣುವನ್ನು ಭಜಿಸಿದುದನ್ನು ಮತ್ತು ನಾಗಮಾರಬ್ಬೆ (ಪ್ರಾಯಶಃ ಪರಮೇಶ್ವರನ ಮತ್ತೊಬ್ಬ ರಾಣಿ) ಶಿವಾಲಯಕ್ಕೆ ನೀಡಿದ ಭೂ ದತ್ತಿಯನ್ನು ತಿಳಿಸುವುದು. ಇದೇ ಶಾಸನದಿಂದ ಸಿಂಹಪೋತನ ಓರ್ವ ಮಗಳು ಪರಮೇಶ್ವರ ಪಲ್ಲವರಾಜನ ಸೋದರಿ ಗಂಗ ಪೆರ್ಮಾಡಿಯ ರಾಣಿಯಾಗಿದ್ದಳೆಂದು ತಿಳಿದು ಬರುವುದು. ಗಂಗ ಮತ್ತು ನೊಳಂಬ ಮನೆತನದವರಲ್ಲಿ ಒಂದೆರಡು ಬಾರಿ ವೈವಾಹಿಕ ಸಂಬಂಧಗಳು ನಡೆದವೆಂಬುದು ಇದರಿಂದ ತಿಳಿದುಬರುವುದು. ಸಮಸ್ತ ಲೋಕ ಪ್ರಸಿದ್ಧ ಪಲ್ಲವಾಧಿರಾಜ ರಾಷ್ಟ್ರಕೂಟ ಮಹಾಸಾಮಂತನಾಗಿ ಅನೇಕ ನಾಡುಗಳನ್ನು ಆಳುತ್ತಿರಲು ಆತನ ರಾಣಿ ಗಾವಗನಬ್ಬೆಯು ಮದರಿಕಲ್ಲಿನ ಗಾವಗನೇಶ್ವರ ದೇವಾಲಯ ಕಟ್ಟಿಸಿ ಉದಾರವಾಗಿ ಭೂಮಿಯನ್ನು ದತ್ತಿ ನೀಡಿದಳೆಂದು ಶಾಸನವೊಂದು ತಿಳಿಸುತ್ತದೆ.

ಜಗಳೂರು ತಾಲೂಕು ಮುಷ್ಟೂರಿನ ಕಲ್ಲೇಶ್ವರ ದೇವಾಲಯದ ಕ್ರಿ.ಶ.೯೨೦ರ ಶಾಸನವು[೩] ನೊಳಂಬಾಧಿರಾಜ ಅಯ್ಯಪ್ಪದೇವ ನೊಳಂಬವಾಡಿ ಮತ್ತಿತರ ನಾಡುಗಳನ್ನು ಆಳುತ್ತಿದ್ದನೆಂದಿದೆ. ಎರಡನೆಯ ಶಾಸನವು ಜವಯ್ಯನ ಮಗ ನಾಥಚರ್ನನು ಮುಷ್ಟೂರಿನ ಕಲ್ಲೇಶ್ವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದನೆಂದಿದೆ.

ನೊಳಂಬ ರಾಜರುಗಳು ತಮ್ಮ ವಿಶಾಲ ರಾಜ್ಯವನ್ನು ಹಲವು ಆಡಳಿತ ಘಟಕಗಳನ್ನಾಗಿ ವಿಭಾಗಿಸಿ, ಆ ಘಟಕಗಳಿಗೆ ಮಂತ್ರಿಗಳನ್ನು ಸಾಮಂತ ಅಧಿಕಾರಿಗಳನ್ನು ಆಡಳಿತ ನಿರ್ವಹಣೆಗೆ ನೇಮಿಸುತ್ತಿದ್ದರು. ಕೆಲ ವೇಳೆ ಅವಿಧೇಯನಾಗಿ ನಡೆದುಕೊಂಡ ಸಾಮಂತನನ್ನು ಶಿಕ್ಷಿಸುವಂತೆ ಮತ್ತೊಬ್ಬ ಸಾಮಂತನಿಗೂ, ಮಂತ್ರಿಗೂ ಆಜ್ಞೆ ನೀಡುತ್ತಿದ್ದರು.

ರಾಷ್ಟ್ರಕೂಟರ ಅರಸ ಮೂರನೇ ಕೃಷ್ಣನು ನನ್ನಿಗನ ಪುತ್ರ ಅನ್ನಿಗನನ್ನು ಯುದ್ಧದಲ್ಲಿ ಸೋಲಿಸಿ ಚೋಳರ ವಿರುದ್ಧ ಯುದ್ಧ ಮಾಡಲು ನೇಮಿಸುದುದಾಗಿ ತಿಳಿದುಬರುತ್ತದೆ. ತರುವಾಯ ನೊಳಂಬರು ಕಲ್ಯಾಣಿ ಚಾಲುಕ್ಯರ ಸಾಮಂತ ಅರಸರಾಗಿ ಕಂಪಲಿ ಮುಖ್ಯ ಪಟ್ಟಣದಿಂದ ರಾಜ್ಯವಾಳಿದ್ದು ಗೊತ್ತಾಗುತ್ತದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದ ನೊಳಂಬರು ಕರ್ನಾಟಕ ಸಾಮಂತ ರಾಜ ಮನೆತನಗಳಲ್ಲೇ ವಿಶಿಷ್ಟ ಸ್ಥಾನ ಪಡೆದಿದ್ದಾರೆ. ತಮ್ಮ ಸಾಮಂತಿಕೆಯ ಅವಧಿಯೊಳಗೆ ತಮ್ಮ ಪ್ರಭುಗಳ ಸಾರ್ವಭೌಮತ್ವದ ಬಿರುದುಗಳನ್ನು ಧರಿಸಿಕೊಂಡು ಮೆರೆದರು.

**ದೇವಗಿರಿಯ ಯಾದವರ(ಸೇವುಣರ) ಆಳ್ವಿಕೆ**

ಕ್ರಿ.ಶ. ಸುಮಾರು ೮೩೫–೧೩೧೩ರವರೆಗೆ ಆಳಿದ ಕರ್ನಾಟಕದ ಸೇವುಣರು, ವಿಶೇಷವಾಗಿ ದೇವಗಿರಿ ಯಾದವರೆಂದೇ ಭಾರತದ ಇತಿಹಾಸದಲ್ಲಿ ಹೆಸರಾಗಿದ್ದಾರೆ. ಮಹಮ್ಮದೀಯ ಚರಿತ್ರೆಕಾರರಾದ ಅಮೀರ್‌ಖುಸ್ರು, ಫರಿಸ್ತ, ಬರನಿ ಮುಂತಾದವರು ಅವರನ್ನು ಯಾದವರೆಂದೇ ಕರೆದಿದ್ದಾರೆ. ಇದನ್ನೇ ಅನುಸರಿಸಿದ ಫ್ಲೀಟ್‌ರವರು ತಮ್ಮ 'ಡೈನಾಸ್ಟಿಕ್ ಆಫ್ ಕೆನಾರಿಸ್ ಡಿಸ್ಟ್ರಿಕ್ಟ್ ಆಫ್ ಬಾಂಬೆ ಪ್ರೆಸಿಡೆನ್ಸಿ' ಎಂಬ ಗ್ರಂಥದಲ್ಲಿ ಸೇವುಣರನ್ನು ದೇವಗಿರಿಯ ಯಾದವರೆಂದೇ ಕರೆದಿದ್ದಾರೆ. ಪ್ರೊ. ಎ.ವಿ.ನರಸಿಂಹಮೂರ್ತಿ, ಪ್ರೊ.ಶ್ರೀನಿವಾಸ ರಿತ್ತಿ ಮೊದಲಾದ ಚರಿತ್ರೆಕಾರರು ಇದನ್ನೇ ಅನುಸರಿಸುತ್ತ ಬಂದಿದ್ದಾರೆ.

ಹೇಮಾದ್ರಿಯ 'ರಾಜಪ್ರಶಸ್ತಿ'ಯು ಈ ರಾಜವಂಶದ ಎರಡನೆಯ ದೊರೆ ಸೇವುಣ ಚಂದ್ರನಿಂದ ಈ ವಂಶಕ್ಕೆ ಸೇವುಣ ವಂಶವೆಂದು ಹೆಸರು ಬಂದಿತೆಂದು ತಿಳಿಸುತ್ತದೆ. ಹೊಯ್ಸಳರು, ಚಾಲುಕ್ಯರು, ಕಾಕತೀಯರು ಅವರನ್ನು ಸೇವುಣರೆಂದೇ ಕರೆದಿದ್ದಾರೆ. ಅಂದರೆ ಸಮಕಾಲೀನ ರಾಜರುಗಳು ಇವರನ್ನು ಸೇವುಣರೆಂಬ ಹೆಸರಿನಿಂದ ಕರೆಯುತ್ತಿದ್ದರು.[೬೪] ಚಿತ್ರದುರ್ಗ ಜಿಲ್ಲೆಯ ವಿವಿದೆಡೆ ಇವರ ಶಾಸನಗಳು ದೊರೆತಿರುವುದರಿಂದ ಈ ಜಿಲ್ಲೆಯ ಕೆಲವು ಭಾಗಗಳು ಅವರ ಅಧೀನಕ್ಕೊಳಪಟ್ಟಿದ್ದವೆಂಬುದು ಸ್ಪಷ್ಟವಾಗುತ್ತದೆ. ಸೇವುಣ ರಾಜ್ಯವು ಚಿತ್ರದುರ್ಗ, ಶಿವಮೊಗ್ಗ, ಹಾಸನ, ಧಾರವಾಡ, ಬಿಜಾಪುರ, ರಾಯಚೂರು, ಬೀದರ್ ಮತ್ತು ಬಳ್ಳಾರಿ ಜಿಲ್ಲೆಗಳ ಪ್ರದೇಶಗಳನ್ನೊಳಗೊಂಡಿತ್ತು.[೬೫]

ಸೇವುಣ ಸಿಂಘಣ(ಕ್ರಿ.ಶ. ೧೨೧೦–ಕ್ರಿ.ಶ.೧೨೪೭) ಈ ಮನೆತನದ ಪ್ರಖ್ಯಾತ ಹಾಗು ಸಮರ್ಥ ದೊರೆಗಳಲ್ಲೊಬ್ಬ. ಆತನ ಕಾಲದಲ್ಲಿ ಮಧ್ಯ ಕರ್ನಾಟಕದ ಹೆಚ್ಚಿನ ಭಾಗಗಳು ಹೊಯ್ಸಳ–ಸೇವುಣರ ಹೋರಾಟದ ಕಣಗಳಾದವು. ಹೊಯ್ಸಳರೊಂದಿಗೆ ಸತತ ಹೋರಾಟದಲ್ಲಿ ತೊಡಗಿದ್ದ ಈ ಮನೆತನದವರು ಹೊಯ್ಸಳಾಧಿಪತಿ ಇಮ್ಮಡಿ ಬಲ್ಲಾಳನ (ಕ್ರಿ.ಶ.೧೧೭೩–೧೨೨೦) ಆಳ್ವಿಕೆಯಲ್ಲಿ ಅವನತಿಯ ಪಥವನ್ನು ಹಿಡಿಯಬೇಕಾಯಿತು. ಕೃಷ್ಣಾ ನದಿಯಿಂದಾಚೆಯವರೆಗೂ ಇವರು ಹೊಯ್ಸಳರಿಂದ ದೂಡಲ್ಪಟ್ಟರು. ಆದರೂ ಕ್ರಮೇಣ ಬಲಗೊಂಡ ಸೇವುಣರು ಹೊಯ್ಸಳರನ್ನು ತುಂಗಭದ್ರ ನದಿಯವರೆಗೂ ಹಿಮ್ಮೆಟ್ಟಿಸಿ, ತಮ್ಮ ವಿಜಯ ಪತಾಕೆಯನ್ನು ಹಾರಿಸಿದರು. ಬಹುಶ: ಇಮ್ಮಡಿ ಬಲ್ಲಾಳನ ಮರಣಾನಂತರ ಹೊಯ್ಸಳ ಸೋಮೇಶ್ವರನ ಕಾಲಕ್ಕೆ (ಕ್ರಿ.ಶ.೧೨೩೫–೧೨೫೬) ಸೇವಣ ಸಿಂಘಣನು ದಕ್ಷಿಣ ಭಾರತದಲ್ಲಿ ತನ್ನ ರಾಜ್ಯವನ್ನು ವಿಸ್ತರಿಸಿದನೆಂದು ತಿಳಿದುಬರುತ್ತದೆ.[೬೬]

ಈ ಜಿಲ್ಲೆಯೊಳಗಡೆ ದೊರೆತ ಶಾಸನಗಳೆಲ್ಲ ಸಿಂಘಣನ ಅನಂತರ ಕಾಲದವುಗಳಾಗಿದ್ದು, ಅವು ಕನ್ನರ, ಮಹಾದೇವ ಹಾಗೂ ರಾಮಚಂದ್ರ ಇವರ ಆಳ್ವಿಕೆಯ ಕಾಲಕ್ಕೆ ಸೇರಿದ ಶಾಸನಗಳಾಗಿವೆ. ಲಭ್ಯವಿರುವ ಶಾಸನಗಳ ಆಧಾರವಾಗಿಟ್ಟುಕೊಂಡು ಸೇವುಣರಸರ ಚರಿತ್ರೆಯನ್ನು ವಿಶ್ಲೇಷಿಸಲಾಗಿದೆ.

ಚಿಕ್ಕಬಿದರೆ ಗ್ರಾಮದ ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನವೂ ಇವನ ಕಾಲದ್ದಾಗಿದೆ. ಇದರಲ್ಲಿ ಅರಸನನ್ನು ದ್ವಾರವತೀಪುರವರಾಧೀಶ್ವರ, ಸುವರ್ಣಗರುಡ ಧ್ವಜ, ಜಗಝಂಪ ಮಾಳವ, ರಾಯ ಮದನ ತ್ರಿನೇತ್ರ, ಗೊರ್ಜ್ಜರರಾಯ ಭಯಂಕರ ತೆಲುಂಗರಾಯ ಸ್ಥಾಪನಾಚಾರ್ಯ ಇತ್ಯಾದಿ ಬಿರುದುಗಳಿಂದ ವರ್ಣಿಸಿದೆ. ನೊಳಂಬವಾಡಿ ೩೨೦೦೦ ಪ್ರದೇಶದ ಬಿಕ್ಕಿಗ-೭೦ರಲ್ಲಿ ತುಂಗಭದ್ರಾ ನದಿ ಪೂರ್ವ ತೀರದ ಬಿದರೆ ಗ್ರಾಮದಲ್ಲಿ ಕನ್ನೇಶ್ವರ ದೇವಾಲಯವನ್ನು ಬಿಲ್ಲಾಳದ ಅಮೆಯ ನಾಯಕನೆಂಬ ಸೇನಾನಿಯು ಕಟ್ಟಿಸಿ ದೇವರಿಗೆ ಅನೇಕ ದತ್ತಿಗಳನ್ನು ನೀಡಿದ ವಿಷಯ ಶಾಸನದಲ್ಲಿ ಉಕ್ತವಾಗಿದೆ. ಇಲ್ಲಿ ಕನ್ನೇಶ್ವರ ಎಂಬ ಹೆಸರನ್ನು ಗಮನಿಸಬೇಕು. ಈ ಸೇನಾನಿ ತನ್ನ ಪ್ರಭುವಿನ ಹೆಸರಿನಲ್ಲಿ ದೇವಾಲಯವನ್ನು ನಿರ್ಮಿಸಿದನು. ಈ ಶಾಸನದ ಕಾಲ ಕ್ರಿ.ಶ.೧೨೫೮.

ಕ್ರಿ.ಶ. ೧೨೬೫ರ ಅಣಜಿ ಗ್ರಾಮದ ಎರಡು ಶಾಸನಗಳಲ್ಲಿ ಅರಸನನ್ನು ಗೂರ್ಜರರಾಯ ವಾರಣಾಂಕುಶ. ತೆಲುಲಂಗರಾಯ ಶಿರಕಮಳನಾಳೋತ್ಪಾಟನಕರ ಪ್ರತಿಜ್ಞಾಪರಸುರಾಮ, ಮಾಳವಿಯ ಮಲ್ಲ, ಭುಜಬಳ ಭೀಮ ಇತ್ಯಾದಿ ಬಿರುದುಗಳಿಂದ ಉಲ್ಲೇಖಿಸಲಾಗಿದೆ. ಹೆಮ್ಮಾಡಿ ದೇವರಸನ ಮಗ ವಿಠಲ ದೇವರಸ ಮಹಃಅ ಅಗ್ರಹಾರವಾದ ಅಣಜಿಯ ದೆವರಿಗೆ ದಾನ ನೀಡಿದುದನ್ನು ಈ ಶಾಸನ ತಿಳಿಸುತ್ತದೆ. ಹೆಮ್ಮನ ಬೇತೂರಿನ ಶಾಸನೋಕ್ತ ದಾನಿಯೂ ಈತನೇ.

ಹೀಗೆ ಸೇವುಣರು ತಮ್ಮ ಆಳ್ವಿಕಾವಧಿಯಲ್ಲಿ ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸುತ್ತಿದ್ದರೆಂದು, ಅವರ ಶಾಸನಗಳು ಉಲ್ಲೇಖಿಸುತ್ತವೆ. ಒಟ್ಟಾರೆಯಾಗಿ ಸೇವುಣ ಅರಸರು ಈ ಜಿಲ್ಲೆಯೊಳಗಡೆ ಆಳ್ವಿಕೆ ಹಲವು ಪ್ರಜಾಹಿತ ಕಾರ್ಯಗಳನ್ನು ಕೈಗೊಂಡಿದ್ದರೆಂಬುದನ್ನು ಮರೆಯುವಂತಿಲ್ಲ.

**ಹೊಯ್ಸಳರ ಆಳ್ವಿಕೆ**

ಕರ್ನಾಟಕ ರಾಜಮನೆತನಗಳಲ್ಲಿ ಕ್ರಿ.ಶ.೧೦೦೦-೧೩೪೬ರವರೆಗೆ ಆಳ್ವಿಕೆ ಮಾಡಿದ ಹೊಯ್ಸಳರ ಸ್ಥಾನ ಮಹತ್ವವಾದುದ್ದು. ಇವರು ಕ್ರಿ.ಶ.೧೧ನೇ ಶತಮಾನದಿಂದ ೧೪ನೇ ಶತಮಾನದ ಮಧ್ಯಕಾಲದವರೆಗೆ ಕರ್ನಾಟಕ ಮಾತ್ರವಲ್ಲದೇ ದಕ್ಷಿಣ ಭಾರತದಲ್ಲಿ ಆಳ್ವಿಕೆ ನಡೆಸಿದರು. ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಸಾಹಿತ್ಯಿಕ ಮತ್ತು ಶಿಲ್ಪ ಕಲೆಗಳ ದೃಷ್ಟಿಯಿಂದ ಹೊಯ್ಸಳರ ಆಳ್ವಿಕೆಯ ಅವಧಿ ಅತ್ಯಂತ ಮುಖ್ಯವಾಗಿದೆ.

ಹೊಯ್ಸಳರು ಚಾಲುಕ್ಯರ ಸಾಮಂತರಾಗಿದ್ದಾಗಲೇ ನೊಳಂಬವಾಡಿಯು, ಅಂದರೆ ಚಿತ್ರದುರ್ಗ ಮತ್ತು ಅದರ ಸುತ್ತಲಿನ ಪ್ರದೇಶಗಳು ಗಮನಸೆಳೆದಿದ್ದವು. ಕ್ರಿ.ಶ.೧೦೬೩ ರಿಂದ ಆಳಿದ ಎರೆಯಂಗನು ಪಾಂಡ್ಯರಾಜ ಇರುಕ್ಕವೇಲನ ಮಗಳನ್ನು ಮದುವೆಯಾಗಿದ್ದು, ಅನಂತರ ಅವನ ಮಗ ಒಂದನೆಯ ಬಲ್ಲಾಳನು ತನ್ನ ಸಹೋದರ ಬಿಟ್ಟಿದೇವನೊಡನೆ ಉಚ್ಚಂಗಿ ಪಾಂಡ್ಯರ ಮೇಲೆ ಯುದ್ಧ ಮಾಡಿ ಅವರ ಸಮಸ್ತ ಸಂಪತ್ತನ್ನು ಸೂರೆ ಮಾಡಿದನಂತೆ. ಅವನು ದುಮ್ಮಿಯ ಬಳಿ ನಡೆದ ಯುದ್ಧದಲ್ಲಿ ಉಚ್ಚಂಗಿ ಪಾಂಡ್ಯರನ್ನು ಸೋಲಿಸಿ 'ನೊಳಂಬವಾಡಿಗೊಂಡ' ಎಂಬ ಬಿರುದಿಗೆ ಪಾತ್ರನಾದನು.

ಹೊಯ್ಸಳ ಸಾಮ್ರಾಜ್ಯದ ನಾಡ ಪ್ರಭು ಅಣ್ಣಮರಸನು ಹೊಳಲ್ಕೆರೆ ನಾಡನ್ನು ಪಾಲಿಸುತ್ತಿದ್ದು, ಸ್ವಯಂಭು ಕಲಿ ದೇವಾಲಯಕ್ಕೆ ರಾಮೇಶ್ವರನಿಗಾಗಿ ನದಿ ತೀರದ ಭೂಮಿಯನ್ನು ಹಾಗು ದಾನದತ್ತಿಗಳನ್ನು ಮುಂದುವರಿಸಿದ ಬಗ್ಗೆ ಅಲ್ಲಿನ ಶಾಸನವೊಂದು ವಿವರಿಸುತ್ತದೆ. 'ತೊಪಿಲ್ಲೆ' ದಣ್ಣಾಯಕನನ್ನು ಬೆಳಗವರ್ತಿ

(ಈಗಿನ ಬೆಳಗುತ್ತಿ) ನಾಡಿನ ರಾಜ್ಯಪಾಲನನ್ನಾಗಿ ನೇಮಿಸಿದನೆಂದು ಅಲ್ಲಿನ ಶಾಸನದಿಂದ ತಿಳಿಯಬಹುದು.[೬]

ಕ್ರಿ.ಶ.೧೨೧೮ರ ಕುಂದವಾಡ ಗ್ರಾಮದ ಶಾಸನವು ಹೊಯ್ಸಳರ ಕಾಲದ ಈ ಭಾಗದ ಆರ್ಥಿಕ ಜೀವನಕ್ಕೆ ಹಿಡಿದ ಕೈಗನ್ನಡಿಯಂತಿದೆ. ಈತನ ರಾಣಿಯಾದ ಅಭಿನವ ಕೇತಲದೇವಿಯು ಈ ಕುಂದವಾಡದಲ್ಲಿ ಪ್ರತಿ ಬುಧವಾರ ಸಂತೆ ನಡೆಯುವಂತೆ ಅಲ್ಲಿನ ಗೌಡನಿಗೆ ಆದೇಶಿಸಿ, ಅದರಿಂದ ಬರುವ ಆದಾಯವನ್ನು ಸೋಮನಾಥ ದೇವರಿಗೆ ದತ್ತಿ ಬಿಟ್ಟಿದ್ದನ್ನು ತಿಳಿಸುತ್ತದೆ..[೭]

ಇಮ್ಮಡಿ ಬಲ್ಲಾಳನ ತರುವಾಯ ಅವನ ಮಗ ಇಮ್ಮಡಿ ನರಸಿಂಹನು (ಕ್ರಿ.ಶ.೧೨೨೦–೧೨೩೫) ಸಿಂಹಾಸನಕ್ಕೆ ಬಂದನು. ಇಲ್ಲಿನ ಶಾಸನಗಳಿಂದ ಈಗಿನ ದಾವಣಗೆರೆ, ಹರಿಹರ, ಚಿತ್ರದುರ್ಗ, ಹೊಳಲ್ಕೆರೆ, ಹೊಸದುರ್ಗ, ಚಳ್ಳಕೆರೆ ತಾಲೂಕುಗಳು ಇವನ ಆಡಳಿತಕ್ಕೊಳಪಟ್ಟಿದ್ದವೆಂದು ವ್ಯಕ್ತವಾಗುತ್ತದೆ. ಇವನ ಆಳ್ವಿಕೆಯ ವೇಳೆಗೆ ಗಾಳಿಯ ಕಲ್ಲು, ಆದಂಗಿಬೆಟ್ಟ, ಉಕ್ಕೆದೋಣಿ, ತಲ್ಯೆ ಕಟ್ಟೆ, ಬಿದರಹಳ್ಳಿಗಳು (ಈಗಿನ ಹೊನ್ನಾಳಿ ತಾಲೂಕಿನ ಹಳ್ಳಿಗಳು) ಗಂಗಾವಾಡಿ ಪ್ರಾಂತ್ಯದ ಮೇರೆಗಳಾಗಿ ದ್ದವೆಂದು ಶಾಸನವೊಂದರಿಂದ ತಿಳಿದುಬರುತ್ತದೆ.[೮]

ಮೋಲಾಳ್ವ ದಂಡಾಧೀಪನು ಶೂರನೂ, ಅಪಾರ ದೈವ ಭಕ್ತನೂ ಆಗಿದ್ದಂತೆಯೇ 'ಹರಿಚರಿತ'ವನ್ನು ಷಟ್ಪದಿಯಲ್ಲಿ ರಚಿಸಿದ ಗ್ರಂಥ ಕರ್ತೃವು ಆಗಿದ್ದನೆಂದು ಶಾಸನವು ವರ್ಣಿಸುತ್ತದೆ. ಹೊಯ್ಸಳ ಪ್ರಭುಗಳಂತೆಯೇ ಅವರ ಮಂತ್ರಿಗಳು ಮತ್ತು ದಂಡಾಧಿಪತಿಗಳು ವಿದ್ಯಾ–ವಿನಯಶೀಲರೂ. ದೈವಭಕ್ತಿ ಸಂಪನ್ನರೂ ಆಗಿರುತ್ತಿದ್ದರೆಂಬುದಕ್ಕೆ ಈ ಶಾಸನ ಉತ್ತಮ ಉದಾಹರಣೆಯೆನ್ನಬಹುದು.

ಇಮ್ಮಡಿ ನರಸಿಂಹನು ಕ್ರಿ.ಶ.೧೨೩೪ರಲ್ಲಿ ಮೃತನಾಗಲು ಅವನ ಮಗ, ಸೋಮೇಶ್ವರನು (ಕ್ರಿ.ಶ.೧೨೩೪–೧೨೫೬) ಪಟ್ಟಕ್ಕೆ ಬಂದನು. ಜಗಳೂರು ತಾಲೂಕು ಕಲ್ಲೇದೇವರಪುರದ ಕಲ್ಲೇಶ್ವರ ದೇವಾಲಯಕ್ಕೆ ಸಮೀಪದಲ್ಲಿರುವ ಶಾಸನವೇ ಈ ಜಿಲ್ಲೆಯಲ್ಲಿ ದೊರೆತ ಸೋಮೇಶ್ವರನಿಗೆ ಸಂಬಂಧಿಸಿದ ಮೊದಲನೆಯ ಶಾಸನ.[೯] ಅವನು ಪಟ್ಟಕ್ಕೆ ಬಂದ ವರುಷದಲ್ಲೇ ಈ ಶಾಸನ ಬರೆಸಲಾಗಿದೆ. ಸೋಮೇಶ್ವರನೂ ಸಹ ಗಂಗವಾಡಿ ೬೬೦೦೦ ಮತ್ತು ನೊಳಂಬವಾಡಿ ೩೨೦೦೦ ನಾಡುಗಳನ್ನು ಆಳುತ್ತಿದ್ದು. ಸಾಮಾನ್ಯವಾಗಿ ಹೊಯ್ಸಳ ಅರಸರೆಲ್ಲರೂ ಧರಿಸಿದ್ದ ಬಿರುದುಗಳನ್ನು ಈ ಶಾಸನದಲ್ಲಿ ಕಾಣಬಹುದು. ಈ ಶಾಸನವು ಸಾಕಷ್ಟು ಅಳಿಸಿ ಹೋಗಿರುವುದರಿಂದ ಸಿಕ್ಕುವ ವಿವರಗಳು ಅಲ್ಪ.

ನಾರಸಿಂಗಯ್ಯ ನಾಯಕ ಮತ್ತು ಮಲ್ಲಯ್ಯ ನಾಯಕರು ಬೆಮ್ಮತ್ತನೂರು (ಚಿತ್ರದುರ್ಗ) ಸೀಮೆಯನ್ನು ಆಳುತ್ತಿದ್ದು, ಬೆಮ್ಮತ್ತನೂರು ದುರ್ಗದ ಸ್ವಯಂಭುವನೇಶ್ವರ ದೇವಿಗೆ ದತ್ತಿಕೊಟ್ಟಿರುವುದನ್ನು ಅದು ತಿಳಿಸುತ್ತದೆ. ದಾವಣಗೆರೆ ತಾಲೂಕು ಲೋಕಿಕೆರೆ ಗ್ರಾಮದ ಈಶ್ವರ ದೇವಾಲಯದ ಕಂಭವೊಂದರ ಮೇಲೆ ಇರುವ ಕ್ರಿ.ಶ.೧೨೩೬ರ ಶಾಸನವೂ ಸೋಮೇಶ್ವರನು ಧರಿಸಿದ್ದ ಬಿರುದುಗಳನ್ನು ತಿಳಿಸಿ, ಅಂದಿನ ಆರ್ಥಿಕ ಸ್ಥಿತಿಯನ್ನು ಕುರಿತು ಮಾಹಿತಿ ನೀಡುತ್ತದೆ. ಕೇತೇಶ್ವರ ದೇವರಿಗೆ ನಂದಾದೀವಿಗೆ ಗೋಸ್ಕರ ಸುಂಕ ಸರ್ವಾಧಿಕಾರಿಗಳು ಅಡಿಕೆ–ಎಲೆ ಸುಂಕ ಮತ್ತು ಗದ್ಯಾಣಗಳನ್ನು ಸಲ್ಲಿಸಲು ಏರ್ಪಾಟು ಮಾಡಿದ್ದನ್ನು ಆ ಶಾಸನ ಹೇಳುತ್ತದೆ.[೧೦] ಈ ಎಲ್ಲಾ ಶಾಸನಗಳಿಂದ ಸೋಮೇಶ್ವರನು

ಜಗಳೂರು, ಚಿತ್ರದುರ್ಗ ನಾಡುಗಳನ್ನು ತನ್ನ ಅಧೀನ ಮಾಡಿಕೊಂಡು ಆಳ್ವಿಕೆ ನಡೆಸಲು ವ್ಯವಸ್ಥೆ ಮಾಡಿದನೆಂದು ತಿಳಿದುಬರುತ್ತದೆ.

ಸೋಮೇಶ್ವರನು ಕ್ರಿ.ಶ.೧೨೫೬ರಲ್ಲಿ ಮರಣ ಹೊಂದುವ ಮೊದಲೇ ಕ್ರಿ.ಶ.೧೨೫೪ರಲ್ಲಿ ಅವನ ಮಗ ಮುಮ್ಮಡಿ ನರಸಿಂಹನು ಯುವರಾಜನಾಗಿ ಪಟ್ಟಾಭಿಷಿಕ್ತನಾಗಿ, ಕ್ರಿ.ಶ.೧೨೫೪ರಲ್ಲಿ ಆಡಳಿತದ ಹೊಣೆಯನ್ನು ಹೊತ್ತುಕೊಂಡನು. ಇವನ ಆಳ್ವಿಕೆಗೆ ಚಿತ್ರದುರ್ಗ, ಹೊಳಲ್ಕೆರೆ, ಹಿರಿಯೂರು ಮತ್ತು ಚಿತ್ರದುರ್ಗ ಪ್ರಾಂತ್ಯಗಳು ಸೇರಿಕೊಂಡಿದ್ದು. ಈ ಪ್ರದೇಶಗಳಲ್ಲಿ ಸುಮಾರು ಒಂಭತ್ತು ಶಾಸನಗಳು ದೊರೆತಿವೆ. ಚಿತ್ರದುರ್ಗ ಮತ್ತು ಹೊಳಲ್ಕೆರೆ ತಾಲೂಕುಗಳಲ್ಲಿ ದೊರಕಿರುವ ಕ್ರಿ.ಶ.೧೨೬೮ರ ಎರಡು ಶಾಸನಗಳೇ ಈ ಜಿಲ್ಲೆಯಲ್ಲಿ ದೊರೆತ ಇವನ ಕಾಲದ ಮೊಟ್ಟಮೊದಲ ಶಾಸನಗಳು.

ತುಂಗಭದ್ರಾ ನದಿಯವರೆಗೆ ವಿಸ್ತಾರಗೊಂಡಿದ್ದ ಹೊಯ್ಸಳರ ಸಾಮ್ರಾಜ್ಯಕ್ಕೆ ಚಿತ್ರದುರ್ಗ ಜಿಲ್ಲೆಯೂ ಸೇರಿತ್ತು. ಹೊಯ್ಸಳ ಅರಸ ಸೋಮೇಶ್ವರ ಕ್ರಿ.ಶ.೧೨೩೬ರಲ್ಲಿ ಪಂಪಾಕ್ಷೇತ್ರದ ವಿರೂಪಾಕ್ಷನ ಆರಾಧನೆಗಾಗಿ ಒಂದು ಹಳ್ಳಿಯನ್ನು ದಾನ ಕೊಟ್ಟಿದ್ದಾನೆ. ಇದೇ ಅರಸನ ಕಾಲದ ಕ್ರಿ.ಶ.೧೨೩೮ರ ಹಾಸನ ಜಿಲ್ಲೆಯ ಯಲ್ಲೇಶ್ವರದ ಶಾಸನದಲ್ಲಿ ಭೀಮ್ಮಣ್ಣನೆಂಬುವನನ್ನು ಹೇಮಕೂಟದ ವಿರೂಪಾಕ್ಷ ದೇವರ ಪಾದಪದ್ಮಾಧಾರಕನೆಂದು ಸ್ತುತಿಸಲಾಗಿದೆ.

ಹರಿಹರ ದೇವಾಲಯದ ಮಹಾದ್ವಾರದ ಬಳಿ ಇರುವ ಶಾಸನವು ವಿಸ್ತಾರವಾಗಿದ್ದು. ಅದನ್ನು ಮುಮ್ಮಡಿ ನರಸಿಂಹನ ಸೋದರ ಸಂಬಂಧಿ ಸೋಮೇಯ ದಣ್ಣಾಯಕನು ಬರೆಸಿದನು. ಇವನಿಗೆ ಗಾಯಿಗೋಪಾಲ, ಗಂಡಪೆಂಡರ, ಮಾಂಡಳೀಕ ಇವೇ ಮೊದಲಾದ ಬಿರುದುಗಳಿದ್ದವು. ಇವನು ಹರಿಹರ ದೇವಾಲಯದ ಪೂರ್ವ ದಿಕ್ಕಿನಲ್ಲಿರುವ ಐದು ಅಂತಸ್ತುಗಳುಳ್ಳ ದ್ವಾರ ಮಂಟಪವನ್ನು ನಿರ್ಮಿಸಿ, ಗೋಪುರದ ಮೇಲೆ ಐದು ಕಳಶಗಳನ್ನು ಸ್ಥಾಪಿಸಿ, ಅಲ್ಲಿ ಶಿವ ಮತ್ತು ವಿಷ್ಣು ದೇವಾಲಯಗಳನ್ನು ಕಟ್ಟಿಸಿದನೆಂದು ಈ ಮೇಲಿನ ಶಾಸನಗಳಿಂದ ತಿಳಿದುಬರುತ್ತದೆ. ಇಮ್ಮಡಿ ನರಸಿಂಹನ ಮಂತ್ರಿ ಪೋಲಾಳ್ವನಂತೆಯೇ ಸೋಮದೇವನು ಹರಿಹರ ದೇವರಿಗೆ ಸೇವೆ ಸಲ್ಲಿಸಿದ್ದನ್ನು ವಿದ್ಯೆಗೆ ಪ್ರೋತ್ಸಾಹ ನೀಡಿದ್ದನ್ನು ಇದೇ ಶಾಸನವು ಉಲ್ಲೇಖಿಸುತ್ತದೆ.

ಹರಿಹರ ದೇವಾಲಯಕ್ಕೆ ಉತ್ತರ ಭಾಗದಲ್ಲಿರುವ ಶಾಸನೋಕ್ತ ವೀರಗಲ್ಲು[೮೨] ಮುಮ್ಮಡಿ ನರಸಿಂಹನ ಕಾಲದ ಹೊಯ್ಸಳ ಶಾಸನಗಳಲ್ಲಿ ಕೊನೆಯದು. ಈ ವೀರಗಲ್ಲು ಐತಿಹಾಸಿಕ ದೃಷ್ಟಿಯಿಂದ ಮಹತ್ವದ್ದಾಗಿದೆ. ಏಕೆಂದರೆ ಈ ಹಿಂದೆಯೇ ಹೇಳಿದಂತೆ ಹರಿಹರ ದೇವಾಲಯದ ಪೂರ್ವ ದಿಕ್ಕಿಗಿರುವ ಐದು ಅಂತಸ್ತಿನ ದ್ವಾರ ಮಂಟಪವನ್ನು ಹಾಗೂ ಪ್ರಸನ್ನ ಸೋಮನಾಥಪುರ ಅಗ್ರಹಾರವನ್ನು ಈತ ನಿರ್ಮಿಸಿದನು. ಮುಮ್ಮಡಿ ನರಸಿಂಹನ ಮಂತ್ರಿಗಳಲ್ಲಿ ಒಬ್ಬನಾದ ಸೋಮ ದಣ್ಣಾಯಕನು ಮಂಟಪದ ಗೋಪುರದ ಮೇಲೆ ಪಂಚ ಕಳಶಗಳನ್ನು ಇರಿಸಿ, ಅಲ್ಲಿಂದ ಬರುತ್ತಿರುವಾಗ ಕಂಚಿಕೆರೆಯ ಬಳಿ ಬೇಡರು ಅವನನ್ನು ಮುತ್ತಿದರು. ಅವರಲ್ಲಿ ಕೆಲವರನ್ನು ಇವನು ಕೊಂದುಹಾಕಿದನು. ಆದರೂ ಕೊನೆಗೆ ಬೇಡರ ಪಡೆಯಿಂದ ಮರಣ ಹೊಂದಿದನು. ಆತನ ಸ್ಮಾರಕವಾಗಿ ಈ ಮೇಲಿನ ವೀರಗಲ್ಲನ್ನು ಸ್ಥಾಪಿಸಿದರು.

ಹೊಯ್ಸಳರಿಗೆ ಶನಿವಾರ ಸಿದ್ಧಿ, ಗಿರಿದುರ್ಗ ಮಲ್ಲ ಉಚ್ಚಂಗಿದುರ್ಗ ಗೆದ್ದಿದ್ದರಿಂದ ಹೊಯ್ಸಳರಿಗೆ ಶನಿವಾರ ಸಿದ್ಧಿ, ಗಿರಿದುರ್ಗ ಮಲ್ಲ ಎಂಬ ಬಿರುದು ಬಂದವೆಂದು ಅಭಿಪ್ರಾಯಪಟ್ಟಿರುತ್ತಾರೆ. ಆದರೆ ಹೊಯ್ಸಳರಿಗಿಂತ ಮೊದಲೇ ಈ ಬಿರುದು ಬಂದಿದೆ ಎಂಬುದನ್ನು ಕೆಲ ಶಾಸನಗಳು ಉಲ್ಲೇಖಿಸುತ್ತವೆ.[೨೪] ಅಸಗೋಡು ಪಲ್ಲವರ ಕಾಲದಲ್ಲಿ ಉಚ್ಚಂಗಿ ಮೂವತ್ತರಲ್ಲಿ ಹೊಯ್ಸಳ ದೊರೆ ವೀರ ನರಸಿಂಹನು ಕಲಿದೇವರಿಗೆ ಭೂಮಿಯನ್ನು ದಾನ ಕೊಟ್ಟ ಶಾಸನವಿದೆ. ಇದು ಹೊಯ್ಸಳರ ಕಾಲದ್ದಾಗಿದ್ದು, ನಂತರ ದಿನಗಳಲ್ಲಿ ಇದರ ಮೇಲ್ಭಾಗದಲ್ಲಿ ವಿಗ್ರಹ ಕೆತ್ತಿರುವುದರಿಂದ ಶಾಸನದ ಸಾಲುಗಳು ಕತ್ತರಿಸಿ ಹೋಗಿವೆ. ಉಚ್ಚಂಗಿ ದುರ್ಗವನ್ನು ಪಾಂಡ್ಯರಿಂದ ಗೆದ್ದ ಹೊಯ್ಸಳರು ವಿಜಯನಗರ ಸ್ಥಾಪನೆಯವರೆಗೆ ತಮ್ಮ ಅಧೀನದಲ್ಲಿಟ್ಟುಕೊಂಡಿದ್ದರು. ಜಿಲ್ಲೆಯ ವಿವಿಧ ಕಡೆ ಇವರ ಕಾಲದ ದೇವಾಲಯಗಳು ಕಂಡುಬಂದಿವೆ. ಇದರಿಂದಾಗಿ ಚಿತ್ರದುರ್ಗ ಜಿಲ್ಲೆಯವರೆಗೆ ಇವರ ಆಳ್ವಿಕೆ ವಿಸ್ತರಿಸಿತ್ತೆಂದು ಹೇಳಬಹುದು. ಈ ಜಿಲ್ಲೆಯ ಒಳಗಡೆ ಹೊಯ್ಸಳ ರಾಜರು ತಮ್ಮ ನಿರ್ದಿಷ್ಟ ಕಾಲಾವಧಿಯಲ್ಲಿ ಅನೇಕ ಪ್ರಜಾಹಿತ ಕಾರ್ಯಗಳನ್ನು ಕೈಗೊಂಡು ಮೆಚ್ಚುಗೆ ಗಳಿಸಿಕೊಂಡಿದ್ದಾರೆ.

**ವಿಜಯನಗರ ಅರಸರ ಆಳ್ವಿಕೆ**

ಈ ಸಾಮ್ರಾಜ್ಯವನ್ನು ಕ್ರಿ.ಶ.೧೩೩೬ ರಿಂದ ಕ್ರಿ.ಶ.೧೫೬೫ರ ವರೆಗೆ ಸಂಗಮ, ಸಾಳುವ, ತುಳುವ ಮತ್ತು ಅರವೀಡು ಎಂಬ ನಾಲ್ಕು ಪ್ರಮುಖ ಅರಸು ಮನೆತನದವರು ಆಳಿದರು. ರಾಜ್ಯ ಸ್ಥಾಪನೆಯ ಕೀರ್ತಿಯು ಒಂದನೇ ಹರಿಹರ ಮತ್ತು ಬುಕ್ಕನಿಗೆ ಸಲ್ಲುತ್ತದೆ.

ಸಂಗಮ ವಂಶವು ಕ್ರಿ.ಶ.೧೩೩೬ ರಿಂದ ೧೪೮೫ರ ವರೆಗೆ ೯ ಜನ ಅರಸರು ಆಳ್ವಿಕೆ ನಡೆಸಿದರು. ಸಂಗಮ ವಂಶವು ಕ್ರಿ.ಶ.೧೩೩೬ರಲ್ಲಿ ಹರಿಹರ, ಒಂದನೇ ಬುಕ್ಕ, ಕಂಪಣ್ಣ, ಮಾರಪ್ಪ ಮತ್ತು ಮುದ್ದಪ್ಪ ಎಂಬ ಸಹೋದರರಿಂದ ಸ್ಥಾಪನೆಯಾಯಿತು. ಚಿತ್ರದುರ್ಗ ಜಿಲ್ಲೆಯಲ್ಲಿ ವಿಜಯನಗರದ ಅರಸರು ನೇರವಾಗಿ ಇಲ್ಲವೇ ಪರೋಕ್ಷವಾಗಿ ತನ್ನ ಅಧಿಕಾರವನ್ನು ಸ್ಥಾಪಿಸಿದ್ದರು. 'ಬೆಮ್ಮತ್ತನಕಲ್ಲುನ್ನು' ಕೇಂದ್ರವನ್ನಾಗಿ ಮಾಡಿಕೊಂಡು ವಿಜಯನಗರದ ಪ್ರತಿನಿಧಿ 'ಮಲ್ಲಿನಾಥ ಒಡೆಯ'ನೆಂಬುವನು ಆಡಳಿತ ನಡೆಸುತ್ತಿದ್ದನೆಂದು ತಿಳಿದುಬರುತ್ತದೆ.[೨೫] ಮಲ್ಲಿನಾಥ ಒಡೆಯನು ಅಳಿಯ ಸಾಯಿನಾಯಕನ ಮಗನೆಂದು, ಸಾಯಿನಾಯಕನು ರಾಜನಾಗಿದ್ದ ಮೊದಲನೆಯ ಬುಕ್ಕನ ಮಗನೆಂದು ಅದೇ ಶಾಸನ ವಿವರಿಸುತ್ತದೆ. ಇದರಿಂದ ಈ ಜಿಲ್ಲೆ ಮೊದಲಿನಿಂದಲೂ ಈ ರಾಜಮನೆತನದ ಸಮೀಪ ಸಂಬಂಧಿಗಳ ಕೈಯಲ್ಲಿದ್ದಿತ್ತೆಂದು ಅರಿಯಬಹುದು.

ಒಂದನೇ ಹರಿಹರನಿಗೆ ೧೩೩೬ರಲ್ಲಿ ವೀರಬಲ್ಲಾಳನು ಸಮಸ್ತ ಅಧಿಕಾರವನ್ನು ನೀಡಿದನು. ಹರಿಹರ ಕ್ರಿ.ಶ.೧೩೪೨ರಲ್ಲಿ ಸ್ವತಂತ್ರವಾದ ಮತ್ತು ಸುಭದ್ರವಾದ ವಿಜಯನಗರದ ತಳಹದಿಯನ್ನು ಹಾಕಿದನು. ಈತ ರಾಜ್ಯವನ್ನು ಬಾದಾಮಿಯವರೆಗೆ ವಿಸ್ತರಿಸಿದನು.[೨೬] ಹರಿಹರ ರಾಜ್ಯ ಸ್ಥಾಪನೆಯ ಜೊತೆಗೆ ಉತ್ತಮ ಆಡಳಿತಗಾರನಾಗಿದ್ದನು. ಉತ್ತಮ ಸರ್ಕಾರವನ್ನು ರೂಪಿಸಿ ರಾಜ್ಯದಲ್ಲಿ ಶಾಂತಿ ಸುಭದ್ರತೆ ಸ್ಥಾಪಿಸಿದನು. ೨ನೇ ಹರಿಹರ ರಾಯನು ವಿಷ್ಣು ಭಕ್ತನಾಗಿದ್ದು, ನಗರದಲ್ಲಿನ ವಿಷ್ಣು ದೇವಾಲಯಕ್ಕೆ ದತ್ತಿ ಬಿಟ್ಟ ಬಗ್ಗೆ ಶಾಸನ ವಿವರಿಸುತ್ತದೆ.[೨೭] ಹರಿಹರ ರಾಯನ ಮಗ ಚಿಕ್ಕ ಒಡೆಯರ್, ಕಂಪಣ–೩೬ರಲ್ಲಿನ ಅರಗ ಮಲೆ ರಾಜ್ಯ(araga male-rajya)ವನ್ನು ೧೩೭೯ರಲ್ಲಿ

ಆಳಿದನೆಂದು ತಿಳಿದು ಬರುತ್ತದೆ.[೮೭] ಇದೇ ವರ್ಷದಲ್ಲಿ ಕುರುವದಲ್ಲಿನ ರಾಮೇಶ್ವರ ದೇವರಿಗೆ ದಾನ ಬಿಟ್ಟನೆಂದು ಹಾಗೂ ರಾಮಪುರ ಗ್ರಾಮ ಸ್ಥಾಪಿಸಿದನೆಂದು ಹೊನ್ನಾಳಿ ತಾಲೂಕಿನ ಶಾಸನವೊಂದರಿಂದ ತಿಳಿದು ಬರುತ್ತದೆ.[೮೮] ಚಿತ್ರದುರ್ಗ ತಾಲೂಕಿನಲ್ಲಿ ದೊರೆತಿರುವ ಶಾಸನವೊಂದು ಎರಡನೆ ಹರಿಹರನು ಶಂಕರಪುರವೆಂಬ ಗ್ರಾಮವನ್ನು ದಾನಕೊಟ್ಟನು. ಈ ಗ್ರಾಮವು ಹರಿಹರ ಸೀಮೆ. ಉಚ್ಚಂಗಿ? ಕೊಟ್ಟೂರು ಚಾವಡಿಗೆ ಸೇರಿತ್ತೆಂದು ಶಾಸನ ತಿಳಿಸುತ್ತದೆ.[೮೯] ವೇದ ಮತ್ತು ಶಾಸ್ತ್ರಗಳನ್ನು ಸತತವಾಗಿ ಅಭ್ಯಾಸ ಮಾಡುವುದಕ್ಕಾಗಿ ಎರಡನೇ ಹರಿಹರನು ಶಂಕರಾಪುರವೆಂಬ ಗ್ರಾಮವನ್ನು ಬ್ರಾಹ್ಮಣರಿಗೆ ದಾನ ಮಾಡಿದ. ಇದೇ ಅರಸನ ಮಂತ್ರಿಯಾಗಿದ್ದ ಮುದ್ಧ ದಂಡನಾಯಕನು ಮೂವತ್ತಾರು ವೃತ್ತಿಗಳುಳ್ಳ ಅಗ್ರಹಾರವೊಂದನ್ನು ರಚಿಸಿ, ಬ್ರಾಹ್ಮಣರಿಗೂ ದೇವಾಲಯಕ್ಕೂ ದತ್ತಿ ಕೊಟ್ಟನು. ವಿಜಯನಗರ ಸಾಮ್ರಾಜ್ಯದ 'ಕೊಟ್ಟೂರು ಚಾವಡಿ'ಗೆ ಇಂದಿನ ಚಿತ್ರದುರ್ಗ ಮತ್ತು ಹರಿಹರ ತಾಲೂಕುಗಳೂ ಸೇರಿದ್ದವೆಂಬ ಅಭಿಪ್ರಾಯವೂ ಇದೆ.[೯೦] ನಂತರ ಹರಿಹರನ ಸಹೋದರ ಒಂದನೇ ಬುಕ್ಕನು(೧೩೫೬–೭೭) ಅಧಿಕಾರಕ್ಕೆ ಬಂದ. ಈತ ತನ್ನ ಮಗ ಎರಡನೇ ಕಂಪಣನ ನೆರವಿನಿಂದ ದಕ್ಷಿಣದಲ್ಲಿನ ವೈರಿಗಳನ್ನು ಅಡಗಿಸಿದನು. ಕಂಪಣನ ಪತ್ನಿ ಗಂಗಾದೇವಿಯ ಕೃತಿ 'ಮಧುರಾ ವಿಜಯಂ' ಅಥವಾ 'ವೀರಕಂಪರಾಯ ಚರಿತಂ'ನಲ್ಲಿ ಕಂಪಣನ ಕಾರ್ಯವನ್ನು ವಿವರಿಸಿದ್ದಾಳೆ.

ಎರಡನೇ ಕಂಪಣನು ಗುಲಬರ್ಗಾದ ಮಹಮ್ಮದ್ ಷಾ ಮತ್ತು ಅನಂತರ ಬಂದ ಮುಜಾಹಿದ್ ಇವರೊಡನೆ ಅನೇಕ ಯುದ್ಧಗಳನ್ನು ಮಾಡಿದನು. ಈತ ಮುಸಲ್ಮಾನರ ದಾಳಿಗಳಿಂದ ನಾಶವಾದ ಮಧುರೆ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದನು.[೯೧]

ಕ್ರಿ.ಶ.೧೪೦೪ರಲ್ಲಿ ಎರಡನೇ ಬುಕ್ಕ ಸಿಂಹಾಸನಕ್ಕೆ ಬಂದನು. ಇವನ ಅಕಾಲ ಮರಣದಿಂದ ಕ್ರಿ.ಶ.೧೪೦೬ರಲ್ಲಿ ಒಂದನೇ ದೇವರಾಯನು ಸಿಂಹಾಸನಕ್ಕೆ ಏರಿದನು. ಈತನು ಅಧಿಕಾರಕ್ಕೆ ಬಂದ ಕೂಡಲೆ ಬಹುಮನಿ ರಾಜ್ಯದ ಸುಲ್ತಾನ ಫಿರೋಜ್ ಷಾನೊಂದಿಗೆ ಯುದ್ಧ ಮಾಡಿದನು. ಕೊನೆಗೆ ಒಂದನೇ ದೇವರಾಯ ವಿವಾಹ ಮಾಡಿ ಮೈತ್ರಿ ಸಂಬಂಧ ಬೆಳೆಸಿದ. ಇವನ ಆಡಳಿತದ ಸಂದರ್ಭದಲ್ಲಿ ವಿದೇಶಿ ಪ್ರವಾಸಿಗ ಇಟಲಿ ದೇಶದ ನಿಕೋಲೋ ಕೊಂಟಿ ವಿಜಯನಗರವನ್ನು ಸಂದರ್ಶಿಸಿದನು. ನ್ಯೂನಿಜ್‌ನು 'ದೇವರಾಯ ಸದಾ ಕಾಲ ಮೂರರೊಂದಿಗೆ? ಯುದ್ಧದಲ್ಲಿ ತೊಡಗಿರುತ್ತಿದ್ದನು' ಎಂದು ಹೇಳುತ್ತಾನೆ. ದೇವರಾಯ ರಾಜ್ಯ ವಿಸ್ತಾರ, ಕೋಟೆ–ಕೊತ್ತಲಗಳನ್ನು ವಿಸ್ತಾರಗೊಳಿಸಿ ಆ ನಗರಕ್ಕೆ ಸುಭದ್ರತೆಯನ್ನು ಒದಗಿಸಿದನು. ಮೊದಲನೆಯ ದೇವರಾಯನ ಮಂತ್ರಿಯಾಗಿದ್ದ ಜಗನ್ನಾಥನ ಮಗ ಬುಳ್ಳಪ್ಪನು ಹರಿದ್ರಾ ನದಿಗೆ ಕೃಷಿಯ ಅಭಿವೃದ್ಧಿಗಾಗಿ ಅಣೆಕಟ್ಟನ್ನು ಕಟ್ಟಿಸಿದನೆಂದು ದಾವಣಗೆರೆ ತಾಲೂಕಿನ ಶಾಸನದಿಂದ ತಿಳಿದುಬರುತ್ತದೆ. ಕಾಲಕ್ರಮೇಣ ಈ ಅಣೆಕಟ್ಟು ಒಡೆದು, ಪ್ರಜೆಗಳು ಕಷ್ಟ–ನಷ್ಟಗಳನ್ನು ಅನುಭವಿಸುತ್ತಿದ್ದಾಗ ದಂಡನಾಯಕನಾದ ಚಾಮನೃಪನು ಅದನ್ನು ಸರಿಪಡಿಸಿ ಮತ್ತೆ ಜನಗಳಿಗೆ ಅನುಕೂಲ ಮಾಡಿಕೊಟ್ಟನು.[೯೨]

ಶ್ರೀಕೃಷ್ಣದೇವರಾಯನು ಕ್ರಿ.ಶ.೧೫೦೯ ರಿಂದ ೧೫೩೦ರ ವರೆಗೆ ಆಳ್ವಿಕೆ ನಡೆಸಿದನು. ಈತ ಸಮರ್ಥ ರೀತಿಯಲ್ಲಿ ರಾಜ್ಯವನ್ನು ಆಳಿದನು. ತನ್ನ ಗ್ರಂಥ 'ಆಮುಕ್ತಮೌಲ್ಯದ'ದಲ್ಲಿ ಉಲ್ಲೇಖಿಸಿರುವ ರೀತಿಯಲ್ಲಿ ಈತ ಸಾಮ್ರಾಜ್ಯದ ಆಡಳಿತ ವ್ಯವಸ್ಥೆಯನ್ನು ನಡೆಸುತ್ತಿದ್ದನು.[೯೩] ಇವನು ಉದಾರನು,

ದಯಾ ಕ್ಷಮಾಗುಣವುಳ್ಳವನು, ದಾನ, ಧರ್ಮ, ದತ್ತಿಗಳಿಂದ ಕೂಡಿದ ವ್ಯಕ್ತಿಯಾಗಿದ್ದನು. ವಿಜಯನಗರ ಸಾಮ್ರಾಜ್ಯವು ಶ್ರೀಕೃಷ್ಣದೇವರಾಯನ ಕಾಲದಲ್ಲಿ ವೈಭವದ ಶಿಖರ ಮುಟ್ಟಿತು. ಇವನ ಕಾಲದಲ್ಲಿ ಈ ಜಿಲ್ಲೆಯ ಒಂದು ಭಾಗದ ಜನ ತೆರಿಗೆಗಳ ಭಾರದಿಂದ ಬಳಲುತ್ತಿದ್ದಾಗ ಅವನ ಅಧೀನಾಧಿಕಾರಿ ಕಾಣಿಕೆ, ಮೇಲುಪಣ ಮತ್ತು ಕಬ್ಬಿಣ ಮೇಲಿನ ಸುಂಕವನ್ನು ರದ್ದು ಪಡಿಸಿದ. ಅದೇ ರೀತಿ ಅಚ್ಯುತರಾಯನ ಆಜ್ಞೆಯು ಮೇರೆಗೆ ಬೇಗೂರು ಸೀಮೆಯಲ್ಲಿ ಮದುವೆ ತೆರಿಗೆಯನ್ನು ರದ್ದುಪಡಿಸಲಾಯಿತು.[೯೪] ಈತನ ಮರಣದ ನಂತರ ಸಹೋದರನಾದ ಅಚ್ಯುತರಾಯನು ಉತ್ತರಾಧಿಕಾರಿಯಾಗಿ ನೇಮಕನಾದನು.

ಕ್ರಿ.ಶ.೧೩೩೬ರಿಂದ ೧೪೪೬ರವರೆಗೆ ಆಳ್ವಿಕೆ ಮಾಡಿದ ಹರಿಹರನ ಅರ್ಧ ವರಹ (ಹೊನ್ನು) ಗಳು ಜಗಲೂರು ತಾಲೂಕಿನ ಬಿಳಚೊಡಿನಲ್ಲಿ ದೊರೆತಿವೆ. ಈ ನಾಣ್ಯದ ಮೇಲ್ಮುಖದಲ್ಲಿ ಶಿವ ಪಾರ್ವತಿಯರ ಚಿತ್ರ, ಹಿಂಭಾಗದಲ್ಲಿ 'ಶ್ರೀ ಪ್ರತಾಪ ಹರಿಹರ' ಎಂಬ ಮೂರು ಸಾಲಿನ ನಾಗರಿ ಲಿಪಿ ಇದೆ. ಅವುಗಳ ಮೇಲ್ಮುಖದಲ್ಲಿ ಉಮಾ ಮಹೇಶ್ವರ, ನಂದಿ, ನಿಂತ ಗರುಡ, ಹಾರುತ್ತಿರುವ ಗರುಡ ಚಿತ್ರಗಳಿವೆ. ಹಿಮ್ಮುಖದಲ್ಲಿದ್ದ ಬರಹಗಳು ಕೆಲ ನಾಣ್ಯಗಳಲ್ಲಿ ನಶಿಸಿದ್ದು. ಒಂದು ಹಿಂಭಾಗದಲ್ಲಿ 'ಶ್ರೀ....ಕ್ರಿಷ್ಣ.... ರಾಯ' ಎಂಬ ನಾಗರ ಲಿಪಿಯ ಅಕ್ಷರಗಳಿವೆ.[೯೫] ಅಲ್ಲದೇ ಈ ಜಿಲ್ಲೆಯಲ್ಲಿ ನೀರ್ಥಡಿ, ಮಾಯಿಕೊಂಡ, ಕಲ್ಲೇದೇವರಪುರ, ಪರುಶುರಾಂಪುರ, ಮಧುರೆ, ಗಂಗನರಸಿ ಮೊದಲಾದೆಡೆ ಇವರ ಕಾಲದ ದೇವಾಲಯಗಳು ಕಂಡುಬಂದಿವೆ. ಇವುಗಳಿಂದ ವಿಜಯನಗರದ ಆಳ್ವಿಕೆಯು ಈಗಿನ ಚಿತ್ರದುರ್ಗ ಜಿಲ್ಲೆಯವರೆಗೂ ಅಂದು ವಿಸ್ತರಿಸಿತ್ತೆಂದು ಸ್ಪಷ್ಟವಾಗುತ್ತದೆ. ಅಲ್ಲದೇ ಅಂದು ವಿಜಯನಗರಕ್ಕೆ ಭೇಟಿ ನೀಡಿದ್ದ ಪ್ರವಾಸಿಗರು ಅದರ ವೈಭವವನ್ನು ವಿಶೇಷವಾಗಿ ವರ್ಣಿಸಿರುವುದೇ ಅದರ ವೈಭವಕ್ಕೆ ಸಾಕ್ಷಿಯಾಗಿದೆ.[೯೬]

**೩.೨.೩. ಮಧ್ಯ ಯುಗದ ನಂತರ ಕಾಲ**

ಕ್ರಿ.ಶ. 1565ರಲ್ಲಿ ವಿಜಯನಗರದ ಪತನವಾದ ಮೇಲೆ ಕೆಲವು ಪಾಳೆಯಗಾರರು ಚಿತ್ರದುರ್ಗ ಜಿಲ್ಲೆಯಲ್ಲಿ ಸ್ವತಂತ್ರರಾಗಿ ಅಲ್ಲಲ್ಲಿ ಆಳತೊಡಗಿದರು. ಇವರು ಒಂದು ಕಡೆ ಮರಾಠಿಯವರೊಂದಿಗೂ, ಹೈದರಾಲಿಯೊಂದಿಗೂ ಹೋರಾಡಬೇಕಾಯಿತು. ಇವರಲ್ಲಿ ಮುಖ್ಯರಾದವರು ಚಿತ್ರದುರ್ಗ, ಮತ್ತೋಡು, ಬಾಗೂರು, ಹರತಿ, ಬೇಲೂರು, ರಾಯದುರ್ಗ, ಹಟ್ಟಿ(ನಾಯಕನಹಟ್ಟಿ) ಪಾಳೆಯಗಾರರು.

ಇವರಲ್ಲಿ ಪ್ರಮುಖರಾದವರೆಂದರೆ ಚಿತ್ರದುರ್ಗ ಪಾಳೆಯಗಾರರು. ಇವರು ಕ್ರಿ.ಶ.೧೫೬೮–೧೭೭೯ರವರೆಗೆ ಒಟ್ಟು ೨೧೧ ವರ್ಷಗಳ ಕಾಲ ಚಿತ್ರದುರ್ಗವನ್ನು ಆಳ್ವಿಕೆ ಮಾಡಿದರು. ಅಂದರೆ ಇವರ ಮೂಲ ಪುರುಷ ಚಿತ್ರನಾಯಕ. ಇವನು ದಿಲ್ಲಿಗೆ ಹೋದಾಗ ಮದಿಸಿದ ಆನೆಯೊಂದನ್ನು ಪಳಗಿಸಿದ್ದರಿಂದ ದೆಹಲಿ ಸುಲ್ತಾನನು ಈತನಿಗೆ **"ಮದಕರಿ"** ಎಂಬ ಬಿರುದು ನೀಡಿದ. ಮುಂದೆ ಇವನ ವಂಶಿಕರು ಸಹ ಇದೇ ಹೆಸರಿನಿಂದ ಕರೆಯಲ್ಪಟ್ಟರು.[೯೭] ಈ ವಂಶದಲ್ಲಿ ಒಟ್ಟು ೧೪ ಜನ ಅರಸರು ಆಳ್ವಿಕೆ ಮಾಡಿದ್ದಾರೆ. ಆದರೆ ಮತ್ತಿತಿಮ್ಮಣ್ಣನಾಯಕನು(೧೫೬೮–೧೫೮೮) ಈ ವಂಶದ ಐತಿಹಾಸಿಕ ವ್ಯಕ್ತಿಯೆಂದು ವಿದ್ವಾಂಸರಿಂದ ಗುರುತಿಸಲ್ಪಟ್ಟಿದ್ದಾನೆ. ಅವನ ನಂತರ ಓಬಣ್ಣ ನಾಯಕ (೧೫೮೮–೧೬೦೩), ಕಸ್ತೂರಿರಂಗಪ್ಪನಾಯಕ(೧೬೦೩–೧೬೫೨), ಇಮ್ಮಡಿ ಮದಕರಿನಾಯಕ

(೧೬೫೨- ೧೬೭೪), ಚಿಕ್ಕಣ್ಣ ನಾಯಕ(೧೬೭೪-೧೬೮೬), ಮುಮ್ಮಡಿ ಲಿಂಗಣ್ಣ ನಾಯಕ(೧೬೮೬-೧೬೮೯), ಬಿಚ್ಚುಗತ್ತಿ ಭರಮಣ್ಣ ನಾಯಕ(೧೬೮೯-೧೭೨೧), ಹಿರೇ ಮದಿಕರಿನಾಯಕ(೧೭೨೧-೧೭೪೮), ಕಸ್ತೂರಿ ರಂಗಪ್ಪ ನಾಯಕ(೧೭೪೮-೧೭೫೪), ರಾಜ ವೀರ ಮದಕರಿ ನಾಯಕ(೧೭೫೪-೧೭೭೯)ರು ಆಳ್ವಿಕೆ ಮಾಡಿ ತಮ್ಮದೇ ಆದ ಕೊಡುಗೆಗಳನ್ನು ಈ ನಾಡಿಗೆ ನೀಡಿದ್ದಾರೆ. ಕ್ರಿ.ಶ. ೧೭೭೯ರಲ್ಲಿ ಚಿತ್ರದುರ್ಗ ಪಾಳೆಯಪಟ್ಟು ಪತನವಾಗಿ, ಹೈದರನಿಗೆ ಸೇರಿತು, ಟಿಪ್ಪು ಇಲ್ಲಿ ಬಲವಾದ ಸೈನ್ಯವನ್ನಿಟ್ಟಿದ್ದ. ನಂತರ ಬ್ರಿಟಿಷರು ಟಿಪ್ಪುವನ್ನು ಸೋಲಿಸಿದರು. ನಂತರ ಮೈಸೂರು ಅರಸರಿಗೆ ಸೇರಿ ಪೌಜುದಾರಿಯಾಯ್ತು, ಮೈಸೂರು ಸಂಸ್ಥಾನ ಬ್ರಿಟಿಷ್ ಕಮಿಷನ್‌ಗೆ ಸೇರಿದಾಗ, ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳು ಸೇರಿ, ಚಿತ್ರದುರ್ಗ ವಿಭಾಗವಾಗಿ ತುಮಕೂರು ಇದರ ಮುಖ್ಯ ಕೇಂದ್ರವಾಯಿತು. ಕೆಲಕಾಲ ನಂತರ ಚಿತ್ರದುರ್ಗ ಪ್ರತ್ಯೇಕ ಜಿಲ್ಲೆ ಮತ್ತು ವಿಭಾಗವಾಗಿ ಅಸ್ತಿತ್ವ ಪಡೆದುಕೊಂಡಿತು.[೮]

**ಕೊನೆ ಟಿಪ್ಪಣಿಗಳು**

೧. ಪಪ್ಪು, ಆರ್.ಎಸ್, 'ಪ್ರಾಚೀನ ಮಾನವ ಸಂಸ್ಕೃತಿಗಳು, ವಿಕಸನದ ಹಂತಗಳು', ಕರ್ನಾಟಕ ಚರಿತ್ರೆ ಸಂಪುಟ.೧, ೧೯೯೭, ಪು. ೯೫

೨. ಅದೇ, ಪು. ೯೫-೯೭

೩. ಅದೇ, ಪು. ೯೯

೪. ತಿಪ್ಪೇಸ್ವಾಮಿ ಎಚ್, ೨೦೧೪, ದಾವಣಗೆರೆ ದೇವಾಲಯಗಳು, ಪು.೨೭ ಮತ್ತು ಶೇಷಾದ್ರಿ, ಎಂ. ದಿ ಸ್ಟೋನ್ ಯೂಸಿಂಗ್ ಕಲ್ಚರ್ಸ್ ಆಫ್ ಪ್ರೀ ಹಿಸ್ಟಾರಿಕ್ ಆಂಡ್ ಪ್ರೋಟೋ ಹಿಸ್ಟಾರಿಕ್, ಮೈಸೂರು-೧೯೫೬, ಪು.೨೧

೫. ಶಿವತಾರಕ್ ಕೆ.ಬಿ, ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪು. ೨೭-೩೯ ಮತ್ತು ನಾಗರಾಜರಾವ್, ಎಂ ಎಸ್ ಪ್ರೋಟೋ ಹಿಸ್ಟಾರಿಕ್ ಕಲ್ಚರ್ ಆಫ್ ದಿ ತುಂಗಭದ್ರಾ ವ್ಯಾಲಿ ೧೯೭೧, ಪು.೧೪-೧೫

೬. ಅನ್ಸಾರಿ ಝುಡ್, ಎ. 'ಪೆಬಲ್ ಟೂಲ್ಸ್ ಫ್ರಂ ನಿಟ್ಟೂರ್' (ಮೈಸೂರ್ ಸ್ಟೇಟ್) ಇಂಡಿಯನ್ ಆಂಟಿಕ್ವೇರಿ, (ಹೊಸ ಮಾಲಿಕೆ) ಸಂ.೪-೧೯೭೪, ಪು.೧-೮೭

೭. ಸಂಕಾಲಿಯಾ ಎಚ್.ಡಿ, ಮೆಸೋಲಿಥಿಕ್ ಆಂಡ್ ಪ್ರೀ ಮೆಸೋಲಿಥಿಕ್ ಕಲ್ಚರ್ಸ್ ಇನ್ ಸಂಗನಕಲ್, ೧೯೭೯. ಪು.೧೬

೮. ಶಿವತಾರಕ್ ಕೆ.ಬಿ, ಪೂರ್ವೋಕ್ತ, ಪು. ೨೭-೩೯

೯. ಷೇಕ್‌ಅಲಿ, ಬಿ.ಅ. ಸುಂದರ(ಸಂ), ೧೯೯೭, ಕರ್ನಾಟಕ ಚರಿತ್ರೆ, ಸಂಪುಟ-೧, ಪು.೪೨೭

೧೦. ಅದೇ. ಪು. ೨೭-೩೯

೧೧. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು. ೨೭-೩೯ ಮತ್ತು ಸತ್ಯನ, ಬಿ. ಎನ್.(ಸಂ)., ಚಿತ್ರದುರ್ಗ ಡಿಸ್ಟ್ರಿಕ್ ಗ್ಯಾಜಿಟಿಯರ್, ೧೯೭೫. ಪು. ೨೨

೧೨. ಷೇಕ್‌ಅಲಿ, ರಿ.ಅ. ಸುಂದರ (ಸಂ), ಪೂರ್ವೋಕ್ತ, ಪು.೧೩. ಮತ್ತು ಕೆ.ಬಿ. ಶಿವತಾರಕ್, ಪೂರ್ವೋಕ್ತ, ಪು. ೨೭-೫೯

೧೩. ಷೇಕ್‌ಅಲಿ, ರಿ, ಅ. ಸುಂದರ (ಸಂ),ಪೂರ್ವೋಕ್ತ, ಪು.೧೩-೧೫

೧೪. ತಿಪ್ಪೇಸ್ವಾಮಿ ಎಚ್., ೨೦೧೪, ಆದಿಮ, ಪು.೧೭-೨೪

೧೫. ಷೇಕ್‌ಅಲಿ, ರಿ, ಅ. ಸುಂದರ (ಸಂ),ಪೂರ್ವೋಕ್ತ, ಪು.೧೪-೧೬

೧೬. ಅದೇ. ಪು.೧೬

೧೭. ಸತ್ಯನ, ಬಿ. ಎನ್.(ಸಂ).,ಪೂರ್ವೋಕ್ತ, ಪು.೧೯

೧೮. ತಿಪ್ಪೇಸ್ವಾಮಿ ಎಚ್. ೨೦೧೪,ಪೂರ್ವೋಕ್ತ, ಪು.೨೯

೧೯. ಅದೇ, ಪು.೨೯

೨೦. ಶಿವತಾರಕ್ ಕೆ.ಬಿ.ಪೂರ್ವೋಕ್ತ, ಪು.೫೯-೬೦

೨೧. ಸತ್ಯನ್, ಬಿ.ಎನ್.(ಸಂ).,ಪೂರ್ವೋಕ್ತ, ಪು.೨೦-೨೩ ಮತ್ತು ಬ್ರಹ್ಮಗಿರಿ ಉತ್ಖನನ ವರದಿ

೨೨. ಜಯ್ಯಣ್ಣ ಯು., ೨೦೦೨, ಮೊಳಕಾಲ್ಮೂರು ತಾಲೂಕಿನ ಪುರಾತತ್ವೀಯ ಪರಿಸರ. (ಪಿಎಚ್.ಡಿ ಅಪ್ರಕಟಿತ ಪ್ರಬಂಧ) ಪು. ೨೮

೨೩. ಕನ್ನಡ ಪ್ರಭ ದಿನಪತ್ರಿಕೆ, ದಿನಾಂಕ ೧೫-೧೪-೧೯೯೭

೨೪. ಶೇಷಾದ್ರಿ, ಎಂ. ಪೂರ್ವೋಕ್ತ, ಪು.೫೬.

೨೫. ಸಂಕಾಲಿಯಾ, ಎಚ್.ಡಿ.,ಪೂರ್ವೋಕ್ತ, ಪು.೨೯-೩೨

೨೬. ಷೇಕ್‌ಅಲಿ, ರಿ, ಅ. ಸುಂದರ (ಸಂ),ಪೂರ್ವೋಕ್ತ, ಪು.೨೦-೨೩

೨೭. ಅದೇ, ಪು.೨೦-೨೩

೨೮. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು..೫೯-೬೨

೨೯. ಕುಪ್ಪಸ್ವಾಮಿ, ೧೯೮೭, ಸೌಥ್ ಇಂಡಿಯನ್ ಮೆಗಾಲಿಥಿಕ್ಸ್., ಪು,೧೨೫

೩೦. ಷೇಕ್‌ಅಲಿ, ರಿ, ಅ. ಸುಂದರ (ಸಂ), ಪೂರ್ವೋಕ್ತ, ಪು.೨೩

೩೧. ತಿಪ್ಪೇಸ್ವಾಮಿ ಎಚ್., ೨೦೧೪, ಪೂರ್ವೋಕ್ತ, ಪು.೨೯

೩೨. ತಿಪ್ಪೇಸ್ವಾಮಿ ಎಚ್., ೨೦೧೪, ತಳಮುಖಿ, ಪು..೨೯-೩೨

೩೩. ರೈಸ್.ಬಿ.ಎಲ್., ೧೯೮೭, ಎಪಿಗ್ರಾಫಿಯಾ ಕರ್ನಾಟಿಕಾ, ಸಂ.೭, ಶಿಕಾರಪುರ ಶಾ,ಸಂ,೨೨೫

೩೪. ಶ್ರೀನಿವಾಸ್ ಎಂ.ವಿ. 'ಚಿತ್ರದುರ್ಗ ಜಿಲ್ಲೆಯಲ್ಲಿ ಮೌರ್ಯರ ಆಳ್ವಿಕೆ', ಚಂದ್ರವಳ್ಳಿ, ೧೯೭೬, ಪು.೨.

೩೫. ಸತ್ಯನ, ಬಿ. ಎನ್.(ಸಂ)., ಪೂರ್ವೋಕ್ತ, ಪು. ೭೬-೮೭

೩೬. ಗಿರೀಜ, ಟಿ. ಚಿತ್ರದುರ್ಗ ಜಿಲ್ಲಾ ದರ್ಶಿನಿ, ೧೯೯೧, ಪು.೧೮೭

೩೭. ಕರ್ನಾಟಕ ಪರಂಪರೆ ಭಾಗ-೧,(ಚಾರಿತ್ರಿಕ ಯುಗ), ಪು. ೧೧೭

೩೮. ಪಿಳ್ಳೆ, ಕೆ.ಕೆ. ೧೯೮೯, ದಕ್ಷಿಣ ಭಾರತದ ಇತಿಹಾಸ, ಪು.೪೭

೩೯. ಲಕ್ಷ್ಮಣ್ ತೆಲಗಾವಿಯವರ ಚಿಪ್ಪನಕೆರೆಯಲ್ಲಿ ಮರು ಶೋಧನೆ ಕೈಗೊಂಡು ಆ ರೀತಿ ಅಭಿಪ್ರಾಯಪಟ್ಟಿದ್ದಾರೆ.

೪೦. ಸೋಮಶೇಖರ್.ಎಸ್.ವೈ. 'ಆಕನೂರು ಗ್ರಾಮದ ಬಳಿ ಆದಿ ಇತಿಹಾಸ ಕುರುಹುಗಳು'. 'ಇತಿಹಾಸ ದರ್ಶನ' ನಾಗರಾಜ ಎಂ.ಜಿ., ಪಿವಿ.ಕೃಷ್ಣಮೂರ್ತಿ(ಸಂಪಾದಕರು)೧೯೯೭, ಸಂ.-೧೨.

೪೧. ನಾಗವೇಣಿ ಎ. ೨೦೧೮, ಹಡಗಲಿ ತಾಲೂಕಿನ ದೇವಾಲಯಗಳು ಮತ್ತು ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು.೧೯ ಮತ್ತು ಶಾಸನ ಸಂಪುಟ, ಬಳ್ಳಾರಿ ಜಿಲ್ಲೆ, ಪು.೩೭೪

೪೨. ರಘನಾಥ್ ಭಟ್ ಎಚ್.ಆರ್. 'ಚಿತ್ರದುರ್ಗ ಜಿಲ್ಲೆಯಲ್ಲಿ ಶಾತವಾಹನರ ಆಳ್ವಿಕೆ' ಚಂದ್ರವಳ್ಳಿ, ಶ್ರೀನಿವಾಸ್. ಎಂ,ಲಕ್ಷ್ಮಣ್ ತೆಲಗಾವಿ (ಸಂಪಾದಕರು), ೧೯೭೬. ಪು. ೧೦

೪೩. ಎಂ.ಎ.ಆರ್., ೧೯೨೯, ಪು.೫೦

೪೪. ಗಿರಿಜಾ ಟಿ. ಪೂರ್ವೋಕ್ತ, ಪು. ೨೪೪

೪೫. ರೈಸ್.ಬಿ.ಎಲ್., ಪೂರ್ವೋಕ್ತ, ಸಂ.೬. ಶಾ.ಸಂ.:೧೯

೪೬. ಗಿರಿಜಾ ಟಿ. ೧೯೯೨, ಪೂರ್ವೋಕ್ತ, ಪು.೨೪೫

೪೭. ರೈಸ್. ಬಿ.ಎಲ್., ಪೂರ್ವೋಕ್ತ, ಪು.೩೭, ಸಂ.೬. ಶಾ.ಸಂ.:೩೭

೪೮. ಅದೇ, ಶಾ.ಸಂ. ೩೭

೪೯. ಗಿರಿಜಾ ಟಿ, ಪೂರ್ವೋಕ್ತ, ಪು. ೭೫

೫೦. ದಿವಾಕರ್, ಆರ್.ಆರ್. ಕರ್ನಾಟಕ ಥ್ರೋ-ದ ಏಜೆಸ್, ಪು. ೧೯೮.

೫೧. ಅದೇ, ಪು. ೧೯೮.

೫೨. ಷೇಕ್‌ಅಲಿ, ಬಿ, ಸುಂದರ ಅ.(ಸಂ), ಕರ್ನಾಟಕ ಚರಿತ್ರೆ, ಸಂ,-೧,೧೯೯೭, ಪು. ೪೩೭.

೫೩. ಅದೇ, ಪು.೪೪೪

೫೪. ರೈಸ್.ಬಿ.ಎಲ್., ಪೂರ್ವೋಕ್ತ, ಪು. ೧೧. ಶಾ.ಸಂ.೬೬

೫೫. ಅದೇ, ಸಂ. ೭, ಭಾಗ ೧, ಶಾ.ಸಂ.-೧೮

೫೬. ಸುರೇಂದ್ರರಾವ್ ಬಿ. 'ರಾಷ್ಟ್ರಕೂಟರ ರಾಜಕೀಯ ಚರಿತ್ರೆ', ಷೇಕ್‌ಅಲಿ ಬಿ. ಮತ್ತು ಸುಂದರ,ಅ(ಸಂ) ಕರ್ನಾಟಕ ಚರಿತ್ರೆ, ಸಂ.-೩, ೧೯೯೭, ಪು. ೩೫.

೫೭. ರೈಸ್.ಬಿ.ಎಲ್., ಪೂರ್ವೋಕ್ತ, ಸಂ.-೭, ಹೊನ್ನಾಳಿ ಶಾ.ಸಂ.೧೩

೫೮. ರಮೇಶ್ ಕೆ.ವಿ., ೧೯೯೨, ಪೂರ್ವೋಕ್ತ, ಪು. ೩೯-೫೧.

೫೯. ರೈಸ್.ಬಿ.ಎಲ್., ಪೂರ್ವೋಕ್ತ, ಸಂ.೧೧, ಚಿತ್ರದುರ್ಗ ಶಾ.ಸಂ.೨೩

೬೦. ಕರ್ನಾಟಕ ಚರಿತ್ರೆ, ಸಂ. ೩, ೧೯೯೭, ಪು. ೫೫-೫೬

೬೧. ಗೋವಿಂದರಾಜು ಸಿ.ಆರ್. ಇತಿಹಾಸ, ಪು.೨೪೩.

೬೨. ರೈಸ್.ಬಿ.ಎಲ್., ಪೂರ್ವೋಕ್ತ, ಪು.ಸಂ.೧೧, ಚಿತ್ರದುರ್ಗ, ಶಾಸಂ. ೧೨೪.

೬೩. ಸದಾಶಿವ ಕೆ. ೧೯೯೮, ಪ್ರಾಚೀನ ಭಾರತದ ಇತಿಹಾಸ, ಪು.೩೮೨

೬೪. ರೈಸ್.ಬಿ.ಎಲ್., ಪೂರ್ವೋಕ್ತ, ಸಂ.೧೧, ಹೊಳಲಕೆರೆ, ಶಾ.ಸಂ.೨೩

೬೫. ಅದೇ, ಚಿತ್ರದುರ್ಗ, ಶಾಸಂ.೧೨೯.

೬೬. ಗೋಪಾಲ, ಬಾ.ರಾ., 'ಬೆಳಗುತ್ತಿ ಸಿಂಧರು', ಉಪಾನಯ, ಪು. ೮೭-೭೩

೬೭. ಗೋಪಾಲ, ಬಾ.ರಾ., ಮೈನರ್ ಡೈನಾಸ್ಟೀಸ್ ಇನ್ ಕರ್ನಾಟಕ, ೧೯೮೧. ಪು. ೯೭.

೬೮. ಉಚ್ಚಂಗಿದುರ್ಗದ ಹಾಲಮ್ಮಗುಡಿಯ ಮುಂದಿನ ಶಾಸನ.
೬೯. ರೈಸ್. ಬಿ.ಎಲ್., ಪೂರ್ವೋಕ್ತ, ಜಗಲೂರು, ಶಾ.ಸಂ. ೨೯
೭೦. ಅದೇ, ಚಳ್ಳಕೆರೆ, ಶಾ.ಸಂ.೨೯
೭೧. ಅದೇ, ಚಿತ್ರದುರ್ಗ, ಶಾ.ಸಂ. ೭೧
೭೨. ನರಸಿಂಹ ಮೂರ್ತಿ, ಎ.ವಿ., ಸೇವುಣರ ಇತಿಹಾಸ, ಪು.೬-೭
೭೩. ಕರ್ನಾಟಕ ಚರಿತ್ರೆ ಸಂ.೩, ೧೯೯೭, ಪು. ೯೭
೭೪. ರೈಸ್.ಬಿ.ಎಲ್, ಪೂರ್ವೋಕ್ತ, ಸಂ.೨., ಶಾ.ಸಂ. ೪೩
೭೫. ರೈಸ್.ಬಿ.ಎಲ್., ಪೂರ್ವೋಕ್ತ, ಪು.ಸಂ.೧೧. ಚಿತ್ರದುರ್ಗ. ಶಾ.ಸಂ.೧೦೫
೭೬. ಅದೇ, ಸಂ. ೭, ಚನ್ನಗಿರಿ, ಶಾ.ಸಂ. ೭೨
೭೭. ಅದೇ, ಸಂ. ೧೧, ಚಿತ್ರದುರ್ಗ, ಶಾ.ಸಂ.೨೫
೭೮. ಅದೇ, ಚಿತ್ರದುರ್ಗ, ಶಾ.ಸಂ.೧೨೯
೭೯. ಅದೇ, ಚಿತ್ರದುರ್ಗ, ಶಾ.ಸಂ.೨೮
೮೦. ಅದೇ, ಸಂ.೧೧, ಚಿತ್ರದುರ್ಗ, ಶಾ.ಸಂ.೪೨
೮೧. ಅದೇ ಮತ್ತು ಸಿ.ಎಸ್.ಪಾಟೀಲರು ಶಾಸನಾಧಾರವಾಗಿ ಇದನ್ನು ನಿರೂಪಿಸಿದ್ದಾರೆ.
೮೨. ರೈಸ್.ಬಿ.ಎಲ್., ಪೂರ್ವೋಕ್ತ, ಸಂ.೧೧, ಚಿತ್ರದುರ್ಗ, ಶಾ.ಸಂ. ೪೩
೮೩. ತಿಪ್ಪೇರುದ್ರಸ್ವಾಮಿ, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.೧೩೮
೮೪. ರೈಸ್.ಬಿ.ಎಲ್., ಪೂರ್ವೋಕ್ತ, ಪು.ಸಂ.೭, ಹೊನ್ನಾಳಿ, ಶಾ.ಸಂ. ೪೮
೮೫. ಅದೇ, ಶಾ.ಸಂ.೪೮,
೮೬. ರೈಸ್.ಬಿ.ಎಲ್., ಪೂರ್ವೋಕ್ತ, ಸಂ. ೧೧. ಶಾ.ಸಂ. ೬೮
೮೭. ರಮೇಶ, ಕೆ.ವಿ., ಪೂರ್ವೋಕ್ತ, ಪು.೩೯-೫೧.
೮೮. ರೈಸ್.ಬಿ.ಎಲ್., ಪೂರ್ವೋಕ್ತ, ಸಂ.೧೧, ಚಿತ್ರದುರ್ಗ, ಶಾ.ಸಂ.೨೯ ಮತ್ತು ಹೊಳಲ್ಕೆರೆ, ಶಾ.ಸಂ.೩
೮೯. ಕೃಷ್ಣರಾವ್ ಎಂ.ವಿ. ಮತ್ತು ಎಂ.ಕೇಶವಭಟ್ಟ, ಪೂರ್ವೋಕ್ತ, ಪು. ೩೬೧,
೯೦. ಅದೇ. ಪು. ೩೬೩
೯೧. ಅದೇ, ಸಂ.೭. ಚನ್ನಗಿರಿ ೭೬, ಹೊನ್ನಾಳಿ, ಶಾ.ಸಂ.೬
೯೨. ಕರ್ನಾಟಕ ಪರಂಪರೆ, ಮಧ್ಯಕಾಲ ಮತ್ತು ಆಧುನಿಕ ಕಾಲ, ಸಂ.೨, ಪು. ೩೬
೯೩. ಕುಂಬಾ ಸದಾಶಿವ, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ, ೧೯೯೪, ಪು.೧೨೯
೯೪. ರೈಸ್ ಬಿ.ಎಲ್. ಪೂರ್ವೋಕ್ತ, ಸಂ.೧೧, ಚಿತ್ರದುರ್ಗ, ಶಾ.ಸಂ.೪೩
೯೫. ಎಂ.ಎ.ಆರ್. ೧೯೮೭. ಪು. ೪೫
೯೬. ವಿವೇಕ ಬಿ.ಎ. ರೈ, (ಸಂ), ಪ್ರವಾಸಿ ಕಂಡ ವಿಜಯನಗರ, ಪು.೧೨-೧೩
೯೭. ಗಿರಿಜಾ ಟಿ., ಪೂರ್ವೋಕ್ತ, ಪು. ೧೨೯
೯೮. ಸತ್ಯನ್ ಬಿ.ಎಸ್, ಪೂರ್ವೋಕ್ತ, ಪು.೧೫೬

ಅಧ್ಯಾಯ ನಾಲ್ಕು

# ಚಾರಿತ್ರಿಕ ಹಿನ್ನೆಲೆಯಲ್ಲಿ ಕರ್ನಾಟಕದ ಕೆರೆಗಳು

೪.೧. ಕೆರೆಗಳ ಅರ್ಥ, ವ್ಯಾಖ್ಯಾನ ಹಾಗೂ ಆಕರಗಳು

೪.೨. ಕೆರೆಗಳ ನಿರ್ಮಾಣದ ಹಿನ್ನೆಲೆ ಹಾಗೂ ಮಹತ್ವ

೪.೩. ಕೆರೆಗಳ ಪ್ರಮುಖ ಅಂಗಗಳು ಮತ್ತು ತಾಂತ್ರಿಕತೆ

೪.೪. ಕೆರೆ ನೀರಾವರಿ ವ್ಯವಸ್ಥೆ ಮತ್ತು ನಿರ್ವಹಣೆ

೪.೫. ಕೆರೆಗಳ ನಿರ್ಮಾಣ ಮತ್ತು ಸಂರಕ್ಷಣೆ

### ಅಧ್ಯಾಯ ನಾಲ್ಕು

## ಚಾರಿತ್ರಿಕ ಹಿನ್ನೆಲೆಯಲ್ಲಿ ಕರ್ನಾಟಕದ ಕೆರೆಗಳು

ಆಧುನಿಕ ಶರೀರಶಾಸ್ತ್ರ ವಿಜ್ಞಾನ(Medical Sciences)ವು ಮನುಷ್ಯನ ದೇಹ ಶೇ. ೯೫ ಭಾಗ ನೀರಿನಿಂದಲೇ ಉಂಟಾಗಿದೆ ಎನ್ನುತ್ತದೆ. ಆದ್ದರಿಂದಲೇ "ವಿಶ್ವದ ಎಲ್ಲಾ ಜೀವಿಗಳಿಗೂ ಉದಕವೇ ಶ್ರೇಷ್ಠ ಮತ್ತು ಜೀವಾಳವಾಗಿದೆ". ಆಧುನಿಕ ಜಲಶಾಸ್ತ್ರಜ್ಞರು, ಈ ವಿಶ್ವದ ಭೂ, ವಾಯು ಮತ್ತು ಜಲ ಮಂಡಲಗಳಲ್ಲಿ ಅಡಕವಾಗಿರುವ ನೀರಿನ ಪ್ರಮಾಣವನ್ನಷ್ಟೇ ಅಲ್ಲದೆ, ಅಂತರ್ಜಲದ ಶೇಕಡವಾರು ಪ್ರಮಾಣವನ್ನು ಸಹ ಗುರುತಿಸಿದ್ದಾರೆ. ಭೂಮಂಡಲದಲ್ಲಿ ಇಷ್ಟೆಲ್ಲಾ ನೀರಿದ್ದರೂ ಮನುಷ್ಯನಿಗೆ ಬಳಸಲು ಯೋಗ್ಯ ನೀರಿನ ಪ್ರಮಾಣ ಕೇವಲ ೨.೭೫೮೧ ಶೇಕಡವಾರು ಮಾತ್ರ. ನಮ್ಮ ರಾಜ್ಯದಲ್ಲಿಯೂ ೧೭,೦೦೦ ಹಳ್ಳಿಗಳಲ್ಲಿ ಕುಡಿಯುವ ಹಾಗೂ ಮನುಷ್ಯನ ಬಳಕೆಗೆ ಯೋಗ್ಯವಾದ ನೀರಿನ ಅಭಾವವಿದೆ ಎಂದು ಅಂದಾಜಿಸಲಾಗಿದೆ.[೧] ಇದಕ್ಕಾಗಿ ಪ್ರತಿ ವರ್ಷ ೨,೦೦೦ ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಲಾಗುತ್ತಿರುವುದು ವಿಷಾದನಿಯ. ನಮ್ಮ ಕಣ್ಣೆದುರೇ ಇರುವ ಕೆರೆ, ಕುಂಟೆ, ಕಟ್ಟೆ ಮೊದಲಾದ ಜಲ ಮೂಲಗಳ ಸರಿಯಾದ ಬಳಕೆಯಾಗದಿರುವುದೇ ಮುಖ್ಯ ಕಾರಣವಾಗಿದೆ. ಇಂದಿನ ಜಲ ಸಮಸ್ಯೆಗೆ ಪರಿಹಾರವನ್ನು ಸಾವಿರಾರು ವರ್ಷಗಳಷ್ಟು ಹಿಂದೆಯೇ ನಿರ್ಮಾಣವಾದ ಜಲಾಶಯ, ಕೆರೆ, ಕುಂಟೆ, ಕಟ್ಟೆಗಳ ನಿರ್ಮಾಣದಲ್ಲಿ ಬಳಸಲ್ಪಟ್ಟ ಜಲ ತಂತ್ರಜ್ಞಾನದ ಮೂಲಕ ನಾವು ಅರಿಯಬಹುದಾಗಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಅಲ್ಲದೇ ಪ್ರಸ್ತುತ ನಮ್ಮನ್ನು ಕಾಡುತ್ತಿರುವ ಬರ, ನೆರೆಹಾವಳಿ, ನದಿ ವಿವಾದಗಳಿಗೆ ಇಂದಿನ ಜಲ ತಂತ್ರಜ್ಞಾನದ ಮೂಲಕ ಪರಿಹಾರವನ್ನು ಕಂಡುಕೊಳ್ಳಬಹುದಾಗಿದೆ. ಕೃಷಿ ಪ್ರಧಾನವಾದ ನಮ್ಮ ದೇಶದಲ್ಲಿ ನೆರೆಹಾವಳಿ, ನೀರಿನ ನಿರ್ವಹಣೆ, ಅದರ ಜಾಗೃತ ಬಳಕೆ, ಅಂತರ್ಜಲದ ತಿಳುವಳಿಕೆ, ನೀರಿನ ಗುಣಾಂಶಗಳು, ಅಂದಿನವರು ವಿಧಿಸುತ್ತಿದ್ದ ಜಲ ತೆರಿಗೆಗೆ ಸಂಬಂಧಿಸಿದ ವಿಧಿ ವಿಧಾನಗಳ ಕುರಿತ ಮಾಹಿತಿಯನ್ನು ನಾಡಿನ ಪ್ರಮುಖ ಶಾಸನಗಳಾದ ನಾಗಾವಿ, ಹಲ್ಮಿಡಿ, (ಕ್ರಿ.ಶ.ಸು. ೪೫೦) ದಂಡಾಪುರ (ಕ್ರಿ.ಶ.೯೧೮) ತುರುವೆಕೆರೆ (ಕ್ರಿ.ಶ.೧೩-೧೪ ಶತಮಾನ), ಹರಿಹರ(೧೪-೧೫ನೇ ಶತಮಾನ) ಮೊದಲಾದ ಶಾಸನಗಳ ಮುಖಾಂತರ ಅರಿಯಬಹುದಾಗಿದೆ[೨]. ಈ ಹಿನ್ನೆಲೆಯಲ್ಲಿ ಕರ್ನಾಟಕದ ಕೆರೆಗಳ ಚಾರಿತ್ರಿಕತೆಯನ್ನು ಸಂಕ್ಷಿಪ್ತವಾಗಿ ಈ ಮುಂದಿನಂತೆ ಅವಲೋಕಿಸಲಾಗಿದೆ.

ಚರಿತ್ರೆಯಲ್ಲಿ ನಾಡಿನ ಕೆರೆಗಳ ಪಾತ್ರ ಹಿರಿದಾದದು. ನಮ್ಮ ನಾಡಿನ ಪರಂಪರೆ, ಇತಿಹಾಸ, ಸಂಸ್ಕೃತಿ ರೂಪುಗೊಳ್ಳುವಲ್ಲಿ ಕೆರೆಗಳು ಅಮೂಲ್ಯ ಕೊಡುಗೆಗಳನ್ನು ನೀಡಿವೆ. ವೇದಗಳ ಕಾಲದಿಂದಲೂ

ಬಾವಿ ಅಥವಾ ಕೂಪಗಳ ಪ್ರಸ್ತಾಪ ನಮಗೆ ಸಿಗುತ್ತದೆ. ಹಿಂದೆ ಕೆರೆ ನಿರ್ಮಿಸುವುದು ಒಂದು ಸಾಮಾಜಿಕ ಹೊಣೆಗಾರಿಕೆಯಾಗಿತ್ತು. ಹಾಗಾಗಿ ನಮ್ಮ ಪ್ರಭುತ್ವಗಳು, ಅಧಿಕಾರಿಗಳು, ಜನಸಾಮಾನ್ಯರು ಯಾವುದೇ ಪ್ರತಿ ಫಲಾಪೇಕ್ಷೆ ಇಲ್ಲದೇ ಈ ಸಾಮಾಜಿಕ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಬಹುಹಿಂದಿನಿಂದಲೂ ಕೆರೆ ನಿರ್ಮಿಸಿದವರಿಗೆ ಅದೇ ಪ್ರದೇಶದಲ್ಲಿ ಭೂದಾನ ನೀಡುವ ಪದ್ಧತಿಯಿತ್ತು. ಈ ರೀತಿ ನೀಡಿದ ಭೂದಾನಗಳು ಆ ಕೆರೆಯನ್ನು ಕಟ್ಟುವುದಕ್ಕೆ ತಗುಲಿದ ವೆಚ್ಚಕ್ಕೆ ಸಮವಾಗಿ ಕಂಡುಬರುತ್ತಿದ್ದವು. ಇಲ್ಲವೇ ಕೆರೆ ನಿರ್ಮಾತೃಗಳಿಗೆ ಕೆಲ ತೆರಿಗೆಗಳಿಂದ ವಿನಾಯಿತಿ ನೀಡಲಾಗುತ್ತಿತ್ತು. ಇದೇ ಹಿನ್ನೆಲೆಯಲ್ಲಿ ಅಸಂಖ್ಯಾತ ಕೆರೆಗಳು ನಾಡಿನಾದ್ಯಂತ ನಿರ್ಮಾಣ ಗೊಂಡಿರುವುದನ್ನು ನಾವು ಗುರುತಿಸಬಹುದು.

ಕೆರೆಗಳು ದಕ್ಷಿಣ ಪರ್ಯಾಯ ಪ್ರದೇಶದ ವಿಶಿಷ್ಟ ಲಕ್ಷಣ. ಪಶ್ಚಿಮ ಮತ್ತು ಮಧ್ಯ ಭಾರತದ ಅರೆ ಒಣಕಲು ಪ್ರದೇಶಗಳಲ್ಲಿ, ಅಂದರೆ ರಾಜಸ್ಥಾನ ಮತ್ತು ಮಾಳ್ವ ಪ್ರದೇಶಗಳಲ್ಲಿ ಹಾಗೂ ಇಡೀ ದಕ್ಷಿಣ ಭಾರತದಲ್ಲಿ ಕೆರೆ ನೀರಾವರಿ ಪ್ರಮುಖವಾಗಿದೆ. ಈ ಶತಮಾನದ ಆದಿಯವರೆಗೆ ಇಲ್ಲಿನ ನೀರಾವರಿಯ ಮೂಲ ಬಹುತೇಕ ಕೆರೆಗಳದೇ ಆಗಿತ್ತು. ಇತ್ತೀಚಿನವರೆಗೂ ಕರ್ನಾಟಕದ ನೀರಾವರಿ ಪ್ರದೇಶದ ಶೇಕಡ ೮೦ಕ್ಕಿಂತ ಹೆಚ್ಚು ಭಾಗ ಕೆರೆ ನೀರಾವರಿಯದೇ ಆಗಿತ್ತು.

**೪.೧. ಕೆರೆಗಳ ಅರ್ಥ, ವ್ಯಾಖ್ಯಾನ ಮತ್ತು ಆಕರಗಳು**

ಕೆರೆಗಳು ನಾಡಿನ ಜೀವಾಳವಾಗಿವೆ. ಪ್ರಾಚೀನ ಕಾಲದಿಂದಲೂ ಕೆರೆಗಳಿಗೆ ಯಾವ ರೀತಿಯ ಮಹತ್ವವಿತ್ತು ಎನ್ನುವುದನ್ನು ಅವುಗಳ ಅಧ್ಯಯನದಿಂದ ಗುರುತಿಸಬಹುದಾಗಿದೆ. ಕರ್ನಾಟಕ, ಆಂಧ್ರಪ್ರದೇಶ ಮತ್ತು ತಮಿಳುನಾಡುಗಳಲ್ಲಿ ಈಗಲೂ ಸಾವಿರಾರು ಕೆರೆಗಳಿದ್ದು, ಅವುಗಳು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿವೆ. ಈ ಹಿನ್ನೆಲೆಯಲ್ಲಿ ಕೆರೆಗಳ ಅರ್ಥ ಮತ್ತು ವ್ಯಾಖ್ಯಾನಗಳನ್ನು ಈ ಮುಂದಿನಂತೆ ಗುರುತಿಸಲಾಗಿದೆ.

**ಕೆರೆಗಳ ಅರ್ಥ ಮತ್ತು ವ್ಯಾಖ್ಯಾನಗಳು**

ಸಾಮಾನ್ಯವಾಗಿ ನೀರು ನಿಂತಿರುವ ಪ್ರದೇಶವನ್ನು ಕೆರೆಯೆಂದು ಕರೆಯುವ ರೂಢಿ ಇದೆ. ಇವುಗಳನ್ನು ಸರಳವಾಗಿ ಮತ್ತು ಸೀಮಿತ ಅರ್ಥದಲ್ಲಿ ಜಲಸಂಗ್ರಹಕ ಎನ್ನಬಹುದಾಗಿದೆ. ಕೆರೆಗಳೆಂದರೆ ಏನು ಎಂಬುದನ್ನು ನಿರ್ದಿಷ್ಟವಾಗಿ ಅರ್ಥೈಸುವುದು ತುಸು ಕಠಿಣ. ಆದರೆ ಕೆಲವು ವಿದ್ವಾಂಸರು ಇವುಗಳನ್ನು ತಮ್ಮದೇ ಆದ ದೃಷ್ಟಿಕೋನದಲ್ಲಿ ಅರ್ಥೈಸಿರುವುದನ್ನು ನಾವು ಗುರುತಿಸಬಹುದು. ಅದರಂತೆ ನಮ್ಮ ನಾಡಿನ ಶಾಸನಗಳು ಸಹ ಕೆರೆಗಳನ್ನು ಕೆರೆ, ಕಟ್ಟೆ, ಸಾಗರ, ಸಮುದ್ರ ಹಾಗೂ ತಟಾಕ, ಹಿರಿಯ ಕೆರೆ, ಹೆಗ್ಗೆರೆ, ಪಿರಿಯ ಕೆರೆ(ದೊಡ್ಡದಾದ ಕೆರೆ) ಇಲ್ಲವೇ ಚಿಕ್ಕಕೆರೆ(ಸಣ್ಣಕೆರೆ) ಹಾಗೂ ಕನ್ನೆಗೆರೆ(ಹೊಸಕೆರೆ) ಎಂದು ಹೆಸರಿಸಿವೆ. ನಮ್ಮ ನಾಡಿನ ಕೆಲವು ಹಳೆಯ ಕೆರೆಗಳ ಹೆಸರುಗಳು ಸಮುದ್ರ ಅಥವಾ ಸಾಗರ ಎಂದು ಕೊನೆಗೊಳ್ಳುತ್ತವೆ. ಅದು ಕೆರೆಗಳು ಸಾಗರದಂತೆ ವಿಶಾಲವಾದವು ಎಂಬುದನ್ನು ಸೂಚಿಸಲು ಇದ್ದರೂ ಅಂತಹ ನಾಮಕರಣಕ್ಕೆ ನಿರ್ಮಾತೃವಿನ ಇಷ್ಟವೇ ಆಧಾರ ವಿನಃ ಕೆರೆ ತುಂಬಾ ದೊಡ್ಡದು ಎನ್ನುವುದನ್ನು ಸೂಚಿಸಲು ಅಲ್ಲ ಎಂದು ಪ್ರಾಯಶಃ ತೋರುತ್ತದೆ.[೩] ಅದೇನೇ ಇದ್ದರೂ ಸಹ ವಿದ್ವಾಂಸರ ಅಭಿಪ್ರಾಯಗಳು ಈ ಮುಂದಿವೆ.

- **ಫ್ರಾನ್ಸಿಸ್ ಬುಕಾನನ್ ಪ್ರಕಾರ**: ದನಕರುಗಳಿಗೆ ಕುಡಿಯಲು ನೀರು ಒದಗಿಸುವ ಸಣ್ಣ ಜಲಾಶಯವೇ ಕಟ್ಟೆ ಎಂದೂ, ಭೂಮಿಗೆ ನೀರು ಹಾಯಿಸಲು ಉಪಯೋಗಿಸುವ ದೊಡ್ಡ ಜಲಾಯಶವೇ ಕೆರೆ ಎಂದೂ ಆತ ಗುರುತಿಸಿದ್ದಾನೆ. ಅಲ್ಲದೆ ನೆಲದಲ್ಲಿ ಚೌಕವಾಗಿ ಅಗೆದು ಮಾಡಿದ ಕೆರೆಯ ಹೆಸರು ಕುಂಟೆ ಎಂದೂ ಹೇಳುತ್ತಾನೆ. ಆದರೆ ಅಂತಹ ವರ್ಗೀಕರಣಕ್ಕೆ ನಿರ್ದಿಷ್ಟ ಗಾತ್ರ ಏನು? ಎಂಬುದನ್ನು ಬುಕಾನನ್ ಸೂಚಿಸುವುದಿಲ್ಲ.[೪] ಪ್ರಾಯಶಃ ಬೇರೆ ಬೇರೆ ಪ್ರದೇಶದಲ್ಲೂ ವಿವಿಧ ಹೆಸರುಗಳಿಂದ ಅವುಗಳನ್ನು ಕರೆದಿರುವ ಸಾಧ್ಯತೆ ಇದೆ.
- **ಮೇಜರ್ ಸ್ಯಾಂಕಿ ಪ್ರಕಾರ** : ಒಂದು ಹಳ್ಳಿಯ ಅಗತ್ಯವನ್ನು ಪೂರೈಸುವಂಥ ಕೆರೆಗಳನ್ನು ಹಳ್ಳಿ/ತುದಿ ಕೆರೆಗಳೆನ್ನಬಹುದಾಗಿದ್ದು, ಅವು ಗಾತ್ರದಲ್ಲಿ ಚಿಕ್ಕವಾಗಿರುತ್ತವೆ. ಮುಖ್ಯ ನದಿ ಕಣಿವೆಯನ್ನು ಸೇರುವ ಕಡೆ ಕಟ್ಟಲಾದ ಕೆರೆಗಳಿಗೆ ತುದಿಯ ಕೆರೆಗಳು ಎನ್ನಬಹುದು. ಇವು ಗಾತ್ರದಲ್ಲಿ ಹಳ್ಳಿ ಕೆರೆಗಳಿಗಿಂತ ದೊಡ್ಡವಾಗಿದ್ದು, ಅವುಗಳಿಗೆ ದೊಡ್ಡ ಕೆರೆ ಅಥವಾ ಹಿರಿಯ ಕೆರೆ ಎಂದು ಹೆಸರು.[೫]
- **ಸರ್ ಎಂ. ವಿಶ್ವೇಶ್ವರಯ್ಯನವರು** : ಹರಿಯುವ ಕಾಲುವೆ, ನದಿಗಳಿಗೆ ಅಡ್ಡಲಾಗಿ ಆಣೆಕಟ್ಟು ಕಟ್ಟುವ ತಂತ್ರಜ್ಞಾನವನ್ನು ಹೊಂದಿದ್ದರು.
- **ಜಿ.ಎಸ್. ದೀಕ್ಷಿತ್** : ಕಣಿವೆಗಳ ಮಧ್ಯದಿಂದ ವ್ಯರ್ಥವಾಗಿ ಹರಿದು ಹೋಗುತ್ತಿದ್ದ ನೀರನ್ನು ಒಂದೆಡೆ ವ್ಯವಸ್ಥಿತವಾಗಿ ಸಂಗ್ರಹಿಸುವ ಕ್ರಮವೇ ಕೆರೆಗಳೆನಿಸುತ್ತವೆ[೬].
- **ಸೂರ್ಯನಾಥ್ ಕಾಮತ್**: ಮಳೆ ನೀರು ವ್ಯರ್ಥವಾಗಿ ಹರಿದು ಹೋಗದಂತೆ ಒಂದೆಡೆ ವ್ಯವಸ್ಥಿತ ಮತ್ತು ವೈಜ್ಞಾನಿಕವಾಗಿ ಸಂಗ್ರಹಿಸಿ ಅದು ಜನರ ಉಪಯೋಗಕ್ಕೆ ಸಿಕ್ಕುವಂತೆಯೂ ಮಾಡಿರುವ ಯೋಜನಾತ್ಮಕ ದೃಷ್ಟಿಯೇ ಕೆರೆಗಳೆನಿಸುತ್ತವೆ.[೭]

ಒಟ್ಟಾರೆಯಾಗಿ ಕಣಿವೆಗೆ ಅಡ್ಡಲಾಗಿ ಉದ್ದನೆಯ ಏರಿಯನ್ನು ಕಟ್ಟಿ ಅಥವಾ ಗುಡ್ಡಗಳ ನಡುವಿನ ಕಮರಿಗೆ ಅಡ್ಡಲಾಗಿ ಚಿಕ್ಕ ಏರಿಯನ್ನು ಕಟ್ಟಿ, ಜಲಾನಯನ ಪ್ರದೇಶದಲ್ಲಿ ಹರಿದು ಬರುವ ಮಳೆ ನೀರನ್ನು ಹಿಡಿದಿರುವ ಪರಸ್ಪರ ಸಂಪರ್ಕ ಉಳ್ಳ ಜಲಾಶಯಗಳ ಜಾಲಗಳೇ ಮಳೆ ನೀರಿನಿಂದ ತುಂಬುವ ಕೆರೆಗಳು. ಕರ್ನಾಟಕದಲ್ಲಿ ಬಹುಪಾಲು ಕೆರೆಗಳು ಈ ವರ್ಗಕ್ಕೆ ಸೇರಿವೆ.

**ಕೆರೆಗಳ ವರ್ಗೀಕರಣ**

ಜಲ ಸಂಗ್ರಹಕಗಳು ಪ್ರಾಚೀನ ಕಾಲದಿಂದ ಮಾನವನಿಗೆ ಉಪಕಾರವನ್ನು ಮಾಡುತ್ತಾ ಬಂದಿವೆ. ಮಾನವ ತನಗಿರುವ ಜಲ ಜ್ಞಾನ ಮತ್ತು ಜಲ ತಂತ್ರಜ್ಞಾನದಿಂದಾಗಿ ಪ್ರಾಚೀನ ಕಾಲದಿಂದಲೂ ಅನೇಕ ಜಲಸಂಗ್ರಹಕಗಳನ್ನು ಕೃತಕವಾಗಿ ನಿರ್ಮಿಸಿಕೊಂಡು ಅವುಗಳನ್ನು ತನ್ನ ಅಗತ್ಯಕ್ಕೆ ಬಳಸಿಕೊಂಡಿರುವುದು ವಿಶೇಷವಾಗಿದೆ. ನದಿಗಳು ಹಾಗೂ ಸರೋವರಗಳು ಮಾನವನ ಅಗತ್ಯಗಳಿಗೆ ನೀರನ್ನು ಒದಗಿಸುವ ಪ್ರಾಥಮಿಕ ನೀರಿನ ಮೂಲಗಳಾಗಿವೆ. ಆದರೂ ಯಾವುದೇ ನಿರ್ದಿಷ್ಟ ಸಮಯದಲ್ಲೂ ಇವು ಭೂಮಿಯಲ್ಲಿ ಸಿಗುವ ನೀರಿನ ಶೇಕಡ ಒಂದಕ್ಕಿಂತ ಕಡಿಮೆಯಷ್ಟು ಪ್ರಮಾಣದವು. ಇಂತಹ ಅಲ್ಪ ಸಂಪನ್ಮೂಲದ ನಿರ್ವಹಣೆಯ ಸಮಸ್ಯೆ ಕಷ್ಟವೇ. ಮಳೆಯ ಏರುಪೇರಿನಿಂದ ಈ ಕಷ್ಟ ಮತ್ತೂ ಹೆಚ್ಚುತ್ತದೆ. ಎಷ್ಟೋ ಸಲ ನಮಗೆ ಅಗತ್ಯ ಇಲ್ಲದಿದ್ದಾಗ, ಅತಿ ನೀರು ಬರುತ್ತದೆ. ಅಗತ್ಯ

ಇದ್ದಾಗ ಅತಿ ಕಡಿಮೆ ಸಿಗುತ್ತದೆ. ನೆರೆ ಮತ್ತು ಬರ ಎಂದಿನಿಂದಲೂ ಇರುವ ಸಮಸ್ಯೆಗಳಾಗಿದ್ದು, ಇತ್ತೀಚಿನ ವರ್ಷಗಳಲ್ಲಿ ಜನಸಂಖ್ಯೆ ಹೆಚ್ಚಳದಿಂದ ಹಾಗೂ ಅರಣ್ಯ ನಾಶದಿಂದ ಅವು ಇನ್ನೂ ತೀವ್ರವಾಗಿದೆ. ಈ ಸಮಸ್ಯೆಯ ತೀವ್ರತೆಯನ್ನು ಕಡಿಮೆ ಮಾಡಲು ಇರುವ ಒಂದು ಮಾರ್ಗ ನೀರನ್ನು ಜಲಾಶಯಗಳಲ್ಲಿ ಸಂಗ್ರಹಿಸಿಡುವುದು. ಅಂತಹ ಸಂಗ್ರಹಣೆಗಳು ಬಾವಿಯ ಹಾಗೆ ನೆಲದೊಳಗೆ ಇರಬಹುದು ಅಥವಾ ಕೊಳ, ಕೆರೆ ಅಥವಾ ಭಾರಿ ಜಲಾಶಯಗಳಾಗಿ ಭೂಮಿಯ ಮೇಲೆ ಇರಬಹುದು. ಈ ಕೃತಕ ಜಲಾಶಯಗಳ ಒಂದು ಬಗೆಯೇ ಕೆರೆಗಳಾಗಿದ್ದು, ಅವುಗಳಲ್ಲಿ ಅನೇಕ ವೈಶಿಷ್ಟ್ಯತೆಯುಳ್ಳ ಪ್ರಕಾರಗಳಿವೆ. ಅವುಗಳ ಕೆಲವು ಪ್ರಕಾರಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

೧೭೯೯-೧೮೦೭ರಲ್ಲಿ ಮೈಸೂರು ರಾಜ್ಯದಲ್ಲಿ ಮಾಡಲಾದ ಸಮೀಕ್ಷೆಗಳಲ್ಲಿ ಕೆರೆ, ಕಟ್ಟೆ, ಕುಂಟೆಗಳ ಪಟ್ಟಿ ಇದೆ. ಅದರೂ ಆ ಕೆರೆಗಳ ಗಾತ್ರದ ಬಗ್ಗೆ ಅವುಗಳಲ್ಲಿ ಏನೂ ಹೇಳಿಲ್ಲ. ಆದರೆ ೧೮೦೦ರಲ್ಲಿ ಮೈಸೂರಿನ ಉದ್ದಗಲಕ್ಕೂ ಪ್ರವಾಸ ಮಾಡಿದ ಬುಕಾನನ್ ಕೆರೆಗಳನ್ನು ನದಿಯಿಂದ ತುಂಬುವ ಕೆರೆ ಮತ್ತು ಮಳೆಯಿಂದ ತುಂಬುವ ಕೆರೆ ಎಂದು ವರ್ಗೀಕರಿಸಿದ್ದಾನೆ೮. ನದಿಗೆ ಅಡ್ಡಲಾಗಿ ಕಟ್ಟಿದ ಅಣೆಕಟ್ಟೆನಿಂದ ನೀರನ್ನು ಪಡೆದುಕೊಂಡು ಇನ್ನಿತರ ಸಾಲು ಕೆರೆಗಳಿಗೆ, ಕಾಲುವೆಗಳಿಗೆ ನೀರು ಒದಗಿಸುವುದು ನದಿಯಿಂದ ತುಂಬುವ ಕೆರೆ. ೧೮೬೨ರಲ್ಲಿ ಪುನರ್ ನಿರ್ಮಿಸಲಾದ ಮದ್ದೂರ ಅಣೆಕಟ್ಟು ಮತ್ತು ಕೆಳಗಿನ ಎಂಟು ಕೆರೆಗಳಿಗೆ ನೀರು ಒದಗಿಸುವ ಅದರ ನಾಲೆ ನದಿಯಿಂದ ತುಂಬುವ ಕೆರೆ ಜಾಲಕ್ಕೆ ಉತ್ತಮ ಉದಾಹರಣೆಯಾಗಿದೆ.

ಮೇಜರ್ ಸ್ಯಾಂಕಿ ಕೆರೆಗಳನ್ನು ಹಳ್ಳಿ ಕೆರೆಗಳು ಹಾಗೂ ತುದಿಯ ಕೆರೆಗಳು ಎಂದು ವರ್ಗೀಕರಿಸಿದ್ದಾನೆ. ಹಳ್ಳಿ ಕೆರೆಗಳು ಸಣ್ಣವು, ಒಂದು ಹಳ್ಳಿಯ ಅಗತ್ಯವನ್ನು ಪೂರೈಸುವಂಥವು. ತುದಿಯ ಕೆರೆಗಳು ದೊಡ್ಡವು, ಕಣಿವೆಯೊಂದು ಮುಖ್ಯ ನದಿ ಕಣಿವೆಯನ್ನು ಸೇರುವ ಕಡೆ ಕಟ್ಟಲಾದವು. ಅವುಗಳಿಗೆ ದೊಡ್ಡ ಕೆರೆ ಅಥವಾ ಹಿರಿಯ ಕೆರೆ ಎಂದೂ ಹೆಸರು೯.

ಒಟ್ಟಾರೆ ಜಲ ಸಂಗ್ರಹಕಗಳನ್ನು ಸಾಮಾನ್ಯವಾಗಿ ಪ್ರಕೃತಿ ನಿರ್ಮಿತ ಮತ್ತು ಮಾನವ ನಿರ್ಮಿತ ಎಂದು ವಿಭಾಗಿಸಬಹುದಾಗಿದೆ. ಇವುಗಳಲ್ಲಿ ಅನೇಕ ಉಪ ಪ್ರಕಾರಗಳಿದ್ದು, ಅವುಗಳನ್ನು ಈ ಮುಂದಿನ ರೀತಿ ವಿಭಾಗಿಸಬಹುದು.



**ಕರ್ನಾಟಕ ಕೆರೆಗಳ ಬಗೆಗಿನ ಆಕರಗಳು**

ರಾಜ್ಯದಲ್ಲಿ ಇಲ್ಲಿಯವರೆಗೆ ನಡೆದ ಪ್ರಾಗೈತಿಹಾಸಿಕ ಸಂಶೋಧನೆಗಳು ಹಾಗೂ ಉತ್ಖನನಗಳಲ್ಲಿ ದೊರೆತ ಶಾಸನಗಳು, ಸಾಹಿತ್ಯ ಕೃತಿಗಳು, ವಿದೇಶಿ ಪ್ರವಾಸಿಗಳ ಬರಹಗಳು ಹಾಗು ಸರ್ಕಾರಿ ಅಥವಾ ಪ್ರಭುತ್ವದ ದಾಖಲೆಗಳು ಕರ್ನಾಟಕದಲ್ಲಿ ಕೆರೆ ನೀರಾವರಿಯನ್ನು ಅಧ್ಯಯನ ಮಾಡಲು ಇರುವ ವಿವಿಧ ಆಕರಗಳಾಗಿವೆ. ಇತಿಹಾಸ ಪೂರ್ವ ಯುಗದಲ್ಲಿ ದಕ್ಷಿಣ ಭಾರತದಲ್ಲಿ ಜಲಾಶಯಗಳನ್ನು ಕಟ್ಟಿದವರಲ್ಲಿ ತಾಮ್ರಯುಗ ಹಾಗೂ ಬೃಹತ್ ಶಿಲಾಯುಗದ ಜನರೇ ಮೊಟ್ಟಮೊದಲಿಗರು ಎನ್ನುವುದನ್ನು ಸಿದ್ಧ ಮಾಡಿ ತೋರಿಸಿವೆ. ಪುಣೆಗೆ ಹತ್ತಿರದ ಇನಾಂಗಾಂವ್‌ನ ಉತ್ಖನನದಿಂದ ತಾಮ್ರಯುಗದ ಜನ ಕಟ್ಟಿದ ಜಲಾಶಯ ಪತ್ತೆಯಾಗಿದೆ. ಅದರ ಕಾಲವನ್ನು ಸುಮಾರು ಕ್ರಿ.ಪೂ ೧೫೦೦ ಎಂದು ನಿಗದಿ ಮಾಡಲಾಗಿದೆ.[೧೦] ಬೃಹತ್ ಶಿಲಾಯುಗದ ಜನ ಬೆಟ್ಟಗಳ ಬಳಿ ಇದ್ದರು. ಬೆಟ್ಟಗಳ ಇಳಿಜಾರಿನಿಂದ ಇಳಿದು ಬರುತ್ತಿದ್ದ ಮಳೆ ನೀರನ್ನು ಅವರು ಜಲಾಶಯಗಳಲ್ಲಿ ಸಂಗ್ರಹಿಸುತ್ತಿದ್ದರು. ದಕ್ಷಿಣ ಭಾರತದ ಆಂಧ್ರ, ಕರ್ನಾಟಕ ಮತ್ತು ತಮಿಳುನಾಡುಗಳಲ್ಲಿ ಕ್ರಿ.ಪೂ. ೧೦೦೦ರಲ್ಲಿ ನಿರ್ಮಿತವಾಗಿರಬಹುದಾದ ಅನೇಕ ಕೊಳಗಳೇ ಇದಕ್ಕೆ ಸಾಕ್ಷಿ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೧೧]

**ಶಾಸನಗಳು**

ಸಂಶೋಧನೆ, ಉತ್ಖನನಗಳು ಬಯಲು ಮಾಡಿರುವುದು ಎಲ್ಲೋ ಕೆಲವು ಜಲಾಶಯಗಳನ್ನು ಮಾತ್ರ, ಆದರೆ ಸಾವಿರಗಟ್ಟಲೆ ಸಿಗುವ ಶಾಸನಗಳು ಕ್ರಿ.ಪೂ ೫೦೦ರಿಂದ ಸುಮಾರು ಕ್ರಿ.ಶ. ೧೮೦೦ ವರೆಗೆ ಅಸಂಖ್ಯಾತ ಕೆರೆಗಳು ಇದ್ದುದರ ಬಗ್ಗೆ ಬೆಳಕು ಚೆಲ್ಲುತ್ತವೆ. ನಮ್ಮ ಕೆರೆಗಳ ಇತಿಹಾಸದ ಪುನರ್ರಚನೆಗೆ ಶಾಸನಗಳು ಅತಿ ಉಪಯುಕ್ತ ಆಕರಗಳಾಗಿವೆ. ಕೆಲವು ಶಾಸನಗಳು ಸಿಕ್ಕಿರುವುದು ಕರ್ನಾಟಕದ ಹೊರಗೆ ಆದರೂ ಅವು ನಮ್ಮ ರಾಜ್ಯಕ್ಕೆ ಅಪ್ರತ್ಯಕ್ಷ ವಾಗಿ ಸಂಬಂಧಿಸಿವೆ. ಉದಾಹರಣೆಗೆ ಕ್ರಿ.ಶ.೧೫೦ರ ರುದ್ರದಾಮನ ಜುನಾಘಢ ಶಾಸನ ಶತಮಾನಗಳ ಕಾಲ ಅಸ್ತಿತ್ವದಲ್ಲಿದ್ದ ಜಲಾಶಯವೊಂದರ ಇತಿಹಾಸದ ಬಗ್ಗೆ ಪೂರ್ಣ ವಿವರಗಳನ್ನು ಕೊಡುತ್ತದೆ. ಅದು ಭಾರತೀಯ ಇತಿಹಾಸದ ಅತಿ ಪ್ರಾಚೀನ ಶಾಸನ. ಚಂಡಮಾರುತವೊಂದು ಹೇಗೆ ಒಂದು ಜಲಾಶಯವನ್ನು ನಾಶ ಮಾಡಿತು ಎಂಬುದು ಆ ಶಾಸನದ ಚಿತ್ರಣ. ಆ ಜಲಾಶಯವನ್ನು ಮೊದಲು ಕಟ್ಟಿದ್ದು ಮೌರ್ಯರು, ಸುಮಾರು ಕ್ರಿ.ಪೂ. ೩೨೦ರಲ್ಲಿ ಅವರು ಮಧ್ಯ ಕರ್ನಾಟಕವನ್ನು ಒಂದು ಶತಮಾನಕ್ಕೂ ಹೆಚ್ಚು ಕಾಲ ಆಳಿದರು.[೧೨] ಜಲಾಶಯಗಳ ನಿರ್ಮಾಣ ಹಾಗೂ ಸಂರಕ್ಷಣೆ ಬಗೆಗಿನ ತಮ್ಮ ತಿಳುವಳಿಕೆಯನ್ನು ಕರ್ನಾಟಕದ ಜನ ಮೌರ್ಯರಿಂದ ಕಲಿತಿರುವ ಅಥವಾ ಉತ್ತಮಪಡಿಸಿಕೊಂಡಿರುವ ಸಾಧ್ಯತೆಯಿದೆ.

ಕೆರೆಯನ್ನು ನಿರ್ಮಿಸುವವರಿಗೆ ಕೈಪಿಡಿಯಂತೆ ಇರುವ ಏಕೈಕ ಶಾಸನ ಆಂಧ್ರಪ್ರದೇಶದ ಕಡಪಾ ಜಿಲ್ಲೆಯಲ್ಲಿರುವ ಕ್ರಿ.ಶ. ೧೫೬೯ರ **ಪೋರುಮಾಮಿಲ್ಲ** ಶಾಸನ.[೧೩] ಆ ಕೆರೆ ನಿರ್ಮಿತವಾದದ್ದು ವಿಜಯನಗರದ ಎರಡನೆಯ ದೊರೆ ಬುಕ್ಕನ ಆಳ್ವಿಕೆಯಲ್ಲಿ. ಆತನ ಉತ್ತರಾಧಿಕಾರಿಗಳು ತಮ್ಮ ರಾಜ್ಯದ ಕರ್ನಾಟಕ ಭಾಗದಲ್ಲಿ ಕೆರೆ ಕಟ್ಟಲು ಇದೇ ಸೂತ್ರಗಳನ್ನೇ ಅನುಸರಿಸಿದರು. ಅಂತೆಯೇ ಈ ಶಾಸನ ದಕ್ಷಿಣ ಭಾರತದ ಇತರ ಪ್ರದೇಶಗಳ ನೀರಾವರಿ ಅಧ್ಯಯನಕ್ಕೂ ಮುಖ್ಯವೆನಿಸಿದೆ.

ಕರ್ನಾಟಕದಲ್ಲಿ ಬನವಾಸಿ ೧೪, ಚಂದ್ರವಳ್ಳಿ ೧೫ ಮತ್ತು ತಾಳಗುಂದದಲ್ಲಿ ಸಿಕ್ಕಿರುವ ಶಾಶನಗಳು ಈ ರಾಜ್ಯದ ಇತಿಹಾಸದಲ್ಲಿ ಜಲಾಶಯಗಳ ಪ್ರಾಚೀನತೆಯನ್ನು ಗೊತ್ತು ಮಾಡಲು ಸಹಾಯಕವಾಗಿವೆ. ಮುನಿರಾಬಾದಿನ ಒಂದು ಶಾಸನ, ಹೊಸಪೇಟೆಯ ಬಳಿ ತುಂಗಭದ್ರಾ ನದಿಯಿಂದ ಹೊರಟ ನಾಲೆಗಳನ್ನು ಕಾವ್ಯಮಯವಾಗಿ ವರ್ಣಿಸುತ್ತದೆ. ಕೆಳನಾಲೆ, ಮೇಲು ನಾಲೆಗಳನ್ನು ಅದು ಪ್ರಸ್ತಾಪಿಸುತ್ತದೆ.

ಕೋಲಾರದ ಬಳಿಯ ಬೇತಮಂಗಲದ ಎರಡು ಶಾಸನಗಳು, ಸಾವಿರ ವರ್ಷಕ್ಕೂ ಹಿಂದಿನಿಂದ ಅಲ್ಲಿ ಇರುವ ಪ್ರಖ್ಯಾತ ಕೆರೆಯ ಚರಿತ್ರೆಯನ್ನು ಕಟ್ಟಿ ಕೊಡುತ್ತವೆ. ಹೊಳೇನರಸೀಪುರದ ಕ್ರಿಶ ೧೩೧೦ರ ಒಂದು ಶಾಸನ ಒಂದು ಕೆರೆಯನ್ನು ಕಟ್ಟಲು ಆದ ಒಟ್ಟು ವೆಚ್ಚವನ್ನು ಸೂಚಿಸುತ್ತದೆ. ಬೋಳಕ್ಯಾತನಹಳ್ಳಿಯ (ಹಾಸನ ಜಿಲ್ಲೆ) ಒಂದು ಶಾಸನ ಕೆರೆಯ ಹೂಳು ತೆಗೆಯಲು ಏನು ಮಾಡಬೇಕೆಂಬುದನ್ನು ತಿಳಿಸುತ್ತದೆ. ಕೋಲಾರ ಜಿಲ್ಲೆಯ ರಾಜಗುಂಡ್ಲಹಳ್ಳಿ ಶಾಸನ ಕೆರೆ ನಿರ್ಮಾಣದಲ್ಲಿ ಅನುಸರಿಸಿದ ತಂತ್ರವನ್ನು ಬಳಸಿದ ವಸ್ತುಗಳನ್ನು ವಿವರಿಸುತ್ತದೆ.

ಲಕ್ಷ್ಮೀಧರಾಮತ್ಯನ ಹಂಪಿ ಶಾಸನ[೧೬], ತಾಯಿ ತನಗೆ ಹಾಲುಣಿಸುವಾಗ ಹಾಡುತ್ತಿದ್ದ ಜೋಗುಳಗಳಿಂದ ತಾನು ಕೆರೆ ಕಟ್ಟಿಸಲು, ಬಾವಿ ತೋಡಿಸಲು ಹೇಗೆ ಪ್ರೇರಣೆ ಹೊಂದಿದ ಎಂಬುದನ್ನು ವರ್ಣಿಸುತ್ತದೆ. ತಿಮ್ಮಲಾಪುರ ಕೆರೆಯ ಅಂಗಳದಲ್ಲಿ ಸಿಕ್ಕಿದ ಒಂದು ಶಾಸನದಲ್ಲಿ ಆ ಕೆರೆಯಲ್ಲಿ ನೀರು ಒಂದು ಆಳು ಪ್ರಮಾಣದಷ್ಟು ಇರಬೇಕು ಎಂದು ಹೇಳಿದೆ. ಪ್ರಾಯಶಃ ನೀರು ಆ ಮಿತಿಗೆ ಮೀರಿದರೆ, ಆ ಕೆರೆ ಸಂಬಂಧಪಟ್ಟ ಇತರ ಕೆರೆಗಳಿಗೆ ಅಪಾಯ ಆಗಬಹುದು ಎಂದು ಇರಬೇಕು. ಈ ರೀತಿ ಕರ್ನಾಟಕದಲ್ಲಿ ದೊರೆತಿರುವ ಶಾಸನಗಳು ಇರುವ ಕೆರೆಗಳ ರಚನೆ ಹಾಗೂ ಸಂರಕ್ಷಣೆಗೆ ಸಂಬಂಧಪಟ್ಟ ವಿವರಗಳನ್ನು ಒದಗಿಸುತ್ತವೆ.

ಕೆರೆಗಳ ವಿವಿಧ ಅಂಗಗಳಾದ ಏರಿ, ಅದರ ಆಕಾರ, ಕಟ್ಟಡದಲ್ಲಿ ಬಳಸಲಾದ ಸಾಮಾಗ್ರಿ, ತೂಬು, ಕೋಡಿ, ಕೆರೆಯಲ್ಲಿ ನಿಲ್ಲಬೇಕಾದ ನೀರಿನ ಆಳ, ನಿರ್ಮಾಣದ ಉದ್ದೇಶ, ನಿರ್ಮಾಣಕ್ಕೆ ಬೇಕಾದ ಹಣಕಾಸು, ಸಂರಕ್ಷಣೆಗೆ ಬೇಕಾದ ಅಗತ್ಯಗಳು ಎಲ್ಲವನ್ನು ಶಾಸನಗಳಿಂದ ಅರಿಯಬಹುದಾಗಿದೆ. ಎಲ್ಲಕ್ಕಿಂತ ಮಿಗಿಲಾಗಿ, ಬಹುಪಾಲು ಶಾಸನಗಳು ಕೆರೆ ನಿರ್ಮಾಣ ಅಥವಾ ಜೀರ್ಣೋದ್ಧಾರದ ನಿಖರವಾದ ದಿನವನ್ನು ಸಹ ಸೂಚಿಸುತ್ತವೆ.[೧೨] ಈ ಹಿನ್ನೆಲೆಯಲ್ಲಿ ಶಾಸನಗಳು ಅತಿ ಉಪಯುಕ್ತ ಆಕರಗಳಾಗಿವೆ ಎನ್ನಬಹುದು.

**ಸಾಹಿತ್ಯ ಮೂಲಗಳು**

ಶಾಸನಗಳಂತೆಯೇ ಸಾಹಿತ್ಯ ಮೂಲಗಳು ಸಹ ನಮಗೆ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತವೆ. ಕೃಷಿ ಹಾಗೂ ಅರ್ಥಶಾಸ್ತ್ರಕಾರರು ಹಾಗೂ ನ್ಯಾಯಶಾಸ್ತ್ರಕಾರರು, ಕವಿಗಳು ಕೆರೆ ನೀರಾವರಿಯ ಪ್ರಾಮುಖ್ಯತೆಯನ್ನು ತಮ್ಮ ಕೃತಿಗಳ ಮೂಲಕ ಅನಾವರಣ ಮಾಡಿದ್ದಾರೆ.

ಪ್ರಾಚೀನ ಹಾಗೂ ಮಧ್ಯಕಾಲೀನ ಭಾರತದಲ್ಲಿದ್ದ **'ವೃಕ್ಷಾಯುರ್ವೇದ'** ಎಂಬ ಹೆಸರಿನ ಒಂದು ಗ್ರಂಥವು ಸಸ್ಯಗಳು ಅವುಗಳ ರೋಗ ಹಾಗೂ ಪರಿಹಾರಗಳಿಗೆ ಸಂಬಂಧಿಸಿದ್ದು, ಅದು ಅಂದಿದ್ದ ಜಲಾಶಯಗಳನ್ನು ಕುರಿತು ಸಹ ಪ್ರಸ್ತಾಪಿಸುತ್ತದೆ. ಅದೇ ರೀತಿ ಪರಾಶರನ **'ಕೃಷಿಸೂಕ್ತಿ'**

ಎನ್ನುವ ಕೃತಿ (ಇದರ ಕಾಲ ಕ್ರಿ.ಶ.೧೦೦೦ ಎನ್ನುತ್ತಾರೆ ಲಾಲಂಜಿ ಗೋಪಾಲ್) ಮತ್ತು ಕನ್ನಡದ **'ಲೋಕೋಪಕಾರ'**(ಕ್ರಿ.ಶ.೧೦೨೫) ಹಾಗೂ **'ರಟ್ಟಮತ'**(ಕ್ರಿ.ಶ.೧೩೦೦) ಕೃತಿಗಳು ಕೃಷಿ ಸಂಬಂಧಿ ವಿಷಯಗಳನ್ನು ಒಳಗೊಂಡಿದ್ದರೂ ಸಹ ಕೆರೆಗಳಿಗೆ ಸಂಬಂಧಿಸಿದಂತೆ ಅತ್ಯಂತ ಅಮೂಲ್ಯ ವಿವರಗಳನ್ನು ದಾಖಲಿಸಿವೆ.

ಗಂಗ ಅರಸ ದುರ್ವಿನೀತ ಕೆರೆ ಆಣೆಕಟ್ಟುಗಳನ್ನು ನಿರ್ಮಿಸಿದ್ದ. ನಲ್ಲಾಳ ತಾಮ್ರಶಾಸನದಲ್ಲಿ ಅನಂತವರ್ಮನ್ ಎಂಬ ಅರಸ ಕಲಿಂಗನಗರದಲ್ಲಿ ಕೆರೆ ನಿರ್ಮಾಣ ಮಾಡಿದರು. ನೊಳಂಬ, ಪಾಂಡ್ಯ, ಪಲ್ಲವ, ಚೋಳ, ಚೇರ ಮುಂತಾದವರು ಕೆರೆಗಳನ್ನು ನಿರ್ಮಿಸಿದ್ದಾರೆ.

ಪೊರಮಾಮಿಳ ಕೆರೆ ಶಾಸನದಲ್ಲಿ ಹಾಗೂ ಕೃಷಿ ಸೂಕ್ತಿಯಲ್ಲಿ ಇರುವ ಸೂಚನೆಗಳು ಪರಸ್ಪರ ಸಮರ್ಥಕ ಹಾಗೂ ಪರಸ್ಪರ ಪೂರಕವಾಗಿವೆ. ಕೆರೆ ನಿರ್ಮಾಣದ ಬಗ್ಗೆ ನಮ್ಮ ಹಿರಿಯರು ಪಡೆದಿದ್ದ ಜ್ಞಾನ ಅವೆರಡರಲ್ಲಿ ತುಂಬಿವೆ ಎಂದರೆ ತಪ್ಪಾಗಲಿಕ್ಕಿಲ್ಲ.

ಕೌಟಿಲ್ಯನ **'ಅರ್ಥಶಾಸ್ತ್ರ'**(ಕ್ರಿ.ಶ.೩೦೦)ವೂ ಸಹ ನಿರಂತರವಾದ ಅಥವಾ ಇತರ ಯಾವುದಾದರೂ ಮೂಲಗಳಿಂದ ನೀರು ತುಂಬವಂತಹ ಅಣೆಕಟ್ಟು ಜಲಾಶಯಗಳನ್ನು ದೊರೆ ಕಟ್ಟಿಸಬೇಕು ಇಲ್ಲವೆ ಯಾರು ತಾವಾಗಿಯೇ ಜಲಾಶಯಗಳನ್ನು ಕಟ್ಟುತ್ತಾರೆಯೋ ಅವರಿಗೆ ಬೇಕಾದ ಸ್ಥಳ, ರಸ್ತೆ ಮರಮುಟ್ಟು ಇತ್ಯಾದಿ ಅಗತ್ಯಗಳನ್ನು ಒದಗಿಸಬೇಕು. ಕೌಟಿಲ್ಯ ಮಳೆಯ ಮಾಪಕವನ್ನು ತಿಳಿದಿದ್ದ ಎನ್ನುವುದು ಗಮನಾರ್ಹ. ನಿರ್ದಿಷ್ಟ ಅಳತೆಗಳ ವಿಶೇಷ ಕುಂಡವನ್ನು ನಿರ್ಮಿಸಬೇಕು, ಅದರ ನಡುವೆ ಆಕಾಶದತ್ತ ಬಾಯಿ ಉಳ್ಳಂತೆ ಒಂದು ಮೊಳ ಅಳತೆಯ ರಂಧ್ರ ಇರಬೇಕು, ಅದೇ ಮಳೆ ನೀರಿನ ಮಾಪಕ ಅಥವಾ **ವರ್ಷಮಾನ** ಎಂದು ಬರೆಯುತ್ತಾನೆ ಕೌಟಿಲ್ಯ.[೧೮]

ರನ್ನನ ಅಜಿತ ಪುರಾಣಗಳಲ್ಲಿ ಅದಘಟ್ಟಿ ಎಂಬ ಪರ್ಶಿಯನ್ ಚಕ್ರದಂತಹ ಘಟಿಯಂತ್ರದ ಉಲ್ಲೇಖವಿದೆ. ಇದರಿಂದ ನೀರಿನ ವೇಗವನ್ನು ನಿಯಂತ್ರಿಸಲು ಉಪಯೋಗಿಸುತ್ತಿದ್ದ ಅಗಳಿ ಮತ್ತು ನಿರೊತ್ತುವುದು ಮೊದಲಾದ ಉಪಾಯಗಳಿದ್ದವು.[೧೯]

ವಿಜ್ಞಾನೇಶ್ವರ ತನ್ನ **'ಮಿತಾಕ್ಷರ'** (ಕ್ರಿ.ಶ.೧೧೦೦) ಕೃತಿಯಲ್ಲಿ ಕಾಲುವೆ, ಕೆರೆ, ಸೇತುವೆಗಳನ್ನು ನಾಶ ಮಾಡಿದವರಿಗೆ ಉಗ್ರಶಿಕ್ಷೆ ಕೊಡುತ್ತಿದ್ದರು. ಮುಂದುವರೆದು "ಇಡೀ ಸಮಾಜದ ಅಭ್ಯುದಯಕ್ಕೆ ಮೂಲಭೂತ ಪ್ರಾಮುಖ್ಯತೆ ಉಳ್ಳದ್ದು ಕೆರೆಯ ನಿರ್ಮಾಣ ಎನ್ನುತ್ತಾನೆ. ಅಲ್ಲದೇ ಆತ ಮುಂದುವರಿದು "ಒಂದು ಹೊಳೆಗೆ ಅಡ್ಡಲಾಗಿ ಅಣೆಕಟ್ಟು ನಿರ್ಮಿಸುವುದರಿಂದ ಒಬ್ಬನ ಭೂಮಿ ನಾಶವಾದರೂ ಸರಿಯೇ, ಅದು ಉಂಟುಮಾಡುವ ನಾಶ ಅಲ್ಪವಾಗಿದ್ದು, ಅನೇಕರಿಗೆ ಲಾಭದಾಯವಾಗುವಂತಿದ್ದರೆ ಆ ಭೂಮಿಯ ಒಡೆಯ ನಿರ್ಮಾಣವನ್ನು ನಿಲ್ಲಿಸಕೂಡದು" ಎನ್ನುತ್ತಾನೆ.[೨೦]

3ನೇ ಸೋಮೇಶ್ವರನ ಮಾನಸೋಲ್ಲಾಸ ಚರಿತೆಯಲ್ಲಿ ಬಾವಿ, ಕೂಪ, ವ್ಯಾಪ್ತಿ ಮತ್ತು ಪುಷ್ಕರಣಿ ಎಂದು ನದಿಗೆ ಅಡ್ಡಲಾಗಿ ಆಣೆಕಟ್ಟು ಕಟ್ಟಿದ್ದಕ್ಕೆ ತಟಾಕವೆಂತಲೂ ಕರೆದಿರುವರು. ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರು, ಹೊಯ್ಸಳರ ಕಾಲದಲ್ಲಿ ಕೆರೆಗಳ ನಿರ್ಮಾಣದ ಬಗ್ಗೆ ಸಾಕಷ್ಟು ವಿವರಗಳಿವೆ.[೨೧]

ನಾಗವರ್ಮನ (೧೨ನೇ ಶತಮಾನ) **'ಅಭಿದಾನ ವಸ್ತುಕೋಶ'** ಹಾಗೂ ಮಂಗರಾಜನ (೧೫ನೇ ಶತಮಾನ ಪೂರ್ವಾರ್ಧ) **'ಅಭಿನವಾಭಿದಾನ'** ಎಂಬ ಎರಡು ಕನ್ನಡ ವಸ್ತುಕೋಶಗಳಲ್ಲಿ ಜಲ ಸಂಗ್ರಹಣೆಯ ನಾನಾ ರೀತಿಗಳನ್ನು ವರ್ಣಿಸಲು ಬಳಸುವ ಶಬ್ದಗಳನ್ನು ಒಳಗೊಂಡ ಪದ್ಯಗಳಿವೆ. ಇವು ಸಮಕಾಲೀನ ಶಾಸನಗಳಲ್ಲಿ ವರ್ಣಿಸಲು ಬಳಕೆಯಾಗಿರುವ ಶಬ್ದಗಳ ಅರ್ಥವನ್ನೇ ವಿವರಿಸುತ್ತದೆ.

ದೂರಸಮುದ್ರ, ಭರಮಸಾಗರ ಬಲ್ಲಾಳ ರಾಯಸಮುದ್ರ, ದೇವರಾಯ ಸಮುದ್ರ, ಸೇರಿದಂತೆ ಹೊಯ್ಸಳರು, 204 ಹೊಸ ಕೆರೆಗಳನ್ನು ನಿರ್ಮಿಸಿದ್ದರು. ವಾರಂಗಲ್ಲಿನ ಕಾಕತೀಯರು ಶೆಟ್ಟಿಕೆರೆ, ದೊಡ್ಡಕೆರೆ, ಕೇಸರಿ ಸಮುದ್ರಗಳನ್ನು ನಿರ್ಮಿಸಿದ್ದರು. ಹೊಯ್ಸಳರು ಕ್ರಿ.ಶ.13ರಲ್ಲಿ ದ್ವಾರಸಮುದ್ರಕ್ಕೆ ಎಲಜಿ(ಯುಗಚಿ) ನದಿಯಿಂದ ಕಾಲುವೆ ಮೂಲಕ ನೀರು ಹರಿಸುತ್ತಿದ್ದರು.

ವಿಜಯನಗರ ಕಾಲದಲ್ಲಿ ಕೃಷ್ಣ, ತುಂಗಭದ್ರಾ, ಕಡಪ, ಅನಂತಪುರ, ಬಳ್ಳಾರಿ, ಕೋಲಾರ, ತುಮಕೂರು, ಚಿತ್ರದುರ್ಗ, ರಾಯಚೂರು ಮೊದಲಾದ ಕಡೆ ಕೆರೆಗಳನ್ನು ನಿರ್ಮಿಸಿದ್ದರು. 1ನೇ ಬುಕ್ಕರಾಯನು ಸಾವಿರಾರು ಕೆಲಸಗಾರರಿಂದ ಕಡಪದ ಕಲ್ಲುಚಪ್ಪಲ್ಲಿ, ಪಾವಗಡದ ಬುಕ್ಕಸಮುದ್ರ, ಚಳ್ಳಕೆರೆ ತಾಲೂಕಿನ ಬುಕ್ಕಾಂಬೂದಿ, ಹೊಸಪೇಟೆ ತಾಲೂಕಿನ ಬುಕ್ಕಸಾಗರಗಳನ್ನು ಉಲ್ಲೇಖಿಸ ಬಹುದಾಗಿದೆ.

ಕೃಷ್ಣದೇವರಾಯನ ತೆಲುಗು ಕೃತಿ **'ಆಮುಕ್ತಮಾಲ್ಯದ'** ನೀರಾವರಿಯ ಪ್ರಾಮುಖ್ಯತೆಯನ್ನು ಈ ರೀತಿ ಒತ್ತಿ ಹೇಳುತ್ತದೆ.[೨] "ರಾಜ್ಯ ಕಿರಿದಾಗಿದ್ದಲ್ಲಿ ಅದರ ಧರ್ಮ ಹಾಗೂ ಅರ್ಥ ಎರಡೂ ಹೆಚ್ಚುವುದು, ಕೆರೆಗಳನ್ನು ನೀರಾವರಿ ಕಾಲುವೆಗಳನ್ನು ನಿರ್ಮಿಸಿದಾಗ ಮಾತ್ರ, ಅಲ್ಲದೇ ಆತನ ಕಾಲಾವಧಿಯ ಕೆರೆ ನೀರಾವರಿಯ ವಿವರಗಳನ್ನು ನೀಡುವ ಕೃತಿಗಳಲ್ಲಿ **'ರೈತರಾಯ"** ಎನ್ನುವ ಕೃತಿ ಮುಖ್ಯವಾಗಿದ್ದು, ಅಂದು ನಿರ್ಮಾಣವಾಗುತ್ತಿದ್ದ ಕೆರೆಯೊಂದರಲ್ಲಿ ಸ್ವತಃ ದೊರೆಯಾದ ಶ್ರೀಕೃಷ್ಣದೇವರಾಯನೇ ಮಂತ್ರಿಗಳೊಂದಿಗೆ ಭಾಗಿಯಾಗಿ ಶ್ರಮದಾನ ನಡೆಸಿದ ಸಂಗತಿಯನ್ನು ಆ ಕೃತಿ ವಿವರಿಸುತ್ತದೆ.

ಸ್ವದೇಶಿ ಸಾಹಿತ್ಯದ ಹಾಗೇ ವಿದೇಶೀ ಸಾಹಿತ್ಯವೂ ಕೆರೆ ನೀರಾವರಿ ವ್ಯವಸ್ಥೆಯನ್ನು ಉಲ್ಲೇಖಿಸುತ್ತದೆ. ಪ್ರಾಚೀನ ಹಾಗೂ ಮಧ್ಯಯುಗದಲ್ಲಿ ಬಹುಸಂಖ್ಯೆ ವಿದೇಶೀ ಪ್ರವಾಸಿಗರು ದಕ್ಷಿಣ ಭಾರತ ಮತ್ತು ಕರ್ನಾಟಕಕ್ಕೂ ಬಂದಿದ್ದರು. ಅವರಲ್ಲಿ ನೀರಾವರಿಯ ಮೇಲೆ ಬರೆದಿರುವವರು ಕೇವಲ ಇಬ್ಬರು ಮಾತ್ರ, ಅವರ ಪೈಕಿ ಡೊಮಿಂಗೋ ಪಯಸ್ (೧೫೨೦), ಫರ್ನಾವ್ ನೂನಿಜ್ (೧೫೩೫) ಪ್ರಮುಖರಾಗಿದ್ದಾರೆ. ಅವರು ವಿಜಯನಗರದ ಚರಿತ್ರೆಯನ್ನು ರಚಿಸುವ ವೇಳೆ ಅಂದಿನ ನೀರಾವರಿ ಅನುಕೂಲಗಳ ಬಗ್ಗೆ ಚರ್ಚಿಸಿದ್ದಾರೆ. ಅವರಿಬ್ಬರೂ ಸಹ ಕೃಷ್ಣದೇವರಾಯ ತನ್ನ ಹೊಸ ರಾಜಧಾನಿಯಲ್ಲಿ **'ರಾಯರ ಕೆರೆ'** ಎನ್ನುವ ಕೆರೆ ಕಟ್ಟಿಸಿದ್ದನ್ನು ವರ್ಣಿಸುತ್ತಾರೆ. ಇದರಿಂದ ಕೃಷ್ಣದೇವರಾಯನು ತನ್ನ ಅಧಿಕಾರಾವಧಿಯಲ್ಲಿ ತಾನು ಕೆರೆ ಕಟ್ಟಿಸಲು ಮಾಡಿದ ಅಪಾರ ಪ್ರಯತ್ನಗಳು ನಮಗೆ ಸ್ಪಷ್ಟವಾಗುತ್ತವೆ.

ಬಹುಮನಿ, ಬಿಜಾಪುರ ಸುಲ್ತಾನರಲ್ಲದೆ, ವಿಜಯನಗರೋತ್ತರ ಕಾಲದ ಕೆಳದಿ, ಚಿತ್ರದುರ್ಗ, ಹರಪನಹಳ್ಳಿ, ತರೀಕೆರೆ, ಬಳ್ಳಾರಿ, ಸುರಪುರ, ಹಾಗಲವಾಡಿ, ಮಧುಗಿರಿ, ರಾಯದುರ್ಗ, ನಾಯಕನಹಟ್ಟಿ

ಮತ್ತು ಹೈದರ್-ಟಿಪ್ಪುಸುಲ್ತಾನರು, ಮೈಸೂರು ಒಡೆಯರು, ಕೆರೆಗಳನ್ನು ನಿರ್ಮಿಸಿದ್ದರು. ಬ್ರಿಟಿಷರು ನಿರ್ಮಾಣಗೊಂಡ ಕೆರೆಗಳ ಜೀರ್ಣೋದ್ಧಾರ ಕಾರ್ಯಗಳನ್ನಷ್ಟೇ ಮಾಡಿದ್ದರು.

**ಸರ್ಕಾರಿ ದಾಖಲೆಗಳು**

ಪ್ರಾಚೀನ ಹಾಗೂ ಮಧ್ಯಕಾಲೀನ ಯುಗದ ಕೆರೆಗಳ ಅಧ್ಯಯನಕ್ಕೆ ಶಾಸನಗಳಂತೆಯೇ ಸರಿಸಮಾನವಾಗಿ ನಮಗೆ ಮುಖ್ಯ ಆಕರಗಳಾಗಿ ನಿಲ್ಲುವುದು ಸರ್ಕಾರಿ ದಾಖಲೆಗಳು ಮಾತ್ರ. ಈ ರೀತಿಯ ದಾಖಲೆಗಳು ನಮ್ಮ ಪ್ರಾಚೀನ ಕೆರೆಗಳ ಅಧ್ಯಯನಕ್ಕೆ ಸಾಕ್ಷಿಗಳಾಗಿವೆ. ಹಲವು ಸರ್ಕಾರಿ ದಾಖಲೆಗಳಿದ್ದು, ಅವು ಸಾವಿರಾರು ಪುಟಗಳನ್ನೊಂದಿವೆ. ಅವುಗಳಲ್ಲಿ ಬುಕಾನನ್‌ನ ಪ್ರವಾಸ ಕಥನ, ಸ್ಯಾಂಕಿಯ ವರದಿಗಳು, ರೈಸ್‌ನ ಗೆಝೆಟಿಯರ್, ೧೯೦೧ರ ನೀರಾವರಿ ಆಯೋಗದ ವರದಿ ಇವು ಶಾಸನಗಳಲ್ಲಿ ಅಪೂರ್ಣವಾಗಿ ಅಥವಾ ತುಣುಕು ತುಣುಕಾಗಿ ಕಾಣಸಿಗುವ ಮಾಹಿತಿಯ ಮೇಲೆ ಅಪರೂಪದ ಬೆಳಕು ಚೆಲ್ಲುವುದರೊಂದಿಗೆ ಅತಿ ಮುಖ್ಯ ದಾಖಲೆಗೆಳೆನಿಸಿವೆ.

ಇವುಗಳಲ್ಲಿ ಅತ್ಯಂತ ಅಮೂಲ್ಯವಾದದು ಬುಕಾನನ್ನನ ದಿನಚರಿ. ಬುಕಾನನ್ ೧೮೦೦ರಿಂದ ೧೮೦೨ರ ನಡುವೆ ಪ್ರವಾಸ ಮಾಡಿ ತಾನು ಕಂಡ ಜನಜೀವನವನ್ನು ತನ್ನ ದಿನಚರಿಯಲ್ಲಿ ದಾಖಲಿಸಿ ಅದನ್ನು ಆಗಿನ ಭಾರತದ ಗವರ್ನರ್ ಜನರಲ್ ಮಾರ್ಕ್ವಿಸ್ ಆಫ್ ವೆಲ್‌ಸ್ಲಿಗೆ ಒಪ್ಪಿಸಿದ್ದಾನೆ. ಇದರಲ್ಲಿ ಮದರಾಸಿನಿಂದ ಮೈಸೂರು ಕನ್ನಡ ಜಿಲ್ಲೆಗಳು ಹಾಗೂ ಮಲಬಾರಿನಲ್ಲಿ ಕೃಷಿ ನೀರಾವರಿಗಳ ಸ್ಥಿತಿಗತಿಗಳ ಮತ್ತು ಅಲ್ಲಿನ ಪುರಾತನ ವಸ್ತುಗಳ ವಿವರಗಳೊಂದಿಗೆ ಆ ಪ್ರದೇಶಗಳಲ್ಲಿ ಆಗ ಇದ್ದ ಕೆರೆಗಳು, ಅವುಗಳ ಸಂರಕ್ಷಣೆ, ಕೃಷಿ ಮತ್ತು ನೀರಾವರಿ ಪದ್ಧತಿಗಳ ಕುರಿತ ಅಮೂಲ್ಯ ಮಾಹಿತಿಗಳಿವೆ.

ಇದೇ ರೀತಿಯಲ್ಲಿ ನಮಗೆ ನೆರವಾಗುವ ಮತ್ತೊಂದು ಸರ್ಕಾರಿ ದಾಖಲೆಯ ವರದಿಯೆಂದರೆ ೧೮೦೪ರಲ್ಲಿ **ಕರ್ನಲ್ ಎಮ್.ವಿಲ್ಕ್ಸ್ ಮೈಸೂರು** ಸರ್ಕಾರದ ಸಂಪನ್ಮೂಲಗಳು ಮತ್ತು ವೆಚ್ಚ ಕುರಿತು ಒಳಾಡಳಿತದ ಬಗ್ಗೆ ಮಾಡಿದ ವರದಿ. ಅದು ಇತರ ವಿವರಗಳ ಜೊತೆಗೆ, ಮೈಸೂರಿನಲ್ಲಿ ಬೇಸಾಯದಲ್ಲಿದ್ದ ಹಾಗೂ ನೀರಾವರಿಗೆ ಒಳಪಟ್ಟಿದ್ದ ಭೂವಿಸ್ತಾರವನ್ನು ತಿಳಿಸುತ್ತದೆ.

ಅದೇ ರೀತಿ ಕೆರೆಗಳ ಸಂಖ್ಯೆ, ನಿರ್ಮಾಣ ಕ್ರಮದ ಕೆಲವು ವಿವರಗಳು, ಆಗ ಇದ್ದ ಕೆರೆಗಳ ಸ್ಥಿತಿ, ಅವುಗಳಿಂದ ಆಗುತ್ತಿದ್ದ ನೀರಾವರಿ ಮೊದಲಾದ ವಿವರಗಳನ್ನು ಸವಿಸ್ತಾರವಾಗಿ ವಿವರಿಸುವ ಮತ್ತೊಂದು ಸರ್ಕಾರಿ ದಾಖಲೆ ಎಂದರೆ ಮೈಸೂರು ಮುಖ್ಯ ಇಂಜಿನೀಯರ್ ಆಗಿದ್ದ **ಮೇಜರ್ ಸ್ಯಾಂಕಿಯ** (೧೮೬೬)ವರದಿ.[೨] ಅಲ್ಲದೇ ದಕ್ಷಿಣ ಮರಾಠ ಪ್ರದೇಶದಲ್ಲಿನ (ಮುಂಬೈ ಪ್ರಾಂತ್ಯದ ಕನ್ನಡ ಪ್ರದೇಶಗಳು) ನೀರಾವರಿಗೆ ಸಂಬಂಧಿಸಿದ ಇಷ್ಟೇ ಮುಖ್ಯವಾದ ದಾಖಲೆಗಳೆಂದರೆ ನೀರಾವರಿ ಸೂಪರಿಂಟೆಂಡಿಂಗ್ ಇಂಜಿನೀಯರ್ ಆಗಿದ್ದ **ಕರ್ನಲ್ ಪ್ಲೇಫೇರ್ ೧೮೬೬ರಲ್ಲಿ ಸಲ್ಲಿಸಿದ ವರದಿಗಳು**. ಇದರಲ್ಲಿ ರಾಜ್ಯದ ಪ್ರಾಚೀನ ಕೆರೆಗಳಲ್ಲಿ ಒಂದಾದ ಮದಗ ಮಾಸೂರು ಕೆರೆಯನ್ನು ೧೮೬೬ರಲ್ಲಿ ಜೀರ್ಣೋದ್ಧಾರ ಮಾಡಿದ್ದರ ಕುರಿತು ದಾಖಲಿಸಿದ್ದಾನೆ.

ಇದೇ ರೀತಿಯಲ್ಲಿ ಹತ್ತೊಂಭತ್ತನೆಯ ಶತಮಾನದಲ್ಲಿ ಕರ್ನಾಟಕದಲ್ಲಿನ ನೀರಾವರಿಯ ಸ್ಥಿತಿಯನ್ನು ಅರಿಯಲು ಇರುವ ಇತರೆ ಆಕರಗಳೆಂದರೆ **'ಗೆಜೆಟಿಯರುಗಳು'**. ಇವುಗಳಲ್ಲಿ ಮೈಸೂರು ರಾಜ್ಯದ (ಈಗ ಕರ್ನಾಟಕ) ಜಿಲ್ಲಾ ಗೆಜೆಟಿಯರುಗಳು ಹಾಗೂ ಮುಂಬೈ ಮತ್ತು ಮದರಾಸು

ಪ್ರಾಂತ್ಯದಲ್ಲಿ ಪ್ರಕಟವಾಗಿದ್ದ ಗೆಜೆಟಿಯರುಗಳು ಪ್ರಮುಖವಾಗಿವೆ. ಅವುಗಳಲ್ಲಿ ಲೂಯಿ ರೈಸ್‌ನ ಮೈಸೂರು ಮತ್ತು ಕೊಡಗಿನ ಗೆಜೆಟಿಯರ್‌ಗಳು ಮಹತ್ವವೆನಿಸಿವೆ. ಇವುಗಳೊಂದಿಗೆ ಮೈಸೂರು, ಮುಂಬೈ, ಮದರಾಸು ಮತ್ತು ಹೈದರಾಬಾದು ಸರ್ಕಾರಗಳ ಆಡಳಿತ ವರದಿಗಳು ಸಹ ನಮಗೆ ಮುಖ್ಯ ಆಕರಗಳಾಗಿವೆ. ಮೈಸೂರಿಗೆ ಸಂಬಂಧಿಸಿದಂತೆ ೧೮೬೨ರಿಂದ ಮೊದಲಾಗಿ ಈ ವರದಿಗಳು ಸಿಗುತ್ತವೆ. ಅಲ್ಲದೇ ಈ ಎಲ್ಲಾ ನಾಲ್ಕು ಸರ್ಕಾರಗಳು ಪ್ರಕಟಿಸಿದ ವಾರ್ಷಿಕ ಋತು ಹಾಗೂ ಬೆಳೆಯ ವರದಿಗಳು, ಜನಗಣತಿ ವರದಿಗಳು ಮತ್ತು ಸರ್ವೇ ಸೆಟಲ್‌ಮೆಂಟ್ ವರದಿಗಳು ಸಹ ಅಂದಿನ ಕೆರೆ ನೀರಾವರಿ ವ್ಯವಸ್ಥೆಯನ್ನು ಅರಿಯುವ ಮೂಲಗಳಾಗಿವೆ. ಇದರೊಂದಿಗೆ ೧೮ನೇ ಶತಮಾನದ ಕ್ಷಾಮ ಆಯೋಗದ ವರದಿಗಳು, ಭಾರತೀಯ ನೀರಾವರಿ ಆಯೋಗದ ವರದಿ (೧೯೦೧), ಮುಂಬೈ ನೀರಾವರಿ ಸಮಿತಿಯ ವರದಿ (೧೯೩೮) ಮತ್ತು ನೀರಾವರಿ ಸಮಿತಿಯ ವರದಿ (೧೯೭೨) ಇವು ಅಭಿವೃದ್ಧಿ ಕುರಿತ ಅಧಿಕಾರಯುತ ಮೂಲಗಳು. ಇವುಗಳ ಪೈಕಿ ಕರ್ನಾಟಕದ ಎಲ್ಲಾ ಭಾಗಗಳ ನೀರಾವರಿ ಸಮಸ್ಯೆಗಳನ್ನು ಮೊಟ್ಟಮೊದಲಿಗೆ ಸಮೀಕ್ಷೆ ಮಾಡಿರುವ ಏಕಮಾತ್ರ ದಾಖಲೆಯೆಂದರೆ ೧೯೦೧ ನೀರಾವರಿ ಆಯೋಗದ ವರದಿ.[೨]

ಇವುಗಳೊಂದಿಗೆ ಮೈಸೂರು ರೆವೆನ್ಯೂ ಕೈಪಿಡಿ, ಮೈಸೂರು ಕೆರೆಗಳ ರಿಜಿಸ್ಟರ್ ಪುಸ್ತಕಗಳು, ಮೈಸೂರು, ಮುಂಬೈ, ಹೈದರಾಬಾದುಗಳ ವಿವಿಧ ನೀರಾವರಿ ಕಾನೂನುಗಳು, ನಿಯಮಗಳು ಮೊದಲಾದವುಗಳು ಸಹ ಅಂದಿನ ನೀರಾವರಿ ವ್ಯವಸ್ಥೆಯನ್ನು ಅರಿಯುವ ಇತರೆ ಮುಖ್ಯ ಆಧಾರಗಳಾಗಿವೆ.

### ೪.೨. ಕೆರೆಗಳ ನಿರ್ಮಾಣದ ಹಿನ್ನೆಲೆ ಮತ್ತು ಮಹತ್ವ

ಕೆರೆಗಳು ಹಿಂದಿನಿಂದಲೂ "ಸಮಸ್ತ ಜೀವಸಂಕುಲದ ಜೀವಸೆಲೆಗಳಾಗಿವೆ". ಇತರೆ ಎಲ್ಲ ಜೀವಿಗಳಿಗಿಂತಲೂ ಮಾನವ ತನ್ನ ಜೀವಿತಾವಧಿಯಲ್ಲಿ ಕೆರೆಗಳ ಮೇಲೆ ಇತ್ತೀಚಿನವರೆಗೂ ಅಂದರೆ ಹತ್ತೊಂಬತ್ತನೆಯ ಶತಮಾನದ ಕೊನೆಯವರೆಗೂ ಹೆಚ್ಚು ಅವಲಂಬನೆಯಾಗಿದ್ದ. ಏಕೆಂದರೆ ಅವು ಹೆಚ್ಚು ನೀರಾವರಿಯ ಮೂಲಗಳಾಗಿದ್ದವು ಮತ್ತು ರಾಜ್ಯದ ಬಹುಪಾಲು ಸಂಪತ್ತನ್ನು ಉತ್ಪತ್ತಿ ಮಾಡುತ್ತಿದ್ದವು. ಅಲ್ಲದೇ ನೀರಿನ ಅಭಾವ ಹಾಗೂ ಪ್ರವಾಹಗಳ ವಿರುದ್ಧ ರಕ್ಷಣೆ ಒದಗಿಸಿದ್ದವು. ಬಾವಿಗಳಲ್ಲಿ ನೆಲಮಟ್ಟಕ್ಕೆ ಹತ್ತಿರದಲ್ಲೇ ನೀರು ಸಿಗುವಂತೆ, ಅಂತರ್ಜಲ ಮಟ್ಟ ಮೇಲುಗಡೆ ಇರುವಂತೆ ಮಾಡಿದ್ದವು. ಅವು ಮಣ್ಣು ಕೊಚ್ಚಿ ಹೋಗುವುದನ್ನು ತಡೆದಿದ್ದವು. ಅವು ಸುತ್ತಲ ಪ್ರದೇಶವನ್ನು ತಂಪಾಗಿ, ಚೆಂದವಾಗಿ ಹಾಗೂ ಪರಿಸರದ ಸಮಸ್ಯೆಗಳಿಂದ ಮುಕ್ತವಾಗಿ ಇರಿಸಿದ್ದವು. ೧೯೦೧ರ ನೀರಾವರಿ ಆಯೋಗದ ಮಾತಿನಲ್ಲಿ ಹೇಳುವುದಾದರೆ ಕೆರೆಗಳು ಅಂದು ಜನತೆಯ ಜೀವ ಆಗಿದ್ದವು. ಕೆರೆಗಳ ಮಹತ್ವದಲ್ಲಿಯೇ ಅವುಗಳ ನಿರ್ಮಾಣದ ಉದ್ದೇಶವೂ ಅಡಗಿದೆ. ಈ ಹಿನ್ನೆಲೆಯಲ್ಲಿ ಹಿಂದೆ ಕೆರೆ, ಬಾವಿ ಕಟ್ಟಿಸುವುದು ಪುಣ್ಯದ ಕೆಲಸವೆಂಬ ಭಾವನೆ ಜನರಲ್ಲಿತ್ತೆಂಬುದನ್ನು ಕ್ರಿ.ಶ.೧೪೨೧ರ ಹಂಪಿಯ ಶಾಸನ ಈ ರೀತಿ ಉಲ್ಲೇಖಿಸಿದೆ.

> "ಕೆರೆಯಂಕಟ್ಟಿಸು ಬಾವಿಯಂ ಸವಸು ದೇವಗಾರಮಂ ಮಾಡಿಸ
> ಜ್ಜೆರೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಕೆಯ್ ನಂಬಿದ

ಗ್ಗ್‌ರೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಯಂತೆಲ್ಲವಂ ಪಿಂದೆತಾ
ಯೆರೆದಳ್ಪಾಲೆರೆವಂದು ತೊಟ್ಟು ಕಿವಿಯೋಳ್ ಲಕ್ಷ್ಮೀಧರಮಾತ್ಯನಾ"॥

"ಕೆರೆ, ಬಾವಿ, ದೇವಾಗಾರವನ್ನು ಮಾಡಿಸು, ಸಂಕಟದಲ್ಲಿ ಸಿಲುಕಿದ ಅನಾಥರನ್ನು ಬಿಡಿಸು, ಗೆಳೆಯರಿಗೆ ಉತ್ತಮವಾದುದನ್ನು ಮಾಡು, ನಂಬಿದವರಿಗೆ ನೆರವಾಗು, ಒಳ್ಳೆಯವರನ್ನು ರಕ್ಷಿಸು" ಎಂದು ಮಂತ್ರಿ ಲಕ್ಷ್ಮೀಧರನು ಕೂಸಾಗಿದ್ದಾಗ ಅವನ ತಾಯಿ ಅವನಿಗೆ ಹಾಲನ್ನು ಕುಡಿಸುತ್ತಾ ಅವನ ಕಿವಿಯಲ್ಲಿ ಅತ್ಯಂತ ಮಹತ್ವದ ಸಾಮಾಜಿಕ ಹಿತವುಳ್ಳ ಈ ಎಲ್ಲಾ ಮಹೋನ್ನತ ಕ್ರಿಯೆಗಳನ್ನು ನೀನು ದೊಡ್ಡವನಾದ ಮೇಲೆ ಮಾಡು ಎಂದು ಸಲಹೆ ಮಾಡುತ್ತಾಳೆ. ಇಲ್ಲಿ ತಾಯಿಯು ದಾನ ಮಾಡು ಎಂದು ಪರ್ಯಾಯವಾಗಿ ಮಗುವಿಗೆ ಸೂಚಿಸಿರುವುದು ಮಹತ್ವದ ವಿಷಯವಾಗಿದೆ. ಇದರಿಂದ ಅಂದಿನ ಪರಿಸ್ಥಿತಿಯಲ್ಲಿ ಕೆರೆ ಬಾವಿಗಳ ನಿರ್ಮಾಣವು ಹೆಚ್ಚಿನ ಮಹತ್ವ ಹೊಂದಿರುವುದು ಸ್ಪಷ್ಟವಾಗುತ್ತದೆ.[೨೫]

ಕನ್ನಡದ ಆದಿಕವಿ ಪಂಪನ ತಮ್ಮನಾದ ಜಿನವಲ್ಲಭನ ಗಂಗಾಧರಂ ಶಾಸನದಲ್ಲಿ ವೃಷಭಗಿರಿ ತೀರ್ಥದ ಪ್ರಸ್ತಾಪವಿದ್ದು, ಅದರ ಪ್ರಕಾರ, ಜಿನವಲ್ಲಭನು 'ತ್ರಿಭುವನತಿಲಕ'ವೆಂಬ ಬಸದಿಯನ್ನು, ಕೆರೆ ಮತ್ತು ಅರವೆ (ಬನ-ತೋಟ)ಯನ್ನು ಮಾಡಿಸಿದ ವಿವರವನ್ನು ತಿಳಿಸಲಾಗಿದೆ.[೨೬]

**ಕೆರೆ ನಿರ್ಮಾಣಕ್ಕಿರುವ ಕಾರಣಗಳು**

ಬಹುಶಃ ಹಿಂದಿನ ಸಾರ್ವಜನಿಕ ಕಾರ್ಯಗಳಲೆಲ್ಲ ಬಹುಮುಖ್ಯವಾದದು ತಟಕಾ ನಿರ್ಮಾಣ ಎಂದು ಜನರು ಭಾವಿಸಿದಂತಿದೆ. "ನಮ್ಮ ಹಿರಿಯರು ಸತ್ತಾಗ ಅವರ ಪ್ರೇತವು ಬಹಳ ಬಾಯಾರಿಕೆಯಿಂದ ಬಳಲುವುದೆಂದೂ, ತಟಕಾ ನಿರ್ಮಾಣ, ಮತ್ತಿತರೆ ಮುಂತಾದ ಧರ್ಮ ಕಾರ್ಯಗಳಿಂದ ಅದರ ಬಾಯಾರಿಕೆ ಹಿಂಗುವುದೆಂದೂ" ಹಿಂದಿನ ಜನರು ನಂಬಿದ್ದರು. "ಯಾವ ವ್ಯಕ್ತಿಯು ಕಟ್ಟಿಸಿದ ಕೆರೆಯಲ್ಲಿ ಹಸುಗಳು, ಪ್ರಾಣಿಗಳು, ಪಕ್ಷಿಗಳು, ಮನುಷ್ಯರು ನೀರನ್ನು ಕುಡಿದು ತೃಪ್ತರಾಗುವರೋ ಅವನು ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆ" ಎಂಬುದನ್ನು ಮಹಾಭಾರತ ಉಲ್ಲೇಖಿಸಿದೆ. ಈ ಹಿನ್ನೆಲೆಯಲ್ಲಿ ಕೆರೆ ನಿರ್ಮಾಣಕ್ಕಿರುವ ಪ್ರಮುಖ ಕಾರಣಗಳನ್ನು ಈ ಮುಂದೆ ಅವಲೋಕಿಸಲಾಗಿದೆ.

**೧) ಪುಣ್ಯ ಪ್ರಾಪ್ತಿ ಮತ್ತು ಮಾನವೀಯ ಮೌಲ್ಯದ ಉದ್ದೇಶ**

ಕೆರೆ ನಿರ್ಮಾಣ ಅಥವಾ ಜೀರ್ಣೋದ್ಧಾರದಂತಹ ಕೆಲಸಗಳಿಂದ ಪುಣ್ಯ ಲಭಿಸುತ್ತದೆ ಮತ್ತು ಇದೊಂದು ಅಂದಿನ ಮಾನವೀಯ ಕಾರ್ಯ ಎಂದು ಪ್ರಾಚೀನರು ಭಾವಿಸಿದ್ದರು. ಅದು ಅಂದಿನ ಸಾಮಾಜಿಕ ಮೌಲ್ಯವೂ ಆಗಿತ್ತು. ಇದುವೇ ಕೆರೆ ನಿರ್ಮಾಣದ ಹಿಂದಿರುವ ಮಹಾನ್ ಉದ್ದೇಶವಾಗಿರುವ ಸಾಧ್ಯತೆ ಇದೆ. ಕೆರೆಯನ್ನು ಕಟ್ಟಿಸಿದರೆ ತನಗೆ ಮಾತ್ರವಲ್ಲ, ತನ್ನ ತಾಯಿ ತಂದೆಗಳಿಗೆ ಪುಣ್ಯ ಲಭಿಸುತ್ತದೆಂದು ಕೆರೆ ಕಟ್ಟಿಸಿದ್ದಾಗಿ ನಾಣಿಮಯ್ಯ ನಾಯಕ ಹೇಳಿಕೊಂಡಿದ್ದಾನೆ. ಸೋರಿಗಾವುಂಡಿ ಎಂಬಾಕೆ ತನ್ನ ಮೂವರು ಮಕ್ಕಳನ್ನು ಕರೆದು ನನಗೆ ಪುಣ್ಯ ಬರುವಂತಾಗಲು ಏನಾದರೂ ಧರ್ಮಕಾರ್ಯ ಮಾಡಿ ಎಂದು ಕೇಳಿಕೊಳ್ಳುತ್ತಾಳೆ. ಆಗ ಕೆರೆಯೊಂದನ್ನು ಜೀರ್ಣೋದ್ಧಾರ ಮಾಡುವೆವೆಂದು, ಅದರಿಂದ **ಉದಕ ದಾನದ ಫಲವು** ನಿಮಗೆ ಸೇರುವುದೆಂದು ಆಕೆಯ ಮಕ್ಕಳು ಭರವಸೆ ನೀಡುತ್ತಾರೆ. ಅದೇ ರೀತಿ ವಿಜಯನಗರ ಕಾಲದ ಅಮಾತ್ಯನಾದ ಬಯಕಾರ ರಾಮಪ್ಪಯ್ಯನು

ತನ್ನ ತಂದೆ ತಾಯಿಗಳಿಗೆ ಪುಣ್ಯ ಪ್ರಾಪ್ತಿಯಾಗಲಿ ಎಂಬ ಸದಾಶಯದಿಂದ ಹಲವಾರು ಕೆರೆಗಳನ್ನು ನಿರ್ಮಿಸಿದನೆಂಬುದನ್ನು ಆತನ ಕಾಲದ ಶಾಸನಗಳು ಉಲ್ಲೇಖಿಸಿವೆ. ಪುಣ್ಯ ಪ್ರಾಪ್ತಿಯ ಈ ರೀತಿಯ ಮನೋಭಾವನೆ ಜನರಲ್ಲಿದ್ದ ಪರಿಣಾಮವಾಗಿ ನಾಡಿನಲ್ಲಿ ಹಲವು ಕೆರೆಗಳು ನಿರ್ಮಾಣವಾಗಿರುವ ಸಾಧ್ಯತೆ ಇದೆ.[೨೭]

**೨) ಧರ್ಮಕಾರ್ಯ ಎನ್ನುವ ಮನೋಭಾವನೆ**

ರಾಜರು–ಶ್ರೀಮಂತರು, ರಾಣಿಯರು, ಮಂತ್ರಿಗಳು, ಅಧಿಕಾರಿಗಳು ಮತ್ತು ಸ್ಥಳೀಯ ಸಂಸ್ಥೆಗಳು ಕೆರೆ, ಬಾವಿಗಳನ್ನು ಕಟ್ಟಿಸುವುದು ಒಳ್ಳೆಯ ಕಾರ್ಯವೆಂದು ಭಾವಿಸಿದ್ದರು. ಇದರಿಂದ ಜನತೆ ಮತ್ತು ಪ್ರಭುತ್ವಗಳು ಕೆರೆ ನಿರ್ಮಾಣವನ್ನು ಒಂದು ಆದ್ಯತಾ ವಿಷಯವಾಗಿ ಪರಿಗಣಿಸಿದ್ದ ಪರಿಣಾಮ ಅಸಂಖ್ಯಾತ ಕೆರೆಗಳು ನಿರ್ಮಾಣವಾದವು. ಇಂತಹ ಬೇರು ಬಿಟ್ಟ ಧಾರ್ಮಿಕ ನಂಬಿಕೆಯು ಅರಸರಿಗೂ ಇತರರಿಗೂ ಸಮಾನವಾಗಿಯೇ ಲಾಭಕರವಾಗಿತ್ತು. ಈ ಧಾರ್ಮಿಕ ಮೂಲ ನೆಲೆ ಕೆರೆಗಳ ನಿರ್ಮಾಣಕ್ಕೆ ಕಾರಣವಾಯಿತೆಂದು ಪರಿಭಾವಿಸಬಹುದು.

**೩) ಪ್ರಯೋಜನಾತ್ಮಕ ದೃಷ್ಟಿಕೋನ**

ದೇವಾಲಯಕ್ಕೆ ಬರುವ ಭಕ್ತರಿಗೆ ಕುಡಿಯಲು, ಸ್ನಾನಕ್ಕೆ, ಶುಚಿ ಕಾರ್ಯಕ್ಕೆ, ದೇವರ ಜಮೀನಿಗೆ, ಮೂಕ ಪ್ರಾಣಿ, ಪಕ್ಷಿಗಳಿಗೆ ಹಾಗೂ ಜನರೆಲ್ಲರ ಉಪಯೋಗಕ್ಕೆ ನೀರು ಅವಶ್ಯಕವಾಗಿತ್ತು. ಆದ್ದರಿಂದ ಕೆರೆಗಳನ್ನು ಕಟ್ಟಿಸುವುದು, ಬಾವಿ ಮತ್ತು ಕಾಲುವೆಗಳನ್ನು ತೋಡಿಸುವುದನ್ನು ಅತಿ ಉಪಯುಕ್ತ ಕಾರ್ಯವೆಂದು ಹಿಂದಿನವರು ಭಾವಿಸಿದ್ದರಿಂದ ಅಂದು ಹೇರಳವಾಗಿ ಕೆರೆಗಳು ನಿರ್ಮಾಣವಾದವು.

**೪) ಕೃಷಿ ವಿಸ್ತರಣೆ ಮತ್ತು ನೀರಾವರಿ ಸೌಕರ್ಯ ಒದಗಿಸುವ ಉದ್ದೇಶ**

ಹಿಂದೆ ಕೃಷಿ ವಿಸ್ತರಣೆಯಲ್ಲಿ ಹಲವಾರು ಜನ ಪಾಲ್ಗೊಳ್ಳುತ್ತಿದ್ದರು. ಅರಸ ಮತ್ತವನ ರಾಣಿ ಮತ್ತು ಮಂತ್ರಿಯನ್ನು ಒಳಗೊಂಡ ಅಧಿಕಾರಿ ವರ್ಗದವರು ಹಾಗೂ ಗ್ರಾಮದ ಮುಖಂಡನಾದ ಗಾವುಂಡರು, ಇತರರೂ ಸಹ ಸಕ್ರಿಯರಾಗಿದ್ದರು. ಇದು ಕೆರೆ ನಿರ್ಮಾಣವಾದಂತಹ ಜನಪ್ರಿಯ ಜನೋಪಯೋಗಿ ಕಾರ್ಯಕ್ರಮದಲ್ಲಿ ಅವರಿಗಿದ್ದ ಆಸ್ಥೆಯ ಸಂಕೇತವಾಗಿದೆ ಎಂದು ಹೇಳಬಹುದು. ಪೆರ್ಜ್ಜರಂಗಿ ದಾನ ಶಾಸನವು ಹಳ್ಳಿಯ ಮೇರೆಯಲ್ಲಿ ಅಸ್ತಿತ್ವದಲ್ಲಿದ್ದ ೧೪ ಕೆರೆಗಳನ್ನು ಹೆಸರಿಸುತ್ತದೆ. ಇವುಗಳು ಕೆರೆ ನೀರಾವರಿಯ ಮೂಲಕ ಕೃಷಿ ಆರ್ಥಿಕತೆಯ ವಿಸ್ತರಣೆಗೆ ಕಾರಣವಾಗಿರುವುದು ಸ್ಪಷ್ಟವಾಗುತ್ತದೆ.

ವಾಸ್ತವವಾಗಿ ನೀರಾವರಿಗೋಸ್ಕರವಾಗಿ ಒಂದು ಕೆರೆಯನ್ನು ಕಟ್ಟಿಸುವುದು ಬಹು ಶ್ರೇಷ್ಠವಾದ ಧರ್ಮಕಾರ್ಯವೆಂದು ಅಂದಿನ ಸಮಾಜವು ಪರಿಗಣಿಸಿತ್ತು. ಶಾಸನಗಳಲ್ಲಿ ಬಂದಿರುವ ತೂಬು, ಕೋಡಿ, ನೀರೊತ್ತು ಮತ್ತು ಕಾಲುವೆಗಳ ಉಲ್ಲೇಖಗಳು ಕೆರೆಗೂ ಮತ್ತು ನೀರಾವರಿಗೂ ಸಂಬಂಧಿಸಿದ್ದುದರಿಂದ ಕೆರೆ ನಿರ್ಮಾಣ ಉದ್ದೇಶವು ವ್ಯವಸಾಯ ಸಂಬಂಧಿ ನೀರಾವರಿಗೆ ಬಳಸುವುದಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಹೊಸ ಕೆರೆಗಳ ಉದಯಕ್ಕೂ ಮತ್ತು ಸಾಗು ಮಾಡಲು ಯೋಗ್ಯವಾದ ಜಮೀನಿನ ವಿಸ್ತಾರಕ್ಕೂ ಅಂತರ್‌ಸಂಬಂಧವಿದೆ. ಕೆರೆಗಳ ನಿರ್ಮಾಣವು ಒಣ ಬೇಸಾಯ ಭೂಮಿಯನ್ನು ನಿರ್ಮಣ್ಮಾಗಿ ಪರಿವರ್ತಿಸುವ ಉದ್ದೇಶ ಹೊಂದಿದ್ದುದನ್ನು

ತಳ್ಳಿಹಾಕುವಂತಿಲ್ಲ. ಆದಾಗ್ಯೂ ಕೆರೆಯ ನೀರಾವರಿ ಸೌಲಭ್ಯವು ಅದು ತಲುಪುವ ಹಂತದವರೆಗೂ ನೀರ್ಭೂಮಿಯಾಗಿ ವಿಸ್ತರಿಸಲು ಅವಕಾಶವಿತ್ತು. ಹೊಸಕೆರೆಗಳ ನಿರ್ಮಾಣವು ಇನ್ನೂ ಕೃಷಿಗೆ ಒಳಪಡದ ಭೂಮಿಯನ್ನು ಸಾಗುವಳಿಗೆ ತರುವಲ್ಲಿ ಮತ್ತು ಸಾಗುವಳಿಗೆ ತಂದ ಭೂಮಿಯನ್ನು ನೀರಾವರಿ ಬೇಸಾಯಕ್ಕೆ ಬಳಸುವುದಾಗಿತ್ತು. ಬಹಳ ಮುಖ್ಯವಾಗಿ ಸಮಾಜದ ಬೆನ್ನೆಲುಬಿನಂತಿರುವ ರೈತರಿಗೆ ನೀರಾವರಿ ಸೌಕರ್ಯ ಒದಗಿಸುವುದರ ಪಾರಮಾರ್ಥಿಕ ಕಾರ್ಯವೆಂದು ಪರಿಣಿತವಾಗಿದ್ದರಿಂದ ಅನುಕೂಲಸ್ತ ಆಸಕ್ತರು ಕೆರೆಗಳ ನಿರ್ಮಾಣ ಕಾರ್ಯದಲ್ಲಿ ಪಾಲ್ಗೊಳ್ಳುತ್ತಿದ್ದರು.

**೫) ದೇವಾಲಯದ ನಿರ್ಮಾಣ ಮತ್ತು ನಿರ್ವಹಣೆಗೆ ಸಹಕಾರಿ**

ಸಾಮಾನ್ಯವಾಗಿ ಭೂಮಿಯನ್ನು ದಾನ ಬಿಟ್ಟುಕೊಡುವ ಉದ್ದೇಶ ದೇವಾಲಯದ ಪೂಜೆ–ಪುನಸ್ಕಾರಗಳು ಸಾಂಗವಾಗಿ ನಡೆಯುವಂತಾಗಲು ಹಾಗೂ ಅದನ್ನೇ ಉದ್ಯೋಗವಾಗಿ ನೆಚ್ಚಿಕೊಂಡವರಿಗೆ ಜೀವನೋಪಾಯಕ್ಕೆ ಆಧಾರವಾಗಲಿ ಎಂಬ ಸದುದ್ದೇಶವಿತ್ತು. ಆದರೆ ಕೆರೆಯ ಮುಂದಣ ಭೂಮಿಯನ್ನೇ ಸಾಮಾನ್ಯವಾಗಿ ಬಿಟ್ಟುಕೊಡುವ ಉದ್ದೇಶ ಬಿಟ್ಟು ಕೊಟ್ಟ ಪೂಜಾರಿಯ ಜಮೀನಿಗೆ ನೀರಿನ ಕೊರತೆ ತಾಗದಿರಲಿ ಎಂಬುದಾಗಿತ್ತು. 'ತಾವರೆಯ ಕೆರೆಯ ಕೆಳಗಣ ಆಡನಮಣ್ಣ ಧಾರಾಪೂರ್ವಕ ಕೊಟ್ಟರ್', "ಬಡಗಣಮ್ಮೆಯ್ಯ ಕೆರೆಯ ಕೆಳಗೆ ತೊರೆವರವಿಳಿಯ ಕಡ ಹೊನ್ನನಾವಗು ಬಿಟ್ಟ", "ಕೆರೆಯ ಕೆಳಗೆ ಕಾರು ಬೆಳೆವ ಕಮ್ಮ", "ದೇವಾಲೆಯದ ಮುಂದಣ ಕೆರೆಯ ಗದ್ದೆ" ಮುಂತಾದ ಉಲ್ಲೇಖಗಳೊಂದಿಗೆ 'ಕೆರೆಯೊಳಗೆ ಬೆದ್ದಲೆಯೊಂದು ಮತ್ತರು', 'ಬಾಗೆಯ ಕರೆಯಲು ಕಡುಗ ಬೆದ್ದಲೆ ಮತ್ತರು'ಗಳೆಂದ ದಾನವು ಸಹ ಶಾಸನಗಳಲ್ಲಿ ಬಂದಿದೆ.

ಕೆರೆ ನಿರ್ಮಾಣ ಚಟುವಟಿಕೆಯು ಬಹುಮುಖ್ಯವಾಗಿ ದೇವಾಲಯದೊಂದಿಗೆ ಮಿಳಿತ ಕೊಂಡಿರುವುದು ಕಂಡುಬರುತ್ತದೆ. ದೇವಾಲಯ ಕಟ್ಟಿದ ಮೇಲೆ ಅದರ ನಿರ್ವಹಣೆಗೆ, ಸಂಬಂಧಿತರಿಗೆ ಜವಾಬ್ದಾರಿ ಒಪ್ಪಿಸುವುದು. ದೇವಾಲಯವೇ ತಮ್ಮ ಜೀವನಾಧಾರ ಎಂದು ತಿಳಿದವರಿಗೆ ಅದರ ನಿರ್ವಹಣೆಗೆ ಭೂದತ್ತಿ ಬಿಡುವುದು. ಆ ಭೂಮಿಗೆ ನೀರಾವರಿ ಒದಗಿಸುವ ಸಲುವಾಗಿಯೇ ಕೆರೆ ನಿರ್ಮಾಣದಂತಹ ಚಟುವಟಿಕೆಗಳನ್ನು ಹಮ್ಮಿಕೊಂಡಿರುವುದು ಕಂಡುಬರುತ್ತದೆ. ಧಾರ್ಮಿಕ ಆಸ್ಥೆಯ ಮೂಲ ಸೆಲೆಯಾದ ದೇವಾಲಯ ನಿರ್ಮಾಣದೊಂದಿಗೆ ಕಟ್ಟಲ್ಪಡುವ ಕೆರೆಗಳೂ ಸಹ ಭಕ್ತಿ, ನಿಷ್ಠೆ ಮತ್ತು ನಿರ್ವಹಣಾ ಮುನ್ನೆಚ್ಚರಿಕೆಯ ಪ್ರತೀಕವಾಗಿದ್ದವು.[೨೮] ಈ ಹಿನ್ನೆಲೆಯಲ್ಲಿ ನಾಡಿನಲ್ಲಿ ಕೆರೆಗಳ ನಿರ್ಮಾಣ ಅಧಿಕವಾಗಿರುವುದನ್ನು ಗುರುತಿಸಬಹುದು.

**೬) ನೈಸರ್ಗಿಕ ಸಂಪನ್ಮೂಲಗಳು ಸುಲಭವಾಗಿ ಲಭ್ಯವಾಗುವಿಕೆ**

ಕೆರೆ ನಿರ್ಮಾಣ ಜಾಗವನ್ನು ಬಹಳ ಜಾಗರೂಕವಾಗಿ ಆಯ್ಕೆ ಮಾಡಿಕೊಳ್ಳುತ್ತಿದ್ದು, ಅದು ಗಟ್ಟಿ ನೆಲವಾಗಿರಬೇಕಾಗಿದ್ದು, ಮಳೆ ನೀರು ಇಳಿಜಾರಿನಲ್ಲಿ ಇಳಿದು ಬರುವಂತಹ ಪ್ರದೇಶವಾಗಿರ ಬೇಕಾಗಿದ್ದು, ಅದಕ್ಕೆ ಹೊಂದಿಕೊಂಡಂತೆ ನೀರು ಉಪಯೋಗಿಸಲು ಕೃಷಿಭೂಮಿ ಇರಬೇಕಾಗುತ್ತಿತ್ತು. ಜೊತೆಗೆ ಸಮಾನಾಂತರವಾಗಿ ನೈಸರ್ಗಿಕವಾಗಿ ಮೇಲೆದ್ದ ಭೂಮಿಯನ್ನು ಆಯ್ಕೆ ಮಾಡಿಕೊಳ್ಳಲಾಗುತ್ತಿತ್ತು. ಇದರಿಂದ ನೀರನ್ನು ಒಂದು ಕಡೆ ಹಿಡಿದಿಟ್ಟುಕೊಳ್ಳಲು ಸಹಾಯಕವಾಗುತ್ತಿತ್ತು. ಅಂತಹ ಪ್ರಶಸ್ತ ಪ್ರದೇಶದಲ್ಲಿ ಕಡಿಮೆ ಮಾನವಶಕ್ತಿ ಮತ್ತು ಕಡಿಮೆ ಹಣವಷ್ಟೇ ಬಳಕೆಯಾಗುತ್ತಿತ್ತು. ಹೀಗಾಗಿಯೇ

ಜನವಸತಿಯಿಂದ ಸ್ವಲ್ಪ ದೂರವಿದ್ದರೂ, ಸುತ್ತಮುತ್ತಲ ಸ್ವಾಭಾವಿಕ ಸವಲತ್ತು ಬಳಸಿಕೊಂಡೇ ಮತ್ತು ನೀರುಣಿಸಲು ಎಟುಕುವಷ್ಟು ಭೂಮಿ ಇಟ್ಟುಕೊಂಡೇ ಕೆರೆ ನಿರ್ಮಾಣವಾಗಿರುವುದನ್ನು ಗಮನಿಸಬಹುದು.

**೭) ಸಾರ್ವಜನಿಕರ ಕುಡಿಯುವ ನೀರಿನ ಉಪಯೋಗಕ್ಕಾಗಿ**

ನಾಡಿನಾದ್ಯಂತ ಪಸರಿಸಿರುವ ಕೆರೆಗಳ ನಿರ್ಮಾಣದ ಹಿಂದಿರುವ ಉದ್ದೇಶಗಳಲ್ಲಿ ಕುಡಿಯುವ ನೀರನ್ನು ಒದಗಿಸುವ ಉದ್ದೇಶವೂ ಮುಖ್ಯವಾಗಿತ್ತು. ಅಸ್ಪೃಶ್ಯರು ಹಾಗೂ ನೀರಿನ ಸೌಲಭ್ಯವಿಲ್ಲದಾಗ ಬ್ರಾಹ್ಮಣರನ್ನು ಒಳಗೊಂಡು ಎಲ್ಲರೂ ಕೆರೆಯ ನೀರನ್ನು ದೈನಂದಿನ ಬಳಕೆಗೂ ಬಳಸುತ್ತಿದ್ದರು. ಸಾರ್ವಜನಿಕ ಉಪಯೋಗಕ್ಕಾಗಿ ಬಳಸಲ್ಪಡುವ ಕೆರೆಗೆ 'ಊರೊಂಬ ಕೆರೆ', ಕುಡಿಯಲು ಯೋಗ್ಯವಾಗಿದ್ದುದಕ್ಕೆ 'ಕುಡೀನೀರ ಕೆರೆ' ಎಂದು ಪ್ರತ್ಯೇಕವಾಗಿ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಇವುಗಳ ಉಲ್ಲೇಖಗಳಿಂದ ಪ್ರಾಚೀನ ಕಾಲದಲ್ಲಿ ಕೆರೆಗಳು ಕುಡಿಯುವ ನೀರಿನ ಮೂಲವಾಗಿದ್ದವು ಎಂಬುದು ನಮಗೆ ಅರಿವಾಗುತ್ತದೆ.

**೮) ಹೊಸ ಗ್ರಾಮಗಳ ನಿರ್ಮಾಣ**

ಹೊಸ ಗ್ರಾಮಗಳ ನಿರ್ಮಾಣಕ್ಕಾಗಿ ಹಲವು ಹೊಸ ಕೆರೆಗಳನ್ನು ನಿರ್ಮಿಸಲಾಗುತ್ತಿತ್ತು. ಕ್ರಿ.ಶ.೧೦೭೧ರ ಶಾಸನದ ಪ್ರಕಾರ ಹೊಸದಾಗಿ ಕೆರೆಯನ್ನು ಕಟ್ಟಿಸಿದಾಗ, ಕಾಡು ಕಡಿದು ಉತ್ತು ಹೊಸದಾಗಿ ಪೈರನ್ನು ತೆಗೆಯುತ್ತಿದ್ದರು. 'ಕಾಡಂ ಕಡಿದು, ಕೆರೆಯಂ ಕಟ್ಟಿಸಿ, ಊರು ಮಾಡಿಸಿದರು' ಎಂದು ಶಾಸನಗಳು ಉಲ್ಲೇಖಿಸಿವೆ. ಇದರಿಂದ ಊರು ಮಾಡುವ ಉದ್ದೇಶದಿಂದ ಈ ಹಿಂದೆ ದಟ್ಟವಾಗಿದ್ದ ಕಾಡು ಕಡಿದು ಕೆರೆ ಕಟ್ಟಿಸುವುದು ಸಾಮಾನ್ಯವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ.[೩೯] ಇದಕ್ಕೆ ಮತ್ತಿಕೆರೆ, ಬನದಕೆರೆಯಂತಹ ಊರ ಹೆಸರುಗಳು ಸಾಕ್ಷಿಯಾಗಿವೆ. ಗಂಗವಾಡಿ ೯೬,೦೦೦ರಲ್ಲಿ ಎರೆಯಂಗನ ತಂದೆಯಷ್ಟು ಯಾರು ಧರ್ಮಿಯರಿದ್ದಾರೆ? ಎಂದು ಪ್ರಶ್ನಿಸುವ ಶಾಸನವೊಂದು ತೋಡಿದ ತೊರೆಗಳು ಮತ್ತು ಕುಳಿಗಳು ಕೆರೆಯಾದವು ಎಂದು ವರ್ಣಿಸುತ್ತದೆ. 'ತೊರೆಯನಿತುಂ ಕುಳಿಯನಿತುಂ ಕೆರೆಯಾದವು', ಕೆರೆಗಳ ನಿರ್ಮಾಣದ ಮಹತ್ವವನ್ನು ಪುಷ್ಟಿಕರಿಸುತ್ತವೆ.

**೯) ಗ್ರಾಮಗಳ ಒಡೆತನಕ್ಕಾಗಿ**

ಹಿಂದೆ ಗ್ರಾಮಗಳನ್ನು ತಮ್ಮ ಸ್ವಾಮ್ಯಕ್ಕೆ ಪಡೆಯುವ ಸಲುವಾಗಿ ಕೆರೆ ನಿರ್ಮಾಣದಂಥ ಸಾಮಾಜಿಕ ಕಾರ್ಯಕ್ಕೆ ಕೈಹಾಕುತ್ತಿದ್ದರು. ಕಡೂರಿನ ಶಾಸನದ ಪ್ರಕಾರ ದಂಡನಾಯಕ ಪ್ರೋಚಿಮಯ್ಯನು 'ಕೆರೆಯುಂ ಕೆರೆಯ ತುಂಬುಗಳು ಮುಂಬಾವಿಗಳುಮಂ ಮಾಡಿ ಯೂರೊಡೆವಾಳ್ಕೆಯುಂ ಮೇಲಾಳ್ಕೆಯುಂ ನಡೆಸುತ್ತಿದ್ದನು'. ಹೀಗೆ ಹಳ್ಳಿಗಳ ಮೇಲೆ ಒಡೆತನವನ್ನು ಸ್ಥಾಪಿಸುವಂಥವರು ಇಂತಹ ಕೆಲವೊಂದು ಕೆಲಸಗಳಲ್ಲಿ ಸಕ್ರಿಯರಾಗಿ ತಮ್ಮನ್ನು ತೊಡಗಿಸಿಕೊಂಡು ಬೇರೆಯವರಿಗೆ ಮಾರ್ಗದರ್ಶಕರಾಗಿದ್ದರು.[೪೦]

**೧೦) ಅಧಿಕ ಲಾಭದ ಉದ್ದೇಶ**

ಅಧಿಕ ಲಾಭದ ಉದ್ದೇಶಕ್ಕಾಗಿ ಜನರು ಕೆರೆ ನಿರ್ಮಾಣದ ಕಡೆ ತಮ್ಮ ಗಮನ ಹರಿಸುತ್ತಿದ್ದರೆಂಬುದನ್ನು ಗುರುತಿಸಬಹುದಾಗಿದೆ. ತರೀಕೆರೆ ಶಾಸನವು ಜನರು ತಮ್ಮ ತಮ್ಮ ಹಳ್ಳಿಯಲ್ಲಿ ಕೆರೆ ಕಾಲುವೆ ಕಟ್ಟಿಸಿ ತೋಟ ಮಾಡಬೇಕೆಂದು ಉಲ್ಲೇಖಿಸುತ್ತದೆ.[೪೧]

'ಆ ಕೇಶವ ದೇವರ ದಾನದವೂರ ಕಾಡನಗದ್ದೆ ಬೆದ್ದಲೊಳಗಾಗ
ಭೂಮಿಯೊಳಗೆ ತೆಂಗು ಕವುಂಗು ಮುಖ್ಯವಾದ
ಸಮಸ್ತ ಸ್ಥಾವರವಹ ಫಲಪುಷ್ಪಂಗಳನ್ನೂ ಯುಕ್ಕಿಕ್ಕೊಂಡು
ಕೆರೆವಾ ಕಟ್ಟ ಕೊಮ್ಡು ಕಾಲುವೆಯನ್ನು ತಂದುಕೊಂಡು
ಸಂತಾನಗಾಮಿಯಾಗಿ ಭೋಗಿಸುವವರು'

೧೧) **ಸರ್ಕಾರದ ವರಮಾನದ ಮೂಲ**

ಯಾವುದೇ ಪ್ರದೇಶದಿಂದ ಬಂದ ಅಧಿಕಾರಿಗಳು ತಮ್ಮ ಪ್ರದೇಶದಲ್ಲಿಯೇ ಸಾಮಾನ್ಯವಾಗಿ ಕೆರೆಕಟ್ಟೆಗಳನ್ನು ಕಟ್ಟಿಸುವ ಕಡೆ ಗಮನವೀಯುತ್ತಿದ್ದರು. ಜೊತೆಗೆ ರಾಜಕೀಯ ಒತ್ತಡಗಳೂ ಸಹ ನಿರ್ದಿಷ್ಟ ಪ್ರದೇಶದಲ್ಲಿಯೇ ನಿರ್ಮಾಣವನ್ನು ಉದ್ಘೋಷಿಸುತ್ತಿದ್ದವು. ಹೆಚ್ಚೆಚ್ಚು ಪ್ರದೇಶಗಳನ್ನು ನೀರಾವರಿಗೆ ಒಳಪಡಿಸುವುದರಿಂದ ಭೂಕಂದಾಯ, ನೀರಿನ ಕರ ಮುಂತಾದ ತೆರಿಗೆಯ ರೂಪದಲ್ಲಿ ಸರ್ಕಾರಕ್ಕೆ ಅಧಿಕ ವರಮಾನ ಪ್ರಾಪ್ತವಾಗುತ್ತಿತ್ತು. ಒಟ್ಟಾರೆ ನಿರ್ದಿಷ್ಟ ಪ್ರದೇಶದಲ್ಲಿ ಕೆರೆ ನಿರ್ಮಾತೃಗಳ ಸಂಖ್ಯೆ ಹಣ ಹೂಡುವ ಸಾಮರ್ಥ್ಯದ ಸೂಚ್ಯಂಕವೇ ಆಗಿದೆ. ಅಂತೆಯೇ ಸರ್ಕಾರದ ಪ್ರೋತ್ಸಾಹವೂ ನಿರಂತರವಾಗಿತ್ತು.

೧೨) **ಪ್ರಭುತ್ವದ ಪ್ರೋತ್ಸಾಹದಾಯಕ ಕಾರ್ಯಕ್ರಮಗಳು**

ವ್ಯವಸಾಯದ ಅಭಿವೃದ್ಧಿ ಎಂದರೆ ರಾಜ್ಯದ ಅಭಿವೃದ್ಧಿ, ರಾಜಕೀಯ ಭದ್ರತೆ ಎಂದು ಹಿಂದಿನ ಪ್ರಭುತ್ವಗಳು ಭಾವಿಸಿದ್ದವು. ರಾಜರ ದೂರಾಲೋಚನೆ ಮತ್ತು ವಾಸ್ತವಿಕ ಧೋರಣೆಗಳಿಂದಾಗಿ ಅವರ ಅಧಿಕಾರಿಗಳು, ಹಳ್ಳಿಯ ಸಭೆಗಳು ಹಾಗೂ ದೇವಾಲಯದ ಆಡಳಿತದವರಿಗೆ ಅವರು ಮಾಡಿದ ಉತ್ತಮ ಕೆಲಸಕ್ಕೆ ಪ್ರಭುತ್ವದಿಂದ ಉದಾರ ಅನುದಾನ, ಬಿರುದಾವಳಿ ಹಾಗೂ ಅನೇಕ ವಿಧವಾದ ರಿಯಾಯಿತಿಗಳು ಲಭ್ಯವಾಗುತ್ತಿದ್ದವು. ಶ್ರೀಮಂತ ಜನರು, ಸಂಸ್ಥೆಗಳು ಅಥವಾ ಯಾರಾದರಾಗಲಿ ರಾಜ್ಯ ಸಂಪತ್ ಅಭಿವೃದ್ಧಿ ಕಾರ್ಯದಲ್ಲಿ ತೊಡಗಲು ಏನಾದರೂ ಒಂದು ವಾಸ್ತವಿಕವಾದ ಆರ್ಥಿಕ ಆಕರ್ಷಣೆ ಇರಬೇಕೆಂಬುದು ಅಂದಿನ ಪ್ರಭುತ್ವಗಳ ಚಿಂತನೆಯಾಗಿತ್ತು. ಕೇವಲ ಸ್ಫೂರ್ತಿ ಅಥವಾ ಮಾದರಿ ಕೆಲವೇ ದಿನಗಳಲ್ಲಿ ಬತ್ತಿಹೋಗುತ್ತದೆ. ಶ್ರೀಮಂತರಿಗೆ ಹಣವನ್ನು ಹೂಡಲು ಉತ್ಸಾಹ ಬಾರದಂತಾಗುತ್ತದೆ. ಆದ್ದರಿಂದ ಯಾರು ನೀರಾವರಿ ಕಾರ್ಯಗಳಲ್ಲಿ ತೊಡಗುತ್ತಾರೊ ಅವರಿಗೆ ತೆರಿಗೆ ವಿನಾಯಿತಿ, ಇತರೆ ರಿಯಾಯಿತಿಗಳನ್ನೋ ಅಥವಾ ಜಮೀನನ್ನೋ ನೀಡುತ್ತಿದ್ದರು. ಅಂದರೆ ಅರಸರು ಅಭಿವೃದ್ಧಿ ಕಾರ್ಯಗಳಿಗೆ ತಕ್ಕ ವಾತಾವರಣವನ್ನು ನಿರ್ಮಿಸುತ್ತಿದ್ದರು. ಶಾಸನಗಳು ಕೆರೆಗಳಿಗೆ ಸಂಬಂಧಿಸಿದ ಈ ರೀತಿಯ ಹಲವು ವಿವರಗಳನ್ನು ಉಲ್ಲೇಖಿಸಿದ್ದು, ಅವುಗಳಲ್ಲಿ ಮುಖ್ಯವಾದ ಕೆಲವನ್ನು ಉಲ್ಲೇಖಿಸಲಾಗಿದೆ.[೨]

**ಬಿತ್ತುವಟ್ಟ:** ಕೆರೆಯ ನಿರ್ಮಾಣ, ಅದರ ಸಂರಕ್ಷಣೆಯ ಕೆಲಸ ಮಾಡಿದ್ದಕ್ಕಾಗಿ ಕಟ್ಟಿದ ವ್ಯಕ್ತಿ ಅಥವಾ ವ್ಯಕ್ತಿಗಳಿಗೆ ಭೂಮಿಯನ್ನು ದಾನವೀಯುವುದಕ್ಕೆ 'ಬಿತ್ತುವಟ್ಟ' ಎಂದು ಕರೆಯುತ್ತಾರೆ. ಇದಕ್ಕೆ ಕೆರೆಯ ಸಂರಕ್ಷಣೆಗಾಗಿ ಹುಟ್ಟುವಳಿಯ ಒಂದು ಭಾಗವನ್ನು ನೀಡುವುದು ಎಂಬ ಅಭಿಪ್ರಾಯವೂ ಸಹ ಇದೆ. ಅಯ್ಯಪದೇವ ಎಂಬಾತನು ಆಳುತ್ತಿರುವಾಗ ಚೋರಯ್ಯ ಮುಂತಾದವರು ಸೇರಿ ಅಯ್ಯಪದೇವನಿಂದ ಕೆರೆಗೆ ಬಿತ್ತುವಾಟ ಪಡೆದರು.

**ದಶವಂದ:** ಕೆರೆಯ ದುರಸ್ತಿ ಅಥವಾ ನಿರ್ಮಾಣಕ್ಕಾಗಿ ಸಾಮಾನ್ಯ ಕಂದಾಯದ ಹತ್ತನೆಯ ಒಂದರಷ್ಟು ಕಂದಾಯಕ್ಕೆ ಭೂಮಿಯನ್ನು ನೀಡುವುದು. ಕೆರೆಗೋಡು ಮತ್ತು ನಕ್ಕೇರಹಾಳು ಶಾಸನಗಳು ದಶವಂದದ ಪ್ರಸ್ತಾಪವನ್ನು ಮಾಡುತ್ತದೆ.

**ಕಟ್ಟುಕೊಂಡಿಗೆ:** ಕೆರೆಯ ನಿರ್ಮಾಣ, ಅದರ ಜೀರ್ಣೋದ್ಧಾರಕ್ಕಾಗಿ ನೀಡಲಾದ ಕೊಡುಗೆ, ಬಹುಮಾನ, ಭೂಮಿದಾನ. ಸೀಯಣ್ಣನೆಂಬುವನು ದೊಡ್ಡ ಕೆರೆಯನ್ನು ನಿರ್ಮಿಸಿದ್ದಕ್ಕಾಗಿ ಪೆರಿಯ ನಾಡಿನ ನಿವಾಸಿಗಳು ಆತನಿಗೆ ೬ ಖಂಡುಗೆ ಗದ್ದೆಯನ್ನು ಕಟ್ಟು ಕೊಡುಗೆಯಾಗಿ ನೀಡಿದರು.

ಪುಲಿಯೂರು ನಾಡಿನ ಕಿರಿಕೆರೈ ಕೆರೆಯನ್ನು ದುರಸ್ತಿಗೊಳಿಸಿದ್ದಕ್ಕಾಗಿ ಆ ಊರ ನಿವಾಸಿಗಳು ಮತ್ತು ಸಿಂಗೇಯ ದಂಡನಾಯಕರು ಅವನಿಗೆ ಕೊಡುಗೆಯಾಗಿ ಭೂಮಿಯನ್ನಿತ್ತರು. ಬೊಮ್ಮಯ್ಯ ಎಂಬುವವರು ಕೆರೆಗೆ ದಕ್ಷಿಣದ ತೂಬನ್ನು ಕಟ್ಟಿಸಿಕೊಟ್ಟಿದ್ದಕ್ಕಾಗಿ ಆ ಕೆರೆಯ ಸಮೀಪ ಒಂದು ಸಲಗೆ ೧೦ ಖಂಡುಗೆ ಗದ್ದೆಯನ್ನು ಆತನ ಕೆಲಸಕ್ಕೆ ಪ್ರತಿಫಲವಾಗಿ ಕೊಡಲಾಗಿತ್ತು. ಬೇಲೂರು ಶಾಸನದ ಪ್ರಕಾರ ವೀರಯ್ಯನಾಯಕ(ವೀರಯ್ಯ ದಂಡನಾಯಕ) ನೀರಾವರಿ ಸೌಲಭ್ಯವನ್ನು ಒದಗಿಸಲು ರುದ್ರಸಮುದ್ರ, ಗಂಗಸಮುದ್ರ, ಅಚ್ಯುತಸಮುದ್ರ ಮತ್ತು ವೀರಸಮುದ್ರ ಕೆರೆಗಳನ್ನು ನಿರ್ಮಿಸಿ ಅಂತಹ ಕೆರೆ ಕಟ್ಟಿಸಿದವರಿಗೆ ೧೨ ವರ್ಷಗಳ ಕಾಲ ತೆರಿಗೆ ಮಾನ್ಯವೆಂದು ೧೦ ಸಲಗೆ ಭತ್ತದ ಭೂಮಿ ಮಾನ್ಯವೆಂದು ಸ್ಪಷ್ಟಪಡಿಸಿದ್ದ. ಇವುಗಳ ಉದಾಹರಣೆಗಳಿಂದ ಕೆರೆ ಸಂಬಂಧಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡವರಿಗೆ ದಾನದತ್ತಿಗಳನ್ನು ನೀಡಿ ಪ್ರೋತ್ಸಾಹಿಸುವ ಸಂಪ್ರದಾಯವಿತ್ತು ಎಂಬುದು ಸಷ್ಟವಾಗುತ್ತದೆ.[೩೩]

ಈ ಮೇಲಿನ ಉದ್ದೇಶಾತ್ಮಕ ಕಾರಣಗಳ ಹಿನ್ನೆಲೆಯಲ್ಲಿಯೇ ನಾಡಿನಾದ್ಯಂತ ಹಲವು ಕೆರೆಗಳು ನಿರ್ಮಾಣವಾಗಿರುವುದನ್ನು ಗುರುತಿಸಬಹುದಾಗಿದೆ. ಒಟ್ಟಿನಲ್ಲಿ ಕೆರೆ ನಿರ್ಮಾಣದ ಉತ್ಕಟೇಚ್ಛೆಯು ಅಂದಿನ ಸಾಮಾಜಿಕ ಅವಶ್ಯಕತೆಯಾಗಿತ್ತು ಎಂಬುದರಲ್ಲಿ ಯಾವುದೇ ಸಂಶಯವಿಲ್ಲ.

**೧೩) ರಾಜ್ಯದ ಆರ್ಥಿಕ ಸದೃಢತೆ ಕಾಪಾಡುವುದು**

ಕೆರೆಗಳನ್ನು ಕಟ್ಟಿಸುವಲ್ಲಿ ಅರಸನ ಪಾತ್ರ ಸ್ವರೂಪ ವಿವಿಧ ತೆರನಾಗಿದ್ದು ಅವರ ಆಸ್ಥೆ ಪ್ರಮುಖವಾಗಿ ಪ್ರಕಟವಾಗುತ್ತದೆ. ಕೆರೆ ಕಟ್ಟಿಸುವುದು ಪ್ರಮುಖ ಧಾರ್ಮಿಕ ಕಾರ್ಯವಾಗಿದ್ದರೂ ಜನೋಪಯೋಗಿಯ ಜೊತೆಗೆ ನೀರಾವರಿ ಆರ್ಥಿಕ ಮೂಲ ಸೌಲಭ್ಯವನ್ನು ಒದಗಿಸಿ ರಾಜ್ಯದ ಆರ್ಥಿಕ ಸದೃಢತೆ ಕಾಪಾಡುವುದೇ ಆಗಿತ್ತು. ಕೆಲವೊಮ್ಮೆ ಮತ್ಯಾರೋ ಕಟ್ಟಿಸಿದ ಕೆರೆಗೆ ಆಳುವ ವರ್ಗ ದತ್ತಿ ಬಿಟ್ಟಿದ್ದುದನ್ನು ಮೊರಬ ಮತ್ತು ತಡಂಗಾಲ ಮಾದವನ ತಾಮ್ರಪತ್ರ ಶಾಸನಗಳಲ್ಲಿ ಉಲ್ಲೇಖಿಸಿರುವುದನ್ನು ಗುರುತಿಸಬಹುದು. ಆದಾಗ್ಯೂ ರಾಜ್ಯದಲ್ಲಿ ನಡೆಯುತ್ತಿರುವ ಎಲ್ಲಾ ಚಟುವಟಿಕೆಗಳು ಅರಸನ ಗಮನದಲ್ಲಿರಲಿ ಅಥವಾ ಇಲ್ಲದಿರಲಿ ರಾಜ್ಯದ ಆರ್ಥಿಕ ಪ್ರಗತಿಯ ದೃಷ್ಟಿಯಿಂದ ಪ್ರೋತ್ಸಾಹ ನಿರಂತರವಾಗಿತ್ತು.

**೧೪) ಆಡಳಿತ ಸುಭದ್ರತೆ**

ರಾಜನಾದವನು ಕೆರೆಗಳಂತಹ ಜನೋಪಯೋಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಅಥವಾ ಪ್ರೋತ್ಸಾಹಿಸುವುದು ತನ್ನ ರಾಜ್ಯದ ಆರ್ಥಿಕ ಪ್ರಗತಿಗೆ ಪೂರಕವೇ ಆಗಿತ್ತು. ಜೊತೆಗೆ

ಜನಪ್ರಿಯ ಕಾರ್ಯಕ್ರಮಗಳ ಮೂಲಕ ಜನವಿಶ್ವಾಸ ಗಳಿಸುವುದು ಆ ಮೂಲಕ ತನ್ನ ಆಡಳಿತಕ್ಕೆ ಸುಭದ್ರತೆ ಒದಗಿಸಿಕೊಳ್ಳುವುದು ಅರಸನಿಗೆ ಬಹು ಮುಖ್ಯವಾಗಿತ್ತು. ಪ್ರಜೆಗಳು ಅರಸನಲ್ಲಿಗೆ ಪ್ರಸ್ತಾಪ ತೆಗೆದುಕೊಂಡು ಹೋಗುವ ಉದ್ದೇಶವಾದರೂ ಅಸಾಧ್ಯತೆಯನ್ನು ಸಾಧ್ಯ ಮಾಡುವ ಶಕ್ತಿ 'ರಾಜಶಕ್ತಿ'ಗೆ ಇದೆ ಎಂಬ ಭಾವನೆಯೇ ಆಗಿದೆ. ಆ ರಾಜಶಕ್ತಿಯು ಆರ್ಥಿಕ, ಸಂಘಟನಾ ಮತ್ತು ರಾಜಕೀಯ ಇಚ್ಛಾಶಕ್ತಿಯೇ ಆಗಿದೆ ಎನ್ನುವುದು ಗಮನಾರ್ಹ. ಆದ್ದರಿಂದ ಕೊನೆಯ ವಿಶ್ವಾಸಾರ್ಹ ಸಾಧ್ಯ ಪ್ರಯತ್ನವೆಂಬಂತೆ ಅರಸನಲ್ಲಿಗೇ ಪ್ರಜೆಗಳು ದೌಡಾಯಿಸುತ್ತಿದ್ದರು. ೧೪೨೪ರಲ್ಲಿ ಹರಿದ್ರಾ ಅಣೆಕಟ್ಟೆಗೆ ಬಿರುಕು ಕಾಣಿಸಿಕೊಳ್ಳಲಾಗಿ ಅದು ಎರಡನೆಯ ದೇವರಾಯನ ಗಮನಕ್ಕೆ ಹೋಗಿ ಅದನ್ನು ರಾಜ್ಯದ ಖರ್ಚಿನಲ್ಲಿ ಪುನರ್ ಕಟ್ಟಲು ತೀರ್ಮಾನವಾದ ಸಂಗತಿಯನ್ನು ಬನ್ನಿಯೂರು ಶಾಸನವು ಅಲ್ಲಿನ ಕೆರೆ ಹರಿದ್ರಾ ಅಣೆಕಟ್ಟೆಯ ದುರಸ್ಥಿಯ ವಿವರವನ್ನು ಉಲ್ಲೇಖಿಸಿದೆ.

**೪.೩. ಕೆರೆಗಳ ಪ್ರಮುಖ ಅಂಗಗಳು ಮತ್ತು ತಾಂತ್ರಿಕತೆ**

ಹಿಂದೆ ಕೆರೆಗಳ ನಿರ್ಮಾಣ ಒಂದು ಸವಾಲಿನ ಕೆಲಸವಾಗಿತ್ತು. ಅದರ ನಿರ್ಮಾಣಕ್ಕೆ ಹಲವು ಕುಶಲ ಕರ್ಮಿಗಳು ಹಗಲಿರುಳು ದುಡಿಯುತ್ತಿದ್ದರು. ಅವರಲ್ಲದೆ ಕುಶಲರಲ್ಲದ ಕೂಲಿಗಳನ್ನು ಮಣ್ಣು ಕೆಲಸಕ್ಕೂ, ಕಲ್ಲು ಕೆಲಸಗಾರರನ್ನು ತೂಬು ರಚನೆಗೂ ನೇಮಿಸಿಕೊಂಡು ಕೆರೆಗಳನ್ನು ಕಟ್ಟಲಾಗುತ್ತಿತ್ತು ಎಂದು ಶಾಸನಗಳಿಂದ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಕೆರೆ ನಿರ್ಮಾಣದ ವೈಶಿಷ್ಟ್ಯತೆ ಮತ್ತು ಪ್ರಮುಖ ಅಂಗಗಳ ತಾಂತ್ರಿಕತೆಯನ್ನು ಈ ಮುಂದೆ ವಿಶ್ಲೇಷಿಸಲಾಗಿದೆ.

ಕೆರೆ ಏರಿಗಳ ಉದ್ದ, ಎತ್ತರ ಅಥವಾ ಕೆರೆ ನಿರ್ಮಾಣಕ್ಕೆ ತೆಗೆದುಕೊಂಡ ಕಾಲ, ಕೆರೆ ನಿರ್ಮಾಣದ ವಿಶೇಷತೆಯ ವಿವರ ನೀಡುವ ಏಕೈಕ ಶಾಸನವೆಂದರೆ ವಿಜಯನಗರದ ಅರಸ ಭಾಸ್ಕರನ ಕ್ರಿ.ಶ.೧೩೬೯ ಪೊರುಮಾಮಿಲ್ಲ ಶಾಸನ. ಇದು ಆಂಧ್ರಪ್ರದೇಶದ ಕಡಪಾ ಜಿಲ್ಲೆ ಬದವೇಲು ತಾಲ್ಲೂಕಿನಲ್ಲಿದೆ. ಅನಂತರಾಜ ಸಾಗರ ಎನ್ನುವ ಕೆರೆ ನಿರ್ಮಾಣದ ವಿಶೇಷತೆಯನ್ನು ಇದು ದಾಖಲಿಸಿದೆ. ಇದನ್ನು ನಾಲ್ಕು ನೈಸರ್ಗಿಕ ಗುಡ್ಡಗಳನ್ನು, ಮೂರು ಮೋಟಾದ ಮಣ್ಣು ಅಣೆಗಳಿಂದ ಕೂಡಿಸಿ ನಿರ್ಮಿಸಲಾಗಿದೆ. ಅಣೆಯ ಉದ್ದ ೪,೫೦೦ ಅಡಿ. ಗುಡ್ಡವನ್ನು ಸೇರಿಸಿದರೆ ಒಟ್ಟು ಉದ್ದ ೧೪,೦೦೦ ಅಡಿ. ಅತ್ಯಂತ ಆಳದ ಭಾಗದಲ್ಲಿ ಏರಿ ಮೇಲುಗಡೆ ಸುಮಾರು ೧೨ ಅಡಿ ಅಗಲ ಹಾಗೂ ಬುಡದಲ್ಲಿ ೧೫೦ ಅಡಿ ಅಗಲವಾಗಿದೆ. ಅದರ ಎತ್ತರ ಸುಮಾರು ೫೫ ಅಡಿ ಇದೆ. ಗುಡ್ಡಗಳ ಭಾಗಗಳೂ ಸೇರಿದಂತೆ ಏರಿಯ ಉದ್ದ ೫೦೦೦ ರೇಖಾದಂಡಗಳು, ಅಗಲ ಹಾಗೂ ಎತ್ತರ ಎಂಟು ಹಾಗೂ ಏಳು ರೇಖಾದಂಡಗಳು. ಏರಿಯ ವಾಸ್ತವವಾದ ಉದ್ದ ೧೪,೦೦೦ ಅಡಿ. ಶಾಸನಗಳಲ್ಲಿ ಹೇಳಲಾದುದು ೫೦೦೦ ರೇಖಾದಂಡಗಳು. ಇದರಿಂದ ಶಾಸನದಲ್ಲಿ ಹೇಳಿರುವ ಒಂದು ರೇಖಾದಂಡ ಸುಮಾರು ೫ ಅಡಿ ಇದ್ದಿರಬೇಕು ಎನ್ನಬಹುದು.[೬೪]

ಒಂದು ಕೆರೆಯನ್ನು ಕಟ್ಟಲು ಹನ್ನೆರಡು ಅಗತ್ಯಗಳನ್ನು ಅಥವಾ ಸಾಧನಗಳನ್ನು ಪೂರೈಸಬೇಕು ಎಂದು ಮೇಲಿನ ಶಾಸನ ವಿವರಿಸುತ್ತದೆ. ಅಂಥ ಕೆಲಸಗಳಲ್ಲಿ ಆರು ಬಗೆಯ ದೋಷಗಳು ಆಗದಂತೆ ಎಚ್ಚರ ವಹಿಸಬೇಕೆಂದೂ ಹೇಳುತ್ತದೆ. ಈ ಶಾಸನದ ಪ್ರಕಾರ ಒಂದು ಒಳ್ಳೆಯ ಕೆರೆಯ ನಿರ್ಮಾಣಕ್ಕೆ ಹನ್ನೆರಡು ಅಗತ್ಯ ಮಾನದಂಡಗಳು ಇರಬೇಕಾಗಿದ್ದು, ಅವು ಇಂತಿವೆ.

೧. ಧರ್ಮಶೀಲನೂ, ಶ್ರೀಮಂತನೂ, ಸುಖಿಯೂ, ಹಾಗೂ ಶಾಶ್ವತ ಸಂಪತ್ತು ಅಥವಾ ಕೀರ್ತಿಯನ್ನು ಬಯಸುವವನೂ ಆದ ದೊರೆ.
೨. ಜಲಶಾಸ್ತ್ರ (ಪಾಠಸ್ ಶಾಸ್ತ್ರ)ಪಾರಂಗತನಾದ ಬ್ರಾಹ್ಮಣ
೩. ಗಟ್ಟಿ ಜೇಡಿಮಣ್ಣಿನಿಂದ ಕೂಡಿದ ಭೂಮಿ
೪. ಸಿಹಿ ನೀರನ್ನು ತರುವ ನದಿ, ತನ್ನ ಮೂಲದಿಂದ ಮೂರು ಯೋಜನೆ ದೂರದಲ್ಲಿರುವಂಥದು
೫. ಏರಿಗೆ ತಗುಲಿದಂತಿರುವ ಬೆಟ್ಟದ ಭಾಗಗಳು
೬. ಈ ಬೆಟ್ಟಗಳ ಭಾಗಗಳ ನಡುವೆ ಕಟ್ಟಿದ ಬಿಗಿಯಾದ ಕಲ್ಲುಗೋಡೆಯ ಏರಿ, ಅತಿ ಉದ್ದವಲ್ಲದ್ದು ಆದರೆ ಭದ್ರವಾದದ್ದು
೭. ಫಲವೀಯುವ ಭೂಮಿಯಿಂದ (ಫಲ–ಸ್ಥಿರ) ಹೊರ ಮುಖವಾಗಿರುವ ಎರಡು ಕೊನೆಗಳು (ಶೃಂಗ)
೮. ವಿಸ್ತಾರವೂ ಆಳವೂ .ಆದ ಕೆರೆ ಅಂಗಳ
೯. ನೇರವಾದ ಉದ್ದನೆಯ ಕಲ್ಲು ಇರುವ ಕಲ್ಲುಗಣಿ
೧೦. ಸಮತಟ್ಟಾದ ಫಲಭರಿತ ಮರಗಳಿಂದ ಕೂಡಿದ ನೆರೆಯ ಭೂಮಿ (ಅಚ್ಚುಕಟ್ಟು)
೧೧. ಬೆಟ್ಟದ ಸ್ಥಾನದಿಂದಾಗಿ (ಅಡವಿ ಸ್ಥಾನ) ಬಲವಾದ ಸುಳಿಗಾಳಿ ಇರುವ (ಬ್ರಹ್ಮ) ಜಲ ಹರಿವು (ತೂಬು) ಹಾಗೂ
೧೨. ಕೆರೆ ನಿರ್ಮಾಣದಲ್ಲಿ ಕುಶಲರಾದ ಕೆಲಸಗಾರರ ತಂಡ

ಕೆರೆ ನಿರ್ಮಾಣದ ವೇಳೆ ಉಂಟಾಗಬಹುದಾದ ಕೆಲ ಅಪಾಯಗಳನ್ನು ಗುರುತಿಸಬೇಕೆಂದು ಮತ್ತು ಆ ತೊಂದರೆಗಳು ಸಂಭವಿಸದಂತೆ ವಹಿಸಬೇಕಾದ ಎಚ್ಚರಿಕೆ ಮತ್ತು ಆರು ದೋಷಗಳನ್ನು ಇದೇ ಶಾಸನ ಉಲ್ಲೇಖಿಸಿದ್ದು, ಅವು ಹೀಗಿವೆ.

೧. ಕಟ್ಟೆಯಿಂದ ನೀರು ಜಿನುಗುವಿಕೆ
೨. ಕ್ಷಾರೀಯ ಮಣ್ಣು
೩. ಎರಡು ರಾಜ್ಯಗಳ ಸರಹದ್ದಿನಲ್ಲಿ ಕೆರೆ ಇರುವಿಕೆ
೪. ಕೆರೆ ಅಂಗಳದ ನಡುವಿನ ದಿಬ್ಬ (ಕೂರ್ಮ)
೫. ಅತ್ಯಲ್ಪ ಜಲ ಲಭ್ಯತೆ ಹಾಗೂ ವಿಸ್ತಾರವಾದ ಅಚ್ಚುಕಟ್ಟು
೬. ಅಲ್ಪ ಭೂಮಿ ಮತ್ತು ಅತಿಯಾದ ನೀರು

ಮೇಲಿನ ದೋಷಗಳನ್ನು ಸ್ಥಳ ಪರಿಶೀಲನೆಯಲ್ಲಿ ಖಚಿತಪಡಿಸಿಕೊಂಡಾದ ಮೇಲೆ ಕೆರೆ ನಿರ್ಮಾಣವನ್ನು ಹೇಗೆ ಮಾಡಬೇಕು ಎಂಬುದನ್ನು ವಿವರಿಸುತ್ತದೆ. ಗಟ್ಟಿಯಾದ ಅಭೇದ್ಯವಾದ ಜೇಡಿಮಣ್ಣಿನ ನೆಲಗಟ್ಟಿನ ಮೇಲೆ ಏರಿಗಳನ್ನು ನಿರ್ಮಿಸಬೇಕು ಹಾಗೂ ಏರಿಯ ತುದಿಗಳಲ್ಲಿ ತೂಬುಗಳನ್ನು ಕಟ್ಟಿ ಹೆಚ್ಚುವರಿ ನೀರು ಹೊರ ಹೋಗಲು ವ್ಯವಸ್ಥೆ ಮಾಡಬೇಕು. ಕೆರೆಗೆ ಸಾಕಷ್ಟು ಜಲಾನಯನ ಭೂಮಿ ಇರಬೇಕು (ಮೂರು ಯೋಜನ), ನೀರಾವರಿಗೆ ಬಳಸುವ ನೀರು ಕುಡಿಯಲು ಯೋಗ್ಯವಾಗಿರಬೇಕು. ಹಾಗೂ ಕೆರೆಯ ಅಚ್ಚುಕಟ್ಟು ಪ್ರದೇಶ ಸಮತಟ್ಟಾಗಿ ಫಲವತ್ತಾಗಿರಬೇಕು. ಏರಿಯಿಂದ ನೀರು ಜಿನುಗದಂತೆ ಸಾಕಷ್ಟು ಕ್ರಮ ಕೈಗೊಳ್ಳಬೇಕು. ಭದ್ರವಾದ ೨೫–೩೦ ಅಡಿ

ಎತ್ತರದ ಮಣ್ಣು ಕಟ್ಟೆಯನ್ನು ನಿರ್ಮಿಸಬೇಕು. ಇದರ ನಿರ್ಮಾಣಕ್ಕೆ ಸಾಕಷ್ಟು ಕುಶಲಕರ್ಮಿಗಳು ಬೇಕು ಎಂಬುದನ್ನು ನಿರ್ದೇಶಿಸುತ್ತದೆ.[೨೫]

೧೯ನೇ ಶತಮಾನಕ್ಕೂ ಹಿಂದೆ ನಿರ್ಮಿಸಲಾದ ಕೆರೆಗಳ ಉದ್ದ ಒಂದರಿಂದ ಒಂದೂವರೆ ಮೈಲಿ ಇರುತ್ತಿತ್ತು. ಅಲ್ಲೊಂದು ಇಲ್ಲೊಂದು ಕೆರೆ ವಿನಃ ಉಳಿದ ಎಲ್ಲಕ್ಕೂ ಒರಟುಗಲ್ಲಿನ ಕಲ್ಲುಕಟ್ಟಡ ಇತ್ತು. ಅದರ ಇಳಿಜಾರು ಸಮತಲದ ಒಂದು ಪ್ರಮಾಣಕ್ಕೆ ಲಂಬ ಎರಡು ಪ್ರಮಾಣದಲ್ಲಿರುತ್ತಿತ್ತು. ಕಲ್ಲುಕಟ್ಟಡದ ಎದುರು ವರಸೆಯ ದಪ್ಪ ಒಂದು ಗಜದಿಂದ ಅರ್ಧಗಜದವರೆಗೂ ಇರುತ್ತಿತ್ತು. ಮುಂಭಾಗದ ದೊಡ್ಡ ಕಲ್ಲುಗಳ ಕಟ್ಟಡದ ದಪ್ಪಕ್ಕೆ ಸಮವಾಗಿರುವಂತೆ ಹಿಂಭಾಗಕ್ಕೆ ಬಿಡಿ ಕಲ್ಲು ಗುಂಡುಗಳನ್ನು ಜೋಡಿಸಲಾಗುತ್ತಿತ್ತು. ಒಮ್ಮೊಮ್ಮೆ ಏರಿಯ ಹಿಂಬದಿಯ ಇಳಿಜಾರಿನಲ್ಲೂ ಕಡಿಮೆ ಅಳತೆಯ ಕಟ್ಟಡ ಇರುತ್ತಿತ್ತು ಎಂಬುದಾಗಿ ಮೈಸೂರಿನ ಮುಖ್ಯ ಇಂಜಿನೀಯರುಗಳಾಗಿದ್ದ ಕರ್ನಲ್ ಹಾಗೂ ಮೇಜರ್ ಸ್ಯಾಂಕಿ ಅವರು ತಮ್ಮ ವರದಿಗಳಲ್ಲಿ ಉಲ್ಲೇಖಿಸಿದ್ದಾರೆ.[೨೬]

ಮಳೆ ನೀರು ಇಳಿಜಾರಿನಲ್ಲಿ ಇಳಿದು ಬರುವಂತಹ ಗಟ್ಟಿ ಪ್ರದೇಶವನ್ನು ಮತ್ತು ನೈಸರ್ಗಿಕವಾಗಿ ಎತ್ತರವಾಗಿರುವ ಭೂಮಿಯನ್ನು ಸಾಮಾನ್ಯವಾಗಿ ಕೆರೆ ನಿರ್ಮಾಣಕ್ಕೆ ಆಯ್ಕೆ ಮಾಡಿಕೊಳ್ಳಲಾಗುತ್ತಿತ್ತು. ಸಾಮಾನ್ಯವಾಗಿ ಝರಿ, ತೊರೆ, ಹಳ್ಳಗಳಿಗೆ ಅಡ್ಡಲಾಗಿ ಮಣ್ಣಿನ ಏರಿಯನ್ನು ಹಾಕಿ ಕೆರೆಗಳನ್ನು ನಿರ್ಮಿಸಲಾಗುತ್ತಿತ್ತು. ಕನ್ನಡ ನಾಣ್ನುಡಿಯೊಂದು ಏರಿಯ ಮಣ್ಣಿನ ಗುಣವನ್ನು ಪರೋಕ್ಷವಾಗಿ ಸೂಚಿಸುತ್ತದೆ. "ಏರಿ ನೀರುಂಬೊಂಡೆ, ಬೇಲಿ ಕೆಯ್ಯ ಮೇದೊಡೆ, ನಾರಿ ತನ್ನ ಮನೆಯಲ್ಲಿ ಕಳುವೊಡೆ....." ಎಂಬ ನಾಣ್ನುಡಿ ನೀರು ನಿಲ್ಲಿಸುವ ಕೆರೆ ಏರಿಯೇ ನೀರು ಕುಡಿದರೆ, ಹೊಲದ ಎಲ್ಲೆಗಳನ್ನು ಗುರುತಿಸಲು ಹಾಕಿದ್ದ ಬೇಲಿಯೇ ಕಿತ್ತುಹಾಕಲ್ಪಟ್ಟರೆ, ಮನೆಯೊಡತಿಯೇ ಮನೆಯಲ್ಲಿ ಕಳ್ಳತನ ಮಾಡಿದರೆ.... ಇತ್ಯಾದಿಗಳು ಬಹಳ ಕಷ್ಟವೆನ್ನುವ ಸೂಚನೆ ನೀಡುತ್ತದೆ. ಏರಿಗೆ ಉಪಯೋಗಿಸುವ ಮಣ್ಣು ಸೂಕ್ತ ಗುಣ ಮತ್ತು ಕೆರೆ ಏರಿಯ ಒಳ ಮತ್ತು ಹೊರ ಇಳಿಜಾರು ಸೂಕ್ತ ಪ್ರಮಾಣದಲ್ಲಿರಬೇಕು. ಏರಿಯ ಮಣ್ಣು ನೀರು ಕುಡಿದರೆ ಅದರ ಗಟ್ಟಿತನ ಸಡಿಲವಾಗುತ್ತದೆ. ನಂತರ ಏರಿಯು ಒಡೆದುಹೋಗುತ್ತದೆ. ಕೆರೆಯಲ್ಲಿ ನಿಂತ ನೀರಿನ ಆಳ ಮತ್ತು ವಿಸ್ತಾರ ಬಹಳವಾದರೆ ಅಲೆಗಳುಂಟಾಗುತ್ತವೆ. ನೀರಿನ ಅಲೆಗಳು ಬಂದು ಕೆರೆಯ ಏರಿಯನ್ನು ಹಿಂದೆ ಎಳೆಯುವ ಪ್ರಯತ್ನ ಮಾಡುತ್ತವೆ. ಈ ಪ್ರಯತ್ನದಲ್ಲಿ ಅದು ಅನೇಕ ಕಡೆ ಸಫಲವಾಗಿ ಏರಿಯ ಇಳಿಜಾರು ವಕ್ರವಾಗಿ ತನ್ನ ಗುಣವನ್ನು ಕಳೆದುಕೊಂಡು ಕೆರೆ ಒಡೆಯಬಹುದು. ಕೆರೆಯ ಒಳ ಇಳಿಜಾರಿಗೆ ಕಲ್ಲುಗಳ ಹೊದಿಕೆ ಹಾಕುವ ರೂಢಿಯು ಬಳಕೆಯಲ್ಲಿ ಬಂದು ನೀರಿನ ಅಲೆಗಳಿಂದ ಆಗುವ ಹಾನಿಯು ಕಡಿಮೆಯಾಯಿತು.

ಪ್ರತಿ ಕೆರೆಗಳು ಸಾಮಾನ್ಯವಾಗಿ ವಿಶೇಷ ಕೌಶಲ್ಯ ಮತ್ತು ತಂತ್ರಜ್ಞಾನವನ್ನು ಅಳವಡಿಸಿಕೊಂಡು ನಿರ್ಮಾಣವಾಗಿದ್ದೂ, ಅವು ತನ್ನದೇ ಆದ ವಿಶೇಷ ಅಂಗಗಳನ್ನು ಒಳಗೊಂಡಿರುತ್ತವೆ. ಅವುಗಳ ತಾಂತ್ರಿಕ ವಿಶೇಷತೆಯನ್ನು ಈ ಮುಂದೆ ವಿವರಿಸಲಾಗಿದೆ. ಹರಿಯುವ ನೀರಿಗೆ ತಡೆಯನ್ನೊಡ್ಡಿ ಅದು ನಿಂತು ಮತ್ತೆ ಮುಂದೆ ಸಾಗುವಂತೆ ಮಾಡುವುದೇ ನೀರಾವರಿ ವ್ಯವಸ್ಥೆ. ಹೀಗೆ ನಿಂತ ನೀರನ್ನು ಅಕ್ಕಪಕ್ಕದ ಕಾಲುವೆಗಳ ಮುಖಾಂತರ ಸಾಗಿಸಿ ಭೂಮಿಗಳಿಗೆ ಉಣಿಸಲಾಗುತ್ತದೆ. ಇದರಲ್ಲಿ ತಾಂತ್ರಿಕ ದೃಷ್ಟಿಯಿಂದ ಎರಡು ಬಗೆಯ ತಡೆಗಳಿವೆ. ಅವುಗಳೆಂದರೆ ಕೆರೆ (Storage Works) ಮತ್ತು ತಿರುವು

(Diversion Works) ಸಣ್ಣ ಪ್ರಮಾಣದ ಮಣ್ಣಿನ ಏರಿಯಿಂದ ಕೂಡಿದ ನೀರಿನ ಸಂಗ್ರಹಗಾರ ಕೆರೆಯಾದರೆ, ನೀರಿನ ಹರಿವಿಗೆ ಹಾಕಿದ ಕಲ್ಲಿನ ವಡ್ಡನ್ನು ನಾವು ತಿರುವು ಎಂದು ಕರೆಯಬಹುದು.[೩೭]

ಸಾಮಾನ್ಯವಾಗಿ ಗುಡ್ಡ ಬೆಟ್ಟಗಳ ಇಳಿಜಾರಿನಿಂದ ಮಳೆ ನೀರು ಕಣಿವೆಗಳಿಂದ ಹರಿಯುತ್ತದೆ. ಯಾವುದೇ ಗೊತ್ತಾದ ಸ್ಥಳದಲ್ಲಿ ಹೊಳೆಗೆ ನೀರನ್ನು ಒದಗಿಸುವ ಪ್ರದೇಶವನ್ನು ಆ ಹೊಳೆಯ, ಆ ಸ್ಥಳದ ನೀರು ಬಸಿಯುವ ಪ್ರದೇಶ ಅಥವಾ ಜಲಾನಯನ ಪ್ರದೇಶ ಎನ್ನುತ್ತಾರೆ.[೩೮] ಕೆರೆಗೆ ಹರಿದು ಬರುವ ನೀರು ಯಾವ ಪ್ರದೇಶದ ಮಳೆಯಿಂದ ಬರುವುದೋ ಆ ಪ್ರದೇಶವೇ ಕೆರೆಯ ಜಲಾನಯನ ಪ್ರದೇಶವಾಗಿದೆ. ಕೆರೆಯನ್ನು ತಲುಪುವ ನೀರಿನ ಪ್ರಮಾಣ ಅಥವಾ ಕೆರೆಯ ನಿವೇಶನದಲ್ಲಿನ ನದಿಯ ಜಲಪ್ರಮಾಣ ಜಲಾನಯನ ಪ್ರದೇಶದ ವಿಸ್ತಾರಕ್ಕೂ ಅಲ್ಲಿ ಬೀಳುವ ಮಳೆಯ ಪ್ರಮಾಣಕ್ಕೂ ಸಂಬಂಧಪಟ್ಟಿರುತ್ತದೆ. ಅದೇ ರೀತಿ ಹೊಳೆಗೆ ಅಡ್ಡಲಾಗಿ ಏರಿಯನ್ನು ಕಟ್ಟಿದಾಗ ಹೊಳೆಯ ನೀರು ನಿಂತು, ಕೆರೆಯಲ್ಲಿ ಶೇಖರವಾಗುತ್ತದೆ. ಕೆರೆಯಲ್ಲಿ ನೀರನ್ನು ನಿಲ್ಲಗೊಡುವ ಅತ್ಯಧಿಕ ಮಟ್ಟವೇ ತುಂಬಿದ ಕೆರೆಯ ನೀರಿನ ಮಟ್ಟ. ಆ ನೀರು ಎಷ್ಟು ಪ್ರದೇಶದಲ್ಲಿ ನಿಲ್ಲುವುದೋ ಆ ಪ್ರದೇಶ ಕೆರೆಯ ನೀರಿನ ಹರಿವು. ಅದನ್ನೇ ಸಾಮಾನ್ಯವಾಗಿ ಕೆರೆಯ ಅಂಗಳ[೩೯] ಎನ್ನುತ್ತಾರೆ.

ಕೆರೆಯ ಕಾಲುವೆ ಜಾಲಕ್ಕೂ ಕಾಲುವೆಯ ನೀರು ಗುರುತ್ವಾಕರ್ಷಣದಿಂದ ನದಿಯನ್ನೋ, ಕೊಳ್ಳವನ್ನೋ ತಲುಪುವ ಸ್ಥಳಕ್ಕೂ ನಡುವೆ ಇರುವ ಭೂಪ್ರದೇಶಕ್ಕೆ ಅಚ್ಚುಕಟ್ಟು ಪ್ರದೇಶ ಎಂದು ಹೆಸರು. ಅಂತಹ ಅಚ್ಚುಕಟ್ಟು ಪ್ರದೇಶದಲ್ಲಿ ರಸ್ತೆ, ಹಳ್ಳಿ, ನಿವೇಶನ, ದಿಬ್ಬಗಳು ಇರಬಹುದು. ಅವೆಲ್ಲವನ್ನೂ ಬಿಟ್ಟು ಉಳಿದ ಪ್ರದೇಶವೇ ಕೆರೆಯ ಅಥವಾ ಕಾಮಗಾರಿಯ ನೀರಾವರಿ ಪ್ರದೇಶ ಅಥವಾ ಆಯಕಟ್ಟು ಪ್ರದೇಶ ಅಥವಾ ಅಚ್ಚುಕಟ್ಟು ಪ್ರದೇಶವಾಗಿದೆ. ಕೆರೆಯ ಅಥವಾ ಜಲಾಶಯದ ಅತ್ಯಂತ ಮುಖ್ಯ ಭಾಗ ಏರಿ ಅಥವಾ ಕಟ್ಟೆ. ಸಾಮಾನ್ಯವಾಗಿ ನಮ್ಮ ಎಲ್ಲಾ ಕೆರೆಗಳ ಏರಿಗಳು ಮಣ್ಣಿನ ಕಟ್ಟೆಗಳು. ನೀರನ್ನು ಪೋಲಾಗದಂತೆ ತಡೆ ಹಿಡಿದಿರುವ ಎತ್ತರವಾದ ಕಟ್ಟೆಯನ್ನು ಸಾಮಾನ್ಯವಾಗಿ ಕೆರೆ ಏರಿಯೆಂದು ಕರೆಯಲಾಗುತ್ತದೆ.[೪೦]

**ಕಾಲುವೆಗಳು**

ಜಲಾಶಯದಲ್ಲಿ ಸಂಗ್ರಹವಾದ ನೀರು ಕಾಲುವೆಗಳ ಮೂಲಕ ಜಮೀನನ್ನು ತಲುಪುತ್ತದೆ. ಕೆರೆಯಿಂದ ನೀರನ್ನು ಒಂದು ತೂಬಿನ ಮೂಲಕ ಕಾಲುವೆಗೆ ಬಿಡಲಾಗುವುದು. ಹಿಂದೆ ಒಂದು ಮರದ ಬಿರಡೆಯನ್ನು ಉಪಯೋಗಿಸಿ, ತೂಬನ್ನು ತೆರೆದು ಮುಚ್ಚಲಾಗುತ್ತಿತ್ತು. ಇಪ್ಪತ್ತನೆಯ ಶತಮಾನದಲ್ಲಿ ಮರದ ಬಿರಡೆಯ ಜಾಗದಲ್ಲಿ ಉಕ್ಕಿನ ಬಾಗಿಲು ರೂಢಿಗೆ ಬಂದಿದೆ. ತೂಬು ಇರುವುದು ಏರಿಯ ಮೇಲು ಪಾರ್ಶ್ವದಲ್ಲಿ. ಅದಕ್ಕೆ ಒಂದು ಕಿರಿದಾದ ಕಾಲು ಸೇತುವೆ ಇರುತ್ತದೆ. ಹಿಂದಿನ ಕಾಲದಲ್ಲಿ ಹಳೆಯ ಕೆರೆಗಳಲ್ಲಿ ನೀರಿನಲ್ಲಿ ಈಸಿಕೊಂಡು ತೂಬಿಗೂ ಹೋಗುತ್ತಿದ್ದರು. ತೂಬಿಗೆ ಹಾಗೂ ಏರಿಯ ಕೆಳ ಪಾರ್ಶ್ವದಲ್ಲಿ ಇರುವ ಕಾಲುವೆಗೂ ನಡುವೆ ಏರಿಯ ಮುಖಾಂತರ ರಚಿಸಲಾದ ಒಂದು ಸುರಂಗದ ಸಂಪರ್ಕ ಇರುತ್ತದೆ. ಹಳೆಯ ಕಟ್ಟೆಗಳಲ್ಲಿ ಸುರಂಗ ಕಲ್ಲು ಕಟ್ಟಡದ್ದಾಗಿರುತ್ತಿತ್ತು. ಈ ಕಟ್ಟುವ ಕಟ್ಟೆಗಳಲ್ಲಿ ಕಾಂಕ್ರಿಟ್ ಕೊಳಾಯಿಗಳ ಜೋಡಣೆ ಇರುತ್ತದೆ.

**ತೂಬುಗಳು**

ಒಂದೊಂದು ಕೆರೆಗೂ ಒಂದು ಅಥವಾ ಎರಡು ತೂಬು ಇರುತ್ತಿದ್ದವು. ಕೆಲವೊಮ್ಮೆ ಮೂರು ಇದ್ದುದೂ ಉಂಟು. ಅವುಗಳಿಂದ ನೀರನ್ನು ಜಮೀನಿಗೆ ಬಿಡಲಾಗುತ್ತಿತ್ತು. ತೂಬು ಇರುತ್ತಿದ್ದುದು ಸಾಮಾನ್ಯವಾಗಿ ಕೆರೆಯ ಅಂಗಳದ ಮಟ್ಟದಲ್ಲೇ. ಆದರೆ ನೀರಾವರಿಯಾಗಬೇಕಾದ ಯಾವುದೇ ಭೂಮಿ ಆ ಮಟ್ಟಕ್ಕಿಂತ ಮೇಲೆ ಇದ್ದಲ್ಲಿ ಇನ್ನೂ ಒಂದೋ ಎರಡೋ ತೂಬುಗಳನ್ನು ಅವುಗಳಿಗೆ ಅನುಗುಣವಾದ ಮಟ್ಟದಲ್ಲಿ ಇಡಲಾಗುತ್ತಿತ್ತು. ಕೆರೆ ತೂಬು ದೊಡ್ಡದು, ದೃಢವೂ ಆಗಿದ್ದು, ದುಬಾರಿಯ ಕೆಲಸವೇ ಆಗಿರುತ್ತಿತ್ತು. ಅದರಲ್ಲಿ ೨ ಅಡಿ ಚದರ ಇಟ್ಟಿಗೆ ಅಥವಾ ಕಲ್ಲಿನ ತೊಟ್ಟಿ, ಮರಳು ಬಾರದಂತೆ ಒಂದು ಗಜ ಎತ್ತರವಾಗಿ ಇರುತ್ತಿತ್ತು. ಅದರ ಬಿರಡೆಯನ್ನು ಕೆರೆ ನೀರಿನ ಮಟ್ಟಕ್ಕಿಂತ ಮೇಲಿನವರೆಗೂ ಇರುವಂತಹ ಒಂದು ಉದ್ದನೆಯ ಗಳುವಿಗೆ ಜೋಡಿಸಲಾಗಿರುತ್ತಿತ್ತು. ೯ ಅಂಗುಲ ಅರ್ಧಗಜ ಚದರದ ಅಳತೆಯ ಎರಡು ಅಥವಾ ನಾಲ್ಕು ಲಂಬ ಕಲ್ಲು ಕಂಬಗಳು ಅದನ್ನು ಸ್ವಸ್ಥಾನದಲ್ಲಿ ಹಿಡಿದಿಟ್ಟಿರುತ್ತಿದ್ದವು. ಆ ಕಂಬಗಳಿಗೆ ತಲೆಯಲ್ಲಿ ಒಂದು, ನಡುವೆ ಒಂದು ಹೀಗೆ ಎರಡು ಸಮತಲದ ಅಡ್ಡ ಕಲ್ಲುಗಳು ಇರುತ್ತಿದ್ದವು.

ಏರಿಯ ಹಿಂಬದಿಯಲ್ಲಿ ಸುಮಾರು ಅದೇ ಅಳತೆಯ ಇನ್ನೊಂದು ತೊಟ್ಟಿಯನ್ನು ಸಾಮಾನ್ಯವಾಗಿ ಇಟ್ಟಿಗೆ ಗಾರೆಗಳಿಂದ ಕಟ್ಟಲಾಗುತ್ತಿತ್ತು. ತೊಟ್ಟಿಯ ಮೂರು ಪಾರ್ಶ್ವಗಳಲ್ಲಿ ಚೌಕಾಕಾರದ ಕೊಂಡಿಗಳಿದ್ದು, ಬೇಕಾದ ದಿಕ್ಕಿಗೆ ನೀರನ್ನು ಬಿಡುವಂತೆ ಅವುಗಳಿಗೆ ಬಾಗಿಲು ಇರುತ್ತಿದ್ದವು. ಎರಡು ತೊಟ್ಟಿಗಳಿಗೂ ನಡುವೆ ಏರಿಗೆ ಅಡ್ಡಲಾಗಿ ಒಂದು ಸುರಂಗ ಇರುತ್ತಿತ್ತು. ಏರಿಯ ಅಗಲಕ್ಕೆ ಅನುಗುಣವಾಗಿ ಅದರ ಉದ್ದ ಸಾಮಾನ್ಯವಾಗಿ ೧೦ ರಿಂದ ೩೦ ಅಥವಾ ೪೦ ಗಜ ಇರುತ್ತಿತ್ತು. ನೀರು ಹಾಯುವ ಸುರಂಗದ ಒಳ ಅಳತೆ ಸುಮಾರು ೨.೫ ಅಡಿ ಎತ್ತರ, ೨ ಅಡಿ ಅಗಲ ಇರುತ್ತಿತ್ತು. ಒಳಗೆ ಏನಾದರೂ ಅಡಚಣೆ ಆದಲ್ಲಿ ಒಬ್ಬ ಹುಡುಗ ಒಳಗೆ ಹೋಗಿ ಅದನ್ನು ತೆಗೆದುಹಾಕಲು ಅಥವಾ ಸುರಂಗದ ಸ್ಥಿತಿಯನ್ನು ಪರಿಶೀಲಿಸಲು ಅನುಕೂಲವಾಗುವಂತೆ ಸುರಂಗದ ಒಳ ಅಳತೆ ಇರುತ್ತಿತ್ತು. ಸುರಂಗದ ಒಳ ಭಾಗ ಸಾಮಾನ್ಯವಾಗಿ ಆಯತಾಕಾರದ್ದು. ೬ ರಿಂದ ೯ ಅಂಗುಲ ದಪ್ಪದ ಕಲ್ಲುಚಪ್ಪಡಿಗಳ ಗೋಡೆ ಇರುತ್ತಿತ್ತು.

**ಕೋಡಿ**

ನಿರ್ದಿಷ್ಟ ಪ್ರಮಾಣದ ನೀರನ್ನು ಮಾತ್ರ ಹಿಡಿದಿಡುವಂತೆ ಕೆರೆ ಅಥವಾ ಜಲಾಶಯ ನಿರ್ಮಿತವಾಗಿರುತ್ತದೆ. ಮಿತಿಮೀರಿ ಜಲಸಂಗ್ರಹಣೆಯಾದರೆ ಅದು ಮಣ್ಣು ಕಟ್ಟೆಯ ಮೇಲೆ ಹರಿದು ಏರಿ ಒಡೆದು ಹೋಗಬಹುದು. ಆದ್ದರಿಂದ ಹೆಚ್ಚು ಬರುವ ನೀರು ಯೋಜಿತ ಸಂಗ್ರಹಣೆಗೆ ಮೀರದಂತೆ, ಕೆಳಕ್ಕೆ ಹರಿದುಹೋಗುವಂತೆ ಬಿಡಲು ವ್ಯವಸ್ಥೆ ಯಾವಾಗಲೂ ಇದ್ದೇ ಇರುತ್ತದೆ. ಹೆಚ್ಚುವರಿ ನೀರು ಸಲೀಸಾಗಿ ಹರಿದು ಹೋಗುವ ಏರಿಯ ಭಾಗವೇ ಕೋಡಿ. ಆ ಹೆಚ್ಚು ನೀರು ಕೆಳಕ್ಕೆ ಹರಿದು ಕಟ್ಟೆಯ ಕೆಳಗೆ ನದಿಯ ಪಾತ್ರಕ್ಕೆ ಸೇರುತ್ತದೆ. ಕೋಡಿಗಳ ಅಗಲ ೧೦ ರಿಂದ ೧೦೦ ಗಜದವರೆಗೂ ಇರುತ್ತಿತ್ತು. ಬಲವಾದ ಕಟ್ಟಡ ಇಲ್ಲವಾದರೆ ಕೋಡಿಯ ಮೇಲೆ ಹರಿಯುವ ನೀರಿನ ರಭಸಕ್ಕೆ ಎಲ್ಲವೂ ಕೊಚ್ಚಿಕೊಂಡು ಹೋಗುವುದು. ಆದ್ದರಿಂದ ಕೋಡಿಗಳನ್ನು ಸುತ್ತಮುತ್ತ ಸಿಗುವ

ಅತ್ಯಂತ ಭಾರಿ ಆಕಾರದ ಒರಟು ಕಲ್ಲುಗಳಿಂದ ಭದ್ರಗೊಳಿಸಲಾಗುತ್ತಿತ್ತು. ಕೋಡಿಗಳ ಆಕಾರ ಸಾಮಾನ್ಯವಾಗಿ ಚೌಕ. ಆಯಾತಕಾರದಲ್ಲಿ ನಿರ್ಮಿಸಲಾಗುತ್ತಿತ್ತು.[೪೧]

ಕೆಲವು ಸಲ ಕೋಡಿ ಕೆಳಗಿನ ಹಳ್ಳದಲ್ಲಿ ಒರಟು ಕಲ್ಲಿನ ಇನ್ನೊಂದು ಸಣ್ಣ ಕಟ್ಟೆಯನ್ನು ಕಟ್ಟಲಾಗುತ್ತಿತ್ತು. ಆ ಕಟ್ಟೆಯಿಂದ ಇನ್ನೊಂದು ನೀರಾವರಿ ಕಾಲುವೆಯೂ ಹೊರಡುತ್ತಿತ್ತು. ಕೆರೆಗೆ ಭದ್ರ ಎನಿಸಬಹುದಾದ ಅತ್ಯಂತ ಹೆಚ್ಚಿನ ಮಟ್ಟದ ನೀರನ್ನು ಕೋಡಿ ತಡೆಹಿಡಿದಿಡುತ್ತಿತ್ತು. ಕೆಳಗಿನ ಕಟ್ಟೆಯಾದರೂ ಕೋಡಿಯಿಂದ ಬಂದ ಹೆಚ್ಚುವರಿ ನೀರನ್ನು ನಷ್ಟವಾಗಿ ಹೋಗದಂತೆ ಹಿಡಿದಿಡುತ್ತಿತ್ತು. ವರ್ಷದಲ್ಲಿ ೧೦–೧೫ ದಿನ ಕೋಡಿಯ ಮೇಲೆ ಅಪಾರ ನೀರು ಹರಿದು ಬರುತ್ತಿದ್ದುದರಿಂದ ಕೆಳಗಿನ ಕಟ್ಟೆಗೆ ನಿರ್ಮಾಣ ಬಲವಾಗಿರಬೇಕಾಗಿತ್ತು. ನದಿಯ ಅಣೆಕಟ್ಟುಗಳಂತೆಯೇ ಕೋಡಿ ಕಟ್ಟೆಗಳನ್ನು ಎಚ್ಚರದಿಂದ ನಿರ್ಮಿಸಲಾಗುತ್ತಿತ್ತು.

### ೪.೪. ಕೆರೆ ನೀರಾವರಿ ವ್ಯವಸ್ಥೆ ಮತ್ತು ನಿರ್ವಹಣೆ

ರಾಜ್ಯದಲ್ಲಿ ಪ್ರಾಚೀನ ಕಾಲದಲ್ಲೇ ಕೆರೆ ನೀರಾವರಿ ಅನುಷ್ಠಾನವಾಗಿದ್ದಕ್ಕೆ ಹಲವು ಉದಾಹರಣೆಗಳಿವೆ. ಈ ಹಿನ್ನೆಲೆಯಲ್ಲಿ ಕೆರೆಗಳ ಚಾರಿತ್ರಿಕ ಹಿನ್ನೆಲೆ ಮತ್ತು ಕೆರೆಗಳ ನಿರ್ಮಾಪಕರು ನೀರಾವರಿಯ ನಿರ್ವಹಣೆಯಲ್ಲಿ ಅನುಸರಿಸಿದ ಕ್ರಮಗಳನ್ನು ಈ ಮುಂದೆ ವಿಶ್ಲೇಷಿಸಲಾಗಿದೆ.

#### ಕೆರೆ ನೀರಾವರಿ ವ್ಯವಸ್ಥೆ

ಕರ್ನಾಟಕದ ಕೆರೆಗಳ ಇತಿಹಾಸ ಸದ್ಯಕ್ಕೆ ಶಾತವಾಹನ ಕಾಲದಿಂದ ಲಭ್ಯವಾಗಿದೆ. ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಲ್ಲಿ ದೊರೆತ ಶಿಲಾಶಾಸನದ ಪ್ರಕಾರ ಹಾರಿತೀ ಪುತ್ರ ವಿಣ್ಹು ಕಡ ಚುಟುಕುಲಾನಂದ ಸಾತಕರ್ಣಿ ರಾಜನ ೧೨ನೇ ಆಳ್ವಿಕೆ ವರ್ಷದಲ್ಲಿ, ಹೇಮಂತ ಋತುವಿನ ಏಳನೆಯ ಪಕ್ಷದಲ್ಲಿ ಮೊದಲ ದಿನ ಮಹಾಭುವಿ ವಂಶದ, ಮಹಾರಾಜನ ಬಾಲಿಕೆಯಾದ, ಪತಿವ್ರತೆಯಾದ, ಪೂಜ್ಯ ಯುವರಾಜಮಾತೆಯೂ ಆದ, ಸಿವಖಡನಾಗಸಿರಿ (ಶಿವಸ್ಕಂದ ನಾಗಶ್ರೀ) ಒಂದು ಕೆರೆಯನ್ನು ಮಾಡಿಸಿದಳು (ನಾಗಪ್ರತಿಮೆ ಹಾಗೂ ವಿಹಾರದ ಜೊತೆಗೆ). ಇವುಗಳ ಮೇಲ್ವಿಚಾರಣೆ ಮಾಡಿದವ ಅಮಾತ್ಯ ಖಡಸಾತಿ (ಸ್ಕಂದಸ್ವಾತಿ). ಪ್ರಸ್ತುತ ಇದೇ ಪ್ರಾಚೀನತಮ ಶಾಸನೋಕ್ತ ಅಥವಾ ದಾಖಲಿತ ಕೆರೆಯೆಂದು ಹೇಳಬಹುದು.[೪೨] ಬನವಾಸಿಯ ಆದಿ ಕದಂಬರ ಕಾಲದಲ್ಲಿ (ಕ್ರಿ.ಶ.೪–೬ರ ಶತಕಗಳಲ್ಲಿ) ಕೆರೆಗಳ ಇತಿಹಾಸವು ಶಾಸನಗಳಲ್ಲಿ ಇನ್ನು ಸ್ಪಷ್ಟವಾಗಿ ಉಲ್ಲೇಖಿತವಾಗಿದೆ.

ಕೆರೆ ನಿರ್ಮಾಣದಲ್ಲಿ ಪ್ರಾಕೃತಿಕವಾಗಿದ್ದ ಗುಡ್ಡ ಕಣಿವೆಗಳನ್ನು ಬಳಸಿದ್ದರ (Ecofrindly) ನಿದರ್ಶನ ಚಂದ್ರವಳ್ಳಿ (ಚಿತ್ರದುರ್ಗ) ಹುಲಿಗೊಂಡಿ ಕಣಿವೆಯಲ್ಲಿ ನೋಡಬಹುದು. ಅಷ್ಟೇ ಅಲ್ಲ ಅದು ಹಾಳಾದಾಗ (ಪ್ರಾಯಶಃ) ಅದರ ದುರಸ್ತಿ ಕಾರ್ಯವನ್ನು ಮಾಡಿದ್ದರ ಉದಾಹರಣೆ ಇದಾಗಿದೆ. ಅದನ್ನು ಇನ್ನೂ ಚೆಂದಗೊಳಿಸಿದ್ದರ ನಿದರ್ಶನವೂ ಇದಾಗಿದೆ. ಅದರ ಬಳಿ ಪ್ರವಾಸಿ ನೆಲೆ ನಿರ್ಮಿಸಿದ್ದು ಸ್ವಾರಸ್ಯಕರವಾಗಿದೆ. ಹೀಗೆ ಎರಡು ಗುಡ್ಡಗಳ ನಡುವೆ ನಿರ್ಮಿತವಾಗಿದ್ದ ಆ ಕೆರೆ ಇಂದಿಗೂ ಇದೆ.

ಕದಂಬಾಣಂ ಮಯೂರವರ್ಮಣಾ

ತಟಾಕಂ ದೃಢೀಕೃತಂ, ಅಭಿರೂಪ ರಚಯಿತ್ವಾ,

ವಾನವಾಸಕಂ ಸ್ಥಾಪಯಿತ್ವಾ ..... ಎಂದು ಪ್ರಾಕೃತ ಮಿಶ್ರ-ಸಂಸ್ಕೃತದಲ್ಲಿ ಒಂದು ಸಾರ್ವಜನಿಕ ದಾಖಲೆಯೊಂದಿಗೆ ೪ನೇ ಶತಮಾನದಲ್ಲಿ ಕೆರೆ ನಿರ್ಮಾಣ, ನಿರ್ವಹಣೆ (ದುರಸ್ತಿ) ಸೌಂದರ್ಯೀಕರಣವನ್ನು ಕನ್ನಡ ನಾಡಿನ ಪ್ರಥಮ, ದೇಶೀ, ಸ್ವತಂತ್ರ ರಾಜಮನೆತನ ಮಾಡಿದ್ದು ತುಂಬ ಸ್ವಾರಸ್ಯಕರವಾಗಿದೆ.[೪೩]

ಆದಿಕದಂಬ ರವಿವರ್ಮನು ಐದನೆಯ ಶತಮಾನದಲ್ಲಿ ಕಾಂತಾರಾರ್ಯ ಪಾಟೀ, (ಕಂತ್ರಾಜಿ), ಕಲ್ಲಂಗೋಡ ಗ್ರಾಮ (ಕಲಗೋಡು) ಮೂಗೂರು ಗ್ರಾಮ (ಮೊಗವಳ್ಳಿ) ಸೀಮೆಯಲ್ಲಿ ದಕ್ಷಿಣಕ್ಕೆ ಗುಡ್ಡ ತಟಾಕಕ್ಕೆ (ಗುಡ್ಡ ಕೆರೆ>ಗುಡ್ನಾಪುರ) ಒಂದು ಒಡ್ಡು ಕಟ್ಟಿ, ಆ ಕೆರೆಯ ನೀರಿನಿಂದ ಎಷ್ಟು ಬೆಳೆಯಬಹುದೋ ಅಷ್ಟು ಹೊಸ ಕ್ಷೇತ್ರದಾನ ಮಾಡಿದ. ಮುಂದೆ ದಾನ ಸಂದರ್ಭದಲ್ಲಿ ಬೃಹತ್ ತಟಾಕ(ದೊಡ್ಡ ಕೆರೆ) ಪದ್ಮ ತಟಾಕ, (ಕಮಲ ಕೆರೆ) ಅಂಬಿಲ ಕುಂಡಿ(ಅಂಬ್ಲಿ ಹೊಂಡ) ತಟಾಕಗಳನ್ನು ಉಲ್ಲೇಖ ಮಾಡಲಾಗಿದೆ. ಅವುಗಳಲ್ಲಿ ಇಡೀ ಉತ್ತರ ಕನ್ನಡ ಜಿಲ್ಲೆಯಲ್ಲೇ ಅತ್ಯಂತ ದೊಡ್ಡ ಕೆರೆಯಾದ ಗುಡ್ನಾಪುರದ "ಗುಡ್ಡ ತಟಾಕಕ್ಕೆ" ಒಡ್ಡು ಕಟ್ಟಿದ ಸ್ವಾರಸ್ಯಕರ ಸಂಗತಿ ಇದೆ. ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲ್ಲೂಕಿನ ಕುಂಟಗಣಿ (ಬನವಾಸಿ ಬಳಿಯೂ ಕುಂಟಗಳಲ್ಲಿ ಇದೆ!) ತಾಮ್ರ ಶಾಸನದಲ್ಲಿ ದಾನ ದಾಖಲೆಯ ಸಂದರ್ಭದಲ್ಲಿ ಅಲ್ಲಿದ್ದ ಕರ್ಪಟೇಶ್ವರ ಭೂಮಿ ವರಿಯಕಾ ಗ್ರಾಮದಲ್ಲಿತ್ತು. ಆ ಭೂಮಿ ಕೆರೆ ಬದಿ ಅದರ ಎರಡೂ ದಡದಲ್ಲಿತ್ತು. ಈ ಕೆರೆಯ ದಿಬ್ಬವನ್ನು (ತಟಾಕ ಬಂಧಂ ಕಾರಯಿತ್ವಾ) ರಾಜ ರವಿವರ್ಮ ಧರ್ಮಮಹಾರಾಜನು ಕಟ್ಟಿಸಿದ. ಶಿರಸಿ ತಾಮ್ರಪಟದಲ್ಲಿ ರವಿವರ್ಮನ ಭೂದಾನ ಉಲ್ಲೇಖಿಸುವಾಗ (ಜಂಬುಪುಕ್ಕೊಲ್ಲೀ ಕ್ಷೇತ್ರ) ಸಾರೆ (ಚಾರೆ) ಗ್ರಾಮದಲ್ಲಿ ಎರಡು ಕೆರೆಗಳಿದ್ದುದನ್ನು ಪ್ರಸ್ತಾಪಿಸಲಾಗಿದೆ.[೪೪]

ಈಚೆಗೆ ರಾಣೆಬೆನ್ನೂರು ಶಂಭುಲಿಂಗಪ್ಪನವರ ಮನೆಯಲ್ಲಿ ಪತ್ತೆ ಮಾಡಿದ ಕದಂಬ ಮಾಂಧಾತೃವರ್ಮನ ತಾಮ್ರಪಟದಲ್ಲಿ 'ವಾಣೀಜ ತಟಾಕ'ದ ಉಲ್ಲೇಖವನ್ನು ಮೊದಲ ಬಾರಿಗೆ ಗಮನಿಸಲಾಗಿದೆ. ಇದು ಸಂಸ್ಕೃತೀಕರಣಗೊಂಡ ಹೆಸರು. ದೇಶಿ ಹೆಸರು 'ಶೆಟ್ಟಿ ಕೆರೆ' ಆಗಿರಬೇಕು. ಈ ರೀತಿ ವ್ಯಾಪಾರಿ ಶೆಟ್ಟರು ಕಟ್ಟಿಸಿದ ಕೆರೆ 'ಶೆಟ್ಟಿ ಕೆರೆ' ಆ ಕಾಲಕ್ಕಾಗಲೇ ಇತ್ತೆಂಬುದು, ಆ ಮೂಲಕ ಸಮಾಜದ ವಿವಿಧ ಸ್ಥರಗಳವರೂ ಕೆರೆ ನಿರ್ಮಾಣದಲ್ಲಿ ಪಾತ್ರ ವಹಿಸಿದ್ದರು ಎಂಬುದಕ್ಕೆ ಇದೊಂದು ನಿದರ್ಶನ.[೪೫]

ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಮ್ರಪಟದಲ್ಲಿ ಕದಂಬ ಸಿಂಹವರ್ಮನ ಭೂದಾನ ಉಲ್ಲೇಖಿಸುವಾಗ ಆಸಂದೀ ತಟಾಕ (ಆಸಂದಿ ಕೆರೆ) ಹೆಸರಿಸಲ್ಪಟ್ಟಿದೆ. ಇದೊಂದು ಊರ ಹೆಸರು ಹೊತ್ತ ಕೆರೆ. ಆದರೆ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕು ಶಿವಳ್ಳಿ ತಾಮ್ರಪಟದಲ್ಲಿ ಕದಂಬ ಇಮ್ಮಡಿ ಕೃಷ್ಣವರ್ಮನ ಕಾಲದಲ್ಲಿ ಮಾಹೇಶ್ವರೀ ಕ್ಷೇತ್ರದ ದಕ್ಷಿಣಕ್ಕೆ, ಬಂದಣಿಕೆ ಪೂರ್ವಕ್ಕೆ "ಶಾಂತ ತಟಾಕ" ಇತ್ತೆಂಬುದು ದಾಖಲಾಗಿದೆ. ಅಲ್ಲಿ ಶಾಂತಿನಾಥ ಬಸದಿಯಿದೆ. ಅದರ ಕೆಳಸ್ತರದಲ್ಲಿ ಶಾತವಾಹನ ಕದಂಬ-ಕಾಲದ ಇಟ್ಟಿಗೆ ಕಟ್ಟಡ ಭಾಗಗಳು ಸಿಕ್ಕಿವೆ. ಆ ಕಾಲಕ್ಕಾಗಲೇ ಇದ್ದಿರಬಹುದಾದ ಶಾಂತಿನಾಥನಿಂದಾಗಿ ಅದರ ಬಳಿಯಿರುವ ಕೆರೆಗೆ 'ಶಾಂತ ತಟಾಕ' ಎಂದು ಹೆಸರು ಬಂದಿರಬೇಕು.

ಇಲ್ಲವೆ 'ಶಾಂತಿ ಸಾಗರ' ಎಂದಿರಬೇಕು. ಹಾಸನ ಜಿಲ್ಲೆ ಬೇಲೂರು ತಾಲ್ಲೂಕು ತಗರೆಯಲ್ಲಿ ದೊರೆತ ಅರ್ಧ ಸಂಸ್ಕೃತ ಗಿರ್ದ ಕನ್ನಡ ಬರಹವುಳ್ಳ ತಾಮ್ರ ಪಟದಲ್ಲಿ ಎರಡು ಕೆರೆಗಳ ಉಲ್ಲೇಖ ಬಂದಿದೆ. ಕಿರುಕೂಡಲೂರು ಕೆರೆ ಹಾಗೂ ತಗರೆಯ ಪೆರ್ಗ್ಗೇರೆ (ಹಿರಿಯ ದೊಡ್ಡ ಕೆರೆ-ಪೆಗ್ಗೆಣಿಯಾ ಮೊದಲ ಕೆರೆ) ಇವು ಕನ್ನಡ ಶಾಸನ ಭಾಗದಲ್ಲಿ ಬಂದಿದ್ದು, ಕದಂಬ ಭೋಗಿವರ್ಮನ ಕಾಲಕ್ಕಾಗಲೇ ಪೆರ್ಗ್ಗೆರೆ, 'ಕೆರೆ' ಎಂಬ ದೇಶಿ ಶಬ್ದ ಕಂಡುಬರುವುದೊಂದು ವಿಶೇಷ. 'ಕೆರೆ' ಶಬ್ದದ ಪ್ರಾಚೀನತೆಯನ್ನು ನಿರ್ಧರಿಸುವಲ್ಲಿ ಆದಿಕದಂಬರ ಕನ್ನಡ ಶಾಸನೋಲ್ಲೇಖ ಗಮನಾರ್ಹ.[೪]

ಬೆಳಗಾವಿ ಜಿಲ್ಲೆಯ ಬೇಡ್ಕಿಹಾಳ ತಾಮ್ರಪಟದಲ್ಲಿ (ಇದೊಂದು ಕೂಟ ಶಾಸನವೇ? ಅಥವಾ ೪ನೇ ಶತಕದ ಕದಂಬ ಶಾಸನದ ೧೧ನೇ ಶತಮಾನದ ಪ್ರತಿಯೇ-ಏನೇ ಇರಲಿ) ದಿಗ್ಭಾಗ ಹೇಳುವಾಗ ಗುಡ್ಡದ ಹಿಂಭಾಗದಲ್ಲಿದ್ದ ತಟಾಕವನ್ನು ತಪ್ಪದೆ ಪ್ರಸ್ತಾಪಿಸಲಾಗಿದೆ. ಚಂದ್ರವಳ್ಳಿ ಕೆರೆಯ ಹಾಗೆ ಗುಡ್ಡವನ್ನು ಬಳಸಿ ಕೆರೆ ನಿರ್ಮಾಣ ಅಲ್ಲಾಗಿರಬಹುದು. ಹೀಗೆ ಆದಿಕದಂಬರ ಕಾಲದಲ್ಲಿ ಅದರಲ್ಲೂ ಕದಂಬ ರವಿವರ್ಮನ ಕಾಲದಲ್ಲಿ ಹೆಚ್ಚಿನ ಸಂಖ್ಯೆಯ ಕೆರೆಗಳು ಶಾಸನಗಳಲ್ಲಿ ಉಲ್ಲೇಖಿತವಾಗಿವೆ. ಅವುಗಳ ನಿರ್ಮಾಣ, ನಿರ್ವಹಣೆ, ದುರಸ್ತಿ, ಬಳಕೆ, ಇವುಗಳ ಹಿಂದಿದ್ದ ಜನವರ್ಗ ಇತ್ಯಾದಿ ಸಂಗತಿಗಳು ಕೆರೆ ಇತಿಹಾಸ ಪುನಾರಚನೆಯಲ್ಲಿ ಉಪಯುಕ್ತವಾಗಿದೆ. ಕರ್ನಾಟಕದ ಪ್ರಾಚೀನತಮ ಕೆರೆಯೊಂದರ ನಿರ್ಮಾತೃ ಸಾತಕರ್ಣಿ ಒಬ್ಬ 'ಮಹಿಳೆ' ಎಂಬ ಸಂಗತಿ ಕುತೂಹಲಕಾರಿ (ಮಾತೃಪ್ರಧಾನ ಕುಟುಂಬ). ಹಾಗೆಯೇ 'ಕೆರೆಗೆ ಹಾರ' ಆಗಿದ್ದವಳೂ ಮಹಿಳೆ ಎಂಬ ಜಾನಪದ ವಿಚಾರವೂ ಅಷ್ಟೇ ಸ್ವಾರಸ್ಯಕರ ಸಂಗತಿ.

**ಕೆರೆ ನಿರ್ಮಾಪಕರು**

ಸಾಮಾನ್ಯವಾಗಿ ರಾಜ-ಯುವರಾಜ, ರಾಜ-ರಾಣಿ, ಸಾಮಂತರೋ, ಕೇಂದ್ರ ಅಥವಾ ಸ್ಥಾನಿಕ ಸರಕಾರದ ಅಧಿಕಾರಿಗಳು ಕೆರೆಗಳ ನಿರ್ಮಾಣ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರೊಂದಿಗೆ ಬಹು ಅಪರೂಪಕ್ಕೆ ಸಾಮಾಜಿಕ ಸೇವೆಯಲ್ಲಿ ಆಸಕ್ತಿ ಹೊಂದಿದ್ದ ಸ್ಥಳೀಯ ವ್ಯಾಪಾರಿಗಳು, ಶ್ರೀಮಂತರು, ಗಾವುಂಡರು, ಕೃಷಿಕರು ಸಹ ಈ ಸೇವಾ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ಗ್ರಾಮಾಡಳಿತದ ಮುಖ್ಯಸ್ಥರಾದ ಗಾವುಂಡರು ಗ್ರಾಮಾಭ್ಯುದಯದಲ್ಲಿ ಸಾಮಾನ್ಯವಾಗಿ ಭಾಗಿಗಳಾಗಿರುತ್ತಿದ್ದುದರಿಂದ ಕೆರೆ ನಿರ್ಮಾಣ ಅಥವಾ ದಾನಧರ್ಮದಲ್ಲಿ ಅವರ ಪಾತ್ರವೂ ಅನನ್ಯವಾಗಿತ್ತು. ಪಂಪ ಅಂದಿನ ಸಾಮಾಜಿಕ ಜೀವನದಲ್ಲಿ ದೊರೆಗಳು ವಹಿಸಬೇಕಾದ ಜವಾಬ್ದಾರಿಗಳನ್ನು ವಿವರಿಸಿದ್ದು, ಆ ಜವಾಬ್ದಾರಿಗಳಲ್ಲಿ ಕೆರೆ ಕಾಲುವೆಗಳ ನಿರ್ಮಾಣ ಮತ್ತು ಜೀರ್ಣೋದ್ಧಾರದ ವಿಷಯವೂ ಪ್ರಸ್ತಾಪಿತವಾಗಿರುವುದು ಗಮನಾರ್ಹ. '..... **ಅಲ್ಲಿ ಗಲ್ಲಿಗೊಡೆದ ಕೆರೆಗೆ ಮಳಿದಾಯ ತನಕ್ಕುಂ ಧನಮನಿತ್ತು ಜೀರ್ಣೋದ್ಧಾರಂಗಳಂ ಮಾಡುಸುತ್ತಂ ಬಂದು**' ಆತ ಪಾಂಡವರ ರಾಜೋಚಿತ ಪ್ರಯಾಣದ ವರ್ಣನೆಯಲ್ಲಿ ವಿವರಿಸಿರುವುದು ಅಂದಿನ ದೊರೆಗಳು ನಿರ್ವಹಿಸುತ್ತಿದ್ದ ಕಾರ್ಯಗಳನ್ನು ಧ್ವನಿಸುತ್ತದೆ. ಕನ್ನಡ ನಾಡನ್ನು ಆಳಿದ ಎಲ್ಲಾ ರಾಜವಂಶಗಳೂ ಸಹ ಕೆರೆಗಳ ನಿರ್ಮಾಣ, ದುರಸ್ತಿ, ನಿರ್ವಹಣೆ ಮತ್ತು ದಾನ ಚಟುವಟಿಕೆಗಳಲ್ಲಿ ನೇರವಾಗಿ ಅಥವಾ ಪರೋಕ್ಷವಾಗಿ ಭಾಗವಹಿಸಿವೆ. ಈ ರೀತಿ ನಿರ್ಮಿಸಲ್ಪಟ್ಟ ಹಲವು ಚಾರಿತ್ರಿಕ

ಕೆರೆಗಳು ನಮ್ಮ ನಾಡಿನಲ್ಲಿವೆ. ಅವುಗಳಲ್ಲಿ ಚಂದ್ರವಳ್ಳಿ, ತಾಳಗುಂದ, ಗುಡ್ನಾಪುರ, ಮದಗ, ಮಾಸೂರು, ದರೊಜಿ, ಹಿರೆಕೆರೆ, ರಾಯರಕೆರೆ, ಬೇಲೂರು, ಅಯ್ಯನಕೆರೆ, ಸೂಳೆಕೆರೆ, ನಾಯಕನಹಟ್ಟಿ, ಮೊದಲಾದೆಡೆ ಕೇಂದ್ರೀಕೃತವಾಗಿವೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಕೆರೆಗಳ ಚಾರಿತ್ರಿಕ ನೀರಾವರಿ ವ್ಯವಸ್ಥೆಯನ್ನು ಮತ್ತು ಅವುಗಳ ನಿರ್ಮಾಪಕರು ಹಾಗೂ ನಿರ್ವಹಣೆಯ ಸ್ವರೂಪವನ್ನು ಇಲ್ಲಿ ಅವಲೋಕಿಸಲಾಗಿದೆ.

**ಪ್ರಭುತ್ವ:**

ಪ್ರಾಚೀನ ಕಾಲದಿಂದಲೂ ಅಧಿಕಾರ ನಡೆಸಿದ ಪ್ರಭುತ್ವಗಳು ಕೆರೆ ನಿರ್ಮಾಣದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದನ್ನು ಅನೇಕ ಶಾಸನಗಳು ಉಲ್ಲೇಖಿಸಿರುವುದನ್ನು ನಾವು ಗುರುತಿಸಬಹುದು. ಐತಿಹಾಸಿಕ ಕಾಲಘಟ್ಟದಲ್ಲಿ ಮೌರ್ಯರು ಪ್ರಥಮವಾಗಿ ಕೆರೆ ನೀರಾವರಿಗೆ ಮಹತ್ವ ಕೊಟ್ಟಿದ್ದರೆಂಬುದಕ್ಕೆ ಸೌರಾಷ್ಟ್ರದ ಜುನಾಗಡದ ಸುದರ್ಶನ ಸರೋವರ ಅತ್ಯುತ್ತಮ ಉದಾಹರಣೆಯಾಗಿದೆ. ಇಲ್ಲಿರುವ ಶಾಸನದ ಪ್ರಕಾರ ಇಲ್ಲಿ ಆಳ್ವಿಕೆ ಮಾಡುತ್ತಿದ್ದ ಚಂದ್ರಗುಪ್ತ ಮೌರ್ಯನ ರಾಜ್ಯಪಾಲನಾಗಿದ್ದ ಪುಷ್ಯಗುಪ್ತನು ಸುದರ್ಶನ ಸರೋವರವನ್ನು ನಿರ್ಮಿಸಿದನು. ಮುಂದೆ ಅಶೋಕನ ಕಾಲದಲ್ಲಿ ರಾಜ್ಯಪಾಲನಾಗಿದ್ದ ತುಶಾಸ್ಥನು ಅದಕ್ಕೆ ಕಾಲುವೆಯನ್ನು ನಿರ್ಮಿಸಿದನು. ಮುಂದೆ ಈ ಭಾಗದಲ್ಲಿ ಮೌರ್ಯರ ಉತ್ತರಾಧಿಕಾರಿಗಳಾಗಿ ಆಳ್ವಿಕೆ ಮಾಡಿದ ಶಕರ ಕಾಲದಲ್ಲಿ ಪ್ರವಾಹ ಬಂದು ಕೆರೆ ಒಡೆದು ನೀರೆಲ್ಲ ಕೊಚ್ಚಿಕೊಂಡು ಹೋಗಿ ಕೆರೆ ಖಾಲಿಯಾಗಿ ಸುದರ್ಶನ ದುರ್ದರ್ಶನವಾಯಿತು. ಆಗ ರುದ್ರದಮನನು ಅದನ್ನು ತನ್ನ ಖರ್ಚಿನಿಂದಲೇ ರಿಪೇರಿ ಮಾಡಿ ಮೂರು ಪಟ್ಟು ಭದ್ರವನ್ನಾಗಿ ಮಾಡಿದನು. ಇದರಿಂದ ಆಳರಸರು ಜನರ ಆರ್ಥಿಕ ಮಟ್ಟವನ್ನು ಉತ್ತಮಪಡಿಸಲು ನೀರಾವರಿ ಯೋಜನೆಗಳನ್ನು ಹಮ್ಮಿಕೊಳ್ಳುತ್ತಿದ್ದರು ಹಾಗೂ ಸಂಕಷ್ಟದ ಸಂದರ್ಭದಲ್ಲಿ ಜನರೊಂದಿಗೆ ಸ್ಪಂದಿಸುತ್ತಿದ್ದರೆಂದು ಸ್ಪಷ್ಟವಾಗುತ್ತದೆ.[೬]

ಕದಂಬರ ಪ್ರಾಚೀನ ಶಾಸನಗಳಲ್ಲಿ ಒಂದಾದ ಚಂದ್ರವಳ್ಳಿ ಶಾಸನವು, ಮಯೂರಶರ್ಮನು ಅಲ್ಲಿಯ ತಟಾಕವನ್ನು ಕಟ್ಟಿಸಿದನೆಂದು ಹೇಳುತ್ತದೆ. ಆದರೆ ಅಸ್ತಿತ್ವದಲ್ಲಿದ್ದ ಕೆರೆಯನ್ನು ಮಯೂರಶರ್ಮನು ಭದ್ರಪಡಿಸಿದನೆಂಬ ಅಭಿಪ್ರಾಯವೂ ಇತ್ತೀಚೆಗೆ ಚಾಲ್ತಿಯಲ್ಲಿದೆ.[೮] ಅದೇ ರೀತಿ ಪ್ರಣವೇಶ್ವರ ದೇವಾಲಯದ ಮುಂದಿರುವ ಕಾಕುತ್ಸವರ್ಮನ ತಾಳಗುಂದ ಸ್ತಂಭಶಾಸನವು ಕುಡಿಯುವ ನೀರಿನ ಕೆರೆಯ ಬಗ್ಗೆ ಪ್ರಸ್ತಾಪಿಸುತ್ತದೆ. ಗುಡ್ಡಾಪುರವು ಬನವಾಸಿಯ ವಾಯುವ್ಯಕ್ಕೆ ೫ ಕಿ.ಮೀ ದೂರದಲ್ಲಿದೆ. ಶಾಸನದಲ್ಲಿ ದಿನಾಂಕವಿಲ್ಲದಿದ್ದರೂ ಬಹುಶಃ ಆರನೆಯ ಶತಮಾನದ ಪ್ರಾರಂಭ ಕಾಲದ್ದಾಗಿರಬಹುದು. ಇದರ ಪ್ರಕಾರ ಮೃಗೇಶವರ್ಮನ ಮಗ ರವಿವರ್ಮನು ಗುಡ್ಡ ತಟಾಕ ಎಂಬ ದೊಡ್ಡ ಕೆರೆಯನ್ನು ಕಟ್ಟಿಸಿದನು. ಹಳ್ಳಿಯ ಹೆಸರೂ ಸಹ ಕೆರೆಯಿಂದಾಗಿಯೇ ಬಂದಿದೆ.

ಹಲಸಿ ಶಾಸನದ ಪ್ರಕಾರ ಕದಂಬರ ಬಿಂದುಸೇನ ಮತ್ತು ಕೃಷ್ಣವರ್ಮ ಎಂಬಿಬ್ಬರು ಶಾಂತಿ ತಟಾಕವನ್ನು ನಿರ್ಮಿಸಿದ್ದರು. ರಾಷ್ಟ್ರಕೂಟ ದೊರೆ ಮೂರನೇ ಗೋವಿಂದನ ನರಗುಂದದ ದಂಡಾಪುರ ಶಾಸನವು ಪೆರ್ಗೆರೆಯನ್ನು ಜೀರ್ಣೋದ್ಧಾರ ಮಾಡಿದುದರ ಬಗ್ಗೆ ಹಾಗೂ ಸ್ಥಳೀಯ ಕೆರೆಗೆ ಒಟ್ಟು ೨೪ ಮತ್ತರ್ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಮರೊಬ ಶಾಸನವು ವಿಕ್ರಮಾದಿತ್ಯನ ಸಹೋದರ ನೊಳಂಬಾದಿ ರಾಜ ಜಯಸಿಂಹನಿಂದ ಕಟ್ಟಲ್ಪಟ್ಟ ನೊಳಂಬ ಸಮುದ್ರಕ್ಕೆ ನಿರ್ವಹಣಾ ದಾನವನ್ನು

ನೀಡಿದುದನ್ನು ಪ್ರಸ್ತಾಪಿಸುತ್ತದೆ. ತಡಂಗಾಲ ಮಾದವನ ತಾಮ್ರಪತ್ರ ಶಾಸನವು ಕ್ರಿ.ಶ.೫ನೆಯ ಶತಮಾನದ್ದಾಗಿದ್ದು, ಅದು ಮಾದುಕಟ್ಟೂರು ಎಂಬ ಹಳ್ಳಿಯೊಂದನ್ನು ದತ್ತಿಯಾಗಿ ನೀಡಿದುದನ್ನು ಮತ್ತು ಅದಕ್ಕೆ ಹಿರಿಯ ಕೆರೆಯಿಂದ ನೀರಿನ ಸೌಲಭ್ಯವಿದ್ದುದರ ಬಗ್ಗೆ ಪ್ರಸ್ತಾಪಿಸುತ್ತದೆ. ಶಾಸನವೊಂದು ಮುಗುಂದ ಮೂವತ್ತರ ಪ್ರದೇಶದಲ್ಲಿ ಅಲ್ಲಿಯ ದೊರೆ ಚಾವುಂಡರಾಯನೆಂಬಾತ ಮಾಡಿಸಿದ ಅನೇಕ ಲೋಕೋಪಕಾರದ ಸಾಧನೆಗಳನ್ನು ಪರಿಚಯಿಸುತ್ತದೆ. ಅದರಲ್ಲಿ ಕೆರೆಯೂ ಸೇರಿದೆ. ಇಲ್ಲಿ ಅರಸನಿಗೆ ತಾನು ಜನಕ್ಕೆ ಲೋಕೋಪಕಾರಿ ಎಂದು ಕಾಣಿಸಿಕೊಳ್ಳುವ ಹೆಬ್ಬಯಕೆ ಇರುವುದು ಸ್ಪಷ್ಟವಾಗುತ್ತದೆ.

ಬನ್ನಿಯೂರೆಂಬ ಅಗ್ರಹಾರದ ಕೆರೆಯು ಪದೇ ಪದೇ ಒಡೆದು ಹೋಗುತ್ತಿದ್ದಿತು. ಬಹುಶಃ ಆ ಕೆರೆಯನ್ನು ದುರಸ್ತಿಪಡಿಸುವ ಶಕ್ತಿ ಆ ಊರಿಗೆ ಇರಲಿಲ್ಲ. ಆಗ ಅಲ್ಲಿಯ ಮಹಾಜನರೆಲ್ಲವೂ ಒಟ್ಟಾಗಿ ಸೇರಿ ರಾಜನ ಬಳಿ ಬಂದು ಹಿಂದಿನ ಹಲವು ರಾಜರು ಎಷ್ಟು ಸಾರಿ ಕಟ್ಟಿಸಿದರೂ ಅದು ನಿಲ್ಲುತ್ತಿರಲಿಲ್ಲ. ಅದು ನಿಲ್ಲಬೇಕಾದರೆ ಧರ್ಮರಾಜನಾದ ನಿನ್ನ ಹೆಸರಿನಲ್ಲಿ ಕಟ್ಟಿಸಬೇಕು. ಊರಿನ ಜನ ಸುಖವಾಗಿದ್ದರೆ ಅದರ ಪುಣ್ಯ ನಿನಗೆ ಬರುತ್ತದೆ ಎಂದು ಹೊಗಳುತ್ತಾರೆ. ಆಗ ರಾಜನು 'ಅದೇನು ಮಹಾ' ಎಂದು ಜಕ್ಕ ಗೋಸಿಯ ಕೈಯಲ್ಲಿ ಹಣವನ್ನು ಕೊಟ್ಟು ಕೆರೆಯನ್ನು ಕಟ್ಟಿಸಿ ಅದಕ್ಕೆ 'ತಂಬ ಸಮುದ್ರ'ವೆಂದು ಹೆಸರಿಡುತ್ತಾನೆ. ಕೆರೆಯ ವಿಷಯವಾಗಿ ಊರಿನ, ಅದಕ್ಕಿಂತ ಹೆಚ್ಚಾಗಿ ರಾಜನಿಗೆ ಇದ್ದ ಆಸಕ್ತಿಯು ಇಲ್ಲಿ ರೂಪುಗೊಂಡಿದೆ. ಆದರೆ ಊರಿನ ಜನ ಅರಸನಲ್ಲಿ ಕೆರೆಯ ಪರಿಸ್ಥಿತಿಯ ಬಗ್ಗೆ ಪ್ರಸ್ತಾಪಿಸಿ ಗಮನಸೆಳೆದಾಗ ಮಾತ್ರ ಆಸಕ್ತಿ ಗರಿಗೆದರಿ ಕ್ರಮಕೈಗೊಳ್ಳುವುದಕ್ಕೆ ಮುಂದಾಗಿರುವುದನ್ನು ಗಮನಿಸಬಹುದು. ಅಂದರೆ ಪ್ರಜೆಗಳಿಂದ ಪ್ರಸ್ತಾಪ ಬಂದಾಗ ಮಾತ್ರ ಜವಾಬ್ದಾರಿಯೆಂಬಂತೆ ಪರಿಭಾವಿಸುತ್ತಿದ್ದುದು ಅರಿವಾಗುತ್ತದೆ.

'ಬನ್ನಿಯೂರಲೆರಡೂ ಗ್ರಾಹೆಯ ಸಿದ್ಧಾಯದ ಪೊನ್ನ
ಜಕ್ಕಗೋಸಿಯ ಕಯೊಳೆಕೊಟ್ಟು ಕೆರೆಯಂ ಕಟ್ಟಿಸಿ
ತಂಬ್ರ ಸಮುದ್ರವೆಂಬ ಪೆಸರನಿಟ್ಟು'

ನೀರಿನ ಸದುಪಯೋಗಕ್ಕೆ ಹಳ್ಳಿಯ ಹಳೆ ಕೆರೆಯನ್ನು ದುರಸ್ತಿ ಮಾಡುವುದೂ ಒಂದು. ದೋರಸಮುದ್ರದಲ್ಲಿ ಸತ್ಸುಖ ಸಂಕಥಾಬಿನದಿಂ ರಾಜ್ಯಂಗೆಯ್ಯುತ್ತಿದ್ದ ಜೀವದಯೋಪೇತವಾದ ವಿನಯಾಧಿತ್ಯ ಪೊಯ್ಸಳನು ದೋರಸಮುದ್ರಕ್ಕೆ ಕ್ರಿಶ ೧೦೬೨-೬೩ರಲ್ಲಿ ಮೇಲಕ್ಕವನ್ನು ಕಟ್ಟಿಸಿದನು. ಮುಂದೆ ಕ್ರಿಶ ೧೪೯೭-೯೮ರಲ್ಲಿ ಕೆರೆಗೆ ತೂಬನ್ನು ಮಾಡಿಸಿದನು. ಇದರ ಉಲ್ಲೇಖ ಕೆರೆಯ ಮಧ್ಯದ ತೂಬಿನ ಪಕ್ಕದಲ್ಲಿ ಬಿದ್ದಿರುವ ಬೋದಿಗೆಯ ಶಾಸನದಲ್ಲಿ ಬಂದಿದೆ.[೯] ಗಂಗವಾಡಿ ೯೬,೦೦೦ದಲ್ಲಿ ಎರೆಯಂಗನ ತಂದೆಯಷ್ಟು ಧರ್ಮಿ ಯಾರಿದ್ದಾರೆ? ಎಂದು ಪ್ರಶ್ನಿಸುವ ಶಾಸನವು ತೋಡಿದ ತೊರೆಗಳು ಮತ್ತು ಕುಳಿಗಳು ಕೆರೆಯಾದವು ಎಂದು ವರ್ಣಿಸುತ್ತದೆ. ಇದರಿಂದ ಹೊಯ್ಸಳೋದಯ ವಲಯದಲ್ಲಿ ಕೆರೆ ನಿರ್ಮಾಣ ಎಷ್ಟೊಂದು ಸಾಮಾನ್ಯವಾಗಿತ್ತು ಎಂಬುದು ಅರಿವಾಗುತ್ತದೆ. "ತೊರೆಯನಿತುಂ ಕುಳಿಯನಿತುಂ ಕೆರೆಯಾದವು" ಎನ್ನುವ ಶಾಸನೋಕ್ತಿಯಂತೆ

ವಿನಯಾದಿತ್ಯ ಕ್ರಿ.ಶ.೧೧೦೬ರಲ್ಲಿ ತೊರೆಯನ್ನು ತಿರುಗಿಸಿ ಅದನ್ನು ಮತ್ತಾವರದ ತನಕ ತರುವ ಕೆಲಸವನ್ನು ಮಾಡಿದ್ದಾನೆಂಬುದು ಸ್ಪಷ್ಟವಾಗುತ್ತದೆ.

**ಮಂತ್ರಿಗಳು, ಮಹಾಪ್ರಧಾನರು ಮತ್ತು ದಂಡನಾಯಕರು**

ಮಂತ್ರಿಗಳು, ಮಹಾ ಪ್ರಧಾನರು ಮತ್ತು ದಂಡನಾಯಕರೂ ಸಹ ಕೆರೆಗಳನ್ನು ಕಟ್ಟಿಸಲು ಆಸಕ್ತಿ ತೋರಿರುವುದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಗಂಗ ದೊರೆಯಾಗಿದ್ದ ಮಾರಸಿಂಹನ ಶಾಸನದ ಪ್ರಕಾರ ಅವರ ಮಂತ್ರಿಯು ಪಿರಿಯ ಕೆರೆಯನ್ನು ಕಟ್ಟಿಸಿ, ಅದಕ್ಕೆ ನಾಲ್ಕು ಖಂಡುಗ ಜಮೀನನ್ನು ದತ್ತಿ ಬಿಟ್ಟನು. ಕ್ರಿ.ಶ.೧೧೮೬ರಲ್ಲಿ ಶ್ರೀ ಮನ್ಮಹಾಪ್ರಧಾನಂ ಸರ್ವಾಧಿಕಾರಿ ಈ ಕರಣಾಗ್ರಣ್ಯಂ ಸರ್ವಾಧ್ಯಕ್ಷನೆನಿಸಿದ ವೀರಯ್ಯ ದಂಡನಾಯಕನು ಕಾಡು ಕಡಿದು ಮಾಡಿದ ಶ್ರೀ ವೀರಬಲ್ಲಾಳಪುರದೊಳು ರುದ್ರಸಮುದ್ರ, ಗಂಗಸಮುದ್ರ, ವೀರಸಮುದ್ರ ಮತ್ತು ಅಚ್ಯುತಸಮುದ್ರಗಳೆಂಬ ಕೆರೆಗಳಂ ಕಟ್ಟಿಸಿದುದು ಬೇಲೂರಿನ ವೀರದೇವನಹಳ್ಳಿಯ ಶಾಸನದಲ್ಲಿ ಬಂದಿದೆ.[೫೦]

ಹಿರಿಯ ದಂಡನಾಯಕ ಗಂಗಪ್ಪಯ್ಯ ಕನ್ನೆಗಾಲ ಕದನದಲ್ಲಿ ಜಯ ಗಳಿಸಿದಕ್ಕಾಗಿ ಗಂಗ ಸಮುದ್ರವನ್ನು ಕಟ್ಟಿಸಿ, ದೇವರಿಗೆ ದತ್ತಿ ಬಿಟ್ಟನು. ಇಲ್ಲಿ ಅಚಲವಾಗಿದ್ದ ಧಾರ್ಮಿಕ ನಿಷ್ಠೆಯೇ ಪ್ರಬಲವಾಗಿರುವುದು ಸ್ಪಷ್ಟವಾಗುತ್ತದೆ.

ಈ ಶೆಟ್ಟಿಗಳು ಇತರ ವ್ಯಾಪಾರಿಗಳೊಂದಿಗೆ ಸೇರಿ ಈ ಕೆರೆಯ ಕೆಲಸದ ಸಲುವಾಗಿ ಭೂಮಿಯನ್ನು ಬಿಟ್ಟುಕೊಟ್ಟರೆಂಬ ವಿಷಯವು ತಿಳಿಯುತ್ತದೆ. ಈ ಗೋಣಿಸಮುದ್ರವೇ ಇಂದಿನ ಡಂಬಳಕೆರೆ. ಬೆಳ್ಳೂರಿನಲ್ಲಿ ದೊರೆತಿರುವ ಶಾಸನವು ಪೆರುಮಾಳು ದಣ್ಣಾಯಕನ ಸೇವೆಯನ್ನು ದಾಖಲಿಸುತ್ತದೆ. ಇದರ ಪ್ರಕಾರ ಮೂರನೇ ನರಸಿಂಗ ಆಳುತ್ತಿರುವಾಗ ೧೨೬ರಲ್ಲಿ ಪೆರುಮಾಳದೇವನು ಬೆಳ್ಳೂರಿನಲ್ಲಿ ಹೆಚ್ಚಿನ ಹಣವನ್ನು ಖರ್ಚು ಮಾಡಿ ಅಳ್ಳಾಳ ಸಮುದ್ರ, ಅವ್ವೆಯ ಕೆರೆ, ತಗರ್ಜ ಗೆರೆ ಮತ್ತು ಕಾಲುವೆಯನ್ನು ನಿರ್ಮಿಸಿದನು. ಇದರಿಂದ ಶಾಶ್ವತ ನೀರು ಸರಬರಾಜು ಸಾಧ್ಯವಾಯಿತು. ಅಂತೆಯೇ ತಂಬಿಯಣ್ಣ ಮತ್ತು ತಿರುವೆಂಗದ ಪೆರುಮಾಳ್ ಹಾಗೂ ಮಹಾಜನರ ನಡುವೆ ಒಪ್ಪಂದ ನಡೆಯಿತು. ತಮ್ಮ ಒಣ ಜಮೀನನ್ನು ತ್ಯಜಿಸಿ ಅದರ ಬದಲಿಗೆ ಕಾಲುವೆ ಕೆಳಗಿನ ನೀರಾವರಿ ಜಮೀನನ್ನು ಪಡೆದರು. ಅದರ ಪ್ರತಿಫಲವಾಗಿ ವಾರ್ಷಿಕ ನಿಬಂಧದಂತೆ ಪ್ರತಿ ಖಂಡುಗಕ್ಕೆ ನಾಲ್ಕು ಹಣ ಬಿಟ್ಟು ವಟ್ಟ ಕೊಡಲು ಒಪ್ಪಿದರು. ಹಾಗೆಯೇ ಸದಾಕಾಲ ನೀರಿನ ಸೌಲಭ್ಯ ದೊರಕುವಂತಾಗಲು ನಿರ್ದಿಷ್ಟ ಹಣವನ್ನು ಅಧಿಕಾರಿಗಳಿಗೆ ಮತ್ತು ಗೌಡರಿಗೆ ನೀಡಲು ಒಪ್ಪಿದುದು ದಾಖಲಾಗಿದೆ.

ಮಹಾಪ್ರಧಾನ ಕೇಶಿರಾಜ ಚಮುಪತಿಯ ನೇತೃತ್ವದಲ್ಲಿ ಕೇಶವಪುರ ಅಗ್ರಹಾರದ ಜೊತೆಗೆ ಕೇಶವ ಸಮುದ್ರ ಮತ್ತು ಲಕ್ಷ್ಮೀ ಸಮುದ್ರ ಕೆರೆಗಳು ಅಸ್ತಿತ್ವಕ್ಕೆ ಬಂದವು. ಮಂತ್ರಿಯ ಇಬ್ಬರು ಮಕ್ಕಳು ಮತ್ತು ದಂಡನಾಯಕರು ಕೂಡಿ 'ದಸವಾನಿ' ಗ್ರಾಮದಲ್ಲಿ ಕೆರೆಯನ್ನು ಕ್ರಿ.ಶ.೧೯೯೦ರಲ್ಲಿ ಕಟ್ಟಿಸಿದರು. ದಂಡನಾಯಕ ಪೋಚಿಮಯ್ಯನು ಬಿರುವುರದಲ್ಲಿ ತನ್ನ ವಾಸ್ತವ್ಯವನ್ನು ಹೊಂದಿ ಎರೆಯಕೆರೆ, ಮಚ್ಚೇರು ಮತ್ತು ತೆಲ್ಲಿಗನ ಕೆರೆಯಲ್ಲಿ ತನ್ನ ಸರ್ಕಾರನ್ನು ಹೊಂದಿ, 'ಕೆರೆಯಂ ಕೆರೆಯ ತುಂಬುಗಳ ಮುಂಬಾವಿಗಳು ಮಂ ಮಾಡಿ ಯೂರೋಡೆವಾಳ್ಕೆಯುಂ ಮೇಲಾಳ್ಕೆಯಂ' ನಡೆಸುತ್ತಿದ್ದನೆಂದು ಕ್ರಿ.ಶ.೧೦೬೩ರ ಬೀರೂರು ಶಾಸನದಲ್ಲಿ ಬಂದಿದೆ. ಅಂದರೆ, ಊರಿನ ಆಳ್ವಿಕೆಯನ್ನು ಮಾಡಲು

ಇಂತಹ ಕೆಲಸಗಳೂ ಸಹಾಯಕವಾಗಿದ್ದವೇ? ಅಥವಾ ಪೂರಕವಾಗಿದ್ದವೇ? ಆಗಿತ್ತು ಎಂಬ ವಿಚಾರಾಭಿಪ್ರಾಯ ಬರದೇ ಇರದು. ತಾವರಕೆರೆಯಲ್ಲಿ ಆಳುತ್ತಿದ್ದ ಮಹಾಪ್ರಧಾನನು ಅಲ್ಲಿ ಕ್ರಿ.ಶ.೧೮೯೪ರಲ್ಲಿ ಕೆರೆಯೊಂದನ್ನು ಕಟ್ಟಿಸಿದನು. ಮಹಾಪ್ರಧಾನ ಮನೆವೆಗ್ಗಡೆ ಕುಂದ ಮಾರಾಯನು ಕನ್ನೆಗೆರೆಯನ್ನು ಕಟ್ಟಿ ಶಿವಾಲಯ ಎತ್ತಿಸಿ ಮೆಂದೇಶ್ವರ ದೇವರ ಪೂಜೆ 'ನಿವೇದ್ಯಕ್ಕಂ' ೬ ಸಲಗೆ ಗದ್ದೆಯನ್ನು ಬಿಟ್ಟಿದ್ದಾನೆ.

ವಿಜಯನಗರ ಕಾಲದ ಆಚ್ಯುತದೇವರಾಯನ ಮಹಾ ಅಮಾತ್ಯನಾಗಿದ್ದ ಬಯಕಾರ ರಾಮಪ್ಪಯ್ಯನು ತನ್ನ ಜೀವಾವಧಿಯಲ್ಲಿ ಹಲವಾರು ಅಗ್ರಹಾರ, ದೇವಾಲಯಗಳನ್ನು ನಿರ್ಮಿಸುವುದರೊಂದಿಗೆ ಅಕ್ಕಸಮುದ್ರ, ಲಕ್ಕಸಮುದ್ರ ಮೊದಲಾದ ಕೆರೆಗಳನ್ನು ನಿರ್ಮಿಸಿರುವುದನ್ನು ಸಹ ನಾವಿಲ್ಲಿ ಸ್ಮರಿಸಿಕೊಳ್ಳಬಹುದು.[೫೧]

ಕೆರೆ ನಿರ್ಮಾಣದಲ್ಲಿ ಮತ್ತೊಂದು ಪ್ರಮುಖ ಹೆಸರೊಂದು ಸಕಲೇಶ ಮಾದರಸರ ಮೊಮ್ಮಗನಾದ **ಕೆರೆಯ ಪದ್ಮರಸನದು.** ಈತ 'ದೀಕ್ಷಾಬೋಧೆ' ಎಂಬ ಗ್ರಂಥ ಬರೆದಿದ್ದಾನೆ. ಇವನು ಹರಿಹರ ಮತ್ತು ರಾಘವಾಂಕರೊಂದಿಗೆ ಗುರುತಿಸಲ್ಪಡುತ್ತಿರುವ ತ್ರಿಮೂರ್ತಿಗಳಲ್ಲಿ ಒಬ್ಬ. ವೀರಶೈವ ಕವಿಯಾದ ಇವನು ಹೊಯ್ಸಳರ ನರಸಿಂಹ ಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಸುಮಾರು ೧೧೬೫ರಲ್ಲಿ ಮಂತ್ರಿಯಾಗಿದ್ದನು. ಕೆರೆಯ ಪದ್ಮರಸನು ಪವಾಡವನ್ನು ಮಾಡಿ ಕೆರೆ ಕಟ್ಟಿಸಿ, ಕೆರೆಯ ಪದ್ಮರಸನೆಂದಾದನೆಂದು 'ಚೆನ್ನಬಸವ ಪುರಾಣ'ದಲ್ಲಿ ಬಂದಿದೆ. ಪದ್ಮರಸನು ಬೇಲೂರಿನಲ್ಲಿ ಒಂದು ಕೆರೆಯನ್ನು ಕಟ್ಟಿಸುವುದಕ್ಕಾಗಿ ದೊರೆಯ ಭಂಡಾರದಿಂದ ೧೨,೦೦೦ ಹೊನ್ನುಗಳನ್ನು ತೆಗೆದುಕೊಂಡು ಶಿವರೂಪಿಯಾದ ಒಬ್ಬ ಜಂಗಮ ಭುಜಂಗನಿಗೆ ಕೊಟ್ಟು ಬಿಡಲು ಜನರು ಈ ಸಂಗತಿಯನ್ನು ದೊರೆಗೆ ಹೇಳಿದಾಗ, ಅವನು ಪದ್ಮರಸನನ್ನು ಕರೆಯಿಸಿ ಕೇಳಲು, ಗರ್ದೆ ತೋಂಟಗಳೊಡನೆ ಕೆರೆ ಸಿದ್ಧವಾಗಿದೆ ಬಂದು ನೋಡಬಹುದು ಎಂದು ಹೇಳಿ ದೊರೆಯೊಡನೆ ಬೇಲೂರಿಗೆ ಹೋಗಿ ಅಲ್ಲಿ ಪವಾಡವನ್ನು ಮಾಡಿ ಕೆರೆಯನ್ನು ತೋರಿಸಿ, ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡಿದನು. ಇವನ ಧ್ಯಾನದಿಂದ ಗಂಗೆಯೇ ಅಲ್ಲಿ ಬಂದು, ಆಕಾಶದಿಂದ ಬಿದ್ದಿತು. 'ಅಸಮಾಕ್ಷನಿಂದ ಬಿಟ್ಟಿಗೆ ಕಟ್ಟಿಸಿದ ಕತದಿ' ಈ ಕೆರೆಗೆ ಬಿಟ್ಟಿ ಸಮುದ್ರವೆಂದು ಹೆಸರು ಬಂತು. ಇದನ್ನು ಕಟ್ಟಿಸಿದುದರಿಂದಲೇ ಈತನಿಗೆ ಕೆರೆಯ ಪದ್ಮರಸನೆಂಬ ಹೆಸರು ಬಂದಿತು.[೫೨] ಪವಾಡದ ಅಧಿಕೃತತೆ ಏನೇ ಇರಲಿ ಕೆರೆಯ ಕಾಮಗಾರಿಯು ಮಂತ್ರಿ ಪದ್ಮರಸನಿಂದ ಜರುಗಿರಬೇಕೆಂಬುದನ್ನು ಊಹಿಸಬಹುದು. ಹೊಯ್ಸಳ ಅರಸ ಬಿಟ್ಟಿದೇವನ ಹೆಸರಿನಲ್ಲಿ ಅಥವಾ ಪುನರುಜ್ಜೀವನ ಮಾಡಿರಬಹುದಾದ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ.

**ಗೌಡರು-ಗಾವುಂಡರು ಮತ್ತು ನಾಳ್ಗಾವುಣ್ಡರು**

ಗ್ರಾಮದ ಮುಖಂಡರಾದ ಗಾವುಂಡಗಳೂ ಸಹ ಕೆರೆಯನ್ನು ಕಟ್ಟಿಸಲು ಆಸಕ್ತಿ ವಹಿಸುತ್ತಿದ್ದ ಸಂಗತಿಯನ್ನು ಶಾಸನಗಳು ದೃಢಪಡಿಸಿವೆ. ಸಾಮಾನ್ಯವಾಗಿ ಕೆರೆ ಮತ್ತು ದೇವಾಲಯಗಳನ್ನು ಒಬ್ಬಾತನೇ ಕಟ್ಟಿಸಿರುವುದು ಶಾಸನಗಳಲ್ಲಿ ಗೋಚರವಾಗುತ್ತದೆ. ಗ್ರಾಮಕ್ಕೊಂದಾದರೂ ಕೆರೆ ಮತ್ತು ದೇಗುಲ ಇರಬೇಕೆಂಬ ಭಾವನೆ ಅಂದು ಸ್ಥಾಯಿಯಾಗಿ ಇದ್ದುದರಿಂದಲೇ ಎರಡರ ಉಲ್ಲೇಖ ಒಟ್ಟೊಟ್ಟಿಗೇ ಕಾಣಿಸಿಕೊಳ್ಳುತ್ತದೆ. ಗ್ರಾಮದ ಮುಖಂಡನಾದ ಗಾವುಂಡರಿಗೆ ತನ್ನ ಗ್ರಾಮದ ಏಳಿಗೆ

ಪ್ರಾಥಮಿಕ ಮಹತ್ವದ್ದಾಗಿ ಇದ್ದುದರಿಂದಲೇ ಅವರು ನೀರಾವರಿ ಯೋಜನೆಗಳಲ್ಲಿ ಸ್ವತಃ ಗಮನಹರಿಸುತ್ತಿದ್ದರು. ಕೆಲವೊಮ್ಮೆ ಸಂದರ್ಭಾನುಸಾರ ಕೆರೆಯ ಜೀರ್ಣೋದ್ಧಾರ ಮಾಡಿದ ಉಲ್ಲೇಖಗಳು ಸಹ ಇವೆ. ಗ್ರಾಮದ ಮುಖ್ಯಸ್ಥನಾದ ಗಾವುಂಡನ ಸಾನಿಧ್ಯದಲ್ಲಿ ಹಲವು ಸಾರ್ವಜನಿಕ ಜನೋಪಯೋಗಿ ಕಾರ್ಯಗಳು ನಡೆಯುತ್ತಿದ್ದವು. ಗ್ರಾಮದಲ್ಲಿ ನಿರ್ಮಾಣ, ಭೂದಾನ ಇಲ್ಲವೆ ಇತರೆ ದಾನದತ್ತಿಗಳನ್ನು ಮಾಡಿದಾಗ ಅಲ್ಲಿ ಗಾವುಂಡರು ಇರಬೇಕಾಗಿದ್ದಿತು. ಇವನಿಲ್ಲದೆ ಯಾವುದೂ ಸಿಂಧುವಾಗುತ್ತಿರಲಿಲ್ಲ. ಏಕೆಂದರೆ ಅರಸನೋ, ಸಾಮಂತರೋ ಅಥವಾ ಇತರರೋ ಕೆರೆ, ಬಾವಿ ಅಥವಾ ದೇವಾಲಯಗಳನ್ನು ಕಟ್ಟಿಸಬಹುದು. ದಾನದತ್ತಿಗಳನ್ನು ನೀಡಬಹುದು. ಆದರೆ ಅದನ್ನು ಕಾಯ್ದುಕೊಂಡು ಹೋಗುವ ಗುರುತರ ಹೊಣೆ ಮತ್ತೆ ಗಾವುಂಡರ ಮೇಲೆಯೇ ಇತ್ತು. ಆದ್ದರಿಂದ ಗಾವುಂಡರ ಪಾತ್ರ ಗಮನಾರ್ಹವಾದುದ್ದಾಗಿತ್ತು.

ಅರಸನಾದ ಪೊಯ್ಸಳ ದೇವನ ಸಾನಿಧ್ಯದಲ್ಲಿ ಪೊಯ್ಸಳ ಗಾವುಂಡನು ಕೆರೆ ಕಟ್ಟಿಸಿ, ಶಿವ ದೇವಾಲಯವನ್ನು ಕ್ರಿ.ಶ.೧೦೭೪ರಲ್ಲಿ ನಿರ್ಮಿಸಿದನು. ಅವನು ಹಾಸನದ ನಿಟ್ಟೂರಿನಲ್ಲಿ ಬೂವಗಾವುಣ್ಡನು ದೇಗುಲಮ ನೆತ್ತಿಸಿ ಕೆರೆಯಂ ಕಾಲುಮಂ ಕಟ್ಟಿಸಿ ಕೊಟ್ಟಿದ್ದಾನೆ. ಕೋಬೇಶ್ವರ ದೇವರಿಗೆ ಹೊಯ್ಸಳ ಬಲ್ಲಾಳನು ದೇವ ರಂಗಭೋಗಕ್ಕೆ ಬನದ ತೆರೆಯ ಬಾಗವಂ ಬಿಟ್ಟ. ಆಗ ಕೋಬೆಗಾವುಂಡನು ಕೋಬೇಶ್ವರ ದೇವರ ಮುಂದಣಕೆರೆಯ ಪಿತೃಬ್ರಯವಾಗಿ ಮಾಡಿಸಿ ಬಿಟ್ಟಿರುವುದು ದಬ್ಬೆ ಅಗ್ರಹಾರದ ಕ್ರಿ.ಶ.೧೧೦೦-೦೧ರ ಶಾಸನದಲ್ಲಿ ದಾಖಲಾಗಿದೆ.

ಮೊದಲನೆ ನರಸಿಂಹನು ಕಲಿಬವಾಡಿ ಶಾಸನವು ಹಲಬಗೌಡನನ್ನು ಹೆಸರಿಸುತ್ತದೆ. ಅವು ಕನ್ನಗೆರೆಯನ್ನು ಕಟ್ಟಿಸಿ ಅದನ್ನು ಹಳೆಯ ಕೆರೆಯೊಂದಿಗೆ ಸಂಪರ್ಕಿಸಿದನೆಂದು ದಾಖಲಿಸುತ್ತದೆ. ಮಾಚಯ್ಯಗೌಂಡರ್ ರಾಮಾಪುರದಲ್ಲಿ ಕೆರೆಗೆ ತೂಬನ್ನು ನಿರ್ಮಿಸಿದನು. ಹರದಗೌಡನೆಂಬುವವನು ಕುರುಕ್ಕೆ ನಾಡಿನಲ್ಲಿ ಹರದ ಸಮುದ್ರ ಮತ್ತು ದೇವಾಲಯವೊಂದನ್ನು ಕಟ್ಟಿಸಿದನು.

ಎರಡನೆ ಬಲ್ಲಾಳನ ಕಾಲದಲ್ಲಿ ಹೊನ್ನಮಾರಗೌಡ ಎಂಬುವವನು ತಮ್ಮ ತಾಯಿ ಮಾಯಕ್ಕನ ಹೆಸರಿನಲ್ಲಿ ಮಾಚ ಸಮುದ್ರ ಕಟ್ಟಿಸಿದನೆಂದು ೧೩೧೪ರ ಶಾಸನದಿಂದ ತಿಳಿಯುತ್ತದೆ. ಕ್ರಿ.ಶ.೧೨೦೩ರಲ್ಲಿ ಗೊಡಚಿಕೊಂಡ ಗ್ರಾಮದ ಬಮ್ಮಗೌಡನು ಗೌಡಗೆರೆಯನ್ನು ಸಮುದ್ರ ಸಮಾನವಾಗಿ ಕಟ್ಟಿಸಿದನು. ಮೊದಲ್ಗಟ್ಟದ ಬಾಸಗಾವುಂಡನು ಅನ್ವಾತಂ ನಾಳ್ಗಾವುಣ್ಡತನ ಗೆಯ್ಯುತ್ತಮಿಣ್ಣು ರಣಕಿಯ ಕಟ್ಟದ ಊರಂ ಮಾಡಿಸಿ, ಬಳ್ಳಿಗೆರೆಯಂ ಕಟ್ಟಿಸಿ, ಎರವಕಾವನೆಂಬ ಗದ್ದೆಯಂ ಮಾಡಿ, ಬಾರ್ಚೆಶ್ವರಯೆಂಬ ದೇವಾಲ್ಯಮನೆತ್ತಿಸಿ ದೇವಸ್ವಕ್ಕೆಂದು ದತ್ತಿ ಬಿಟ್ಟಿದ್ದಾನೆ. ತೌವತಿ ಗೌಡನು ದೇವಾಲಯ ಜೀರ್ಣೋದ್ಧಾರ ಮಾಡುವುದರೊಂದಿಗೆ ಕೆರೆಯನ್ನು ಅಗಲಿಸಿದ್ದು ಮುಂತಾದ ನೀರಿನ ಸದುಪಯೋಗಕ್ಕೆ ಕೈಗೊಂಡ ಕ್ರಮಗಳನ್ನು ಹೆಸರಿಸಬಹುದು.

**ಸಾಮಂತರು ಮತ್ತು ಇತರೆ ಅಧಿಕಾರಿಗಳು**

ರಾಜ ಇಲ್ಲವೇ ರಾಜ ಪರಿವಾರದವರನ್ನು ಹೊರತುಪಡಿಸಿ ಸಾಮಂತರು ಮತ್ತು ಇತರೆ ಅಧಿಕಾರಿಗಳು ಕೆರೆ ನಿರ್ಮಾಣ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಆ ಕುರಿತ ಕೆಲ ಪ್ರಮುಖ ವಿವರ ಇಲ್ಲಿದೆ.

**ಸಾಮಂತರು**

ರಾಜ ಪರಿವಾರದವರಂತೆ ನಾಡನ್ನು ಆಳಿದ ಸಾಮಂತರು ಸಹ ಹಲವಾರು ಕೆರೆಗಳನ್ನು ನಿರ್ಮಿಸಿದ್ದಾರೆ. ಇಡೀ ಕರ್ನಾಟಕದಲ್ಲೇ ಹೆಚ್ಚಿನ ಸಂಖ್ಯೆಯ ಕೆರೆಗಳನ್ನು ಕಟ್ಟಿದ ಸಾಮಂತರೆಂದರೆ ನೊಳಂಬ ಪಲ್ಲವರು. ಇವರ ನಿರ್ಮಿಸಿದ ಕೆರೆಗಳು ತುಮಕೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಹರಡಿಕೊಂಡಿವೆ. ಈ ಭಾಗದ ಇತರ ಸಾಮಂತರೆಂದರೆ ಅರಣಿಯ ಸೆಲ್ವಗಂಗರು, ತಾಡಿಗೋಲ, ಸುಗಟೂರು, ತೇಲ್ಕಲ್, ಮಹಾಬಲಿ ಬಾಣರು, ಕೊರಟಗೆರೆ, ಚಿಕ್ಕಬಳ್ಳಾಪುರ ಮತ್ತು ಆವಂತಿ ಪ್ರಭುಗಳು. ಗುಮ್ಮಿ ನಾಯಕನ ಪಾಳ್ಯದ ಮುಸ್ಥರು ಮತ್ತು ಮರಾಠ ನಾಯಕರೂ ಸಹ ಕೆರೆ ನಿರ್ಮಾಣದಲ್ಲಿ ತೊಡಗಿಸಿಕೊಂಡಿದ್ದರು. ಅದೇ ರೀತಿ ಹಾಸನ ಜಿಲ್ಲೆಯಲ್ಲಿ ಕೊಂಗಾಳ್ವರು, ಚೆಂಗಾಳ್ವರು ನಂತರ ಕದಂಬರು, ಜಾವಗಲ್ಲು, ಹೊಳೆನರಸೀಪುರ ಮತ್ತು ಐಗೂರು ನಾಯಕರು ಅಧಿಕಾರ ಹೊಂದಿದ್ದರು. ಇವರುಗಳು ಕೆರೆಕಟ್ಟೆ ಕಾಲುವೆಗಳನ್ನು ಕಟ್ಟಿಸಿದ್ದಾರೆ. ಶಿವಮೊಗ್ಗ ಜಿಲ್ಲೆಯಲ್ಲಿ ಕಂಡುಬರುವ ಕೆರೆಗಳನ್ನು ಹೇರಳವಾಗಿ ನಿರ್ಮಿಸಿದ ಸಾಮಂತರೆಂದರೆ, ಸಾಂತರರು, ಕೆಳದಿ ಅರಸರು, ಸಂತೆಬೆನ್ನೂರು ನಾಯಕರು, ಸಿಂಧರು ಮುಖ್ಯರಾಗಿದ್ದು, ಇವರು ಸಹ ಕೆರೆಕಟ್ಟೆ ನಿರ್ಮಾಣ ಮತ್ತು ಪುನರುಜ್ಜೀವನದಲ್ಲಿ ತೊಡಗಿಸಿಕೊಂಡು ಈ ಪ್ರದೇಶದ ಸಂಪದಭಿವೃದ್ಧಿಗೆ ಕಾರಣರಾಗಿದ್ದಾರೆ. ತುಮಕೂರು ಮತ್ತು ಚಿತ್ರದುರ್ಗ ಪ್ರದೇಶಗಳಲ್ಲಿ ಕೆರೆಗಳ ಅಭಿವೃದ್ಧಿಗಾಗಿ ದುಡಿದ ಹರತಿ ನಾಯಕರು, ಕೊರಟಗೆರೆ ಮತ್ತು ಚಿಕ್ಕಬಳ್ಳಾಪುರ ನಾಯಕರು ತಮ್ಮ ಕಾಲದಲ್ಲಾಗಲೇ ಅಸ್ತಿತ್ವದಲ್ಲಿದ್ದ ಕೆಲವೊಂದು ಕೆರೆಗಳನ್ನು ಪ್ರಸ್ತಾಪಿಸುತ್ತಾರೆ. ಚಿತ್ರದುರ್ಗ ಪ್ರದೇಶದ ರಾಜಕೀಯದಲ್ಲಿ ಸಕ್ರಿಯರಾದವರೆಂದರೆ ಹಟ್ಟಿ ನಾಯಕರು, ಚಿತ್ರದುರ್ಗ, ಮತ್ತಿಕೋಡು ನಾಯಕರು ಮತ್ತು ಉಚ್ಚಂಗಿ ಪಾಂಡ್ಯರು ಕೆರೆಗಳ ನಿರ್ಮಾಣದಲ್ಲಿ ಪ್ರಧಾನ ಪಾತ್ರ ವಹಿಸಿದ್ದಾರೆ. ಮೈಸೂರು ಪ್ರದೇಶದಲ್ಲಿ ಉಮ್ಮತ್ತೂರು ನಾಯಕರು, ಕಳಲೆ ನಾಯಕರು, ಚಂಗಾಳ್ವರು ಪ್ರಮುಖ ಸಾಮಾಂತರಾಗಿದ್ದು, ಅವರು ಸಹ ಕೆಲ ಕೆರೆಗಳನ್ನು ಕಟ್ಟಿ ಪ್ರಜೆಗಳ ಅಭಿವೃದ್ಧಿಯ ರೂವಾರಿಗಳಾದರು. ಚಿಕ್ಕಮಗಳೂರು ಜಿಲ್ಲೆಯಲ್ಲಿ ಆಸಂದಿ ಗಂಗರು, ಕಳಸದ ಮುಖ್ಯಸ್ಥರು, ಆಳುಪರು, ಸೇನವಾರರು, ಸಾಂತರರು ಪ್ರಮುಖವಾಗಿ ಕೆರೆ ನಿರ್ಮಾಣ ಚಟುವಟಿಕೆಯಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ.[೫೩]

**ಹೆಗಡೆಗಳು**

ಕೊಂಡಲೆಯ ಶಾಸನದ ಪ್ರಕಾರ ಪ್ರಭುಶೆಟ್ಟಿ ಮತ್ತು ಜಕ್ಕಿಮಬ್ಬೆಯ ಮಗನಾದ ಹೆಗ್ಗಡೆ ಮಲ್ಲಿಮಯ್ಯನು ಕೆರೆಯೊಂದನ್ನು ಕಟ್ಟಿಸಿದನು. ಚಾವುಂಡಯ್ಯ ಎಂಬ ಪೆರ್ಗಡೆಯು ತೂಬೊಂದನ್ನು ನಿರ್ಮಿಸಿದ ಸಂದರ್ಭದಲ್ಲಿ ತಮ್ಮ ದೊರೆಗಳಂತೆ ಅಧಿಕಾರಿಗಳೂ ಸಹ ಜನರಿಗೆ ನೀರಾವರಿ ಸೌಲಭ್ಯವನ್ನು ಒದಗಿಸುವಲ್ಲಿ ಉತ್ಸುಕರಾಗಿದ್ದಾರೆ ಎಂಬುದನ್ನು ಶಾಸನವೊಂದು ಅರುಹುತ್ತದೆ. ಮೂರನೆಯ ರಾಚಮಲ್ಲನ ಶಾಸನವು ಪೆರ್ಗಡೆ ಸಂಕಯ್ಯ ಕೆರೆಯೊಂದನ್ನು ರಿಪೇರಿ ಮಾಡಿದನೆಂದು ಹೇಳುತ್ತದೆ.

**ಪಟ್ಟಣಸ್ವಾಮಿ**

ಸಾಂತರ ಅರಸು ವೀರಸಾಂತರನ ಶಾಸನವು ಪಟ್ಟಣಸ್ವಾಮಿ ನೊಕ್ಕಯ್ಯನು (ನೊಕ್ಕಿಯ ಸೆಟ್ಟಿ) ಕೆರೆ ಕಟ್ಟಿಸಿ ನೂರು ಗದ್ಯಾಣಗಳಿಂದ ಉಗುರೆ ತೊರೆಯನ್ನು ಕೆರೆಗೆ ಹರಿಯುವಂತೆ ಮಾಡಿದನೆಂದು ಹೇಳುತ್ತದೆ.

**ಸಂಧಿ ವಿಗ್ರಹಿ**

ಗಂಗ ದೊರೆಯಾದ ಎರಡನೆಯ ನೀತಿಮಾರ್ಗನ ಶಾಸನವು ಸಂಧಿ ವಿಗ್ರಹಿಯಾಗಿದ್ದ, ಏಚಯ್ಯನು ಕೆರೆ ಕಟ್ಟಿಸಿ ಅದಕ್ಕೆ ಕಲ್ಲಿನ ತೂಬನ್ನು ನಿರ್ಮಿಸಿದನೆಂದು ಹೇಳುತ್ತದೆ.

**ಶ್ರೀ ಕರಣಾಧಿಕಾರಿ**

ಶ್ರೀ ಕರಣಾಧಿಕಾರಿ ವಿಶ್ವನಾಥರು ನಿರಗುಂದ ನಾಡಿನಲ್ಲಿ ವೀರನರಸಿಂಹಪುರ ಅಗ್ರಹಾರ ನಿರ್ಮಿಸಿದ್ದಲ್ಲದೆ, ಕೆರೆಗಳನ್ನು ಕಟ್ಟಿಸಿದರು.

**ನಾಯಕ**

ಲಕ್ಕುಂಡಿಯಲ್ಲಿಯ ಶಾಸನದ ಪ್ರಕಾರ ನನ್ನಿಮಯ್ಯ ನಾಯಕನು ತನ್ನ ತಂದೆ ತಾಯ್ಗಳ ನೆನಪಿಗೆ ಕೆರೆಯೊಂದನ್ನು ಕಟ್ಟಿಸಿದನು. ಆಗ ಆಳುತ್ತಿದ್ದ ದೊರೆ ಆರನೆಯ ವಿಕ್ರಮಾದಿತ್ಯ.

**ಸೇನಬೋವ**

ಹತ್ತಿಮತ್ತೂರಿನ ಸೇನಬೋವ ಕಾಮದೇವಭಟ್ಟನ ಮಗನಾದ ಕೋನಪ್ಪನು ಗೋವರ್ಧನಗಿರಿಯ ಗೇರುಸೊಪ್ಪೆ ಮಾರ್ಗದಲ್ಲಿ ಒಂದು ಕೆರೆಯನ್ನು ಕಟ್ಟಿಸಿದನು. ಮಸಣಯ್ಯನ ಉತ್ತರವಯ್ಯನ ಮಗನಾಗಿದ್ದು, ಉತ್ತರ ಕದಂಬ ಕುಲದ ನನ್ನಿಮಾರ್ತ್ತಣ್ಣ ಪಟ್ಟಳಿಗೆಯ ಎರೆಯಂಗರಸನ ಮಗ ಚೆಣ್ಣಮರಸನಲ್ಲಿ ಸೇನಬೋವನಾಗಿದ್ದನು. ಮಸಣಯ್ಯನು ಈಗಿನ ಸಕ್ರೆ ಪಟ್ಟಣದ ಹೋಬಳಿ ಹೊನ್ನೆಯನಹಳ್ಳಿ ಹಾಳು ಗ್ರಾಮದಲ್ಲಿನ ಕೆರೆಯನ್ನು ಕಟ್ಟಿಸಿ, ಕಲ್ಲುಗಳಿಂದ ಸುಭದ್ರವನ್ನಾಗಿ ಮಾಡಿ ಕೆರೆಗೆ ಹೊಂದಿಕೊಳ್ಳುವಂತೆ ದೇಗುಲವನ್ನು ನಿರ್ಮಿಸಿದನು.[೫೪]

**ವಿವಿಧ ಸಮುದಾಯಗಳು**

ಪ್ರಭುತ್ವ ಮತ್ತು ಅಧಿಕಾರಗಳ ಹಾಗೇ ಸಮಾಜದಲ್ಲಿನ ವಿವಿಧ ಸಮುದಾಯಗಳು ಸಹ ಕೆರೆ ನಿರ್ಮಾಣ ಮಾಡಿರುವುದನ್ನು ಹಲವು ಸಾಕ್ಷ್ಯಗಳು ದೃಢೀಕರಿಸಿವೆ. ಸಂತರು ಮತ್ತು ಸನ್ಯಾಸಿಗಳು; ಚಿಲ್ಲ ಕಭಟಾರ ಎಂಬ ಸುಪ್ರಸಿದ್ಧ ಶೈವ ಸನ್ಯಾಸಿ ಐದು ಕೆರೆಗಳನ್ನು ಕಟ್ಟಿಸಿದರೆಂದು ಒಂದು ಶಾಸನವು ತಿಳಿಸುತ್ತದೆ. ವೀರಶೈವ ಸುಧಾರಕ ಸಿದ್ಧರಾಮ ಗುಡಿಗಳನ್ನು ಕಟ್ಟುವ ಪದ್ಧತಿಗಿಂತ ಕೆರೆ ಕಾಲುವೆಗಳ ನಿರ್ಮಾಣ ಹೆಚ್ಚು ಉಪಯುಕ್ತ ಎಂದು ಬೋಧಿಸಿದ. ತಾನೇ ಸೊಲ್ಲಾಪುರದಲ್ಲಿ ಭಾರೀ ಕೆರೆಯನ್ನು ಕಟ್ಟಿಸಲು ಮುಂದೆ ನಿಂತ. ಆ ಕೆರೆ ಇವತ್ತಿಗೂ ಜನರಿಗೆ ಉಪಯುಕ್ತವಾಗಿದೆ. ವೀರಶೈವ ಶರಣ ಮಡಿವಾಳ ಮಾಚಯ್ಯನಿಗೆ ಸಂಬಂಧಿಸಿದ ಕೆರೆ ಬಸವಕಲ್ಯಾಣಕ್ಕೆ ಕಿ.ಮೀ. ಹತ್ತಿರವಿರುವ ತ್ರಿಪುರಾಂತಕ ಸರೋವರ. ಶ್ರೀರಂಗಪಟ್ಟಣಕ್ಕೆ ವಾಯುವ್ಯದಲ್ಲಿ ೧೮ ಕಿ.ಮೀ. ದೂರದಲ್ಲಿರುವ ತೊಣ್ಣೂರಿನ ಮೋತಿ ತಲಾಬನ್ನು ಶ್ರೀರಾಮಾನುಜಾಚಾರ್ಯರು ಮೇಲುಕೋಟೆಯಲ್ಲಿ ವಾಸ್ತವ್ಯ ಹೂಡಿದಾಗ ನಿರ್ಮಿಸಿದರೆಂದು ಹೇಳಲಾಗುತ್ತದೆ. ಈಗ ಇದನ್ನು ಲಕ್ಷ್ಮೀಸಾಗರವೆಂದು ಕರೆಯಲಾಗುತ್ತದೆ. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ನಾಯಕನಹಟ್ಟಿಯಲ್ಲಿ ಸಂತರಾದ ಶ್ರೀ ಗುರುತಿಪ್ಪೇರುದ್ರಸ್ವಾಮಿಗಳು ತಮ್ಮ ಪವಾಡದಿಂದ ಎರಡು ಕೆರೆಗಳನ್ನು ನಿರ್ಮಿಸಿ, ಅಲ್ಲಿದ್ದ ಬಡತನವನ್ನು ತೊಲಗಿಸಿದರೆಂಬ ಪ್ರತೀತಿ ಇದೆ. ಈ ಹಿನ್ನೆಲೆಯಲ್ಲಿ ಕೆರೆ ನಿರ್ಮಾಣ ಮಾಡಿದ ವಿವಿಧ ಸಮುದಾಯಗಳನ್ನು ಈ ಮುಂದಿನಂತೆ ಗುರುತಿಸಬಹುದು.

**ಸುವರ್ಣ್ಣಕಾರ ಮತ್ತು ರಜಕ ವೃತ್ತಿ ಜಾತಿಗಳು:**

ಸಾಲಿಗ್ರಾಮದ ಗಂಗರಾಜ ರಾಚಮಲ್ಲನ ಪೆರ್ಜ್ಜರಂಗಿ ದಾನ ಶಾಸನವು ಹಳ್ಳಿಯ ಮೇರೆಯಲ್ಲಿ ಅಸ್ತಿತ್ವದಲ್ಲಿದ್ದ ೧೪ ಕೆರೆಗಳನ್ನು ಹೆಸರಿಸುತ್ತದೆ. ಉಲ್ಲೇಖಿತ ಕೆರೆಗಳಲ್ಲಿ ಸುವರ್ಣ್ಣಕಾರ ತಟಾಕ ಮತ್ತು ರಜಕ ತಟಾಕಗಳು ಉಲ್ಲೇಖಾರ್ಹ. ಇದರಿಂದ ಎರಡು ಸಮುದಾಯಗಳು ಬೇರೆ-ಬೇರೆ ಬಡಾವಣೆಗಳಲ್ಲಿ ವಾಸವಾಗಿದ್ದರೆಂದು ಅರಿವಾಗುತ್ತದೆ. ಅಲ್ಲದೆ ತಮ್ಮ-ತಮ್ಮ ಕೆರೆಗಳನ್ನು ಬಳಸುತ್ತಿದ್ದರೆಂಬುದು ಮತ್ತು ಅವರು ಅವುಗಳ ನಿರ್ಮಾಣಕಾರರೆಂಬುದು ವ್ಯಕ್ತವಾಗುತ್ತದೆ.

**ಶೆಟ್ಟಿಗಳು**

ದ್ವಾರಸಮುದ್ರದ ಪಟ್ಟಣ ಶೆಟ್ಟಿಯಾದ ಹೊಯ್ಸಳಶೆಟ್ಟಿಯ ಪತ್ನಿ ದೇವಿಯಕ್ಕ ಕತ್ತರಿಘಟ್ಟದಲ್ಲಿ ಒಂದು ಜಿನಾಲಯ ಮಾಡಿಸಿದಾಗ ನೊಳಂಬ ಶೆಟ್ಟಿಯು ಅದಕ್ಕೆ ಅಹರ್ನಹಳ್ಳಿಯನ್ನು, ದಾನ ಶಾಲೆಯನ್ನು, ಎರಡು ಗಾಣಗಳನ್ನು, ಕೆರೆಯನ್ನು ದತ್ತಿ ಬಿಟ್ಟನು. ಎಲ್ಲೋ ಹರಿಯುತ್ತಿದ್ದ ನೈಸರ್ಗಿಕ ಕಾಲುವೆಯನ್ನು ತಿರುವಿ ಕೆರೆಯನ್ನು ನಿರ್ಮಿಸಿದ ವ್ಯಕ್ತಿ ಹಂಚಿಧರ್ಮಶೆಟ್ಟಿಯ ಸಾಧನೆಗಳನ್ನು ಒಂದು ಶಾಸನವು ಹೊಗಳುತ್ತದೆ. ಕಮಟಚೆಟ್ಟಶೆಟ್ಟಿ ಬಾಣಾವರದಲ್ಲಿ ಚಿಕ್ಕ ಕೆರೆಯೊಂದನ್ನು ದೊಡ್ಡದನ್ನಾಗಿ ಮಾಡಿದನು ಮತ್ತು ತನ್ನ ಮಗನ ಹೆಸರಿನಲ್ಲಿ ಕನಕನಕೆರೆಯನ್ನು ಕಟ್ಟಿಸಿದನು. ಜೊತೆಗೆ ಬಂಚಿಕಟ್ಟೆ ಎಂಬ ಮತ್ತೊಂದು ಕೆರೆಯನ್ನು ವಿಸ್ತರಿಸಿದನು.

**ಬಳೆಗಾರರು**

ಬಳೆಗಾರ ವೃತ್ತಿಗೆ ಸೇರಿದ ಬಸವಗೌಡನು ಕೂಡಲೂರಿನಲ್ಲಿ ತ್ರೈಲೋಕ್ಯ ಸಮುದ್ರವನ್ನು ನಿರ್ಮಿಸಿದನು.

**ಕಾವಲುಗಾರ**

ಸಿರಾ ತಾಲ್ಲೂಕಿನ ಅಮರಾಪುರ ಶಾಸನವು ಬೆಟ್ಟ ರಾಚಯ್ಯನೆಂಬ ಕಾವಲುಗಾರನು ಕೆರೆ ಮತ್ತು ದೇಗುಲವೊಂದನ್ನು ನಿರ್ಮಿಸಿದುದನ್ನು ದಾಖಲಿಸುತ್ತದೆ.

**ಮಾವುತ**

ಕ್ರಿ.ಶ.೧೧೯೫ರ ಮಾದುಡಿ ಶಾಸನವು ಸ್ಥಳೀಯ ಕೆರೆಯನ್ನು ಆನೆ ಸವಾರ ಮಾವುತನು ನಿರ್ಮಿಸಿದನೆಂದು ಹೇಳುತ್ತದೆ.

**ದೀವರು**

ದೀವರ ಕೋಬಿಗಾವುಂಡನು ಕೋಬೇಶ್ವರ ದೇವಾಲಯದ ಎದುರಿನಲ್ಲಿ ಕೆರೆ ಕಟ್ಟಿಸಿ, ಅದನ್ನು ನೂಲಪರ್ವ ಹಬ್ಬದಂದು ದತ್ತಿ ನೀಡಿದನೆಂದು ಕ್ರಿ.ಶ.೧೧೦೦-೦೧ರ ಶಾಸನ ಹೇಳುತ್ತದೆ.

**ಸಮುದಾಯ ಸಂಘಟನೆಗಳು ಮತ್ತು ಜನಸಾಮಾನ್ಯರು**

ಜಗದೇಕಮಲ್ಲ ಎರಡನೆಯ ಜಯಸಿಂಹನ ಮಂತೂರು ಶಾಸನದ ಪ್ರಕಾರ ಊರೊಡೆಯ ಮಧುಸೂದನ ಮತ್ತು ಮಂತೂರಿನ ಮಹಾಜನರು ಒಡಗೂಡಿ ರಟ್ಟ ಸಮುದ್ರವನ್ನು ಕಟ್ಟಿಸಿದರು. ಹೊಯ್ಸಳ ಅರಸ ಇಮ್ಮಡಿ ಬಲ್ಲಾಳನ ಕಾಲದ ಶಾಸನವು ಶಾಂತಿ ಸಮುದ್ರವನ್ನು ಕೊಳತ್ತೂರಿನ ಮಹಾಜನರು ಮತ್ತು ಶಾಂತಲಾದೇವಿಯರು ಕಟ್ಟಿಸಿದರೆಂದು ಹೇಳುತ್ತದೆ. ಮಹಾದೇವ, ರುದ್ರಶಿವ

ಮತ್ತು ೫೦ ಕುಟುಂಬಗಳವರು ಒಂದುಗೂಡಿ ಊರಕೆರೆಯನ್ನು ಕಟ್ಟಿಸಿದರೆಂದು ನವಲೆ ಶಾಸನ ಅರುಹುತ್ತದೆ. ಅರಸೀಕೆರೆಯ ಮಹಾಜನರು ನವಿಲು ದೋಣಿಗೆ ತೂಬನ್ನು ಕಟ್ಟಿಸಿ, ಭೂದಾನ ಮಾಡಿದ್ದಾರೆ. ಧಾರವಾಡ ಜಿಲ್ಲೆಯ ನರಗುಂದದಲ್ಲಿ ಸಾರ್ವಜನಿಕರಿಂದ ಒಂದು ಕೆರೆ ನಿರ್ಮಾಣವಾಗಿದೆ. ಹೀಗೆ ಅಗ್ರಹಾರದ ಮಹಾಜನರೇ ತಮ್ಮ ಕೆರೆಯನ್ನು ತಾವೇ ನಿರ್ಮಿಸಿಕೊಳ್ಳಲು ತಮ್ಮ ಜಮೀನಿಗೆ ನೀರನ್ನು ಒದಗಿಸಿಕೊಳ್ಳುವ ಸದುದ್ದೇಶವನ್ನೇ ಹೊಂದಿದ್ದರು. ಇದರ ನೇತೃತ್ವವನ್ನು ಸಾಮಾನ್ಯವಾಗಿ ಮುಖ್ಯಸ್ಥ ಅಥವಾ ಊರೊಡೆಯ ಹೊತ್ತುಕೊಳ್ಳುತ್ತಿದ್ದನು.

ಮಹಾಜನರಂತೆ ಜನಸಾಮಾನ್ಯರು ಸಹ ಕೆರೆ ನಿರ್ಮಾಣ ಮಾಡಿ ನೀರಾವರಿಗೆ ಅನುಕೂಲ ಮಾಡಿಕೊಟ್ಟಿದ್ದನ್ನು ಶಾಸನಗಳು ಗುರುತಿಸಿವೆ. ನರಗುಂದದ ಶಾಸನದ ಪ್ರಕಾರ ಈಶ್ವರಯ್ಯ ಮತ್ತು ಸಂಕಯ್ಯರು **ಈಶ್ವರ ಸಮುದ್ರ** ಎಂಬ ಕೆರೆಯನ್ನು ಕಟ್ಟಿಸಿದರು. ಹೊರ್ಜಿಯ ಎನ್ನುವವನು ಗೋವಿಂದರಾಜಪುರದಲ್ಲಿ ಕೆರೆಯೊಂದನ್ನು ಕಟ್ಟಿಸಿದನು. ಬಾಳಗಂಚಿಯ ಶಾಸನದ ಪ್ರಕಾರ ಕುತ್ತಾರ ಜೀಯ ಎನ್ನುವವನು ಶಿವದೇವಾಲಯ ಮತ್ತು ಕೆರೆಯೊಂದನ್ನು ಕಟ್ಟಿಸಿದನು. ಕೋಸಿಗವಳ್ಳಿಯ 'ಕಣ್ಣಮ್ಮನಿಗೆ ಬಿರ್ದ್ದವದ್ದೆಗಂ ಪುಟಿದ ಕನ್ನಯ್ಯನೆರಡು ದೇಗುಲವ ಮಾಡಿಸಿ, ಕೆರೆಯಂ ಕಟ್ಟಿಸಿದ ಧರ್ಮಗೆಯ್ಯುತ್ತಿರೆ' ಎಂದು ಸೊರಬದ ಶಾಸನವೊಂದು ಅರುಹುತ್ತದೆ. ಆದೋನಿಯ ಬಂಡೇ ಶಾಸನವು ಒಂದು ಪ್ರಾಚೀನ ಶಾಸನವಾಗಿದ್ದು, ಇದರಲ್ಲಿ ಮೂರನೆಯ ಪುಲಮಾಯಿಯ ಉಲ್ಲೇಖವಿದೆ. ಇದರ ಪ್ರಕಾರ ಗೃಹಪತಿ ಸಂಭ ಎನ್ನುವವನು ವೇಪುರಕ ಎಂಬಲ್ಲಿ ಕೆರೆಯೊಂದನ್ನು ನಿರ್ಮಿಸಿದನು.

ಕೆರೆ ನಿರ್ಮಾಣದಲ್ಲಿ ಪುರುಷರಂತೆಯೇ ಸ್ತ್ರೀಯರೂ ತೊಡಗಿರುವುದು ಕಂಡುಬರುತ್ತದೆ. ನಮ್ಮ ಸಮಾಜವು ಪುರುಷ ಪ್ರಧಾನ ಸಮಾಜವಾದುದರಿಂದ 'ಸ್ತ್ರೀ' ಕೆರೆಯ ನೀರಾವರಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ಉಲ್ಲೇಖಗಳು ಬಹಳ ಕಡಿಮೆಯೇ ಇವೆ. ಕೆಲವೊಮ್ಮೆ ರಾಜ ಮನೆತನದ ಮಹಿಳೆಗೆ ಕೆರೆ ನಿರ್ಮಾಣದ ಸಾಧ್ಯವಾಗಬಹುದಾದರೂ, ಪ್ರತ್ಯೇಕ ಆರ್ಥಿಕ, ಸಾರ್ವಭೌಮತ್ವ ಸಾಮಾನ್ಯ ಸ್ತ್ರೀಗೆ ಸಾಧ್ಯವಿರಲಿಲ್ಲವಾಗಿ ಆಕೆ ಅಂತಹ ಚಟುವಟಿಕೆಯಿಂದ ದೂರವೇ ಉಳಿದಳು. ಆದರೆ ಚೆನ್ನಗಿರಿ ತಾಲೂಕಿನ ಶಾಂತಿಸಾಗರ ಕೆರೆಯನ್ನು 'ಸೂಳೆಕೆರೆ' ಎಂದು ಕರೆಯಲಾಗುತ್ತದೆ. ಅಲ್ಲಿನ ಸಾಂಪ್ರದಾಯಿಕ ಹೇಳಿಕೆ ಪ್ರಕಾರ ಆರ್ಥಿಕವಾಗಿ ಅನುಕೂಲ ಸ್ಥಿತಿಯಲ್ಲಿದ್ದ ವೇಶ್ಯೆಯಿಂದ ಆ ಕೆರೆ ನಿರ್ಮಾಣವಾಯಿತು ಎಂದು ನಂಬಲಾಗಿದೆ. ಇದರಿಂದ ಸ್ತ್ರೀಯರು ಅಂದು ಸಾರ್ವಜನಿಕ ಕಾರ್ಯದಲ್ಲಿ ತೊಡಗಿದ್ದರೆಂದು ಗುರುತಿಸಬಹುದು.[೨೫] ಬಸವಪಟ್ಟಣದ ಪಾಳೆಯಗಾರರು ಈ ಕೆರೆಯ ನಿರ್ಮಾಣಕ್ಕೆ ಕಾರಣ ಕರ್ತೃಗಳು, ಆದರೆ ನೈಜವಾದ ಇತಿಹಾಸ ತಿಳಿಯಲು ಸದೃಢ ಆಕರಗಳ ಕೊರತೆಯಿದೆ.

ಬನವಾಸಿಯ ಮಧುಕೇಶ್ವರ ದೇವಾಲಯ ಸನಿಹ ಇರುವ ನಾಗಪ್ರತಿಮೆ ಮತ್ತು ಶಾಸನ ಚುಟು ರಾಜವಂಶಸ್ಥರಿಗೆ ಸೇರಿದ್ದು, ಅರಸನಾಗಿದ್ದ ಹರತಿ ಪುತ್ರ ವಿಷ್ಣು ಕಡ ಚುಟುಕುಲಾನಂತ ಶಾತಕರ್ಣಿ ಆಳ್ವಿಕೆಯನ್ನು ಪ್ರಸ್ತಾಪಿಸುತ್ತದೆ. ಮಹಾರಾಜನ ಮಗಳಾದ ಮಹಾಬುವಿಯು (ಮಹಾಬೋಜಿ) ಯುವರಾಜ ಶಿವಸ್ಕಂದ ನಾಗಶ್ರೀಯ ತಾಯಿಯಾಗಿದ್ದು, ನಾಗಪ್ರತಿಮೆಯೊಂದನ್ನು, ಕೆರೆ ಮತ್ತು ವಿಹಾರವನ್ನು ಕಟ್ಟಿಸಿದಳು. ಅಮಾತ್ಯಸ್ಕಂದ ಸತಿಯು ಅದರ ನಿರ್ವಹಣೆ ಹೊತ್ತಿದ್ದು, ಕ್ರಿ.ಶ.೨೦ರ

ಬರಗೂರು ಶಾಸನದ ಪ್ರಕಾರ, ನರನಬ್ಬೆ ಎಂಬಾಕೆ ಕೆರೆಯೊಂದನ್ನು ಕಟ್ಟಿಸಿದಳು. ಮೂರನೇ ಕೃಷ್ಣನ ಕುಡುತಿನಿ ಶಾಸನವು ಕೆರೆಯೊಂದಕ್ಕೆ ೬೨ ಮತ್ತರ್ ಭೂಮಿಯನ್ನು ದಾನ ಮಾಡಿದುದನ್ನು ದಾಖಲಿಸುತ್ತದೆ. ಈ ಕೆರೆಯು ಇಂದಿಗೂ ಅಸ್ತಿತ್ವದಲ್ಲಿದ್ದು, ಕೆರೆ ಕಟ್ಟಿಸಿದವಳು ಪದ್ಮಾವತಿ ಎಂಬಾಕೆ.

ಎರಡನೆಯ ವೀರಬಲ್ಲಾಳನ ಕಾಲದ ಚನ್ನರಾಯಪಟ್ಟಣದ ಶಾಸನವು ಮಾಚಿರಾಜನ (ಮಾಚಯ್ಯ ದಂಡನಾಯಕ) ಪತ್ನಿ ಶಾಂತಲಾ ದೇವಿಯು ಕೆರೆ ಕಟ್ಟಿಸಿ, ಅದಕ್ಕೆ ದತ್ತಿ ಬಿಟ್ಟಳೆಂದು ಅರುಹುತ್ತದೆ. ಎರಡನೆಯ ವೀರಬಲ್ಲಾಳನ ಕಾಲದಲ್ಲಿ ಮಂತ್ರಿ ಗೋವಿಂದಮಯ್ಯನ ತಾಯಿಯಾದ ಮಾಕನ್ವೆಯು ಕೆರೆ ಕಟ್ಟಿಸಿದಳು. ಶ್ರವಣಬೆಳಗೋಳದ ಶಾಸನವು ವಿಲಸನಕಟ್ಟೆಯನ್ನು ಶಾಂತಲಾದೇವಿ ಕಟ್ಟಿದುದನ್ನು ಹೇಳುತ್ತದೆ.

**ಕೆರೆ ನೀರು ನಿರ್ವಹಣೆ**

ಸ್ವಾತಂತ್ರ್ಯಪೂರ್ವದಲ್ಲಿಯ ಆಡಳಿತದಲ್ಲಿ ರಾಜನೇ ಶ್ರೇಷ್ಠ ಅಧಿಕಾರಿಯಾಗಿದ್ದ. ಎಲ್ಲಾ ವ್ಯವಸ್ಥೆಯಂತೆ ನೀರಾವರಿ ವ್ಯವಸ್ಥೆಯೂ ಆತನ ಕೈಯಲ್ಲೇ ಇರುತ್ತಿದ್ದಿತಾದರೂ ಮಂತ್ರಿಗಳು, ಸಂಧಿ ವಿಗ್ರಹಿಗಳು, ಊರ ಗೌಡರು, ಜಲಸೂತ್ರಧಾರರು, ಶ್ಯಾನುಭೋಗರು, ನೀರ್ಗಂಟಿಗಳು, ತಳವಾರರು, ಗ್ರಾಮ ಪಂಚಾಯತಿಯ ಪಂಚರು ನೀರಿನ ನಿರ್ವಹಣೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದರು. ರಾಜನು ದತ್ತಿ ಬಿಡಲು ಅಥವಾ ಕೆರೆ ಕಟ್ಟೆ ಇತ್ಯಾದಿಗಳನ್ನು ಕಟ್ಟಿಸಲು ಅನುಮತಿ ನೀಡುತ್ತಿದ್ದರು. ಕೆಲವೊಮ್ಮೆ ಭೂಮಿಯನ್ನು ತಾವೇ ಸ್ವತಃ ಕೊಂಡುಕೊಂಡದ್ದನ್ನು ದಾನ ಮಾಡುತ್ತಿದ್ದರು. ಈ ವ್ಯವಸ್ಥೇ 'ಚಾಣಕ್ಯ'ನ ಕಾಲದಿಂದಲೂ ಇದ್ದಿತೆಂಬುದು (ಕ್ರಿ.ಶ.೨) ವಿದ್ವಾಂಸರ ಅಭಿಪ್ರಾಯ. ಕೆರೆ ನೀರು ನಿರ್ವಹಣೆಯ ಕುರಿತಂತೆ ಅನೇಕ ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದರು. ಅವರಲ್ಲಿ ಆಯಗಾರರು ಪ್ರಮುಖ ಪಾತ್ರವಹಿಸುತ್ತಿದ್ದರು, ಅವರಲ್ಲಿ ಗೌಡ, ಶ್ಯಾನಭೋಗ, ನೀರುಗಂಟಿ, ಜಲಸೂತ್ರದಾರರು ಮೊದಲಾದವರು ಮುಖ್ಯರಾಗಿರುತ್ತಿದ್ದರು. ಅಂದಿನ ಕೆರೆ ನಿರ್ವಹಣೆಯನ್ನು ಶಾಸನಗಳು ಧೃಢೀಕರಿಸಿದ್ದು, ಅವುಗಳ ಆಧಾರದ ಮೇಲೆ ಅಂದಿನ ನೀರಾವರಿ ವ್ಯವಸ್ಥೆಯನ್ನು ಅರಿಯಬಹುದಾಗಿದೆ.

ಬುಕಾನನ್‌ನು ತನ್ನ ಸುದೀರ್ಘ ಪ್ರಯಾಣದ ಅನುಭವದ ಹಿನ್ನೆಲೆಯಲ್ಲಿ ಮೂರು ವಿಧದ ಕೆರೆಗಳನ್ನು ಗುರುತಿಸಿದ್ದಾರೆ. ಜಾನುವಾರುಗಳಿಗೆ ಕುಡಿಯುವ ನೀರಿಗಾಗಿ ನಿರ್ಮಿಸಲ್ಪಟ್ಟ ಚಿಕ್ಕ ಸರೋವರವನ್ನೇ ಕಟ್ಟೆ ಎಂದು ಕರೆಯಲಾಗಿದೆ. ಕೃಷಿ ಭೂಮಿಗೆ ನೀರುಣಿಸುವ ದೊಡ್ಡ ಸರೋವರವನ್ನೇ ಕೆರೆ ಎನ್ನಲಾಗಿದೆ. ಆದರೆ, ಬುಕಾನನ್ ತಿಳಿಸುವ ಕುಂಠೆ ಎನ್ನು ಚೌಕಾಕಾರದ ಕೆರೆಯ ಅಸ್ತಿತ್ವದ ಬಗ್ಗೆ ಹಲವಾರು ಭಿನ್ನಭಿಪ್ರಾಯಗಳಿವೆ. ಕೆರೆಗಳನ್ನು ಅವುಗಳ ನೀರು ಪೂರೈಕೆಯ ಮೂಲಗಳಿಗೆ ಅನುಗುಣವಾಗಿ ಎರಡು ವಿಧಗಳಾಗಿ ಬುಕಾನನ್ ವಿಂಗಡಿಸಿದ್ದು, ಅವುಗಳೆಂದರೆ: ನದಿ ನೀರು ಆಧಾರದ ಕೆರೆಗಳು ಮತ್ತು ಮಳೆ ನೀರು ಆಧಾರಿತ ಕೆರೆಗಳು. ನದಿಗೆ ಅಣೆಕಟ್ಟೆ ನಿರ್ಮಿಸಿ, ಆ ಮೂಲಕ ರಚನೆಯಾಗಿರುವ ಕೆರೆಗಳನ್ನು ನದಿ ಆಧಾರಿತ ಕೆರೆಗಳು ಎನ್ನಲಾಗಿದೆ. ಹಲವಾರು ಸರೋವರಗಳು ಮಳೆಯ ನೀರಿನಿಂದ ನಿರ್ಮಾಣಗೊಂಡಿರುವ ಕೆರೆಯನ್ನು ಮಳೆ ಆಧಾರಿತ ಕೆರೆ ಎನ್ನಲಾಗಿದೆ.

ಫ್ರಾನ್ಸಿಸ್ ಬುಕಾನನೇ ಗುರುತಿಸಿರುವಂತೆ ಅಂದು ಕಾಲುವೆಗಳ ಮೂಲಕ ಭೂಮಿಗೆ ನೀರನ್ನು ಹರಿಸಲಾಗುತ್ತಿತ್ತು. ಆ ಕಾಲುವೆ ನೀರನ್ನು ಬಳಸಿ ಶ್ರೀರಂಗಪಟ್ಟಣ ಮತ್ತು ಸುತ್ತಲಿನ ಪ್ರದೇಶಗಳಲ್ಲಿ ಒಮ್ಮೆ ಕಬ್ಬಿನ ಬೆಳೆ ಬೆಳೆದರೆ, ಆ ಭೂಮಿಯಲ್ಲಿ ಮೂರು ಬಾರಿ ಭತ್ತದ ಬೆಳೆ ತೆಗೆದ ನಂತರವೇ ಪುನಃ ಕಬ್ಬು ಬೆಳೆಯುತ್ತಿದ್ದರು. ಆದರೆ ಮದ್ದೂರಿನಲ್ಲಿ ಕಬ್ಬಿನ ಬೆಳೆಯ ನಂತರ ಅದೇ ಭೂಮಿಯಲ್ಲಿ ಎಳ್ಳು (Seasum) ಬೆಳೆ ಬೆಳೆದು ನಂತರ ಭತ್ತ ಬೆಳೆದು ನಂತರದಲ್ಲಿ ಕಬ್ಬನ್ನು ಅನುಕ್ರಮವಾಗಿ ಬೆಳೆಯುತ್ತಿದ್ದರು. ಅಂದು ಜಮೀನ್ದಾರರು ಉನ್ನತ ಜೀವನ ನಡೆಸುತ್ತಿದ್ದರೆ, ಕೂಲಿ ಕೆಲಸದ ಆಳುಗಳು (ಜೀತ) ಜೀವನ ಮಟ್ಟ ಶೋಚನೀಯವಾಗಿತ್ತು ಎನ್ನುತ್ತಾನೆ.[೫೬]

ತುರುವೇಕೆರೆಯ ಶಾಸನವೊಂದು ಕೆರೆಗಳಲ್ಲಿ ಸಂಗ್ರಹಿಸಲಾದ ಅಂದು ನೀರಿನ ಬಳಕೆಗೆ ರೂಪಿಸಲಾದ ನಿರ್ದಿಷ್ಟ, ಸ್ಪಷ್ಟ ನಿಯಮಗಳನ್ನು ಈ ಮುಂದಿನಂತೆ ವಿವರಿಸುತ್ತದೆ.

೧. ಹೊಸದಾಗಿ ಕೆರೆ ಕಟ್ಟುವಂತಹವರು ತಮ್ಮ ಊರ/ಹಳ್ಳಿಯ ಹಳ್ಳದ ಬಳಿ ಇರುವ ತಮ್ಮ ಭೂಮಿಗಳನ್ನೆ ಉಪಯೋಗಿಸಿಕೊಳ್ಳಬೇಕು.

೨. ಕಟ್ಟೆ, ಕಿರು ಕಟ್ಟೆಗಳನ್ನು ಕಟ್ಟುವಲ್ಲಿ (ಈ ಶಬ್ದಗಳು ನೀರಿನ ಸಂಗ್ರಹಣೆಯ ಗಾತ್ರ ವಿಸ್ತಾರಗಳನ್ನೇ ಸೂಚಿಸುತ್ತವೆ ಎಂಬುದು ಗಮನಾರ್ಹ) ಮತ್ತೊಬ್ಬರ ಕ್ಷೇತ್ರಕ್ಕೆ ಹಾನಿಯಾಗದಂತೆ ಮೊದಲೇ ಒಡಂಬಡಿಕೆಯನ್ನು ಮಾಡಿಕೊಂಡು ಕಟ್ಟಬೇಕು.

೩. ಕೆರೆಯ (ಮೇಲಂಕಣ) ಎತ್ತರವನ್ನು ಹೆಚ್ಚಿಸುವಾಗ ಅದರ ಹಿನ್ನೀರಿನಿಂದ ಮುಳುಗುವ ಭೂಮಿಯವರು ಹಾಗೆ ಮಾಡಬಾರದೆಂದು ತಡೆಯಲಾಗದು. ಇಂಥ ಸಮಸ್ಯೆ ಬಂದಲ್ಲಿ ಅದನ್ನು ಹೇಗೆ ಬಗೆಹರಿಸಿಕೊಳ್ಳಬೇಕೆಂದು ಉದಾಹರಣೆ ಸಹಿತ ಈ ಶಾಸನದಲ್ಲಿ ಹೇಳಲಾಗಿದೆ.

ಅಯ್ಯರಸನ ಕೆರೆಯ ಎತ್ತರವನ್ನು ಹೆಚ್ಚಿಸಿದರೆ ಅದರ ನೀರೊತ್ತಿನಿಂದ ಅರಳಿಯ ಕೆರೆಯ ನೀರು ಹೆಚ್ಚಾಗಿ, ಈ ಕೆರೆಯ ಹಿಂದಿನ ಗದ್ದೆಗಳು ಮುಳುಗಡೆಯಾಗುತ್ತವೆ. ಆಡನ ಹಳ್ಳಿಯಲ್ಲಿರುವ ಮೊದಲ ತೋಟದ ತುದಿಯ ಬಯಲಲ್ಲಿ ಇರುವಂಥ ಜಾಗದಲ್ಲಿ ಮಹಾಜನಗಳು ರಾಜಗಟ್ಟೆ ಕಟ್ಟಿಸಬೇಕು. ಅದರ ಎರಡೂ ಕೋಡಿಗಳಿಂದ ಹರಿದು ಬರುವ ನೀರು ಈಗಾಗಲೇ ಇರುವ ಗದ್ದೆಯ ಸ್ಥಳಕ್ಕೆ ಬಂದು ಅವರು ತಮ್ಮ ತಮ್ಮ ಬೆದ್ದಲಿಗೆ ಬದಲಾಗಿ ತಾಳಕೆರೆಯ ಹೊಲಗಳನ್ನು ತೆಗೆದುಕೊಳ್ಳುವರು. ಕೆಂಚನ ಕಟ್ಟೆಯ ಜನರು ಅವರ ಕೆರೆಯನ್ನು ತಾವೇ ಕಟ್ಟಿಸಿಕೊಳ್ಳಬೇಕು.

೪. ಕೆರೆ ಕಟ್ಟುವ ಮುನ್ನವೇ ಇದ್ದ ಬಂಡಿ ದಾರಿಗಳನ್ನು ಹಾಗೆಯೇ ಬಿಡಬೇಕು. ಆ ಜಾಗವನ್ನು ನಮ್ಮದು ಅಥವಾ ನಿಮ್ಮದು ಎಂದು ಜಗಳವಾಡಬಾರದು. ಹಿಂದಿನ ನಮ್ಮ ಜನರು ಇಂದಿನಂತೆಯೇ ಸಂಪರ್ಕ ಸೇತುವೆಗಳಾದ ರಸ್ತೆ ಸಾರಿಗೆ (ಬಂಡಿಹಾದಿಯ) ಬಗ್ಗೆ ನೀಡಿದ ಪ್ರಾಮುಖ್ಯತೆಯನ್ನು ಈ ಶಾಸನ ಸಾಲುಗಳು ಸ್ಪಷ್ಟೀಕರಿಸುತ್ತವೆ.

೫. ಸೋಮನಾಥ ಸಮುದ್ರದ ಎರಡು ಕೋಡಿಗಳ ಕಾಲುವೆಯ ಮಾರ್ಗದ ಮೂಲಕ ನೀರು ಹರಿವ ಸ್ಥಳದಲ್ಲಿ, ಕೋಡಿಯನ್ನು ಬಿಟ್ಟು ಉಳಿದ ಒಣ ಭೂಮಿಗೆ ಹಾನಿಯುಂಟಾದರೆ (ಇಲ್ಲಿ ಹಾನಿ ಎಂದರೆ ಕೊರಕಲು ಇತ್ಯಾದಿ ಎಂದು ಅರ್ಥೈಸಬಹುದು) ಅಥವಾ ಜೌಗಿನಿಂದ ಕೂಡಿ

ವ್ಯವಸಾಯಕ್ಕೆ ಯೋಗ್ಯವಾಗಿರದಿದ್ದರೆ ಮಹಾಜನರು ಅವರಿಗೆ ಆದ್ಯತೆಯ ಮೇಲೆ ಅವರವರ ಭೂಮಿಗೆ ತಕ್ಕ ಪರಿಹಾರವಾಗಿ ಬೇರೆ ಭೂಮಿಯನ್ನು ಸೋಮನಾಥ ಸಮುದ್ರದ ಜನರಿಗೆ ಕೊಡಬೇಕು.

೬. ಪ್ರಜೆಗಳಿಗೆ ಯಾವ ತೊಡಕು ಬಂದರೂ ತುರುವೇಕೆರೆಯ ಅಗ್ರಹಾರದ ಮಹಾಜನಗಳು ನ್ಯಾಯಸಮ್ಮತವಾದ ತೀರ್ಮಾನವನ್ನು ಕೊಡುತ್ತಾರೆ.

೭. ಪ್ರತಿ ಗೃಹಸ್ಥರು ಮಾಳಿಗೆಯ ಮನೆಯನ್ನು ಕಟ್ಟುವಾಗ ಬಾವಿ, ಬಚ್ಚಲುಗಳನ್ನು ಕಟ್ಟುವಾಗ, ಕೆರೆ ಕಟ್ಟೆಗಳ ದುರಸ್ತಿಗೆ ಬೇಕಾಗುವ ಕಲ್ಲುಗಳನ್ನು ಒದಗಿಸಬೇಕು (ಅವರವರ ಅಂತಸ್ತಿಗೆ ತಕ್ಕಂತೆ ಎಂದು ನಾವು ಊಹಿಸಬಹುದು. ಏಕೆಂದರೆ ಈ ಹಿಂದೆಯೇ ಸಮಾಜದ ಬೇರೆ ಬೇರೆ ವರ್ಗದವರಿಗೆ ಬೇರೆ ಬೇರೆ ಕರ ನೀಡುವ ಪದ್ಧತಿ ಇದ್ದಿತೆನ್ನುವುದನ್ನು ನೋಡಿದ್ದೇವೆ). ಅಲ್ಲದೆ ಕೆರೆಗೆ ಹೆಚ್ಚು ನೀರು ಬಂದಾಗ ಅದರಿಂದ ಉಂಟಾಗುವ ಹಾನಿ, ಎಂದರೆ ಕೆರೆ ಏರಿ ಒಡೆಯುವುದಾಗಲೀ, ನೀರೊತ್ತಿನಿಂದ ಕೆರೆಯ ಮೇಲಿನ ಹೊಲಗದ್ದೆಗಳ ಬೆಳೆಗೆ ಹಾನಿಯುಂಟಾದರೆ, ಕಾಲುವೆ, ತೂಬುಗಳ ದುರಸ್ತಿ, ಕೊರಕಲು ಇತ್ಯಾದಿ ಉಂಟಾದಾಗ ಅವುಗಳ ಖರ್ಚಿಗೆ ಸಹಾಯ ಮಾಡುವುದಿಲ್ಲ ಎಂದು ಜನರು ಹೇಳಬಾರದು.

೮. ಈ ಶಾಸನವನ್ನು ಮೀರಿದರೆ ಚಕ್ರವರ್ತಿ ವೀರನಾರಸಿಂಹದೇವರ ಆಣೆ, ಸೋಮಣ್ಣ ದಂಡನಾಯಕನ ಆಣೆ, ಅಶೇಷ ಮಹಾಜನಗಳ ಸಾಕ್ಷಿಯಾಗಿ ತಮ್ಮ, ತಮ್ಮ ಮಾತಾಪಿತೃಗಳ ಆಣೆಯಾಗಿ ತಮ್ಮ ಇಷ್ಟದೇವತೆಯ ಆಣೆಯಾಗಿ ಪಾಲಿಸತಕ್ಕದ್ದು.

೯. ಇದನ್ನು ತಪ್ಪದಂತೆ ನಡೆಸಿಕೊಡುತ್ತೇವೆ ಎನ್ನಲು ತುರುವೇಕೆರೆಯ 'ಮಹಾಜನರು' ಶ್ರೀಪ್ರಸನ್ನ ದೇವರ ಹೆಸರಿನಲ್ಲಿ ಸಾಕ್ಷಿ (ವೊಪ್ಪ) ನೀಡುತ್ತಿದ್ದೇವೆ. "ಸ್ವಹಸ್ತ ದೊಪ್ಪ ಶ್ರೀರಾಮನಾಥ".

ಈ ನಿಯಮಗಳನ್ನು ಈಗಿನ ಪರಿಸ್ಥಿತಿಗೆ ತಕ್ಕಂತೆ ಪರಿಷ್ಕರಿಸಿ ಬಳಸಿಕೊಳ್ಳುವತ್ತ ಚಿಂತನೆ ನಡೆಸಿದರೆ, ನಮ್ಮ ಗ್ರಾಮಗಳ, ರಾಜ್ಯಗಳ ನಡುವೆ ಇರುವ ಜಲವಿವಾದಗಳನ್ನು ಬಗೆಹರಿಸುವಲ್ಲಿ ಸಹಾಯವಾಗುತ್ತದಲ್ಲವೆ? ಏಕೆಂದರೆ ಈ ಶಾಸನದಲ್ಲಿ[೫೬](ಕ್ರಿ.ಶ.೧೯೮೫) ಉಕ್ತವಾಗಿರುವ ೭೦೦ ವರ್ಷಗಳಿಗೂ ಹಳೆಯದಾದ ಇಪ್ಪತ್ತಕ್ಕೂ ಮಿಕ್ಕ ಹಳ್ಳಿಗಳು, ಕೆರೆಗಳು ಇಂದಿಗೂ ಇವೆ. ಭಾರತೀಯ ಸರ್ವೇಕ್ಷಣ (Survey of India) ಭೂ ನಕ್ಷೆಯ ಪ್ರಕಾರ ಈ ಕೆರೆಯಂಗಳ ಮತ್ತು ಜಲಾನಯನ ಪ್ರದೇಶ ಸುಮಾರು ೧೬.೨೫ ಕಿಲೋಮೀಟರ್. ತುರುವೇಕೆರೆಯ ಕೆರೆಯೊಂದೆ ಇಂದಿಗೂ ತಾಲ್ಲೂಕು ಪಟ್ಟಣದ ಅರ್ಧಭಾಗಕ್ಕೆ ನೀರನ್ನು ಒದಗಿಸುತ್ತಿದೆ ಎಂದರೆ ಆಶ್ಚರ್ಯವಲ್ಲವೆ? ಅಂದಿನ ಪರಿಸರ, ಜನಸಂಖ್ಯೆ ಇತ್ಯಾದಿಗಳನ್ನು ಗಮನದಲ್ಲಿಟ್ಟು ನಿರ್ಮಿಸಲಾಗಿದ್ದರೂ ಇಂದಿಗೂ ಅದರ ಬಳಕೆ ಅಚ್ಚಳಿಯದೆ ಸಾಗಿಬರುತ್ತಿದೆ.

**೪.೫. ಕೆರೆಗಳ ನಿರ್ಮಾಣ ಮತ್ತು ಸಂರಕ್ಷಣೆ**

ಕೆರೆಗಳ ನಿರ್ಮಾಣ ಹಾಗೂ ಸಂರಕ್ಷಣೆಗಾಗಿ ಮತ್ತು ನಿರ್ವಹಣೆಗಾಗಿ ಅನುಸರಿಸಲಾದ ಕ್ರಮಗಳು, ಅವುಗಳ ನಿರ್ವಹಣೆಗಾಗಿ ಮಾಡಲಾದ ವ್ಯವಸ್ಥೆಗಳು, ಅವುಗಳಲ್ಲಿ ನೀರು ಹಂಚಿಕೆಯ ವಿಧಾನ, ನಿರ್ಮಾಣದ ವೆಚ್ಚ ಹಾಗೂ ಫಲಾನುಭವಿಗಳಿಗೆ ವಿಧಿಸಬೇಕಾದ ನೀರಿನ ತೆರಿಗೆ, ನಿರ್ಮಾಣದ

ವಿಧಾನಗಳನ್ನು ಗುರುತಿಸುವುದು ಮುಖ್ಯವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಕೆರೆಗಳ ನಿರ್ಮಾಣ ಮತ್ತು ಸಂರಕ್ಷಣೆಯ ವೈಶಿಷ್ಟ್ಯತೆಯನ್ನು ಕುರಿತು ವಿಶ್ಲೇಷಿಸಲಾಗಿದೆ.

**ಕೆರೆಗಳ ನಿರ್ಮಾಣದ ಐತಿಹಾಸಿಕ ಹಿನ್ನೆಲೆ**

ಕೆರೆಗಳ ಇತಿಹಾಸ ಕರ್ನಾಟಕದಲ್ಲಿ ಆದಿ ಕದಂಬರ ಕಾಲದಿಂದ ಆರಂಭವಾಗುತ್ತದೆ. ಕದಂಬರ ಮೂಲ ಪುರುಷನಾದ ಮಯೂರವರ್ಮ ಚಿತ್ರದುರ್ಗದ ಹತ್ತಿರ ಇರುವ ಚಂದ್ರವಳ್ಳಿಯಲ್ಲಿ ಎರಡು ಗುಡ್ಡಗಳ ನಡುವೆ ಒಂದು ಕೆರೆಯನ್ನು ದೃಢವಾಗಿ ಕಟ್ಟಿಸಿದನು. ಈ ಕೆರೆಯನ್ನು ದೃಢಪಡಿಸಿದ್ದು ಸುಮಾರು ಕ್ರಿ.ಶ.೩೫೦ರಲ್ಲಿ. ಮುಂದೆ ಈ ಕೆರೆ ಹಾಳಾಯಿತು. ಇತ್ತೀಚೆಗೆ ಅಂದರೆ ೨೫-೩೦ ವರ್ಷಗಳ ಕೆಳಗೆ ಕರ್ನಾಟಕ ಸರ್ಕಾರದವರು ಈ ಕೆರೆಯ ಒಡ್ಡನ್ನು ವಿಸ್ತರಿಸಿ ಅದರ ಪುನರುದ್ಧಾರ ಮಾಡಿದರು. ಈಗ ಅದು ಉಪಯುಕ್ತವಾಗಿರುವುದಲ್ಲದೆ, ಒಂದು ಸುಂದರ ತಾಣವೂ ಆಗಿದೆ. ಹೊಸ ಕೆರೆಗಳನ್ನು ಕಟ್ಟುವುದಕ್ಕೆ ಮೊದಲು ಹಳೆಯ ಕೆರೆಗಳನ್ನು ದುರಸ್ತಿ ಮಾಡುವುದು ಯೋಗ್ಯ. ನಮ್ಮ ಪೂರ್ವಜರು ಈ ಕ್ರಮವನ್ನೇ ಅನುಸರಿಸುತ್ತಿದ್ದರು. ಹಾಗೆ ಮಾಡಿದ್ದರಿಂದಲೇ ನಮ್ಮಲ್ಲಿ ಸಾವಿರಾರು ಕೆರೆಗಳು ಇನ್ನೂ ಜೀವಂತವಾಗಿವೆ. ಇದಕ್ಕೆ ಒಂದು ನಿದರ್ಶನ ಬನವಾಸಿ ಹತ್ತಿರವಿರುವ ಗುಡ್ಡಾಪುರದ ಕೆರೆ. ಇದನ್ನು ಸುಮಾರು ಕ್ರಿ.ಶ.೫೦೦ರಲ್ಲಿ ಕದಂಬ ರವಿವರ್ಮ ಕಟ್ಟಿಸಿದ. ಈ ಕೆರೆ ಉತ್ತರ ಕನ್ನಡ ಜಿಲ್ಲೆಯಲ್ಲೇ ಅತಿ ದೊಡ್ಡ ಕೆರೆ. ಕಟ್ಟಿ ೧೫೦೦ ವರ್ಷಗಳಾದರೂ ಈ ಕೆರೆ ಇನ್ನೂ ಜನರಿಗೆ ನೀರನ್ನು ಒದಗಿಸುತ್ತಿದೆ.

ಕದಂಬರ ನಂತರ ಬಾದಾಮಿ ಚಾಲುಕ್ಯರು ಧಾರವಾಡ ಜಿಲ್ಲೆಯ ಗೋಡಗೇರಿಯಲ್ಲಿ ಸು. ಕ್ರಿ.ಶ.೭೦೦ರಲ್ಲಿ ೭-೮ ಕೆರೆಗಳನ್ನು ಕಟ್ಟಿದ್ದರು. ಅವರ ನಂತರ ಬಂದ ರಾಷ್ಟ್ರಕೂಟರು ಈಗಲೂ ಉಪಯುಕ್ತವಿರುವ ಅನೇಕ ಕೆರೆಗಳನ್ನು ಕಟ್ಟಿದರು. ಒಂದೇ ಒಂದು ಉದಾಹರಣೆಯನ್ನು ಕೋಲಾರ ಜಿಲ್ಲೆಯ ಕೆ.ಜಿ.ಎಫ್‌ನಲ್ಲಿ ನೋಡಬಹುದು. ಅವರ ಕಾಲದಲ್ಲಿ (ಸು.ಕ್ರಿ.ಶ.೯೫೦ರಲ್ಲಿ) ವಿಜಯಾದಿತ್ಯ ಮಂಗಲ (ಈಗಿನ ಬೇತಮಂಗಳ) ಕೆರೆಯನ್ನು ಕಟ್ಟಿದರು. ಈ ಕೆರೆಯು ಈವತ್ತಿಗೂ ಕೋಲಾರ ಗೋಲ್ಡ್‌ಫೀಲ್ಡ್‌ಗೆ ಕುಡಿಯುವ ನೀರನ್ನು ಕೊಡುತ್ತದೆ. ನಂತರ ಬಂದ ಕಲ್ಯಾಣದ ಚಾಲುಕ್ಯರು ಮತ್ತು ಹೊಯ್ಸಳರು ಕರ್ನಾಟಕದ ತುಂಬಾ ಅನೇಕ ಕೆರೆಗಳನ್ನು ಕಟ್ಟಿದರು. ಈ ಕಾಲದಲ್ಲಿ ಕೆರೆ ಕಟ್ಟುವ ವಿಧಾನದಲ್ಲಿ ಒಂದು ವಿಶೇಷ ಬದಲಾವಣೆಯಾಯಿತು. ಇದರ ಪ್ರಕಾರ ಒಂದರ ಕೆಳಗೆ ಇನ್ನೊಂದು ಕೆರೆಯನ್ನು ಕಟ್ಟುವುದು. ಇದರ ಅತಿ ಶ್ರೇಷ್ಠ ಉದಾಹರಣೆ ಕೋಲಾರ ಜಿಲ್ಲೆಯಲ್ಲಿದೆ. ಅಲ್ಲಿಯ ಪಾಲಾರ್ ನದಿಗೆ, ಒಂದರ ಕೆಳಗೆ, ಇನ್ನೊಂದು ಒಟ್ಟು ೧೦೦೦ ಕೆರೆಗಳನ್ನು ಕಟ್ಟಿದ್ದಾರೆ. ಈ ಜಾಲದ ಕೊನೆಯ ಕೆರೆ ರಾಮಸಾಗರ. ಇದು ಚೋಳರ ಕಾಲದ್ದು (ಸು.ಕ್ರಿ.ಶ. ೧೦೦೦). ಈ ಜಾಲವು ಇನ್ನೂ ಸುಸ್ಥಿತಿಯಲ್ಲಿದೆ. ಕಲ್ಯಾಣ ಚಾಲುಕ್ಯರ ಕಾಲದ ಅತಿ ಪ್ರಸಿದ್ಧ ಕೆರೆ ಸೂಳೆಕೆರೆ. ಈಗ ಅದನ್ನು 'ಶಾಂತಿಸಾಗರ'ವೆಂದು ಕರೆಯುತ್ತಾರೆ. ಈ ಕೆರೆಯ ನೀರು ಹತ್ತು ಚದುರ ಮೈಲು ಹಬ್ಬಿದೆ.

ಕೆರೆ ಕಟ್ಟುವ ಕಲೆಯಲ್ಲಿ ಹೊಯ್ಸಳರು ಚಾಲುಕ್ಯರನ್ನು ಮೀರಿಸಿದ್ದರು. ಇವರ ಕಾಲದಲ್ಲಿ ಕಡೂರಿನ ಹತ್ತಿರವಿರುವ ಅಯ್ಯನ ಕೆರೆ ಮತ್ತು ಮದಗದ ಕೆರೆಗಳ ಸೌಂದರ್ಯ ವರ್ಣನಾತೀತ.

ಇವುಗಳಲ್ಲಿ ಒಂದರ ಮಧ್ಯೆ ದ್ವೀಪಗಳಿವೆ. ಅವುಗಳನ್ನು ನೋಡಲು ಪ್ರವಾಸಿಗರಿಗೆ ರಸ್ತೆ ಮತ್ತು ಇತರ ಸೌಕರ್ಯಗಳನ್ನು ಮಾಡಿದರೆ ಕರ್ನಾಟಕದಲ್ಲೇ ಅವು ಅತ್ಯಂತ ಸುಂದರ ಪ್ರವಾಸಿ ತಾಣಗಳಾಗಬಲ್ಲವು.

ಹೊಯ್ಸಳರ ನಂತರ ಬಂದ ವಿಜಯನಗರದ ಅರಸರು ಭಾರೀ ಕೆರೆಗಳನ್ನು ಮತ್ತು ಅದ್ಭುತವಾದ ಅಣೆಕಟ್ಟುಗಳನ್ನು ಕಟ್ಟಿ ಈ ಶಾಸ್ತ್ರದಲ್ಲಿ ತಮ್ಮ ಪರಿಣತೆಯನ್ನು ಶಿಖರಕ್ಕೆ ಒಯ್ದಿದ್ದಾರೆ. ಹಂಪಿಗೆ ನೀರನ್ನು ಒದಗಿಸುವ ತುರ್ತು ಅಣೆಕಟ್ಟು ಇಂದಿಗೂ ಉಪಯುಕ್ತ. ಇಂತಹ ಅನೇಕ ಅಣೆಕಟ್ಟುಗಳನ್ನು ವಿಜಯನಗರದ ರಾಜರ ತುಂಗಭದ್ರೆಗು ಮತ್ತು ಕಾವೇರಿ ನದಿಗೂ ಕಟ್ಟಿದ್ದರು. ಇವತ್ತಿಗೂ ಅವು ಜನಗಳಿಗೆ ನೀರನ್ನು ಕೊಡುತ್ತಿವೆ. ಕೃಷ್ಣದೇವರಾಯನ ಕಾಲ (ಕ್ರಿ.ಶ.೧೫೦೯-೩೦) ಕೆರೆ ಕಟ್ಟುವ ಕಾಲದ ಉಚ್ಛ್ರಾಯ ಕಾಲ. ಅವನು ಹೊಸಪೇಟೆಯಲ್ಲಿ ಕಟ್ಟಿದ ರಾಯರ ಕೆರೆ ಈಗ ಹಾಳು ಬಿದ್ದಿದೆ. ಈ ಹಾಳಾದ ಕೆರೆಯ ಎತ್ತರದ ಕಟ್ಟೆ ಇವತ್ತಿಗೂ ವಿಸ್ಮಯಕಾರಿಯಾಗಿದೆ. ಕೃಷ್ಣದೇವರಾಯನ ಕಾಲದ ಅತ್ಯಂತ ಅದ್ಭುತವಾದ ಕೆರೆ ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ಮಾಸೂರಿನ ಹತ್ತಿರವಿರುವ ಮದಗದ ಕೆರೆ. ಕೃಷ್ಣದೇವರಾಯನ ಸಾಮಂತ, ಕೆಳದಿ ಸದಾಶಿವ ನಾಯಕನ ಆದೇಶದ ಮೇಲೆ ಬಂಕಾಪುರದ ಮಾದಣ್ಣ ಒಡೆಯರು ಈ ಕೆರೆಯನ್ನು ಕಟ್ಟಿಸಿದರು. ಇದರ ಒಡ್ಡಿನ ತಳಹದಿಯು ೮೦೦ ಅಡಿ ಅಗಲ ಮತ್ತು ಮೇಲ್ಭಾಗದಲ್ಲಿ ೪೦೦ ರಿಂದ ೬೦೦ ಅಡಿ ಅಗಲವಾಗಿದೆ. ಇದರ ಎತ್ತರ ಕುಮುದ್ವತಿ ನದಿಯಿಂದ ೧೦೦ ಅಡಿ ಎತ್ತರದಲ್ಲಿದೆ. ಇದನ್ನು ಬ್ರಿಟಿಷರು ನೋಡಿದಾಗ, ಇಷ್ಟು ದೊಡ್ಡ ಮಣ್ಣಿನ ಒಡ್ಡನ್ನು ಕಟ್ಟುವ ಕಲೆ ಆಗಿನ ಕಾಲದಲ್ಲಿ (ಹತ್ತೊಂಬತ್ತನೆಯ ಶತಮಾನದ ಮಧ್ಯೆ) ಯುರೋಪಿಯನರಿಗೆ ಗೊತ್ತಿರಲಿಲ್ಲ ಎಂದಿದ್ದಾರೆ.

ವಿಜಯನಗರ ಕಾಲದ ನಂತರ ಪಾಳೆಯಗಾರರು ಕೆರೆಗಳನ್ನು ಕಟ್ಟುತ್ತಿದ್ದುದಕ್ಕೆ ಚಿತ್ರದುರ್ಗದ ನಾಯಕರು ಒಳ್ಳೆಯ ಉದಾಹರಣೆ. ಅವರು ಚಿತ್ರದುರ್ಗದ ಊರಿಗೆ ಕುಡಿಯುವ ನೀರಿನ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಮಾಡಿದ್ದರು. ಕೋಟೆಯ ಮೇಲ್ಭಾಗದಲ್ಲಿ ಬಿದ್ದ ನೀರನ್ನು ಒಂದರ ಕೆಳಗೆ ಒಂದು ಹೊಂಡಕ್ಕೆ ಒಯ್ದು ಕೊನೆಗೆ ಊರಿನಲ್ಲಿ ಕೊಳವೆಗಳ ಮೂಲಕ ನೀರನ್ನು ಸಾಗಿಸಿ ಸಂತೆಹೊಂಡಕ್ಕೆ ತಲುಪಿಸುತ್ತಿದ್ದರು. ಇತ್ತೀಚಿನವರೆಗೆ ಸಂತೆಹೊಂಡದಲ್ಲಿ ನೀರು ಬರುತ್ತಿತ್ತು. ಆದರೆ ಈ ವ್ಯವಸ್ಥೆಯ ಇತರ ಭಾಗಗಳು ಹಾಳಾಗಿ ಹೋಗಿ, ಚಿತ್ರದುರ್ಗಕ್ಕೆ ನೀರನ್ನು ಸರಬರಾಜು ಮಾಡಲು ಬೇರೆ ವ್ಯವಸ್ಥೆ ಮಾಡಬೇಕಾಗಿದೆ. ೧೭ನೇ ಶತಮಾನದಲ್ಲಿ ಆಳಿದ ಬಿಜಾಪುರದ ಆದಿಲ್‌ಶಾಹಿಗಳು ತಮ್ಮ ರಾಜಧಾನಿಗೆ ಕುಡಿಯುವ ನೀರಿನ ವ್ಯವಸ್ಥೆಯನ್ನು ಜಾಣ್ಮೆಯಿಂದ ಮಾಡಿದರು. ಎತ್ತರದ ಮೇಲೆ ಕೆರೆಗಳನ್ನು ಕಟ್ಟಿ ಇಳಿಜಾರಿನ ಲಾಭವನ್ನು ಪಡೆದು ಕೊಳವೆಗಳ ಮುಖಾಂತರ ಬಿಜಾಪುರಕ್ಕೆ ಕುಡಿಯುವ ನೀರನ್ನು ಒದಗಿಸುತ್ತಿದ್ದರು. ಕಾಲಕ್ರಮೇಣ ನಿರ್ಲಕ್ಷ್ಯತೆಯಿಂದ ಈ ವ್ಯವಸ್ಥೆ ಕುಸಿದು ಹೋಯಿತು. ಅವರು ಕಟ್ಟಿದ ತಾಜ್ ಬಾವಡಿಯಲ್ಲಿ ಇಂದಿಗೂ ನೀರು ಇರುತ್ತದೆ. ಅವರು ಅನುಸರಿಸಿದ ಮಾರ್ಗವನ್ನು ಇಂದಿಗೂ ಅನುಸರಿಸುವ ಹಾಗೆ ಇದೆ. ಬೆಂಗಳೂರಿಗೆ ಕುಡಿಯುವ ನೀರನ್ನು ಒದಗಿಸಲು ಕೆಂಪೇಗೌಡ ೧೬ನೇ ಶತಮಾನದಲ್ಲಿ ಕೆಂಪಾಂಬುಧಿ, ಧರ್ಮಾಂಬುಧಿ ಮತ್ತು ಇನ್ನು ಅನೇಕ ಕೆರೆಗಳನ್ನು ಕಟ್ಟಿದನು.

೧೮ನೇ ಶತಮಾನದ ಉತ್ತರಾರ್ಧದಲ್ಲಿ ಬ್ರಿಟಿಷರಿಗೂ, ಹೈದರ್, ಟಿಪ್ಪು ಮತ್ತು ಮರಾಠರಿಗು ಸತತವಾಗಿ ಯುದ್ಧ ನಡೆಯುತ್ತಿತ್ತು. ಈ ಯುದ್ಧಗಳ ಕಾಲದಲ್ಲಿ ಕೆರೆಗಳು ಶತ್ರುಗಳಿಗೆ ನೀರು ಕೊಡಬಾರದೆಂದು ಅವುಗಳನ್ನು ಹಾಳು ಮಾಡಲಾಯಿತು. ದಿವಾನ್ ಪೂರ್ಣಯ್ಯ ಹಳೆಯ ಮೈಸೂರಿನ ಎಲ್ಲಾ ಕೆರೆಗಳನ್ನು ದುರಸ್ತಿ ಮಾಡಿಸಿದರು. ಅವನ ಕಾಲದ ನಂತರ ಬ್ರಿಟಿಷರು ಸಣ್ಣ ಕೆರೆಗಳನ್ನು ಅಲಕ್ಷಿಸಿದರು.[೫] ದೊಡ್ಡ ಕೆರೆಗಳಿಂದ ಆದಾಯ ಬರುತ್ತಿದ್ದುದರಿಂದ ಅವುಗಳನ್ನು ಕಾಪಾಡುತ್ತಿದ್ದರು. ಅವರಿಗೆ ಬ್ರಿಟಿಷರು ಯಾವ ಉತ್ತೇಜನವನ್ನು ಕೊಡಲಿಲ್ಲವಾದ್ದರಿಂದ ಸಾವಿರಾರು ಕೆರೆಗಳು ದಾಖಲೆಯಲ್ಲಿ ಮಾತ್ರ ಉಳಿದಿವೆ. ಇತ್ತೀಚೆಗೆ ಭಾರೀ ಅಣೆಕಟ್ಟುಗಳ ಬಗ್ಗೆ ವ್ಯಾಮೋಹ ಹೆಚ್ಚಾಗಿದೆ. ಸಣ್ಣ ಕೆರೆಗಳ ನಾಶ ನಮ್ಮ ಕಣ್ಣೆದುರಿಗೆ ನಡೆಯುತ್ತಿದೆ. ನಗರೀಕರಣ ಹೆಚ್ಚಾಗಿ, ನಗರಗಳು ಬೆಳೆದ ಹಾಗೆ ಕೆರೆಗಳ ಅವನತಿ ಯಥೇಚ್ಛವಾಗಿ ನಡೆದಿದೆ. ಅವುಗಳಿಗೆ ಚರಂಡಿ ನೀರನ್ನು ಬಿಟ್ಟು, ನಾಶ ಮಾಡಲಾಗುತ್ತಿದೆ. ಬ್ರಿಟಿಷರು ಹೋದ ಮೇಲೆ ಸ್ವಾತಂತ್ರ್ಯ ಬಂದ ಮೇಲೂ ಭಾರೀ ಅಣೆಕಟ್ಟುಗಳ ಆಕರ್ಷಣೆ ಇನ್ನೂ ಹಾಗೆ ಇದೆ. ಅವುಗಳ ಜತೆಗೆ ಕೊಳವೆ ಬಾವಿಗಳನ್ನು ತೆಗೆಯುವುದು ಹೆಚ್ಚಾಗಿದೆ. ಕೆರೆಗಳ ಜತೆಗೆ ಇಂದು ಸೇದೋ ಬಾವಿಗಳು ಬರಿದಾಗಿವೆ. ಇದುವರೆಗೂ ಸರ್ಕಾರಕ್ಕೆ ನೀರಿನ ಸಮಸ್ಯೆಗೆ ತಕ್ಷಣ ಹೊಳೆಯುತ್ತಿದ್ದ ಪರಿಹಾರಗಳು ಭಾರೀ ಅಣೆಕಟ್ಟುಗಳು ಮತ್ತು ಕೊಳವೆ ಬಾವಿಗಳು ಈ ಎರಡು ಪರಿಹಾರಗಳಿಂದ ಲಾಭ–ನಷ್ಟ ಸರಿಸಮನಾಗಿವೆ.

ಈ ಶತಮಾನದಲ್ಲಿ ಭಯಾಂತ್ರಿಕತೆ (ಸಾಯಿಲ್ ಮೆಕ್ಯಾನಿಕ್ಸ್)ಯ ವಿಜ್ಞಾನ ಅಭಿವೃದ್ಧಿಯಾಗಿದೆ. ಮಣ್ಣಿನ ಗುಣಗಳ ತೃಪ್ತಿಕರ ವಿಶ್ಲೇಷಣೆಯ ವಿಧಾನ ತಂತ್ರಗಳು ಉತ್ತಮವಾಗಿವೆ. ಮಣ್ಣನ್ನು ಒತ್ತಿ ಅಡಕ ಮಾಡಲು ಹಾಗೂ ಅವಶ್ಯವಾದ ಮಣ್ಣನ್ನು ಏರಿಯ ಮೇಲೆ ವೇಗವಾಗಿ ಒಟ್ಟಲು ಯಂತ್ರ ಸಾಧನೆಗಳು ರೂಪಿತವಾಗಿವೆ. ಅಂತೆಯೇ ಮಣ್ಣು ಏರಿಯ ನಿರ್ಮಾಣ ಉಪಯೋಗಿಸುವ ಸಾಮಗ್ರಿ ಹಿಂದೆ ಇದ್ದಂತೆಯೇ ಇದೆ. ಆದರೂ ನಿರ್ಮಾಣ ತಂತ್ರ ಮತ್ತು ಬಳಸುವ ಮಣ್ಣಿನ ಗುಣಗಳ ಹಾಗೂ ವರ್ತನೆಯ ಬಗ್ಗೆ ನಿಶ್ಚಿತವಾದ ಜ್ಞಾನ, ಇವು ಹೆಚ್ಚು ದೊಡ್ಡದಾದ ಎತ್ತರವಾದ ಕಟ್ಟೆಗಳ ರಚನೆಯನ್ನು ಹೆಚ್ಚು ಸಂರಕ್ಷಿತಗೊಳಿಸಿವೆ, ಕಾರ್ಯ ಸಾಧ್ಯಗೊಳಿಸಿವೆ.

**ಕೆರೆಗಳ ಸಂರಕ್ಷಣೆ**

ಕೆರೆಗಳ ನಿರ್ಮಾಣ ಎಷ್ಟು ಪ್ರಾಮುಖ್ಯತೆ ಪಡೆದುಕೊಂಡಿದೆಯೋ ಅದರಷ್ಟೇ ಪ್ರಾಮುಖ್ಯತೆಯನ್ನು ಕೆರೆಗಳ ಸಂರಕ್ಷಣೆಯೂ ಒಳಗೊಂಡಿದೆ. ಈ ಹಿನ್ನೆಲೆಯಲ್ಲಿ ಕೆರೆಗಳ ಸಂರಕ್ಷಣೆಯ ಚಾರಿತ್ರಿಕ ಅವಲೋಕನ ಮುಖ್ಯವಾಗುತ್ತದೆ. ಪ್ರತಿಯೊಂದು ನೀರಾವರಿ ಕಾಮಗಾರಿಯೂ ನಿರ್ದಿಷ್ಟ ಅವಧಿಗೆ ಮಾತ್ರ ಉಪಯುಕ್ತವಾಗಿರುತ್ತದೆ. ಸೂಕ್ತವೂ, ಸಕಾಲಿಕವೂ ಆದ ಸಂರಕ್ಷಣೆ ಹಾಗೂ ದುರಸ್ತಿಗಳಿಂದ ಈ ಅವಧಿಯನ್ನು ಹೆಚ್ಚಿಸಲು ಸಾಧ್ಯ. ಅಂತಹ ಪ್ರಯತ್ನಗಳ ಅಭಾವದ ಪರಿಣಾಮವಾಗಿ ಕೆರೆ ಹೂಳಿನಿಂದ ತುಂಬಿ ಹೋಗುತ್ತದೆ ಅಥವಾ ಅದರ ಏರಿ ದುರ್ಬಲವಾಗಿ ಒಡೆದು ಹೋಗುತ್ತದೆ. ಇಲ್ಲವೇ ಕೆರೆಯಲ್ಲಿ ನಿಲ್ಲುವ ನೀರು ಒಡಕು ತೂಬುಗಳಲ್ಲಿ ಸೋರಿ ಹೋಗುತ್ತದೆ. ನೀರಾವರಿ ಕಾಲುವೆ ಅಸಡ್ಡೆಗೆ ಗುರಿಯಾದರೆ ಈ ಎಲ್ಲಾ ದುಷ್ಪರಿಣಾಮಗಳು ಅದಕ್ಕೂ ಅಷ್ಟೇ ಮಟ್ಟಿಗೆ ಸಂಭವಿಸುತ್ತವೆ. ನೀರಾವರಿ ಕಾರ್ಯದ ಸೂಕ್ತ ಸಂರಕ್ಷಣೆ, ಅದರ ನಿರ್ಮಾಣದಷ್ಟೆ ಮುಖ್ಯ. ಇದನ್ನು

ಹಿರಿಯರು ಕಂಡುಕೊಂಡಿದ್ದರು. ಅವರು ಹೊಸ ಕೆರೆಗಳ ನಿರ್ಮಾಣದ ಜೊತೆಗೆ ಹಳೆ ಕೆರೆಗಳ ಸಂರಕ್ಷಣೆಯ ಕಡೆ ಹೆಚ್ಚು ಒತ್ತು ಕೊಟ್ಟಿರುವುದು ಶ್ಲಾಘನೀಯ.

ಭಾರತದ ಉತ್ತರದ ಒಣ ಪ್ರದೇಶದಲ್ಲಿ ಮಣ್ಣು ಪ್ರಧಾನವಾಗಿ ಅತಿ ಕಪ್ಪು ಅಥವಾ ಸುಮಾರು ಕಪ್ಪು (ಎರೆ ಮಣ್ಣು). ಒಂದೇ ಸಮನೆ ನೀರು ಹಾಯಿಸಿದರೆ ಅದು ಜೌಗು ಆಗುತ್ತದೆ. ಆದರೆ ದಕ್ಷಿಣ ಭಾಗದಲ್ಲಿ ಬಹುಮಟ್ಟಿಗೆ ಇರುವುದು ಕೆಂಪು ಜೇಡಿಮಣ್ಣು. ಅದು ನಿರಂತರ ನೀರಾವರಿಯಿಂದ ಕೆಟ್ಟ ಪರಿಣಾಮ ಉಂಟುಮಾಡುವುದಿಲ್ಲ. ಈ ಅಂಶಗಳೆಲ್ಲ ಸೇರಿದುದರ ಫಲವೇ ದಕ್ಷಿಣ ಭಾಗದಲ್ಲಿ ಬಹು ಸಂಖ್ಯೆಯಲ್ಲಿ ನೀರಾವರಿ ಕೆರೆಗಳು ನಿರ್ಮಿತವಾದುದ್ದು. ಮೈಸೂರು ರಾಜ್ಯದ ಕೆರೆಗಳ ಕ್ರಮಬದ್ಧ ದುರಸ್ತಿಗಾಗಿ ತನ್ನ ಗಮನವಿತ್ತ ಮೇಜರ್ ಸ್ಯಾಂಕಿಯ ಮಾತು ಹೀಗಿದೆ: "ಈ ಪ್ರದೇಶದಲ್ಲಿ ಜಲಸಂಗ್ರಹಣೆಯ ತತ್ವವನ್ನು ಎಷ್ಟರಮಟ್ಟಿಗೆ ಅನುಸರಿಸಲಾಗಿದೆ ಎಂದರೆ, ಈ ವಿಶಾಲ ಪ್ರದೇಶದಲ್ಲಿ ಹೊಸ ಕೆರೆಗೆ ಸೂಕ್ತವಾದ ನಿವೇಶನ ಹುಡುಕಲು ತುಂಬಾ ಚಾತುರ್ಯ ಬೇಕಾದೀತು. ಜೀರ್ಣೋದ್ಧಾರವೇನೋ ಸಾಧ್ಯವಿದೆ. ಆದರೆ ಈ ಬಗೆಯ ಹೊಚ್ಚ ಹೊಸ ಕೆಲಸವನ್ನು ಈ ಪ್ರದೇಶದಲ್ಲಿ ಆರಂಭಿಸಿದರೆ ಅದೇ ಬಯಲಿನ ಕೆಳಗಿನ ಇನ್ನೊಂದು ಯಾವುದಾದರೂ ಕೆರೆಗೆ ನೀರು ಹರಿಯುವುದು ತಪ್ಪಿ ಹೋಗುವುದು ಖಂಡಿತ. ಇದರಿಂದ ಪಟ್ಟಭದ್ರ ಹಿತಾಸಕ್ತಿಗಳು ಕೈ ಹಾಕಿದಂತಾಗುತ್ತದೆ."[೫೯]

ಸಂರಕ್ಷಣೆಗೆ ನೀಡಲಾಗಿದ್ದ ಮಹತ್ವ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ವಿಧಿಸಲಾಗಿರುವ ನಿಯಮಗಳಿಂದ ಸ್ಪಷ್ಟವಾಗುತ್ತದೆ. ಕಂದಾಯ ಮಾಫಿ ಕುರಿತು ಹೇಳುತ್ತಾ ಅರ್ಥಶಾಸ್ತ್ರ ಹೀಗೆನ್ನುತ್ತದೆ. "ಕೆರೆ ಇತ್ಯಾದಿಗಳ ಕೆಳಗೆ ಬೇಸಾಯ ಮಾಡುವ ವ್ಯಕ್ತಿಗಳು ಅಥವಾ ಯಾವುದೇ ರೀತಿಯ ಕಂದಾಯವೂ ಇಲ್ಲದೆ ಅಂತಹ ಭೂಮಿಯನ್ನು ಅನುಭವಿಸಲು ಅನುಮತಿ ಪಡೆದ ವ್ಯಕ್ತಿಗಳು ಕೆರೆ ಇತ್ಯಾದಿಗಳನ್ನು ಒಳ್ಳೆಯ ದುರಸ್ತಿಯಲ್ಲಿ ಇಟ್ಟಿರಬೇಕು. ಇಲ್ಲವಾದರೆ, ಅವರಿಗೆ ನಷ್ಟದ ಎರಡರಷ್ಟು ಜುಲ್ಮಾನೆಯ ಶಿಕ್ಷೆ ವಿಧಿಸಬೇಕು". ಸಂರಕ್ಷಣೆಗೆ ಮಹತ್ವ ಕೊಟ್ಟದ್ದು ಮಾತ್ರವಲ್ಲ ನೀರಾವರಿ ಕೆಲಸದ ಸಂರಕ್ಷಣೆಯ ಜವಾಬ್ದಾರಿ, ಆ ಕೆಲಸದಿಂದ ಫಲಾನುಭವ ಪಡೆಯುವ ವ್ಯಕ್ತಿಗಳ ಮೇಲೆ ಮಾತ್ರವೇ ಇರತಕ್ಕದ್ದು ಎನ್ನುವುದು ಅಂಗೀಕೃತ ನೀತಿಯಾಗಿತ್ತು.

**ಸಾಮಾನ್ಯ ಸಂರಕ್ಷಣಾ ಕ್ರಮಗಳು:**

ಸಾಮಾನ್ಯವಾಗಿ ಕೆರೆಯ ಸಂರಕ್ಷಣೆ ಹೀಗಿರುತ್ತದೆ:

೧. ಕೆರೆ ಅಂಗಳ ಹಾಗೂ ನಾಲೆಯ ತಳದಿಂದ ಕಾಲಕಾಲಕ್ಕೆ ಹೂಳು ತೆಗೆಯುವುದು.

೨. ಮಳೆಯಿಂದಾಗಲಿ ಇತರೆ ಕಾರಣಗಳಿಂದಾಗಲಿ ಮಣ್ಣು ಕಟ್ಟೆಗೆ ಎಲ್ಲಿಯಾದರೂ ಹಾನಿಯಾಗಿದ್ದಲ್ಲಿ ಮಣ್ಣು ಕೆಲಸ ಮಾಡಿ ಅದನ್ನು ಸರಿಪಡಿಸುವುದು.

೩. ತೂಬು, ಕೋಡಿಗಳಿಗೆ ಏನಾದರೂ ಹಾನಿಯಾಗಿದ್ದರೆ, ಕಾಲಕಾಲಕ್ಕೆ ಅದನ್ನು ದುರಸ್ತಿ ಮಾಡುವುದು.

೪. ಜಲಾನಯನ ಪ್ರದೇಶ ಒತ್ತುವರಿಯಾಗದಂತೆ ನೋಡಿಕೊಳ್ಳುವುದು.

೫. ಕೆರೆಯಾಳಕ್ಕೆ ಹರಿದು ಬರುವ ಹೂಳನ್ನು ತಡೆಯಲು ವ್ಯವಸ್ಥೆ ಮಾಡುವುದು.

ಹಿಂದೆ ಕೆರೆ ಅಥವಾ ನಾಲೆಯ ಸಂರಕ್ಷಣೆ ಮುಖ್ಯವಾಗಿ ಗ್ರಾಮ ಸಮುದಾಯದ ಹೊಣೆ

ಆಗಿತ್ತು. ಫಲಾನುಭವಿಗಳು ಆ ಸಮುದಾಯದ ಪ್ರಮುಖ ಭಾಗವಾಗಿದ್ದರು. ಅವರು ಈ ಕೆಲಸವನ್ನು ಹಳ್ಳಿಯ ಒಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳ ತಂಡಕ್ಕೆ ವಹಿಸುತ್ತಿದ್ದರು. ಆತ ಅಥವಾ ಅವರು ಸಂರಕ್ಷಣಾ ಕಾರ್ಯವನ್ನು ನಡೆಸುವ ಸಲುವಾಗಿ ಅವರಿಗೆ ಕೆಲವು ಭೂಮಿಗಳನ್ನು ಬಿತ್ತುವಟ್ಟ ಅಥವಾ ದಶವಂದವಾಗಿ ನೀಡುತ್ತಿದ್ದರು. ಇಲ್ಲವೆ ಕಂದಾಯದಲ್ಲಿ ರಿಯಾಯಿತಿ ನೀಡುತ್ತಿದ್ದರು. ಭಾರೀ ನೀರಾವರಿ ಕಾರ್ಯಗಳಲ್ಲಿ ದುರಸ್ತಿ ಕಾರ್ಯವನ್ನು ನಡೆಸುವುದಕ್ಕಾಗಿ ಕೆಲವು ಸ್ಥಳೀಯ ತೆರಿಗೆಗೆಗಳ ಬಳಕೆಯ ಸೌಲಭ್ಯವನ್ನು ಸ್ಥಳೀಯ ಸಂಸ್ಥೆಗಳಿಗೆ ದೊರೆಗಳು ನೀಡುತ್ತಿದ್ದರು. ದುರಸ್ತಿ ಕಾರ್ಯಗಳನ್ನು ನಡೆಸಲು ಸ್ಥಳೀಯ ಸಂಸ್ಥೆಗಳಿಗೆ ನಗದು ಅನುದಾನವನ್ನು ಕೊಡಲು ಆಗುತ್ತಿತ್ತು. ಇನ್ನೂ ಕೆಲವು ಕಡೆಗಳಲ್ಲಿ (ಸರ್ಕಾರಿ) ಭೂಮಿಯನ್ನು ನೀಡಲಾಗುತ್ತಿತ್ತು. ಕೆಲವು ಸಂದರ್ಭಗಳಲ್ಲಿ ಕೆರೆ ಸಂರಕ್ಷಣೆಗಾಗಿ ಬಂಡಿಗಳನ್ನು ಭೂಮಿಯನ್ನು ನೀಡಲಾಗುತ್ತಿತ್ತು. ಬಂಡಿಗಳನ್ನು ಕೊಡುತ್ತಿದ್ದುದು ಕೆರೆಯಿಂದ ಮತ್ತು ಕೆರೆ ಮಣ್ಣನ್ನು ಸಾಗಿಸುವುದಕ್ಕೆ.

ಸಂರಕ್ಷಣೆ ಹಾಗೂ ದುರಸ್ತಿ ಕಾರ್ಯಗಳಿಗೆ ನೀಡಲಾಗಿದ್ದ ಮಹತ್ವವನ್ನು ಸೂಚಿಸುವ ಅನೇಕ ಶಾಸನಗಳಿವೆ. ಕುರ್ತಕೋಟಿ, ಮಿರ್ಲೆ, ಸಿರೂರು ಮತ್ತು ತೊಣ್ಣೂರು ಶಾಸನಗಳು ಸಂರಕ್ಷಣೆ ದುರಸ್ತಿಗಳಿಗಾಗಿ ಕೆಲವು ಸ್ಥಳೀಯ ತೆರಿಗೆಗಳನ್ನು ನೀಡಿದ್ದನ್ನು ದಾಖಲು ಮಾಡಿವೆ.

ಕದಲಗೆರೆಯ ಕೆರೆಯ ಹಿತಕ್ಕಾಗಿ ಜುಲ್ಮಾನೆಗಳಿಂದ ಬರುವ ಹಣವನ್ನು ಕುರ್ತಕೋಟಿ ಅಗ್ರಹಾರದ ಮಹಾಜನರಿಗೆ ನೀಡಿದ್ದು, ಗದಗ ತಾಲ್ಲೂಕಿನ ಆರನೇ ವಿಕ್ರಮಾದಿತ್ಯನ ಕಾಲದ ಕುರ್ತಕೋಟಿ ಶಾಸನದಲ್ಲಿ (೧೦೮೨) ದಾಖಲಾಗಿದೆ. ಗೋಣ ಸಮುದ್ರ ಎಂಬ ಸ್ಥಳೀಯ ಕೆರೆಯ ಅಂಗಳದಿಂದ ಹೂಳು ಎತ್ತಲು ಹಾಗೂ ತೂಬಿನ ಕಲ್ಲು ಮತ್ತು ಮರಗಳನ್ನು ದುರಸ್ತಿ ಮಾಡಲು ದೇವರಿಗೆಂದು ಕಂದಾಯವಿಲ್ಲದೆ ಬೆಟ್ಟದ ಭೂಮಿಯನ್ನು ಬಿಟ್ಟು ಉಳಿದ ಎಲ್ಲಾ ತೋಟಗಳಿಂದಲೂ ವಸೂಲಾದ ಕಂದಾಯದ ಹಣವನ್ನು ನೀಡಲಾಯಿತು ಎನ್ನುವುದನ್ನು ಧಾರವಾಡ ಜಿಲ್ಲಾ ಮುಂಡರಗಿ(ಈಗಿನ ಗದಗ ಜಿಲ್ಲೆ) ತಾಲ್ಲೂಕಿನ ಡಂಬಳ ಶಾಸನ (೧೧೮೪) ದಾಖಲು ಮಾಡುತ್ತದೆ. ೧೩ನೇ ಶತಮಾನದಲ್ಲಿ ಹೊಯ್ಸಳ ರಾಜ ನರಸಿಂಹ, ಹರವುನಾಲೆಯ ವಾರ್ಷಿಕ ದುರಸ್ತಿಗಾಗಿ ತೊಣ್ಣೂರು ಅಗ್ರಹಾರದ ಮಹಾಜನರಿಗೆ ಹೊಳೆಯ ಸುಂಕದಿಂದ ೬೪ ಗದ್ಯಾಣಗಳನ್ನು ನೀಡಿದ. ಕಾರ್ಯ, ಹೊಸಹಳ್ಳಿ, ಬೆಳತೂರು, ಅರಸೀಬೀದಿ ಹಾಗೂ ಬೆಳವಂಕಿ ಶಾಸನಗಳು ಸಂರಕ್ಷಣಾ ಕಾರ್ಯಕ್ಕಾಗಿ ನಗದು ದಾನ ಇಲ್ಲವೆ ಭೂಮಿ ದಾನ ಮಾಡಿದ್ದನ್ನು ದಾಖಲು ಮಾಡಿವೆ.

ನಾಗವರ್ಮ ಕಟ್ಟಿಸಿದ ದೇವಿಕೆರೆ ಹಾಗೂ ಪೆರಿಯ ಕೆರೆಗಳ ಸಂರಕ್ಷಣೆಗಾಗಿ ನಾಲ್ಕು ಖಂಡುಗ ಭೂಮಿಯನ್ನು ಬಿತ್ತುವಟ್ಟವೆಂದು ದಾನ ಮಾಡಿದ್ದನ್ನು ಕ್ರಿ.ಶ.೯೮೮ರ ಕಾರ್ಯ ಶಾಸನ (ನಂಜನಗೂಡು) ದಾಖಲಿಸುತ್ತದೆ.[೮೦] ಸೊಮವಾರಪೇಟೆಯ (ಕೊಡಗು) ಕ್ರಿ.ಶ.೧೦೭೦ರ ಹೊಸಹಳ್ಳಿ ಶಾಸನ ಗೌರಾಳಿ ಕೆರೆಯ ಸಂರಕ್ಷಣೆಗಾಗಿ ೪೦ ಗದ್ಯಾಣಗಳನ್ನು ದಾನ ವಿತ್ತುದನ್ನು ದಾಖಲು ಮಾಡುತ್ತದೆ. ಒಂದು ಕೆರೆಯ ಸಂರಕ್ಷಣೆಗಾಗಿ ಹತ್ತು ಖಂಡುಗ ಭೂಮಿಯನ್ನು ದಾನವಿತ್ತ ವಿವರ ಬೆಳತೂರು (ಹೆಗ್ಗಡದೇವನ ಕೋಟೆ) ಶಾಸನದಲ್ಲಿ ದಾಖಲಾಗಿದೆ. ಬೆಳವಣಿಕೆಯ (ರೋಣ) ಪಳಗೆಯ ಚಾವುಂಡಮಯ್ಯ

ಹಾಗೂ ಆತನ ಹೆಂಡತಿ ಶಾಂತಿಕಬ್ಬೆ ತಾವು ಕಟ್ಟಿಸಿದ ಮುತ್ತಲಗೆರೆಯ ಸಂರಕ್ಷಣೆಗಾಗಿ ಭೂಮಿಯನ್ನು ನೀಡಿದರು.

ಸಂರಕ್ಷಣಾ ಕಾರ್ಯಕ್ಕಾಗಿ ಬಂಡಿಗಳನ್ನು ನೀಡಿದ ವಿಶಿಷ್ಟ ಕ್ರಮವನ್ನು ಹೊಳೆನರಸೀಪುರ, ಹಿರೇನಲ್ಲೂರು ಹಾಗು ಬೊಳೇಕ್ಯಾತನಹಳ್ಳಿ ಶಾಸನಗಳಲ್ಲಿ ದಾಖಲು ಮಾಡಲಾಗಿದೆ. ಕೆರೆಯ ನಿರ್ಮಾಣದ ಸಲುವಾಗಿ ಬಂಡಿ ಸಾಮಗ್ರಿ, ಕೂಲಿ, ಬಂಡಿ, ಹೊಡೆಯುವವ, ಬಂಡಿಗಳಿಗಾಗಿ, ಕೆರೆ ತೋಡುವ ಕೆಲಸದ ಮೇಲುಸ್ತುವಾರಿಗಾಗಿ, ಎರಡು ತೂಬುಗಳನ್ನು ಕಟ್ಟಿದ ಕಲ್ಲು ಕೆಲಸದವನಿಗಾಗಿ ಹಾಗೂ ಇತರೆ ಸಾದಿಲ್ವಾರು ವೆಚ್ಚಕ್ಕಾಗಿ ಮಹಾಪ್ರಧಾನ ಮಾದಿಗದೇವ ದಣ್ಣಾಯಕ ೨೨೦೦ ಗದ್ಯಾಣಗಳನ್ನು, ೮ ಪಣಗಳನ್ನು ಖರ್ಚು ಮಾಡಿದ ಎಂದು ಕ್ರಿ.ಶ. ೧೨೩೨ರ ಹೊಳೆನರಸೀಪುರ (ಹಾಸನ) ಶಾಸನ ಹೇಳುತ್ತದೆ.[೪] ಬಂಡಿಗಳ ಸಂರಕ್ಷಣೆಗಾಗಿಯೇ ೮೦೦ ಗದ್ಯಾಣಗಳನ್ನು ನಿಗದಿಮಾಡಿದ್ದು, ಕೆರೆ ನಿರ್ಮಾಣ ಕಾಲದಲ್ಲಿಯೇ ಅದರ ಸಂರಕ್ಷಣೆಯ ಬಗ್ಗೆಯೂ ಯೋಚಿಸಲಾಗಿತ್ತು ಎನ್ನುವುದನ್ನು ನಿಚ್ಚಳವಾಗಿ ತೋರಿಸುತ್ತದೆ. ಒಂದು ಕೆರೆಯ ದುರಸ್ತಿಗೆ ಮಣ್ಣು ಸಾಗಿಸಲು ಮಾದಿರಾಜನೆಂಬಾತ ಬಂಡಿಯೊಂದನ್ನು ನೀಡಿದ್ದನ್ನು ಕ್ರಿ.ಶ.೧೨೦೭ರ ಹಿರೇನೆಲ್ಲೂರು (ಕಡೂರು) ಶಾಸನ ದಾಖಲು ಮಾಡಿದೆ. ಅರಕಲಗೂಡಿನ ಬೊಳೇಕ್ಯಾತನಹಳ್ಳಿ ಶಾಸನದಲ್ಲಿ (೧೩೭೧) ಕೆರೆಯ ಸಲುವಾಗಿ ಬಂಡಿಗಳನ್ನು ಇಟ್ಟುಕೊಳ್ಳಲು ಹಳ್ಳಿಯ ಕೆಲವು ಮಂದಿಗೆ ಭೂಮಿಯನ್ನು ತೆರಿಗೆಗಳನ್ನು ಇತ್ತಿದ್ದು ದಾಖಲಾಗಿದೆ. ಕೆಲವು ಸುಂಕಗಳನ್ನು ಮಾಫಿ ಮಾಡಲಾಯಿತು. ಬಂಡಿಗಳಿಗೆ ಬೇಕಾದ ಕೋಣ, ಮರ (ಕಿರುಮುಟ್ಟು), ಕಬ್ಬಿಣ ಹಾಗೂ ಕೀಲೆಣ್ಣೆಗಳ ವೆಚ್ಚವನ್ನು ದಾನ ಪಡೆದವರೇ ತಮ್ಮ ಸ್ವಂತ ಹಣದಿಂದ ನಿಭಾಯಿಸಬೇಕೆಂದು ಶಾಸನ ನಿಗದಿ ಮಾಡುತ್ತದೆ. ಕೆರೆಗಳ ಸಂರಕ್ಷಣೆಗಾಗಿ ಭೂಮಿ, ಹಣ ನೀಡುವುದನ್ನು ಈ ಶಾಸನಗಳು ತಿಳಿಸುತ್ತದೆ. ಇಷ್ಟೇ ಅಲ್ಲದೆ ೧೫ನೇ ಶತಮಾನದ ಮಿರ್ಲೆ ಶಾಸನ ಹಂಪಾಪುರದ ಮಹಾಜನರು ತಮ್ಮ ಹಳ್ಳಿಯ ನಾಲೆ ಎಂಟು ಹತ್ತು ಕಡೆಗಳಲ್ಲಿ ಒಡೆದು ಹೋಗಿದ್ದಾಗ ಅದನ್ನು ಸರಿಪಡಿಸಲು ತಮಗೆ ಶಕ್ತಿಯಲ್ಲದೆ, ನಾಲೆಯ ಸಂರಕ್ಷಣೆಯ ಕೆಲಸವನ್ನು ಹಳ್ಳಿ ಹಿರಿಯೂರಿನ ಗೌಂಡಪ್ರಜೆಗಳಿಗೆ ವಹಿಸಲು ತೀರ್ಮಾನಿಸಿದರು ಎಂದು ತಿಳಿಸುತ್ತದೆ.

ಆ ಸಲುವಾಗಿ ಅವರು ಒಂದು ಮನೆ, ೧೨ ಖಂಡುಗ ತರಿ ಭೂಮಿ ಹಾಗೂ ೧೫೦ ಕಂಬ ಖುಷ್ಕಿ ಭೂಮಿಗಳನ್ನು ಮಾರಿದರು. (ಈ ಮಾರಾಟ ನಾಲೆ ಸಂರಕ್ಷಣೆಗಷ್ಟೇ ಅಲ್ಲ. ತಮ್ಮ ಊರಿನಲ್ಲಿ ಒಂದು ಛತ್ರವನ್ನು ಕಟ್ಟಿಸಲೂ ಕೂಡ). ಈ ಶಾಸನ ನಮಗೆ ಸ್ಪಷ್ಟವಾಗಿ ಹೇಳುತ್ತದೆ. ನೀರಾವರಿ ಕೆಲಸದ ಸಂರಕ್ಷಣೆ ಹಾಗೂ ದುರಸ್ತಿ ಕಾರ್ಯ ಗ್ರಾಮ ಸಮುದಾಯದ ಸದಸ್ಯರ ಆದ್ಯ ಜವಾಬ್ದಾರಿ ಎಂದು ಪರಿಗಣಿತವಾಗಿತ್ತು ಮತ್ತು ಈ ಸಂಬಂಧವಾಗಿ ಅವರು ತಮ್ಮ ಕರ್ತವ್ಯವನ್ನು ನಿಭಾಯಿಸಲು ಅಶಕ್ತರಾಗಿದ್ದರೆ ಅದನ್ನು ಇತರರಿಗೆ ವಹಿಸಲಾಗುತ್ತಿತ್ತು.

ಒಂದು ಕೆರೆಯ ಸಂರಕ್ಷಣೆಗಾಗಿ ಇದ್ದ ಪೂರಾ ವ್ಯವಸ್ಥೆಯನ್ನು ವಿವರವಾಗಿ ತಿಳಿಸುವ ಇನ್ನೊಂದು ಸ್ವಾರಸ್ಯಕರ ಶಾಸನ ಮುಳುಬಾಗಿಲ ತಾಲ್ಲೂಕಿನ ಕ್ರಿ.ಶ.೧೪೯೬ರ ರಾಜಗುಂಡ್ಲಹಳ್ಳಿ ಶಾಸನ.[೨] ಆ ಶಾಸನ ನಿರ್ಮಾತೃವಿಗೂ ಕೆರೆ ಕೆಳಗಿನ ಪ್ರಧಾನ ಫಲಾನುಭವಿಗೂ (ದೇವಾಲಯ)

ನಡುವೆ ಆದ ಒಪ್ಪಂದ. ಅದು ಹೀಗೆನ್ನುತ್ತದೆ: "ಗುಂಡ್ಲನಹಳ್ಳಿ ಹಳೆಯ ಕೆರೆಯ ಪಶ್ಚಿಮಕ್ಕೆ ಮಾವಿನಹಳ್ಳದಲ್ಲಿ ನೀವು ಹಣ ವ್ಯಯಿಸಿ ಕನ್ನೆಗೆರೆ (ಹೊಸಕೆರೆ) ಕಟ್ಟಿಸಿದ್ದರ ಸಲುವಾಗಿ ಅವುಗಳ ಹುಟ್ಟುವಳಿಯಲ್ಲಿ ನಾಲ್ಕು ಭಾಗ ಅಕ್ಕಿಯನ್ನು ನೀವು ಸುಂಕವಿಲ್ಲದೆ ಅನುಭವಿಸಬಹುದು. ಈ ನಾಲ್ಕು ಭಾಗಗಳು ಮುಗಿದ ಮೇಲೆ ಈ ಕೆರೆಯ ಕೆಳಗೆ ಮಾಡಲಾಗುವ ಭತ್ತದ ಗದ್ದೆಗಳಲ್ಲಿ ಹತ್ತರಲ್ಲಿ ಮೂರರಷ್ಟನ್ನು ದಶವಂದವಾಗಿ ಕೊಟ್ಟು, ಕೊಡುಗೆಯಾಗಿ ನಿಮಗೆ ನೀಡುತ್ತೇನೆ. ಉತ್ತಮ, ಮಧ್ಯಮ ಹಾಗೂ ಅಧಮ ಭೂಮಿಯನ್ನು ಈ ಕೆರೆಯ ಕಟ್ಟು ಕೊಡಿಗೆ ಮಾನ್ಯವಾಗಿ ನೀಡುತ್ತೇವೆ. ಒಂದು ಖಂಡುಗ ಭೂಮಿಯನ್ನು ನಿಮಗೆ ಕಟ್ಟುಕೊಡಿಗೆ ಮಾನ್ಯವಾಗಿ ಕೊಡುತ್ತೇವೆ.

೧೮ನೇ ಶತಮಾನದ ಕೊನೆಯಲ್ಲೂ ಇಂಥದೊಂದು ವ್ಯವಸ್ಥೆ ರೂಢಿಯಲ್ಲಿತ್ತು ಎನ್ನುವುದು ೧೮೦೦ರಲ್ಲಿ ಮೈಸೂರಿನಲ್ಲಿ ಪ್ರವಾಸ ಮಾಡಿದ ಫ್ರಾನ್ಸಿಸ್ ಬುಕಾನನ್‌ನ ಅಭಿಪ್ರಾಯವಾಗಿದೆ. ಆತ ಹೇಳುತ್ತಾನೆ; ಕೋಲಾರ ಸೀಮೆಯಲ್ಲಿ ನೀರಾವರಿ ಆಗುವುದು ಬಹುಮಟ್ಟಿಗೆ ಜಲಾಶಯಗಳಿಂದಲೇ. ಯಾವುದೇ ಶ್ರೀಮಂತ ಒಂದು ಜಲಾಶಯವನ್ನು ಅಥವಾ ಕೆರೆಯನ್ನು ಕಟ್ಟಿಸಿದಾಗ ಅವನಿಗೆ ಹಾಗೂ ಅವನ ಉತ್ತರಾಧಿಕಾರಿಗಳಿಗೆ ಕೆರೆ ನೀರು ಒದಗಿಸುವ ಭೂಮಿಯ ಹತ್ತನೆಯ ಒಂದು ಪಾಲನ್ನು ಕಂದಾಯವಿಲ್ಲದೆ ಕೊಡುವುದು ರೂಢಿಯಾಗಿತ್ತು. ಅಲ್ಲದೆ, ಹಾಗೆ ನೀರಾವರಿಯಾದ ಪ್ರತಿ ಖಂಡುಗ ಭೂಮಿಗೂ ನಿರ್ಮಾತೃ ಆರು ಸೇರು ರಾಗಿ ಬಿತ್ತನೆಯ ಭೂಮಿಯನ್ನು ಕಂದಾಯವಿಲ್ಲದೆ ಪಡೆಯುವ ಹಕ್ಕನ್ನು ಹೊಂದಿದ್ದ. ಇದು ಪ್ರತಿ ೧,೦೦೦ ಎಕರೆ ನೀರಾವರಿ ಭೂಮಿಗೆ ಸುಮಾರು ೧೪೬ ಎಕರೆ ಖುಷ್ಕಿ ಭೂಮಿಯಷ್ಟು ಆಗುತ್ತಿತ್ತು. ಆತ ಇವುಗಳನ್ನು ಅನುಭವಿಸುತ್ತಿದ್ದವರೆಗೂ ಕೆರೆಯ ದುರಸ್ತಿ ಅವನಿಗೆ ಕಡ್ಡಾಯವಾಗಿತ್ತು. ಕೆರೆ ಭಾರಿಯೂ ವಿಸ್ತಾರವೂ ಆಗಿದ್ದಲ್ಲಿ, ಅದನ್ನು ಕಟ್ಟಿದಾತನಿಗೆ ಹಾಗೂ ಆತನ ಉತ್ತರಾಧಿಕಾರಿಗಳಿಗೆ ಕೆರೆಯಿಂದ ನೀರಾವರಿಯಾಗುವ ಭೂಮಿಯಲ್ಲಿ ಕಾಲುಭಾಗ ಸಿಗುತ್ತಿತ್ತು. ಆದರೆ ಖುಷ್ಕಿ ಭೂಮಿ ಸಿಗುತ್ತಿರಲಿಲ್ಲ. ಮೂಲ ನಿರ್ಮಾತೃವಿನ ವಂಶ ನಿಂತು ಹೋದಲ್ಲಿ ಆ ಮಾನ್ಯದ ಭೂಮಿಯನ್ನು ಸರಕಾರವೇ ವಹಿಸಿಕೊಳ್ಳುತ್ತಿತ್ತು. ಕೆರೆಯನ್ನು ದುರಸ್ತಿಯಲ್ಲಿ ಇಟ್ಟಿರುತ್ತಿತ್ತು.

ಕೊಡಿಗೆ ಅಥವಾ ಕಟ್ಟುಕೊಡಿಗೆ ಇನ್ನೊಂದು ಸಾಮಾನ್ಯ ಬಳಕೆಯ ಶಬ್ದ – ಬಿತ್ತುವಟ್ಟ ಹಾಗೂ ದಶವಂದಗಳ ಹಾಗೆಯೇ ಇದೂ ಕೊಡುಗೆ ಅಥವಾ ಕೊಡಿಗೆ ಬಹುಮಾನ ಅಥವಾ ದಾನ, ಕೆರೆಯ ಜೀರ್ಣೋದ್ಧಾರ ಇಲ್ಲವೇ ನಿರ್ಮಾಣ ಅಥವಾ ಅದನ್ನು ಸುಸ್ಥಿತಿಯಲ್ಲಿ ರಕ್ಷಿಸಿದ ಸೇವೆಗಾಗಿ ನೀಡಲಾದ ಭೂಮಿ ದಾನ. ಕೊಡಿಗೆ ಭೂಮಿಗಳು ಮುಂದೆ ಇನಾಂ ಭೂಮಿಗಳೆಂದು ಪರಿಗಣಿತವಾದವು. ಅವು ಕಂದಾಯವಿಲ್ಲದೆ ಅಥವಾ ಅಲ್ಪ ಕಂದಾಯದ ಮೇಲೆ ನೀಡಲಾದ ದಾನ ಭೂಮಿಗಳು. ಕೆರೆ ದುರಸ್ತಿ ಕೈಗೊಂಡಿದ್ದಕ್ಕೆ 'ಕೆರೆಬಂದಿ' ಹಾಗೂ 'ಕೆರೆ ಕೂಲಿಗೆ' ಇನಾಂಗಳು ಇದ್ದುದೂ ಕಂಡುಬರುತ್ತದೆ.

೧೭೮೮ರಲ್ಲಿ ಟಿಪ್ಪು ಸುಲ್ತಾನನು ಹೊರಡಿಸಿದ ಕಂದಾಯ ಆದೇಶಗಳಿಂದಲೂ ಕೆರೆಗಳ ಕಾಲಕಾಲದ ಸಂರಕ್ಷಣೆಗೆ ನೀಡಿದ್ದ ಮಹತ್ವವನ್ನು ಕಾಣಬಹುದು. ಸ್ಥಳೀಯರೇ ಕಟ್ಟಿ, ಇನಾಂ ಕಟ್ಟು ಕೊಡಿಗೆಯಾಗಿ ಇಟ್ಟುಕೊಂಡಿದ್ದ ಕೆರೆಗಳನ್ನು ಇನಾಂದಾರರೇ ಸಂರಕ್ಷಿಸಬೇಕಾಗಿತ್ತು. ಅವರೇ ಕೆರೆಯಿಂದ

ಹೂಳನ್ನು ಅಗೆದು ತೆಗೆದು ಏರಿಗೆ ಬಳಸಬೇಕಾಗಿತ್ತು. ಹಾಳು ಬಿದ್ದ ಕೆರೆಗಳ ದುರಸ್ತಿ ಮಾಡಲು ಇನಾಂದಾರನಲ್ಲಿ ಸಾಧನ ಇಲ್ಲದಿದ್ದರೆ ಅದನ್ನು ಸರ್ಕಾರವು ಮಾಡಬೇಕಾಗಿತ್ತು ಮತ್ತು ದುರಸ್ತಿ ವೆಚ್ಚಕ್ಕೆ ಅನುಗುಣವಾಗಿ ವಾರ್ಷಿಕ ಕಂದಾಯವನ್ನು ಇನಾಂದಾರನ ಮೇಲೆ ಹಾಕಬೇಕಾಗಿತ್ತು.

ಸರ್ಕಾರವೇ ನಿರ್ಮಿಸಿದ ಕೆರೆಗಳ ಬಗ್ಗೆ ಅಮಲದಾರ, ಮುತ್ಸದ್ಧಿ ಹಾಗೂ ಹರಕಾರ ಮುಂತಾದ ಕಂದಾಯ ಅಧಿಕಾರಿಗಳು ತಾವೇ ಹೋಗಿ ಕೆರೆಗಳನ್ನು ಪರಿಶೀಲಿಸಬೇಕು ಮತ್ತು ದುರಸ್ತಿ ಮಾಡಿಸುವುದರಲ್ಲೂ ಅವುಗಳಿಂದ ಸರ್ಕಾರಕ್ಕೆ ಸಿಗುವ ಲಾಭ ಮತ್ತು ಉತ್ಪನ್ನದ ಹೆಚ್ಚಳ ಇವುಗಳ ಬಗ್ಗೆ ವಿಶೇಷ ಗಮನ ನೀಡಬೇಕು ಎಂದು ಈ ಆದೇಶಗಳಲ್ಲಿ ವಿಧಿಸಲಾಗಿತ್ತು. ಮಣ್ಣನ್ನು ಏರಿಯ ಮೇಲಕ್ಕೆ ಸಾಗಿಸಲು ಎಮ್ಮೆಗಳನ್ನು ಬಳಸಬೇಕು ಮತ್ತು ಏರಿಯ ಸುತ್ತ ಪ್ರತಿನಿತ್ಯವೂ ಹಾಕಲಾದ ಮಣ್ಣಿನ ಪ್ರಮಾಣದ ಲೆಕ್ಕವನ್ನು ಶಾನುಭೋಗ (ಗ್ರಾಮಲೆಕ್ಕಿಗ) ಇಡಬೇಕು ಎನ್ನುವ ಅಪ್ಪಣೆಯಿಂದ ಅಂತಹ ದುರಸ್ತಿ ಪ್ರತಿ ವರ್ಷ ನಡೆಯುತ್ತಿತ್ತು ಎನ್ನುವುದು ಸ್ಪಷ್ಟವಾಗುತ್ತದೆ.[೬]

ಕೆರೆಗಳ ಸೂಕ್ತ ಸಂರಕ್ಷಣೆಗಾಗಿ ಇಂತಹ ಪ್ರೋತ್ಸಾಹ ಕ್ರಮ ಹಾಗೂ ಆದೇಶಗಳಿದ್ದರೂ ಮೇಜರ್ ವಿಲ್ಕ್ಸ್ ವರದಿಯಂತೆ ೧೭೯೯ರಲ್ಲಿ "ಕೆರೆಗಳ ಸಂರಕ್ಷಣೆ ಅತ್ಯಂತ ಶೋಚನೀಯ ದುಸ್ಥಿತಿಯಿತ್ತು. ಇನ್ನೂರು ಮುನ್ನೂರು ವರ್ಷಗಳಿಂದಲೂ ಒಡೆದುಹೋಗಿದ್ದ ಕೆರೆಗಳು ದೇಶದ ಎಲ್ಲಾ ಕಡೆಗಳಲ್ಲೂ ಕಾಣಿಸಿಗುತ್ತಿದ್ದವು. ಇನ್ನೂ ಎಷ್ಟೋ ಕೆರೆಗಳಲ್ಲಿ ಕಾಡು ಬೆಳೆದು ಮರೆತೇ ಹೋಗಿದ್ದವು ಅಥವಾ ಜನಕ್ಕೆ ಗೊತ್ತೇ ಇರಲಿಲ್ಲ". ಈ ವರ್ಣನೆ ತುಂಬಾ ಬೇಕಾಬಿಟ್ಟಿ ಎನಿಸಿದರೂ ಪ್ರಾಯಶಃ ಬಹುಮಟ್ಟಿಗೆ ವಾಸ್ತವವಾದುದೇ.

ದೊರೆಗಳು ತಮ್ಮ ಯುದ್ಧಗಳ ವೆಚ್ಚಕ್ಕಾಗಿ ಭಾರವಾದ ಇಲ್ಲವೆ ದಮನಕಾರಿಯಾದ ತೆರಿಗೆಗಳನ್ನು ವಿಧಿಸಿದರು. ಬಹುಶಃ ಈ ಎಲ್ಲಾ ಅಂಶಗಳಿಂದಲೂ ಹಳ್ಳಿಗರು ಕೆರೆಗಳನ್ನು ಅಸಡ್ಡೆ ಮಾಡುವಂತೆ ಆಯಿತು. ೧೯ನೇ ಶತಮಾನದ ಅವಧಿಯಲ್ಲಿ ಟಿಪ್ಪುವಿನ ಪತನಾನಂತರ ಮೈಸೂರು ಸಂಸ್ಥಾನವನ್ನು ಬ್ರಿಟಿಷರು ಸ್ವಾಧೀನ ಮಾಡಿಕೊಂಡಾಗ ಸಂಸ್ಥಾನದ ಸರ್ಕಾರ ಬ್ರಿಟಿಷರ ಸೇನೆಯ ವೆಚ್ಚಕ್ಕೆ ವಾರ್ಷಿಕ ಪೊಗದಿ ಸಲ್ಲಿಸಬೇಕಾಯಿತು. ಯಾವಾಗಲೂ ರಾಜ್ಯದ ಮುಖ್ಯ ಅದಾಯ ಮೂಲ ಭೂಮಿಯಷ್ಟೆ ಆಹಾರೋತ್ಪಾದನೆಯನ್ನು ಹೆಚ್ಚಿಸುವುದಕ್ಕೆ ಅಷ್ಟೇ ಅಲ್ಲ, ನೀರಾವರಿ ಬೇಸಾಯದ ಭೂಮಿಯಿಂದ ಹೆಚ್ಚಿನ ಕಂದಾಯ ಬರುವುದಕ್ಕಾಗಿ, ನೀರಾವರಿ ಕಾರ್ಯಗಳನ್ನು ಜೀರ್ಣೋದ್ಧಾರ ಮಾಡಲು ಹಾಗೂ ದುರಸ್ತಿ ಮಾಡಲು ಸರ್ಕಾರವು ಸರ್ವ ಪ್ರಯತ್ನ ಮಾಡಿತು. ಸಂಸ್ಥಾನ ಬ್ರಿಟಿಷ್ ಆಡಳಿತಕ್ಕೆ ನೇರವಾಗಿ ಒಳಗಾದ ಮೇಲೆ ನೀರಾವರಿ ಕೆಲಸಗಳ ದುರಸ್ತಿಗಾಗಿ ನೀರಾವರಿ ಸುಂಕವನ್ನು ವಿಧಿಸಲಾಯಿತು. ದಿವಾನ್ ಶೇಷಾದ್ರಿ ಅಯ್ಯರ್ (೧೮೯೪) ಅವರ ಮಾತಿನಲ್ಲಿ ಹೇಳುವುದಾದರೆ: "ಕೆರೆಗಳ ಸಂರಕ್ಷಣೆಯಲ್ಲಿ ಸರ್ಕಾರದ ಜವಾಬ್ದಾರಿಗೆ ವಿಪರೀತ ಪ್ರಾಮುಖ್ಯತೆ ಕೊಡಲಾಯಿತು. ರೈತರ ಹೊಣೆಯನ್ನು ಪೂರ್ಣ ಅಲಕ್ಷ್ಯ ಮಾಡಲಾಯಿತು. ತನ್ನ ಬಂಡವಾಳಕ್ಕೆ ಸಾಕಷ್ಟು ಲಾಭ ಸಿಗುವ ಸಂಭವ ಇಲ್ಲವಾದರೆ ಕೆರೆಗಳ ನಿರ್ವಹಣೆಯನ್ನು ತನ್ನ ದುಬಾರಿ ಕಾರ್ಯವ್ಯವಸ್ಥೆ ವಹಿಸಿಕೊಳ್ಳುವುದು ಅಸಾಧ್ಯ ಎಂದು ಸರ್ಕಾರಕ್ಕೆ ತೋರಿತು. ಆಗ ಬಹುಪಾಲು ಕೆರೆಗಳನ್ನು ರೈತರೇ ವಹಿಸಿಕೊಳ್ಳಬೇಕೆಂದು ಹೇಳಿತು.

ಆದರೆ ಆ ವೇಳೆಗೆ ರೈತ ಸಾರ್ವಜನಿಕ ಉಪಯೋಗದ ಕಾರ್ಯಗಳಿಗೆ ಕಾಣಿಕೆ ನೀಡುವ ರೂಢಿಯನ್ನೆಲ್ಲ ಕಳೆದುಕೊಂಡಿದ್ದ. ಅಲ್ಲದೆ ಸಿವಿಲ್ ಅಧಿಕಾರಿಗಳು ರೈತರ ಹೊಣೆಗಾರಿಕೆಯನ್ನು ಪರಿಣಾಮಕಾರಿ ರೀತಿಯಲ್ಲಿ ಜಾರಿ ಮಾಡಿಸುವ ಸ್ಥಿತಿಯಲ್ಲಿ ಇರಲಿಲ್ಲ. ರೈತರು ಸಂರಕ್ಷಿಸಬೇಕಾದುದಕ್ಕೆ ಕೊಡಮಾಡಲಾಗಿದ್ದ ನಾನಾ ಇನಾಂಗಳು ಸವಲತ್ತುಗಳೂ ಕೊಚ್ಚಿಹೋಗಿದ್ದವು. ಸರ್ಕಾರವು ತಾನೆ ಕೆಲಸವನ್ನು ಮಾಡಿಸುವುದು ಎಂಬ ತಿಳುವಳಿಕೆ ಮೇರೆಗೆ ಸುಂಕಗಳನ್ನು ವಿಧಿಸಲಾಗಿತ್ತು".

ಹಿಂದೆ ಗ್ರಾಮದ ಮುಖ್ಯಸ್ಥನಾದ ಪಟೇಲ ಹಳ್ಳಿಯ ಮೇಲೆ ಪೂರಾ ಅಧಿಕಾರವನ್ನು ಹೊಂದಿದ್ದ ಮತ್ತು ತಕ್ಕಷ್ಟು ಸ್ಥಿತಿವಂತನೂ ಆಗಿದ್ದ. ಕೆರೆ ಕೆಳಗೆ ತನಗೂ ಜಮೀನು ಇದ್ದುದರಿಂದ ಆತ ಕೆರೆ ಒಳ್ಳೆ ದುರಸ್ತಿಯಲ್ಲಿ ಇರುವಂತೆ ಎಚ್ಚರವಹಿಸುತ್ತಿದ್ದ. ರೈಸ್ ಪ್ರಕಾರ ೧೬೫೪ರಲ್ಲಿ ಕಂಠೀರವ ನರಸರಾಜ, ಪಟೇಲರ ಇನಾಂಗಳನ್ನು ಕಡಿಮೆ ಮಾಡಿ, ಅವರ ಅಧಿಕಾರಿಗಳಿಗೆ ಪ್ರಹಾರ ಮಾಡಿದ. ಅವರ ಭತ್ಯೆಗಳನ್ನು ಚಿಕ್ಕದೇವರಾಜ (೧೬೭೨) ಕೊಂಚ ಮಟ್ಟಿಗೆ ಮತ್ತೆ ಕೊಡಿಸಿದ. ಆದರೆ ಅವನ ಮಗನು ಉತ್ತರಾಧಿಕಾರಿಯೂ ಆದ ಕಂಠೀರವ ರಾಜ, ಪಟೇಲರ ಪಾಲುಗಳನ್ನು ಮುಟ್ಟುಗೋಲು ಹಾಕಿಕೊಂಡ. ಪಟೇಲರ ಭತ್ಯೆಗಳನ್ನು ಹಿಂತಿರುಗಿಸಲು ಹೈದರಾಲಿ ಏನೂ ಕ್ರಮ ಕೈಗೊಳ್ಳಲಿಲ್ಲ. ಟಿಪ್ಪುಸುಲ್ತಾನನ ಆಳ್ವಿಕೆಯಲ್ಲಿ ಅವರ ಇನಾಂ ಭೂಮಿಗಳ ಮೇಲೆ ಕಂದಾಯವನ್ನು ವಿಧಿಸಲಾಯಿತು."

"ಪಟೇಲರ ಅವನತಿ ೧೮೦೦ರಲ್ಲಿ ಪೂರ್ಣಯ್ಯನಿಂದ ಪೂರ್ಣವಾಗಿ ಆಯಿತು. ಆತನ ಆಳ್ವಿಕೆಯವರೆಗೂ ಪಟೇಲರ ಇನಾಂಗಳನ್ನು ಸ್ವಾಧೀನಪಡಿಸಿಕೊಂಡಿದ್ದರೂ ಅದನ್ನು ನಮೂದು ಮಾಡಲಾಗುತ್ತಿತ್ತು. ಇದರಿಂದ ಅವುಗಳನ್ನು ಮೂಲ ಅನುಭೋಗಸ್ಥರಿಗೆ ವಾಪಾಸು ಮಾಡುವುದು ಸುಲಭವಾಗಿತ್ತು. ಆದರೆ ಪೂರ್ಣಯ್ಯ ಈ ಎಲ್ಲಾ ಭತ್ಯೆಗಳನ್ನು ನಾಡಿನ ಒಟ್ಟು ಆದಾಯದಲ್ಲಿ ಸೇರಿಸಿ ಬಿಟ್ಟು, ಅಂತಹ ನಿರೀಕ್ಷೆಗಳನ್ನು ಒಂದೇಟಿಗೆ ತೊಡೆದುಹಾಕಿದ. ಇದೇ ಅವಸ್ಥೆ ಮುಂದಿನ ಮಹಾರಾಜರುಗಳ ಕಾಲದಲ್ಲಿ ಮುಂದುವರೆಯಿತು.

ಬ್ರಿಟಿಷರ ಕಾಲದಲ್ಲಿ ಬೇಸಾಯ ಸಮಯದಲ್ಲಿ ಶೇಕದಾರ ತನ್ನ ವಲಯದಲ್ಲಿನ ಹಳ್ಳಿಗಳಿಗೆ ಪ್ರವಾಸ ಹೋಗಿ ಶ್ಯಾನುಭೋಗರಿಗೆ ಕಂದಾಯ ನಿಗದಿ ಬಗ್ಗೆ ತಿಳುವಳಿಕೆಯನ್ನು, ಸೂಚನೆಗಳನ್ನು ಕೊಡುತ್ತಿದ್ದ. ಕೆರೆಗಳ ಕೆಳಗಿನ ಭೂಮಿಯ ವಿಚಾರದಲ್ಲಿ, ಕಬ್ಬಿನ ಸಾಗುವಳಿ ಎಷ್ಟರಲ್ಲಿ, ಭತ್ತ ಎಷ್ಟರಲ್ಲಿ ಎನ್ನುವುದನ್ನು ಕೇಳಿ ತಿಳಿದುಕೊಳ್ಳುತ್ತಿದ್ದ. ಒಂದುವೇಳೆ ಸರ್ಕಾರಿ ಭೂಮಿಯನ್ನೆಲ್ಲ ಪೂರಾ ತರಿ ಬೇಸಾಯಕ್ಕೆ ತರಲು ನೀರು ಸಾಲದೆ ಹೋದ ಪಕ್ಷದಲ್ಲಿ ಯಾವ ಭೂಮಿ ಪೂರಾ ಅಥವಾ ಭಾಗಶಃ ನೀರಾವರಿ ಇಲ್ಲದೆ ಇರುವುದೋ ಅಲ್ಲಿ ಅತ್ಯಂತ ಹೆಚ್ಚು ಲಾಭ ನೀಡುವ ಒಣ ಬೆಳೆಯನ್ನು ಇಡಲು ಏರ್ಪಡಿಸುತ್ತಿದ್ದ. ತನ್ನ ತಾಲ್ಲೂಕಿನಲ್ಲಿನ ಕೆರೆಗಳನ್ನು ಹೊಳೆಗಳ ದಂಡೆಗಳನ್ನು ತನಿಖೆ ಮಾಡುವುದು ಹಾಗೂ ಅವುಗಳ ಸ್ಥಿತಿಗಳನ್ನು ಅಧೀಕ್ಷಕನಿಗೆ (ಸೂಪರಿಂಟೆಂಡೆಂಟ್) ಸದಾ ತಿಳಿಸುತ್ತಿರುವುದು ಅಮಲದಾರನ ಒಂದು ಮುಖ್ಯ ಕರ್ತವ್ಯವಾಗಿತ್ತು. ಅಮಲದಾರರು ತಾಲ್ಲೂಕು ಕಂದಾಯ ನಿರ್ಣಯವನ್ನು ಮುಗಿಸಿಯಾದ ಮೇಲೆ ಸಾಮಾನ್ಯವಾಗಿ ಅಧೀಕ್ಷಕ, ನವೆಂಬರ್ ಆದೊಡನೆ ಸಾಧ್ಯವಾದಷ್ಟು ಶೀಘ್ರದಲ್ಲಿ ತನ್ನ ಜಮಾಬಂದಿ ಪ್ರವಾಸ ಕೈಗೊಳ್ಳುತ್ತಿದ್ದ. ಪ್ರತಿಯೊಬ್ಬ ರೈತನ ಹಿಡುವಳಿ ಬಗ್ಗೆ ಆ ಮೊದಲಲೇ ಸಿದ್ಧಪಡಿಸಿದ್ದ ಪಟ್ಟಾಗಳನ್ನು ರೈತರಿಗೆ ಆಗ ವಿತರಿಸಲಾಗುತ್ತಿತ್ತು."

ಬ್ರಿಟಿಷರಿಗೆ ಎಲ್ಲಾ ಕೆರೆಗಳ ದುರಸ್ತಿ ಅಥವಾ ಜೀರ್ಣೋದ್ಧಾರವನ್ನು ನಿರ್ವಹಿಸುವುದು ಕಷ್ಟದ ಕೆಲಸವಾಯಿತ್ತಾದ್ದರಿಂದ ೧೮೬೩ರಲ್ಲಿ ಮೈಸೂರು ಮುಖ್ಯ ಕಮೀಷನರ್ ಒಂದು ಘೋಷಣೆಯನ್ನು ಹೊರಡಿಸಿದ. ಅದರಂತೆ ಬಹುಕಾಲದಿಂದ ನಿರುಪಯುಕ್ತವಾಗಿದ್ದ ಕೆರೆಯ ದುರಸ್ತಿ ಅಥವಾ ಜೀರ್ಣೋದ್ಧಾರವನ್ನು ಕೈಗೊಳ್ಳುವ ಖಾಸಗಿ ವ್ಯಕ್ತಿ ಕೆಳಕಾಣಿಸಿರುವ ರಿಯಾಯಿತಿ ದರದ ಮೇಲೆ ಭೂಮಿ ಇಟ್ಟುಕೊಳ್ಳಲು ಅನುಮತಿ ನೀಡಲಾಯಿತು.

ಅ) ತಾಲ್ಲೂಕಿನ ಸರಾಸರಿ ತರಿ ಕಂದಾಯದಲ್ಲಿ ಕಾಲುಭಾಗ ಕಡಿಮೆ

ಅಥವಾ

ಆ) ಆ ವ್ಯಕ್ತಿಯ ಸ್ವಂತ ಮತ್ತು ಸುತ್ತಲಿನ ಹಳ್ಳಿಗಳಲ್ಲಿ ಚಾಲ್ತಿಯಲ್ಲಿರುವ ಖುಷ್ಕಿ ಭೂಮಿಯ ಗರಿಷ್ಠ ದರ

ಇ) ಶ್ರಯ ಅಥವಾ ಕೌಲು ಪದ್ಧತಿಯಂತೆ ಕೆಲವು ಸಾಲು ವರ್ಷಗಳಲ್ಲಿ ಗರಿಷ್ಠ ಕಂದಾಯದ ದರವಾಗುವಂತೆ ಇದ್ದ ತಾಲ್ಲೂಕಿನ ಸರಾಸರಿ ತರಿ ಕಂದಾಯ.

೧೮೭೧ರಲ್ಲಿ ಹೊರಡಿಸಲಾದ ಇನ್ನೊಂದು ಆಜ್ಞೆಯಲ್ಲಿ, ೧೮೭೧ಕ್ಕೆ ಮೊದಲು ಕೈಗೊಂಡಿದ್ದ ಕಾರ್ಯಗಳ ಬಗ್ಗೆ ಈ ರಿಯಾಯಿತಿಗಳನ್ನು ಮೂವತ್ತು ವರ್ಷಕ್ಕೆ ಮೀರಿದ ಅವಧಿಗೆ ಮಿತಗೊಳಿಸಲಾಯಿತು.[೬೬] ಮತ್ತೆ ೧೮೭೬ರಲ್ಲಿ ಇನ್ನೊಂದು ಆಜ್ಞೆ ಹೊರಡಿಸಿ, ಕೆಲಸದ ನಿರ್ಮಾತೃ ಅಥವಾ ದುರಸ್ತಿದಾರನಲ್ಲದೆ ಬೇರೆಯವರ ಸ್ವಾಧೀನದಲ್ಲಿದ್ದ ಸರ್ಕಾರಿ ಭೂಮಿಗಳಿಗೆ ಸ್ವಾಧೀನ ದರರಿಂದ ಪೂರ್ಣ ಕಂದಾಯವನ್ನು ವಸೂಲು ಮಾಡಿ, ಅದರಲ್ಲಿ ಕಾಲುಭಾಗವನ್ನು ನಿರ್ಮಾಣ ಅಥವಾ ದುರಸ್ತಿ ಮಾಡಿಸಿದ ವ್ಯಕ್ತಿಗೆ ಕೊಡತಕ್ಕದ್ದು ಎಂದು ಸೂಚಿಸಲಾಯಿತು. ಇನಾಂ ಜಮೀನುಗಳ ಬಗ್ಗೆ ವಿಧಿಸಿದ ಸುಂಕದ ನಾಲ್ಕನೆಯ ಒಂದು ಭಾಗವನ್ನು ನಿರ್ಮಾತೃವಿಗೆ ಕೊಡಲಾಗುವುದು ಎಂದು ನಿಗದಿ ಮಾಡಲಾಯಿತು. ಆದರೂ ಕೆರೆ ದುರಸ್ತಿಯ ಸ್ಥಿತಿ ಅಷ್ಟೇನು ಪ್ರೋತ್ಸಾಹದಾಯಕವಾಗಲಿಲ್ಲ. ಆದ್ದರಿಂದ ೧೮೬೩ರ ಘೋಷಣೆಗೆ ಅನುಸಾರವಾಗಿ ನಿರ್ಮಿತವಾದ ಇಲ್ಲವೆ ದುರಸ್ತಿಯಾದ ಕೆರೆಗಳ ಬಗ್ಗೆ ತರಿ ಕಂದಾಯದ ನಾಲ್ಕನೆಯ ಒಂದು ಭಾಗದ ರಿಯಾಯಿತಿಯನ್ನು ಖಾಯಂ ರಿಯಾಯಿತಿಗೆ ನೀಡಲಾಗುವುದು ಎಂದು ೧೮೮೪ರಲ್ಲಿ ಸಾರಲಾಯಿತು.

ಈ ಮಧ್ಯೆ ೧೮೭೩ರಲ್ಲಿ ಸಂಸ್ಥಾನದಲ್ಲಿ ಇದ್ದ ಸಾವಿರಾರು ಕೆರೆಗಳ ದುರಸ್ತಿ ಹಾಗು ಸಂರಕ್ಷಣೆಯನ್ನು ವಹಿಸಿಕೊಳ್ಳುವುದು ಸರ್ಕಾರಕ್ಕೆ ಅಸಾಧ್ಯ ಎಂದು ತಿಳಿದುಬಂತು. ಅಂತೆಯೇ ಯಾವ ಕೆರೆಗಳು ಆಗಲೇ ದಕ್ಷ ದುರಸ್ತಿ ಸ್ಥಿತಿಯಲ್ಲಿ ಇದ್ದವೋ ಅಥವಾ ಅವಶ್ಯಮಟ್ಟಕ್ಕೆ ಜೀರ್ಣೋದ್ಧಾರ ಮಾಡಲ್ಪಟ್ಟಿದ್ದವೋ ಅಂತಹ ಕೆರೆಗಳನ್ನು ಭೂ ಹಿಡುವಳಿದಾರರಿಗೆ ವಹಿಸುವುದು ಅಗತ್ಯ ಎಂದು ಭಾವಿಸಲಾಯಿತು.

ಈ ನಿಯಮಗಳನ್ನು ಜಾರಿಮಾಡುವುದನ್ನು ಆಯಾ ಕೆರೆಗಳಿಗೆ ಸಂಬಂಧಿಸಿದ ಹಳ್ಳಿಗಳ ಪಟೇಲರಿಗೆ ವಹಿಸಲಾಯಿತು. ಈ ಕೆಲಸದಲ್ಲಿ ಆಯಾ ಹೋಬಳಿಯ ಶೇಕ್ದಾರನು ಪಟೇಲನಿಗೆ ಸಹಾಯ ಮಾಡಬೇಕಾಗಿತ್ತು. ಕೆರೆಗಳ ಸಂರಕ್ಷಣೆಗೆ ಹೊಣೆಗಾರರೆನಿಸಿಕೊಂಡವರು ಹಳ್ಳಿಯಲ್ಲಿನ ಖುಷ್ಕಿ ಅಥವಾ ತರಿ ಭೂಮಿ ಉಳ್ಳಂಥಹ ಪಟ್ಟೆದಾರರು, ಶಿಖ್ಮಿದಾರರು, ಇನಾಂದಾರರು ಮತ್ತು

ಕೆರೆಯಿಂದ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪ್ರಯೋಜನ ಪಡೆಯುತ್ತಿದ್ದ ಇವರೆಲ್ಲರೂ ಅಂತಹ ಪ್ರತಿಯೊಬ್ಬ ವ್ಯಕ್ತಿಯೂ ಹಳ್ಳಿಗೆ ಸೇರಿದ ತನ್ನ ಭೂಮಿ ಮನೆ ಅಥವಾ ಇತರ ಆಸ್ತಿಗಳ ಮೇಲೆ ಸರ್ಕಾರಕ್ಕೆ ಸಲ್ಲಿಸುತ್ತಿದ್ದ ಕಂದಾಯದ ಮೊಬಲಗನ್ನು ಅನುಸರಿಸಿ ವ್ಯಕ್ತಿಗಳು ಮಾಡಬೇಕಾಗಿದ್ದ ಕೆಲಸದ ಪ್ರಮಾಣವನ್ನು ಪಟೇಲ ಮತ್ತು ಶೇಕ್ದಾರರು ತೀರ್ಮಾನಿಸಬೇಕಾಗಿತ್ತು.

ಕೆರೆಗಳಿಗೆ ಮತ್ತು ಅವುಗಳ ಕೆಳಗಿನ ಉಪ ಕಾರ್ಯಗಳಿಗೆ ಸಂಬಂಧಿಸಿದ ಸಾಮಾನ್ಯ ಮಣ್ಣು ಕೆಲಸ ಹಾಗೂ ಎಲ್ಲ ಬಗೆಯ ದುರಸ್ತಿ ಇವು ಕೆರೆ ಸಂರಕ್ಷಣೆಯಲ್ಲಿ ಸೇರುತ್ತಿದ್ದ ಕಾರ್ಯಗಳು. ಗೊತ್ತುಮಾಡಿದ ಅವಧಿಗಳಲ್ಲಿ ಗ್ರಾಮಾಧಿಕಾರಿಗಳು ಕೆಲಸಗಳನ್ನು ನಡೆಸಬೇಕಾದದು ನಿಯಮವಾಗಿತ್ತು.

ಆದರೆ ಅಗತ್ಯವಾದಾಗ ತಕ್ಷಣ ದುರಸ್ತಿ ಮಾಡಬೇಕಾಗಿತ್ತು. ಯಾವುದೇ ವ್ಯಕ್ತಿ ತನ್ನ ಹೊಣೆಯನ್ನು ನಿರ್ವಹಿಸಿದೇ ಹೋದಲ್ಲಿ ಆತ ಮಾಡಬೇಕಾಗಿದ್ದ ಕಾರ್ಯಭಾಗವನ್ನು ಕೂಲಿ ಕೊಟ್ಟು ಮಾಡಿಸಲು ಗ್ರಾಮಾಧಿಕಾರಿಗಳಿಗೆ ಅಧಿಕಾರವಿತ್ತು. ಅದು ಕಡ್ಡಾಯವೂ ಆಗಿತ್ತು. ಆ ಕೂಲಿ ವೆಚ್ಚವನ್ನು ಕೆಲಸ ಬಾಕಿ ಉಳಿಸಿದವನಿಂದ ಕಂದಾಯ ಸುಸ್ತಿಯಂತೆ ವಸೂಲು ಮಾಡಬೇಕಾಗಿತ್ತು.

ಪ್ರತಿಯೊಂದು ಕೆರೆಯನ್ನು ಅದಕ್ಕೆ ನಿಗದಿ ಮಾಡಿದ ಮಟ್ಟಕ್ಕೆ ಸರಿಯಾಗಿ ಸಂರಕ್ಷಣೆ ಮಾಡುವಂತೆ ನೋಡಿಕೊಳ್ಳುವುದು ಪಟೇಲನ ಆದ್ಯ ಜವಾಬ್ದಾರಿಯಾಗಿತ್ತು. ಇದು ನಡೆದಿದೆಯೇ ಎನ್ನುವುದನ್ನು ಪ್ರತಿಯೊಂದು ಪ್ರಸಂಗದಲ್ಲೂ ತನಿಖೆ ಮಾಡಿ ಖಾತರಿ ಮಾಡಿಕೊಳ್ಳುವುದು ಶೇಕ್ದಾರನ ಕರ್ತವ್ಯವಾಗಿತ್ತು. ಪ್ರತಿವರ್ಷವೂ ಡಿಸೆಂಬರ್-ಮಾರ್ಚ್ ತಿಂಗಳ ನಡುವೆ ತಾಲ್ಲೂಕಿನ ಪ್ರತಿಯೊಂದು ಕೆರೆಯನ್ನು ಅಮಲದಾರನೇ ಖುದ್ದಾಗಿ ತಪ್ಪದೇ ವಿಶೇಷವಾಗಿ ತನಿಖೆ ಮಾಡಬೇಕಾಗಿತ್ತು. ಹಾಗಿಲ್ಲವಾದರೆ ಅಮಲದಾರನು ಸದರಿ ಕೆಲಸಕ್ಕೆ ವಿಶೇಷವಾಗಿ ನಿಯುಕ್ತಿಗೊಳಿಸಿದ ಪೇಷ್ಕಾರ, ಶಿರಸ್ತೇದಾರ ಅಥವಾ ತಾಲ್ಲೂಕು ಮೇಸ್ತ್ರಿ ತನಿಖೆ ಮಾಡಬೇಕಾಗಿತ್ತು. ಅಂತಹ ತನಿಖೆಯ ಫಲಿತಾಂಶವನ್ನು ನಿಗದಿಯಾದ ದಫ್ತರದಲ್ಲಿ (ರಿಜಿಸ್ಟರ್) ದಾಖಲು ಮಾಡಬೇಕಾಗಿತ್ತು. ತನಿಖೆಯಲ್ಲಿ ಏನಾದರೂ ಕೆರೆ ಸರಿಯಾದ ಮಟ್ಟಕ್ಕೆ ಇಲ್ಲದೆ ಇದ್ದುದು ಕಂಡುಬಂದಲ್ಲಿ ಏಪ್ರಿಲ್‌ಗೆ ಮೊದಲು ಎರಡನೆ ತನಿಖೆ ಮಾಡಬೇಕಿತ್ತು. ಆ ವೇಳೆಗೆ ದುರಸ್ತಿ ಕಾರ್ಯವನ್ನು ಮಾಡಿರಬೇಕಾಗಿತ್ತು. ಅದು ತಪ್ಪಿದ್ದಲ್ಲಿ ಅಮಲದಾರನೇ ದುರಸ್ತಿ ಕಾರ್ಯವನ್ನು ಮಾಡಿಸಿ, ವೆಚ್ಚವನ್ನು ತಮ್ಮ ಕೆಲಸ ನಿರ್ವಹಿಸಿದ ಬಾಕಿದಾರರಿಂದ ಕಂದಾಯ ಬಾಕಿಯಂತೆ ವಸೂಲು ಮಾಡಬೇಕಾಗಿತ್ತು.

ದಫ್ತರದ ದ್ವಿಪ್ರತಿಯೊಂದನ್ನು ಅಮಲದಾರ ಜಿಲ್ಲಾ ಕಂದಾಯ ಅಧಿಕಾರಿಗಳಿಗೆ ಜೂನ್ ಒಂದರ ಒಳಗೆ ರವಾನಿಸಬೇಕಾಗಿತ್ತು. ಆ ತಾರೀಖಿನ ವೇಳೆಗೆ ಎಲ್ಲಾ ಕೆರೆಗಳ ದುರಸ್ತಿ ಕಾರ್ಯವೂ ಪೂರೈಸಿರಬೇಕಾಗಿತ್ತು. ಆಯಾ ಉಪ ವಿಭಾಗಗಳ ಸಹಾಯಕ ಕಮೀಷನರುಗಳು ಜಮಾಬಂದೀ ಹಾಗೂ ಇತರ ಸೂಕ್ತ ಸಂದರ್ಭಗಳಲ್ಲಿ ಆದಷ್ಟು ಸಂಖ್ಯೆ ಕೆರೆಗಳನ್ನು ಖುದ್ದಾಗಿ ತನಿಖೆ ಮಾಡಿ ವರದಿಯ ನಿಖರತೆಯನ್ನು ಪರೀಕ್ಷೆ ಮಾಡಿ ಕೆರೆ ದಫ್ತರದಲ್ಲಿ ತನಿಖೆಯ ತಾರೀಖನ್ನು ತಮ್ಮ ಟಿಪ್ಪಣಿಗಳನ್ನು ದಾಖಲು ಮಾಡಬೇಕಾಗಿತ್ತು. ಡೆಪ್ಯುಟಿ ಕಮೀಷನರ್ ಇಂತಹದೇ ಕೆಲಸಗಳನ್ನು ಮಾಡಬೇಕಾಗಿತ್ತು. ಈ ನಿಯಮಗಳನ್ನು ಪೂರ್ಣವಾಗಿ ಹಾಗೂ ಜಾಣ್ಮೆಯಿಂದ ಪಾಲಿಸಲಾಗಿದೆ. ಕೇವಲ ಕಾಟಾಚಾರವಾಗಿ ಅಲ್ಲ ಎಂಬುದನ್ನು ನೋಡಿಕೊಳ್ಳುವುದಕ್ಕೆ ಆತ ಜವಾಬ್ದಾರನಾಗಿರುತ್ತಿದ್ದ.[೬]

ಲೋಕೋಪಯೋಗಿ ಇಲಾಖೆಯ ಇಂಜಿನೀಯರ್ ದರ್ಜೆ ಅಧಿಕಾರಿ ನಡೆಸಲು ಆಜ್ಞೆ ಮಾಡಿದ ಯಾವುದೇ ಕೆರೆಯ ಏನೇ ಕೆಲಸವನ್ನು ಅದೇ ಅಧಿಕಾರಿಯು ಜವಾಬ್ದಾರಿಯ ಮೇಲೆಯೇ ನಡೆಸಬೇಕಾಗಿತ್ತು. ಸದರಿ ಕಾರ್ಯದ ಯಾವುದೇ ಭಾಗ ರೈತರ ಕರ್ತವ್ಯ ಭಾಗವಾಗಿರದೆ ಇದ್ದಲ್ಲಿ ಅದರ ಮಂಜೂರಾತಿಯ ಇಸ್ತಿಹಾರವನ್ನು (ನೋಟಿಫಿಕೇಷನ್) ಅಮಲದಾರ ಸೂಕ್ತ ಮಾರ್ಗದ್ವಾರ ಸಲ್ಲಿಸಬೇಕಾಗಿತ್ತು. ಕೆಳದರ್ಜೆಯ ಒಬ್ಬ ಲೋಕೋಪಯೋಗಿ ಅಧಿಕಾರಿಗೆ ಯಾವುದೇ ಕೆಲಸ ಅಗತ್ಯವೆಂದು ಎನಿಸಿದ್ದಲ್ಲಿ ಆತ ಅದನ್ನು ತನ್ನ ಇಲಾಖೆಯ ಮೇಲಾಧಿಕಾರಿಗೆ ಯಾವುದೇ ವಿಳಂಬವಿಲ್ಲದೆ ವರದಿ ಮಾಡಬೇಕಾಗಿತ್ತು. ತುರ್ತು ಸ್ಥಿತಿಯಲ್ಲಿ ಅಮಲದಾರನಿಗೂ ನೇರವಾಗಿ ವರದಿ ಮಾಡಬೇಕಾಗಿತ್ತು. ಸಹಾಯಕ ಕಮೀಷನರ್ ತನಿಖಾ ವರದಿ ಈ ಬಗ್ಗೆ ಸ್ಪಷ್ಟವಾಗಿ ತಿಳಿಸಬೇಕಾಗಿತ್ತು.

ಅ) ಏರಿಯ ಮಟ್ಟ ಸಮವಾಗಿದೆಯೇ, ಪೂರಾ ಅಗಲವಾಗಿದೆಯೇ, ಕಾಡು ಗಿಡ, ಕಳೆಗಳು ಇರಲಿಲ್ಲವೇ, ಡೊಗರುಗಳು ಇರಲಿಲ್ಲವೆ.

ಆ) ಇಳಿಜಾರು ಪೂರ್ಣವಾಗಿದೆಯೇ, ಬಂಡಿಜಾಡಿನಲ್ಲಿ ಮುಕ್ತವಾಗಿದೆಯೇ, ಹುಲ್ಲು ಹಾಸು ಚೆನ್ನಾಗಿದೆಯೇ ಅಥವಾ ಚೆನ್ನಾಗಿಲ್ಲವೇ.

ಇ) ಹೊರಮುಖದ ಕಲ್ಲು ಕಟ್ಟಡ ಸುಸ್ಥಿತಿಯಲ್ಲಿದೆಯೇ.

ಈ) ತೂಬು ಒಳ್ಳೆಯ ಸ್ಥಿತಿಯಲ್ಲಿದೆಯೇ ಅಥವಾ ಒಳ್ಳೆಯ ಸ್ಥಿತಿಯಲ್ಲಿಟ್ಟಲ್ಲವೇ.

ಉ) ಕೋಡಿ ಪೂರ್ಣವಾಗಿ ಭದ್ರವಾಗಿದೆಯೇ, ರಂಧ್ರಗಳಿಲ್ಲದೆ ಇದೆಯೇ.

ಅನೇಕ ಕೆರೆಗಳನ್ನು ಅಗತ್ಯವಾದ ಮಟ್ಟಕ್ಕೆ ದುರಸ್ತಿ ಮಾಡಿ ಸುಸ್ಥಿತಿಗೆ ತಂದು ಮುಂದಿನ ರಕ್ಷಣೆಗೆ ರೈತರಿಗೆ ವಹಿಸಿಕೊಡಬೇಕೆಂದು ಸರ್ಕಾರವು ಮಾಡಿದ ಪ್ರಯತ್ನಗಳು ಎಷ್ಟೇ ಇದ್ದರೂ, ಕೆರೆಗಳ ಸಂರಕ್ಷಣೆಯನ್ನು ರೈತರು ಅಲಕ್ಷ್ಯ ಮಾಡಿದರು.

ಸಂರಕ್ಷಣಾ ನಿಯಮಗಳನ್ನು ಜಾರಿಗೊಳಿಸುವುದರಲ್ಲಿ ಕಂದಾಯ ಅಧಿಕಾರಿಗಳು ವಿಫಲರಾದರು. ಈ ಅಲಕ್ಷ್ಯದ ಸಲುವಾಗಿ ಕೆರೆಗಳನ್ನು ಪೂರ್ಣ ವಿನಾಶದಿಂದ ಉಳಿಸಲು ಸರ್ಕಾರವೇ ಜೀರ್ಣೋದ್ಧಾರ ಮಾಡುವುದು ಅಗತ್ಯವಾಯಿತು. ಅನೇಕ ವರ್ಷಗಳಿಂದಲೂ ಸಂರಕ್ಷಣೆಯ ಒಟ್ಟು ಅಲಕ್ಷ್ಯದ ಫಲವಾಗಿ ಅಗತ್ಯವಾದ ಮಣ್ಣು ಕೆಲಸದ ವೆಚ್ಚಕ್ಕೆ ರೈತರು ಹೊಣೆಗಾರರೇ? ಎಂಬ ಪ್ರಶ್ನೆಗಳು ಎದ್ದವು. ಇಡೀ ವಿಷಯದ ಬಗ್ಗೆ ತೃಪ್ತಿಕರವಾಗಿ ನಿರ್ವಹಿಸಲು ಸರ್ಕಾರಕ್ಕೆ ಸಹಾಯಕವಾಗಲೆಂದು ಈ ಎಲ್ಲಾ ಅಂಶಗಳನ್ನು ಪರಿಶೀಲಿಸಲು ಒಂದು ಸಮಿತಿಯನ್ನು ನೇಮಿಸಲಾಯಿತು. ಸಮಿತಿಯ ವರದಿಯ ಆಧಾರದ ಮೇಲೆ ೧೯೦೪ರಲ್ಲಿ ಮೈಸೂರು ಸರ್ಕಾರವು ಹೊರಡಿಸಿದ ಆಜ್ಞೆಯಲ್ಲಿ ಈ ಕೆಳಕಾಣಿಸಿರುವ ಕ್ರಮಗಳನ್ನು ಸಲಹೆ ಮಾಡಲಾಗಿತ್ತು.

ಅ) ಸಂರಕ್ಷಣೆಯನ್ನು ಅಲಕ್ಷಿಸಿದ್ದರಿಂದ ಹಾಳು ಬಿದ್ದಿರುವ ಕೆರೆಗಳ ದುರಸ್ತಿ ಬಗ್ಗೆ ರೈತರ ಹೊಣೆಗಾರಿಕೆಯನ್ನು ಕೆರೆಯ ಅಚ್ಚುಕಟ್ಟಿನ ಭೂಮಿಯ ಸಾಲಿಯಾನ ಕಂದಾಯಕ್ಕೆ ಮಿತಗೊಳಿಸಬೇಕು.

ಆ) ಮಣ್ಣು ಕೆಲಸವನ್ನು ರೈತರು ಮಾಡಬೇಕು. ಕಲ್ಲು ಕಟ್ಟಡದ ಕೆಲಸವನ್ನು ಸರ್ಕಾರವು ಮಾಡಿಸಬೇಕು ಎನ್ನುವುದು ಸಾಮಾನ್ಯ ನಿಯಮ; ಆದರೂ ಆಗಬೇಕಾದ ಮಣ್ಣು ಕೆಲಸ ರೈತರ ಮೇಲೆ

ಅತಿಯಾದ ಭಾರವಾಗುವಷ್ಟು ಇದೆ ಎನಿಸಿದಲ್ಲಿ ಡೆಪ್ಯುಟಿ ಕಮೀಷನರರು ಸರ್ಕಾರದ ಒಪ್ಪಿಗೆ ಪಡೆದು ನಿಯಮವನ್ನು ತನ್ನ ವಿಶೇಷ ವಿವೇಚನೆಯ ಮೇರೆಗೆ ಸಡಿಲಿಸಬಹುದು.

ಇ) ೩೦೦ ಹಾಗೂ ಕಡಿಮೆ ರೂಪಾಯಿ ಅಚ್ಚುಕಟ್ಟು ಉಳ್ಳ ಕೆರೆಯ ಅಭಿವೃದ್ಧಿಗೆ ಹೆಚ್ಚು ಅನುದಾನ.

ಈ) ೧೦೦ ರೂ. ಅಚ್ಚುಕಟ್ಟಿನ ಕೆರೆ ಹಾಗೂ ೧೦೦ಕ್ಕಿಂತ ಹೆಚ್ಚು ಅಚ್ಚಕಟ್ಟಿನ ಕೆರೆ ಎಂಬ ವ್ಯತ್ಯಾಸವನ್ನು ತೆಗೆದು ಹಾಕಿ, ಸಣ್ಣ ನೀರಾವರಿ ಕೆರೆಗಳು ಎಂದು ವರ್ಗೀಕರಿಸಲಾದ ಎಲ್ಲವನ್ನು ಒಂದೇ ರೀತಿಯನ್ನು ಪರಿಗಣಿಸಲಾಯಿತು.

ರೈತರು ಮಾಡಬೇಕಾದ ಸಂರಕ್ಷಣಾ ಕಾರ್ಯಗಳನ್ನು ಕೆಳಕಾಣಿಸಿರುವಂತೆ ಸ್ಪಷ್ಟವಾಗಿ ನೇಮಿಸಲಾಯಿತು.

ಅ) ಏರಿಯನ್ನು ನಿರ್ದಿಷ್ಟ ಪ್ರಮಾಣದ ಮಟ್ಟದಲ್ಲಿ ಹಾಗೂ ಸೂಚಿತವಾದ ಇಳಿಜಾರು ಇರುವಂತೆ ಇರಿಸಬೇಕು.

ಆ) ಮಳೆಯಿಂದ ಹಾಗೂ ದನಕರುಗಳ ತುಳಿತದಿಂದ ಕೆರೆ ಏರಿಯ ಮೇಲೆ ಹಾಗೂ ನಾಲೆಗಳ ದಂಡೆಗಳ ಮೇಲೆ ಉಂಟಾಗಿರುವ ಕೊರಕಲು ಅಥವಾ ಇತರ ಏರುಪೇರುಗಳನ್ನು ತುಂಬಿ ಸರಿ ಮಾಡಬೇಕು.

ಇ) ಏರಿಗಳ ಮೇಲೆ ಪಾಪಾಸುಕಳ್ಳಿ ಮುಂತಾದ ಕಾಡು ಗಿಡಗಳು, ಅಪಾಯಕಾರಿ ಕಳೆಗಳು ಬೆಳೆಯುವುದನ್ನು ತೆಗೆದುಹಾಕಬೇಕು.

ಈ) ಕೆರೆ ಏರಿಗಳ ಮೇಲಿನ ಕುರುಚಲು ಗಿಡಗಳು ಅಪಾಯಕಾರಿಯಾಗಿದ್ದಲ್ಲಿ ತೆಗೆದು ಹಾಕಬೇಕು.

ಉ) ಕೆರೆಯ ತೂಬುಗಳಲ್ಲಿ ಹಾಗೂ ಅಲ್ಲಿಂದ ಹೊರಡುವ ಎಲ್ಲಾ ಕಾಲುವೆಗಳಲ್ಲಿ ನೀರು ಹರಿಯಲು ಅಡ್ಡವಾಗಿರುವ ಪದಾರ್ಥ ಸಂಗ್ರಹವನ್ನು ತೆಗೆದು ಹಾಕಬೇಕು. ಸಣ್ಣಪುಟ್ಟ ಹಾಗೂ ಶಾಖಾ ನಾಲೆಗಳ ಮಣ್ಣು ಕಟ್ಟೆಗಳನ್ನು ಚೊಕ್ಕಟ ಮಾಡಿ ಸರಿಪಡಿಸಬೇಕು.

ಊ) ಕೆರೆಗೆ ನೀರು ತರುವ ತೊರೆಗಳನ್ನು ಸುಸ್ಥಿತಿಯಲ್ಲಿ ಇಟ್ಟಿರಬೇಕು.

ಋ) ಮಳೆಗಾಲದಲ್ಲಿ ಎಲ್ಲಾ ಕೆರೆಗಳ ಏರಿಗಳ ಮೇಲೂ ನಿಗಾ ಇಟ್ಟಿರಬೇಕು. ನೀರಿನ ಅಲೆಗಳ ಹೊಡೆತಕ್ಕೆ ಸಿಕ್ಕಿದ ಏರಿಯ ಭಾಗಗಳಲ್ಲಿ ಹುಲ್ಲುಹಾಸು ಹಾಕಬೇಕು. ತೂಬುಗಳನ್ನು ತೆಗೆಯುವುದಕ್ಕೂ ಮುಚ್ಚುವುದಕ್ಕೂ ಸಹಾಯವಾಗುವಂತೆ ಇಟ್ಟಿರಬೇಕು. ಮತ್ತು

ೠ) ಮಳೆಗಾಲದಲ್ಲಿ ಎಲ್ಲಾ ಕೆರೆಗಳ ಏರಿಗಳ ಮೇಲೂ ನಿಗಾ ಇಟ್ಟಿರಬೇಕು. ನೀರಿನ ಅಲೆಗಳ ಹೊಡೆತಕ್ಕೆ ಸಿಕ್ಕಿದ ಏರಿಯ ಭಾಗಗಳಲ್ಲಿ ಹುಲ್ಲು ಹಾಸು ಹಾಕಬೇಕು. ತೂಬುಗಳನ್ನು ತೆಗೆಯುವುದಕ್ಕೆ ಮುಚ್ಚುವುದಕ್ಕೂ ಸಹಾಯವಾಗುವಂತೆ ಇಟ್ಟಿರಬೇಕು. ಮತ್ತು

ಎ) ಬಿರುಕು ಮತ್ತಿತರ ಆಕಸ್ಮಿಕ ಅನಾಹುತಗಳನ್ನು ತಡೆಯಲು ಎಲ್ಲಾ ಸಣ್ಣಪುಟ್ಟ ಕೆಲಸ ಮಾಡಬೇಕು.

ನೀರು ಒದಗಿಸುವ ಹಾಗೂ ನೀರು ಹಂಚಿಕೆಯ ನಾಲೆಗಳ ಉಪಕಾರ್ಯಗಳ ಸ್ಥಿತಿ ಕುರಿತಂತೆಯೂ ಒಂದು ಹೆಚ್ಚುವರಿ ಕೆಲಸವನ್ನು ತನಿಖಾ ವರದಿಯಲ್ಲಿ ಸೇರಿಸಬೇಕು.[೬೮]

**ಕೆರೆ ಪಂಚಾಯತಿ ಶಾಸನ ೧೯೧೧**

ಕೆರೆಗಳ ಸಂರಕ್ಷಣೆಗಾಗಿ ಸರ್ಕಾರವು ೧೯೭೭ರಲ್ಲಿ ಕೆರೆ ಪಂಚಾಯತಿ ಶಾಸನವನ್ನು ಮಾಡಿತು. ಈ ಶಾಸನದ ಪ್ರಕಾರ ಯಾವುದೇ ಹಳ್ಳಿಯಲ್ಲಿ ಕೆರೆ ಕೆಳಗಿನ ತರಿ ಭೂಮಿಯಲ್ಲಿ ಅರ್ಧಕ್ಕೆ ಕಡಿಮೆ

ಇಲ್ಲದಷ್ಟು ಒಟ್ಟು ಹಿಡುವಳಿ ಉಳ್ಳಂಥ ರೈತರ ಪೈಕಿ ಮೂರನೇ ಎರಡಕ್ಕೆ ಕಡಿಮೆ ಇಲ್ಲದಷ್ಟು ಮಂದಿ ಒಪ್ಪಿದ್ದಲ್ಲಿ, ಅಲ್ಲಿ ಒಂದು ಕೆರೆ ಪಂಚಾಯತಿಯನ್ನು ರಚಿಸತಕ್ಕದ್ದು. ಪಂಚಾಯತಿಯಲ್ಲಿ ಹಳ್ಳಿಯ ಪಟೇಲ, ಶ್ಯಾನುಭೋಗ ಹಾಗೂ ರೈತರಿಂದ ಆರಿಸಲಾದ ಸುಮಾರು ಮೂವರು ಅಥವಾ ಹೆಚ್ಚಿಗೆ ಸದಸ್ಯರು ಇರತಕ್ಕದ್ದು. ಚುನಾಯಿತ ಸದಸ್ಯರಲ್ಲಿ ನಾಲ್ಕರಲ್ಲಿ ಒಂದರಷ್ಟು ಮಂದಿ, ತರಿ ಅಥವಾ ಬಾಗಾಯ್ತು ಜಮೀನು ಹೊಂದದೆ ಇರುವ ರೈತರು ಹಾಗೂ ಉಳಿದ ಸದಸ್ಯರು ತರಿ ಅಥವಾ ಬಾಗಾಯ್ತು ಜಮೀನು ಉಳ್ಳವರು ಆಗಿರತಕ್ಕದ್ದು. ಚುನಾಯಿತ ಸದಸ್ಯರ ಅಧಿಕಾರದ ಅವಧಿ ಮೂರು ವರ್ಷ. ಹಳ್ಳಿಯ ಪಟೇಲನೇ ಪಂಚಾಯತಿಯ ಅಧ್ಯಕ್ಷ. ಪಂಚಾಯತಿ ಕೆಳಕಾಣಿಸಿರುವ ಬಾಬುಗಳಿಂದ ಆದ ನಿಧಿಯನ್ನು ನಿಯಂತ್ರಿಸತಕ್ಕದ್ದು.

ಅ) ತಮಗೆ ವಹಿಸಿದ ಕೆಲಸವನ್ನು ನಿರ್ವಹಿಸಲು ವಿಫಲವಾದ ಅಥವಾ ತಮ್ಮ ಪಾಲಿನ ಶ್ರಮವನ್ನು ಹಣ ಪಾವತಿಗಾಗಿ ಪರಿವರ್ತಿಸಲು ಬಯಸುವ ರೈತರಿಂದ ವಸೂಲಿ ಮಾಡಿದ ಮೊಬಲಗು.

ಆ) ಕೆರೆಯಲ್ಲಿ ಮೀನು ಹಿಡಿಯುವ ಹಕ್ಕು, ಕೆರೆ ಅಂಗಳದಲ್ಲಿ ದನಕರುಗಳನ್ನು ಮೇಯಿಸುವ ಹಕ್ಕು, ಕೆರೆ ಏರಿಯ ಮೇಲಿನ ಹುಲ್ಲನ್ನು ಕೊಯ್ದು ಒಯ್ಯುವ ಹಕ್ಕು ಹಾಗೂ ಕೆರೆಯಲ್ಲಿ ಅದರ ಏರಿಯಲ್ಲಿ ಇರುವ ಮರಗಳ ಉತ್ಪನ್ನವನ್ನು ಒಯ್ಯುವ ಹಕ್ಕು ಇವುಗಳ ಬಿಕರಿಯಿಂದ ಬಂದ ಮೊಬಲಗು.

ಇ) ಕೆರೆ ಅಂಗಳದಲ್ಲಿ ತಾತ್ಕಾಲಿಕವಾಗಿ ಅಲ್ಪಕಾಲಿನ ಬೆಳೆಗಳನ್ನು ಬೆಳೆಯುವುದಕ್ಕೆ ನೀಡುವ ಅವಕಾಶಕ್ಕಾಗಿ ಪಡೆಯುವ ಬಾಡಿಗೆ ಹಣ ಅಥವಾ ಉತ್ಪನ್ನದ ಪಾಲು.

ಈ) ಸರ್ಕಾರವು ನೀರಾವರಿ ಸುಂಕ ನಿಧಿಯಿಂದ ನೀಡುವ ಅನುದಾನ.

ಉ) ಪಂಚಾಯತಿ ಬಯಸಿದಲ್ಲಿ ಕೆರೆಯ ಜೀರ್ಣೋದ್ಧಾರ ಅಥವಾ ಅಭಿವೃದ್ಧಿಗೆ ಸರ್ಕಾರವು ಕೊಡುವ ಮುಂಗಡ ಹಣ.

ಊ) ಸರ್ಕಾರವು ಪಂಚಾಯತಿಗೆ ನೀಡಬಹುದಾದ ಇತರ ಯಾವುದೇ ಅನುದಾನ ಅಥವಾ ಸಾಲ.

ಕೆರೆಯಿಂದ ನೀರು ಬಿಡುವುದನ್ನು ನಿಯಂತ್ರಿಸುವ ಅಧಿಕಾರ ಪಂಚಾಯತಿಗೆ ಇತ್ತು. ಅಲ್ಲದೆ ಯಾವುದೇ ವರ್ಷದಲ್ಲಿ ಕೆರೆಯಲ್ಲಿ ಸಿಗುವ ನೀರಿನ ಪ್ರಮಾಣವನ್ನು ನೋಡಿಕೊಂಡು ಎಷ್ಟು ಭೂಮಿಯಲ್ಲಿ ತರಿ ಬೆಳೆ ಇಡಬೇಕು, ಎಷ್ಟರಲ್ಲಿ ಕಬ್ಬು ಬೆಳೆಯಬಹುದು ಎಂಬುದನ್ನು ಗೊತ್ತುಮಾಡಲು ಪಂಚಾಯತಿಗೆ ಅಧಿಕಾರ ನೀಡಲಾಗಿತ್ತು. ಕೆರೆ ಪಂಚಾಯತಿ ಅಸ್ತಿತ್ವಕ್ಕೆ ಬಂದ ಮೇಲೆ ೧೮೭೩ ಹಾಗೂ ೧೯೦೪ ನಿಯಮಗಳಲ್ಲಿ ವಿಧಿಸಿದಂತೆ ಎಲ್ಲಾ ಕೆರೆಗಳ ಸಂರಕ್ಷಣೆ ಕುರಿತಂತೆ ರೈತರ ಮೇಲೆ ಇದ್ದ ಸಾಂಪ್ರದಾಯಿಕ ಹೊಣೆಗಾರಿಕೆಯ ಚಾಲನೆಯು ಪಂಚಾಯತಿಯ ಪಾಲಿಗೆ ಬಂತು. ಮುಂದೆ ವರ್ಷ ವರ್ಷವೂ ಹೆಚ್ಚು ಹೆಚ್ಚು ಇಂತಹ ಪಂಚಾಯತಿಗಳನ್ನು ಮಂಜೂರು ಮಾಡಲಾಯಿತು. ೧೯೧೯-೨೦ರಲ್ಲಿ ೧೧೯ ಇಂತಹ ಪಂಚಾಯತಿಗಳು ಇದ್ದವು. ೧೯೩೪-೩೫ರಲ್ಲಿ ೧೨೭ ಕೆರೆ ಪಂಚಾಯತಿಗಳಿದ್ದವು. ಇವುಗಳಲ್ಲಿ ಏಳು ಮಾತ್ರ ಚುರುಕಾಗಿ ಕೆಲಸ ಮಾಡುತ್ತಿದ್ದವು. ಕೆಲವು ಕೆರೆ ಪಂಚಾಯತಿಗಳು ತಮಗೆ ವಹಿಸಲಾಗಿದ್ದ ಕರ್ತವ್ಯಗಳನ್ನು ನಿರ್ವಹಿಸದೆ ಹೋದುದರಿಂದ ಅವುಗಳನ್ನು ರದ್ದು ಮಾಡಲಾಯಿತು.[೬]

ಕೆರೆಗಳ ಸಂರಕ್ಷಣೆ ಹಾಗೂ ಅಂತಹ ಇನ್ನಿತರ ಕೆಲಸಗಳ ಬಗ್ಗೆ ಪ್ರತಿಯೊಬ್ಬ ಹಳ್ಳಿಯವನೂ ತನ್ನ ರೂಢಿಯ ಕರ್ತವ್ಯವನ್ನು ನಿರ್ವಹಿಸುವಂತೆ ಮಾಡುವುದು ಸಾಧ್ಯವಿಲ್ಲ ಎಂದು ತಿಳಿದ ಸರ್ಕಾರವು ೧೯೩೨ರ ಮೈಸೂರು ನೀರಾವರಿ ಶಾಸನ ಜಾರಿಗೊಳಿಸಿ ಕೆರೆಗಳ ಸಂರಕ್ಷಣೆಯನ್ನು ತನ್ನ ಅಧೀನಕ್ಕೆ ಪಡೆಯಿತು. ತನ್ನ ಕರ್ತವ್ಯವನ್ನು ಶ್ರಮ ರೂಪದಲ್ಲಿ ನಿರ್ವಹಿಸಲು ಆಗದಂಥವರೆಲ್ಲ ಅದನ್ನು ಹಣದ ರೂಪದಲ್ಲಿ ಗಣನೆ ಮಾಡಿ ಸಲ್ಲಿಸಬಹುದು ಎಂಬುದನ್ನು ಸೇರಿಸಿತು. ಆದರೆ ಅಂತಹ ಸುಂಕವನ್ನು ವಿಧಿಸಲು ಕೆರೆ ಕೆಳಗಿನ ಜನರಲ್ಲಿ ಮೂರನೆಯ ಎರಡು ಭಾಗ ಜನರು ಒಪ್ಪಿಗೆ ಅಗತ್ಯ ಎಂದು ಗೊತ್ತು ಮಾಡಲಾಯಿತು. ಈ ಎಲ್ಲಾ ಕ್ರಮಗಳೂ ಕೆರೆಗಳ ಸುಸ್ಥಿತಿಯ ಬಗ್ಗೆ ಅಪೇಕ್ಷಿತ ಫಲವನ್ನು ನೀಡದೇ ಹೋದವು. ಭೂಮಿಗೆ ಒಳ್ಳೆಯ ನೀರಾವರಿ ಒದಗಿಸುವ ಉದ್ದೇಶದಿಂದ ಸರ್ಕಾರವೇ ಅಂತಹ ಕೆರೆಗಳ (ಸಣ್ಣ ನೀರಾವರಿ ಕೆರೆಗಳ) ಪೂರಾ ಜವಾಬ್ದಾರಿಯನ್ನು ತಾನೇ ವಹಿಸಿಕೊಳ್ಳಲು ಒಪ್ಪಿತು. ೧೯೫೨ರ ಮೈಸೂರು ನೀರಾವರಿ ಶಾಸನಕ್ಕೆ ಒಂದು ಕಲಮನ್ನು ಸೇರಿಸಲಾಯಿತು. ಅಂದರೆ, ಯಾವ ಕೆರೆಗಳ ಸಂರಕ್ಷಣೆಯನ್ನು ಸರ್ಕಾರವು ವಹಿಸಿಕೊಳ್ಳುವುದೋ ಅವುಗಳಿಂದ ಲಾಭ ಪಡೆಯುವ ಪ್ರದೇಶದ ಪ್ರತಿಯೊಬ್ಬ ಹಿಡುವಳಿದಾರನೂ ನಿಗದಿಯಾದ ಭೂಕಂದಾಯದ ಜೊತೆಗೆ ಎಕರೆಗೆ ಸಾಲಿಯಾನ ಮೂರು ರೂಪಾಯಿಗಳನ್ನು ಸಂರಕ್ಷಣಾ ಸುಂಕವಾಗಿ ಸರ್ಕಾರಕ್ಕೆ ಕೊಡಬೇಕು ಎಂದಾಯಿತು.

೧೯೬೫ರ ನೀರಾವರಿ ಶಾಸನದಲ್ಲಿ ೧೯೩೨ರ ಶಾಸನದಲ್ಲಿ ಹೇಳಲಾಗಿದ್ದ ಸಣ್ಣ ನೀರಾವರಿ ಎಂಬ ಶಬ್ದವನ್ನು ಕೈಬಿಡಲಾಯಿತು. ಯಾವುದೇ ವ್ಯಕ್ತಿಯಾಗಲಿ ಇಲ್ಲವೇ ವ್ಯಕ್ತಿಗಳ ಕೂಟವಾಗಲಿ ನಿರ್ವಹಿಸುತ್ತಿದ್ದ ಯಾವುದೇ ನೀರಾವರಿ ಕಾರ್ಯದ ಸಂರಕ್ಷಣೆಯನ್ನಾದರೂ ಸರ್ಕಾರವು ವಶಮಾಡಿಕೊಳ್ಳಲು ಅವಕಾಶವನ್ನು ಕಲ್ಪಿಸಲಾಯಿತು. ೧೯೬೫ರಿಂದ ಈಚೆಗೆ ಯಾವುದೇ ನೀರಾವರಿ ಕಾರ್ಯದ ಸಂರಕ್ಷಣೆಯನ್ನು ವಹಿಸಿಕೊಂಡ ಬಗ್ಗೆ ಸರ್ಕಾರದ ಆಜ್ಞೆಯಾಗಿಲ್ಲ. ಅಂದರೆ, ಎಲ್ಲಾ ನೀರಾವರಿ ಕಾಮಗಾರಿಗಳ ಸಂರಕ್ಷಣೆಯು ಸರ್ಕಾರದ ವಶದಲ್ಲಿತ್ತು ಎನ್ನಬಹುದು.

೧೯೮೫ರಲ್ಲಿ ಜಿಲ್ಲಾ ಪರಿಷತ್ತುಗಳು ರೂಪುಗೊಳ್ಳುವುದಕ್ಕೆ ಮೊದಲು ಹತ್ತು ಎಕರೆ ಅಥವಾ ಕಡಿಮೆ ನೀರಾವರಿ ಯೋಗ್ಯ ಅಚ್ಚುಕಟ್ಟು ಉಳ್ಳ ಎಲ್ಲಾ ಕೆರೆಗಳನ್ನು ಪಂಚಾಯತಿಗಳು ಅಥವಾ ಸ್ಥಳೀಯ ಸಂಸ್ಥೆಗಳು ಸರ್ಕಾರವು ಕೊಡಮಾಡುತ್ತಿದ್ದ ಅನುದಾನದಿಂದ ಸಂರಕ್ಷಿಸುತ್ತಿದ್ದವು. ಇತರ ಎಲ್ಲಾ ಕೆರೆಗಳನ್ನು ಲೋಕೋಪಯೋಗಿ ಇಲಾಖೆ ಸಂರಕ್ಷಿಸುತ್ತಿತ್ತು. ಸಂರಕ್ಷಣೆಯ ಅನುದಾನವನ್ನು ನಿಗದಿಮಾಡಲು ಯಾವುದೇ ನಿರ್ದಿಷ್ಟ ಅಳತೆಗೋಲು ಇರಲಿಲ್ಲ. ಕೆಲವು ಕೆರೆಗಳಿಗೆ ನಿರ್ದಿಷ್ಟ ಅನುದಾನವಿತ್ತು. ಉಳಿದವು ಬಹುತೇಕ ಅಲಕ್ಷ್ಯಕ್ಕೆ ಒಳಗಾಗಿದ್ದವು. ಎಂಟನೆಯ ಧನ ಆಯೋಗಕ್ಕೆ ರಾಜ್ಯ ಒದಗಿಸಿದ ಮಾಹಿತಿಯಂತೆ ಕೆರೆಗಳ ಸಂರಕ್ಷಣೆ ಹಾಗೂ ದುರಸ್ತಿಗಳಿಗೆ ಒದಗಿಸಲಾದ ಹಣ ಪ್ರತಿ ಎಕರೆಗೆ ಕೇವಲ ಸುಮಾರು ಇಪ್ಪತ್ತು ರೂಪಾಯಿ. ಇದರಲ್ಲಿ ಸಿಬ್ಬಂದಿಯವರ ಸಂಬಳವೂ ಸೇರಿತ್ತು. ಆದ್ದರಿಂದ ಕೆರೆಗಳ ದುರಸ್ತಿಗಾಗಿ ಆಗುತ್ತಿದ್ದ ವಾಸ್ತವ ವೆಚ್ಚ ತೀರಾ ನಗಣ್ಯವಾದುದ್ದಾಗಿತ್ತು.

ಜಿಲ್ಲಾ ಪರಿಷತ್ತುಗಳು ರೂಪುಗೊಂಡ ಮೇಲೆ ೫೦೦೦ ಅಥವಾ ಕಡಿಮೆ ಎಕರೆ ನೀರಾವರಿ ಯೋಗ್ಯ ಅಚ್ಚುಕಟ್ಟು ಉಳ್ಳ ಕೆರೆಗಳ ಸಂರಕ್ಷಣೆಯನ್ನು ಪರಿಷತ್ತಿಗೆ ವಹಿಸಲಾಗಿದೆ. ಇತರ ಭಾರಿ

ಕೆರೆಗಳು ಮಾತ್ರ ಸರ್ಕಾರದಿಂದ ರಕ್ಷಿತವಾಗಿವೆ. ಸಂರಕ್ಷಣೆಯ ಅನುದಾನದಲ್ಲೇನೋ ಎಕರೆಗೆ ನಲವತ್ತು ರೂಪಾಯಿಗಳನ್ನು ಒದಗಿಸಲಾಗಿದೆ. ಆದರೆ ಸಿಬ್ಬಂದಿಯ ವೇತನ ಶ್ರೇಣಿಯ ಬಗ್ಗೆಯಾಗಲಿ ಅಥವಾ ಮಾಡಬೇಕಾದ ದುರಸ್ತಿಯ ಲಕ್ಷಣದ ವಿಷಯದಲ್ಲಿಯಾಗಲಿ ಯಾವ ನಿರ್ದಿಷ್ಟ ಪ್ರಮಾಣವೂ ಇಲ್ಲ. ಆಗುವ ವೆಚ್ಚವೆಲ್ಲ ಬಹುಪಾಲು ಸಿಬ್ಬಂದಿಯ ಸಂಬಳಕ್ಕೆ. ಕಾಲಕಾಲದ ದುರಸ್ತಿಗಳಿಗೆ ಆಗುವ ವೆಚ್ಚ ತೀರಾ ಅಲ್ಪವಾಗಿದ್ದು, ಇದರಿಂದ ಬಹುಪಾಲು ಕೆರೆಗಳು ಸಂರಕ್ಷಣೆಯಿಂದ ದೂರ ಉಳಿದವು.

**ಕೊನೆ ಟಿಪ್ಪಣಿಗಳು**


೧. ರಾಧಾಕೃಷ್ಣ. ಎಂ.ಕೆ., ೧೯೭೪., "ಗ್ರೌಂಡ್ ವಾಟರ್ ಡೆವಲಪ್‌ಮೆಂಟ್ ಇನ್ ಮೈಸೂರು ಪಾಸ್ಟ್ ಅಂಡ್ ಫ್ಯೂಚರ್", "ಗ್ರೌಂಡ್ ವಾಟರ್ ಸ್ಟಡೀಸ್", ಪು.೪

೨. ಎ.ಕ. III Sr. ೧೩೪; ಕಾಲ ಕ್ರಿ.ಶ.೯೧೦, ಎ.ಕ.ಸಿ.ಎಂ.೧೨೨, ಕ್ರಿ.ಶ.೧೧೪೦, ಎಸ್.ಐ. ೫X; ೭೪; ಕ್ರಿ.ಶ.೯೮೧, ಎ.ಕ.XII si ಕ್ರಿ.ಶ.೧೦೭೨, ಃKI.II.ii ೧೩೪, ೧೦೮೭ A.D

೩. ದೀಕ್ಷಿತ್ ಜಿ.ಎಸ್, ಕುಪ್ಪುಸ್ವಾಮಿ ಜಿ ಆರ್, ಮೋಹನ್ ಎಸ್.ಕೆ 'ಕರ್ನಾಟಕದಲ್ಲಿ ಕೆರೆ ನೀರಾವರಿ' ಪು. ೩೮.

೪. ಫ್ರಾನ್ಸಿಸ್ ಬುಕಾನನ್, ೧೯೮೮. "ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು ಕೆನರಾಸ್ ಅಂಡ್ ಮಲಬಾರು", ಸಂ.೧, ಪು.೪೯,

೫. ಚೀಫ್ ಕಮಿಷನರ್ ಆಫ್ ಮೈಸೂರು, ಅವರಿಗೆ ಮೇಜರ್ ಸ್ಯಾಂಕಿಯ ಪತ್ರ, ದಿನಾಂಕ ೧೯.೧೧.೧೮೬೬, ಪ್ಯಾರ. ೧೨, ಮತ್ತು ದೀಕ್ಷಿತ್ ಜಿ.ಎಸ್. ಕುಪ್ಪುಸ್ವಾಮಿ, ಪೂರ್ವೋಕ್ತ, ಪು.೪೧

೬. ಸೂರ್ಯನಾಥ್ ಕಾಮತ್, ೧೯೯೯, 'ಕರ್ನಾಟಕ ವಾಟರ್ ಇರಿಗೇಷನ್–ಎ ಹಿಸ್ಟಾರಿಕಲ್ ಪ್ರಾಸ್ಪೆಕ್ಟೀವ್', QJMSLXXIIII, ೩&೪, ಪು.೧೨

೭. ಫ್ರಾನ್ಸಿಸ್ ಬುಕಾನನ್, ಪೂರ್ವೋಕ್ತ, ಪು. ೫೦

೮. ದೀಕ್ಷಿತ್ ಜಿ.ಎಸ್. ಕುಪ್ಪುಸ್ವಾಮಿ, ಪೂರ್ವೋಕ್ತ, ಪು. ೫೨

೯. ಧವಳೀಕರ್: ಎಂ.ಕೆ. "ಸೆಟಲ್‌ಮೆಂಟ್ ಆರ್ಕಿಯಾಲಜಿ ಆಫ್ ಇನಾಂಗಾಂವ್" ಪುರಾತತ್ವ ನಂ.೮, ೧೯೭೮ ಪು. ೪೭.

೧೦. ಮಾರ್ಗಬಂಧು, ಸಿ. 'ಮೆಟೀರಿಯಲ್ ಕಲ್ಚರ್ ಡ್ಯೂರಿಂಗ್ ದಿ ಅರ್ಲಿ ಹಿಸ್ಟಾರಿಕಲ್ ಪಿರಿಯಡ್–ಸೌತ್ ಇಂಡಿಯನ್ ಸ್ಟಡೀಸ್', ಹಾ.ಮಾ.ನಾಯಕ ಮತ್ತು ಬಿ.ಆರ್.ಗೋಪಾಲ್ (ಸಂ), ೧೯೯೦. ಪು. ೫೪

೧೧. Mirashi V.V., The History and inscription of the satavahanas and Western Kshatrapas : Part II, Section II, B.No.SI., P.೧೨೧.

೧೨. ಹೈದರಾಬಾದ್ ಆರ್ಕಿಯಾಲಜಿಕಲ್ ಸೀರಿಸ್ ನಂ.೫ ಮತ್ತು ದೀಕ್ಷಿತ್ ಜಿ.ಎಸ್. ಕುಪ್ಪುಸ್ವಾಮಿ, ಪೂರ್ವೋಕ್ತ, ಪು.೩೬

೧೩. B.Rajashekharappa, 'chandravalli Inscription' : A Revised Reading, Indian History and Epigraphy (Dr. G.S.Gai F Felicitation) (Ed by:Dr.K.V.Ramesh and others), ೧೯೯೦, PP ೨೪-೨೯.

೧೪. ಅದೇ, ಪು. ೨೪-೨೯

೧೫. ಕೊಟ್ರಯ್ಯ ಸಿ.ಟಿ.ಎಂ., 2001, 'ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ', ಪು.೨೧.

೧೬. Kuppuswamy G.R. "Irregation in Karnataka Inscriptions as a Source". P.೧೪೫, QJMSLXXII, ೩ ಮತ್ತು ೪, ೧೯೯೧.

೧೭. ಆರ್.ಶಾಮಾಶಾಸ್ತ್ರಿ: ಕೌಟಿಲ್ಯನ ಅರ್ಥಶಾಸ್ತ್ರ ೧೯೬೭, ಭಾಗ ೨, ಅಧ್ಯಾಯ ೧, ಪು. ೪೬

೧೮. ಮಿತಾಕ್ಷರ: (ಅನು) ಜೆ.ಆರ್. ಘುರಪುರೆ II, ೧೯೩೯. ಪು.೧೫೬

೧೯. ವಿರೂಪಾಕ್ಷಿ ಪೂಜಾರಹಳ್ಳಿ, ಜಲಸಂಬಂಧಿ ಚಳುವಳಿಗಳು, ೧೯೯೯, ಪು.೧೩

೨೦. ಕೊಟ್ರಯ್ಯ ಸಿ.ಟಿ.ಎಂ., ಪೂರ್ವೊಕ್ತ., ಪು.೨೨, ಅಮುಕ್ತ ಮಾಲ್ಯದ: ಸರ್ಗ ೪, ಶ್ಲೋಕ ೨೩೬.

೨೧. ವಿರೂಪಾಕ್ಷಿ ಪೂಜಾರಹಳ್ಳಿ, ಜಲಸಂಬಂಧಿ ಚಳುವಳಿಗಳು, ೧೯೯೯, ಪು.೧೩

೨೨. ಭಾರತ ಸರ್ಕಾರದ ಕಾರ್ಯದರ್ಶಿಯವರ ದಿನಾಂಕ ೦೪.೦೩.೧೮೭೧ರ ಪತ್ರಕ್ಕೆ ಲಗತ್ತಿಸಿದ ಮೇಜರ್ ಸ್ಯಾಂಕಿಯವರ ಟಿಪ್ಪಣಿ, ಟಿಪ್ಪಣಿ ನಂ.೬. ಪ್ಯಾರಾ ೩.

೨೩. ಹೈದರಾಬಾದ್ ಕರ್ನಾಟಕದ ಬಗ್ಗೆ ಇದರಲ್ಲಿ ಮಾಹಿತಿ ಇಲ್ಲವೇ ಇಲ್ಲ ಎನ್ನಬಹುದು.

೨೪. ಡಾ.ದೇವರಕೊಂಡರೆಡ್ಡಿ., ೧೯೯೮., ಹಂಪಿ ಶಾಸನ ಸಂಪುಟ. ಸಂ.೧೯

೨೫. ಆಂಧ್ರಪ್ರದೇಶದ ಕುರ್ಕ್ಯಾಲ ಗ್ರಾಮದ ಹತ್ತಿರ ಇರುವ ಬೊಮ್ಮಲ ಗುಡ್ಡವೇ ಹಿಂದಿನ ವೃಷಭಗಿರಿಯಾಗಿದೆ. ಚಾಳುಕ್ಯರ ಇಮ್ಮಡಿ ಅರಿಕೇಸರಿಯ (ಕ್ರಿ.ಶ.೯೩೦-೯೫೮) ಆಸ್ಥಾನ ಕವಿ ಪಂಪನ ಸ್ಮಾರಕೋದ್ದೇಶದಿಂದ ಪಂಪನ ತಮ್ಮ ಮಾಡಿದ ಈ ಧರ್ಮಕಾರ್ಯ ಸ್ತುತ್ಯಾರ್ಹವಾಗಿದೆ.

೨೬. ತಿಪ್ಪೇಸ್ವಾಮಿ,ಎಚ್., ೨೦೧೪, ಬಯಕಾರ ರಾಮಪ್ಪಯ್ಯನ ಜನಪರ ಸೇವೆ, ಪು.೧೯-೨೭

೨೭. ರಾಜರಾಂ ಹೆಗೆಡೆ., ಪೂರ್ವೊಕ್ತ., ಪು. ೧೯

೨೮. ದೀಕ್ಷಿತ್ ಜಿ.ಎಸ್. ಕುಪ್ಪುಸ್ವಾಮಿ, ಪೂರ್ವೋಕ್ತ, ಪು.೩೬-೩೯

೨೯. MAR-೧೯೩೯, ಕಡೂರು-೩೭ ಮತ್ತು MAR-೧೯೪೩, ಕಡೂರು-೨೭.

೩೦. ರೈಸ್.ಬಿ.ಎಲ್., ಎ.ಕ.-೬, ತರೀಕೆರೆ ಶಾ.ಸಂ.-೫೫.

೩೧. ಚಿದಾನಂದಮೂರ್ತಿ ಎಂ. 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಪು.೪೪೬.

೩೨. ಎ.ಕ-೯, ಬೇಲೂರು-೩೩೮ ಮತ್ತು ೩೪೧ (ಹೊಸ).

೩೩. ಹೈದರಾಬಾದ್ ಆರ್ಕಿಯಾಲಜಿಕಲ್ ಸೀರಿಸ್, ನಂ.೫

೩೪. ದೀಕ್ಷಿತ್ ಜಿ.ಎಸ್. ಕುಪ್ಪುಸ್ವಾಮಿ, ಪೂರ್ವೋಕ್ತ, ಪು.೩೬-೫೨

೩೫. ಅದೇ, ಪು. ೩೬-೫೨

೩೬. ಇಂಡಿಯನ್ ಇರಿಗೇಷನ್ ಕಮಿಷನ್ ರಿಪೋರ್ಟ್: ೧೯೦೧-೦೩, ಸಲೆಕ್ಟೆಡ್ ಎವಿಡೆನ್ಸ್, ಎವಿಡೆನ್ಸ್ ಆಫ್ ಕರ್ನಲ್ ಗ್ರ್ಯಾಂಟ್, ಪು. ೩೧೨-೩೨೦.

೩೭. ವಾಮನ ಎ ಸುಂದರ್ (ಸಂ), ೧೯೯೦. ಪ್ರೊವೊಟಿಂಗ್ ಪೀಪಲ್ಸ್ ಪಾರ್ಟಿಸಿಪೇಷನ್ ಇನ್ ದಿ ರಿಹಬಿಲಿಟೇಷನ್ ಆಫ್ ಟ್ಯಾಂಕ್ಸ್ ಇನ್ ಕರ್ನಾಟಕ, ಪು.೨೬

೩೮. ಓಮರ್ ಸತ್ತಾರ್: ನ್ಯೂ ಸೈಂಟಿಸ್ಟ್, ಡಬ್ಲ್ಯೂ.ಸಿ.ಎನ್.ಇಂಗ್ಲೆಂಡ್ "ನ್ಯಾಚುರಲ್ ಬಂಡ್", ರೀಡರ್ಸ್ ಡೈಜೆಸ್ಟ್, ಜನವರಿ ೧೯೯೨, ಪು.೩೦.

೩೯. ಇಂಡಿಯನ್ ಇರಿಗೇಷನ್ ಕಮಿಷನ್ ರಿಪೋರ್ಟ್ ೧೯೦೧-೦೩, ಪೂರ್ವೋಕ್ತ, ಪು.೩೬-೫೨

೪೦. Wilson, H.H., ೧೯೬೮, A Glossary of Judicial and Revenue Terms, p.೨೭-೪೫

೪೧. ಕ್ರಿ.ಶ.೨-೩ನೇ ಶತಮಾನ ಇಂದಿಗೆ ಸುಮಾರು ೧೮೦೦ ವರ್ಷಗಳಷ್ಟು ಹಿಂದೆ.

೪೨. ಬಿ.ರಾಜಶೇಖರಪ್ಪ, 'ಚಂದ್ರವಳ್ಳಿ ಶಾಸನದ ಮೇಲೆ ಹೊಸಬೆಳಕು', ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂ. ೪೯-ಸಂಚಿಕೆ ೨, ಡಿಸೆಂಬರ್ ೧೯೮೪, ಪು. ೮೯-೧೦೦.

೪೩. ಇ.ಸಿ ೭, ಶಿವಮೊಗ್ಗ. ಶಾ.ಸಂ.೩೫.

೪೪. ಎ.ಕ.-೬, ಕಡೂರು. ಶಾ.ಸಂ. ೧೬೧

೪೫. ರಾಜರಾಂ ಹೆಗಡೆ., ಪೂರ್ವೂಕ್ತ., ಪು. ೬೭-೭೫

೪೬. ವಿ.ವಿ.ಮಿರಾಶಿ, ೧೯೮೧, 'ದಿ ಹಿಸ್ಟರಿ ಅಂಡ್ ಇನ್ಸ್ಕ್ರಿಪ್ಷನ್ಸ್ ಆಫ್ ದಿ ಶಾತವಾಹನಾಸ್ ಅಂಡ್ ವೆಸ್ಟರ್ನ್ ಕ್ಷತ್ರಪಾಸ್' ಭಾಗ ೨, ವಿಭಾಗ ೨, ಬಿ.ನಂ.೫೧, ಪು. ೧೨೧,

೪೭. ರಾಜಶೇಖರಪ್ಪ ಬಿ., ಪೂರ್ವೋಕ್ತ, ಪು.೮೯-೧೦೦

೪೮. ಎ.ಕ-೯, ಬೇಲೂರು ಶಾ. ಸಂ. ೪೩೮.

೪೯. ಅದೇ. ಪು. ೪೩೮

೫೦. ಡಾ.ಎಚ್.ತಿಪ್ಪೇಸ್ವಾಮಿ, ಪೂರ್ವೂಕ್ತ, ಪು.೪೨

೫೧. ಚಿದಾನಂದಮೂರ್ತಿ. ಎಂ. ಪೂರ್ವೋಕ್ತ, ಪು. ೪೪೫

೫೨. ಚಿದಾನಂದಮೂರ್ತಿ. ಎಂ. ಪೂರ್ವೋಕ್ತ, ಪು.೪೪೫

೫೩. ಚಿದಾನಂದಮೂರ್ತಿ. ಎಂ. ಪೂರ್ವೋಕ್ತ, ಪು. ೪೪೯

೫೪. Kuppuswamy G.R., 'Irrigation Facilities provided by Feudatory Families in South Karnataka', The Quarterly Journal of the Mythic society, Jan-March ೧೯೮೩, P.೧-೯.

೫೫. Buchanan Francis, Journey from Madras through countries of Mysore, Canara and Malabar, ಪು.೪೯

೫೬. ದೀಕ್ಷಿತ್ ಜಿ.ಎಸ್.ಕುಪ್ಪುಸ್ವಾಮಿ ಜಿ.ಆರ್.ಮೋಹನ್ ಎಸ್.ಕೆ. ಪೂರ್ವೋಕ್ತ, ಪು.೩೭. ಮತ್ತು ಎ.ಕ-೧೦, ಅರಸೀಕೆರೆ ಶಾ.ಸಂ. ೧೮೬ ಮತ್ತು ೧೮೭.

೫೭. "ಹ್ಯಾಂಡ್ ಬುಕ್ ಆಫ್ ಹೈಡ್ರೋ ಮೀಟಿರಿಯಾಲಜಿ ಅಂಡ್ ಹೈಡ್ರಾಲಜಿ ಇನ್ ಕರ್ನಾಟಕ" ಸಂ.೧, ಭಾಗ ೧, ೧೯೮೬. ಪು. ೫೨,

೫೮. ಭಾರತ ಸರ್ಕಾರದ ಕಾರ್ಯದರ್ಶಿಯವರಿಗೆ ಮೈಸೂರು ಚೀಫ್ ಕಮಿಷನರ್ ಬರೆದ ದಿ.೪.೩.೧೮೭೧ ಪತ್ರಕ್ಕೆ ಲಗತ್ತಿಸಿದ ಮೇಜರ್ ಸ್ಯಾಂಕಿಯವರ ಟಿಪ್ಪಣಿ, ನಂ.೬. ಪ್ಯಾರಾ ೩.

೫೯. ಎ.ಕ–III ನಂಜನಗೂಡು ಶಾ.ಸಂ. ೧೯೨, ಪು. ೧೧೫.

೬೦. ಎ.ಕ.–೮. ಹೊಳೇನರಸೀಪುರ ಶಾ.ಸಂ. ೪೨.

೬೧. ಇ.ಸಿ. ೧೦, ಮುಳುಬಾಗಿಲು, ಶಾ.ಸಂ. ೧೭೨ ಮತ್ತು ೧೭೩.

೬೨. ರೈಸ್ ಪ್ರಕಾರ, ಈ ಆದೇಶಗಳು ಚಿಕ್ಕದೇವರಾಯ ಹೊರಡಿಸಿದವುಗಳು. ಇವುಗಳನ್ನು ೧೮೭೨–೧೭೦೪ರಲ್ಲಿ ಸುಲ್ತಾನ ಮರುಪ್ರಕಟಣೆ ಮಾಡಿದ್ದಾನೆ.

೬೩. "ಹ್ಯಾಂಡ್ ಬುಕ್ ಆಫ್ ಹೈಡ್ರೋ ಮೀಟಿರಿಯಾಲಜಿ ಅಂಡ್ ಹೈಡ್ರಾಲಜಿ ಇನ್ ಕರ್ನಾಟಕ", ಪು. ೫೯–೬೧.

೬೪. ರಾಬರ್ಟ್–ಚೇಂಬರ್ಸ್ ಮತ್ತು ಇತರರು, ೧೯೮೯. ಟು ದಿ ಹ್ಯಾಂಡ್ಸ್ ಆಫ್ ಪೂರ್ ವಾಟರ್ ಆ್ಯಂಡ್ ಟ್ರೀಸ್, ಪು. ೬೫

೬೫. "ಹ್ಯಾಂಡ್ ಬುಕ್ ಆಫ್ ಹೈಡ್ರೋ ಮೀಟಿರಿಯಾಲಜಿ ಅಂಡ್ ಹೈಡ್ರಾಲಜಿ ಇನ್ ಕರ್ನಾಟಕ", ಪೂರ್ವೋಕ್ತ, ಪು. ೧೫

೬೬. ದೀಕ್ಷಿತ್ ಜಿ.ಎಸ್.ಕುಪ್ಪುಸ್ವಾಮಿ ಜಿ.ಆರ್.ಮೋಹನ್ ಎಸ್.ಕೆ. ಪೂರ್ವೋಕ್ತ, ಪು. ೬೯.

೬೭. ರಾಬರ್ಟ್–ಚೇಂಬರ್ಸ್ ಮತ್ತು ಇತರರು, ಪೂರ್ವೂಕ್ತ, ಪು. ೬೩

೬೮. ಅದೇ, ಪು. ೭೦

೬೯. ಮಾರ್ಚ್ ೧೯೧೫ರಲ್ಲಿ ರಚಿತವಾದ ಚಿತ್ರದುರ್ಗ ಜಿಲ್ಲೆಯ ಭರಮಸಾಗರ ಪಂಚಾಯಿತಿ ಜನವರಿ ೧೯೩೬ರಲ್ಲಿ ರದ್ದಾಯಿತು ಎಂದು ಸ್ಥಳೀಯರು ಹೇಳುತ್ತಾರೆ.

ಅಧ್ಯಾಯ ಐದು

# ಚಿತ್ರದುರ್ಗ ಜಿಲ್ಲೆಯ ಐತಿಹಾಸಿಕ ಪ್ರಮುಖ ಕೆರೆಗಳು

೫.೧. ಪ್ರಾಚೀನ ಕೆರೆಗಳು
೫.೨. ಮಧ್ಯಕಾಲೀನ ಕೆರೆಗಳು
೫.೩. ಆಧುನಿಕ(ಸಮಕಾಲೀನ) ಪ್ರಮುಖ ಕೆರೆಗಳು

ಅಧ್ಯಾಯ ಐದು

# ಚಿತ್ರದುರ್ಗ ಜಿಲ್ಲೆಯ ಐತಿಹಾಸಿಕ ಪ್ರಮುಖ ಕೆರೆಗಳು

ಜಗತ್ತಿನ ಎಲ್ಲೆಡೆಯಂತೆ ಚಿತ್ರದುರ್ಗ ಪ್ರದೇಶದಲ್ಲಿಯೂ ಹಿಂದಿನಿಂದಲೂ ಮನುಷ್ಯ ಕೆರೆ, ಕುಂಟೆ, ಕಟ್ಟೆ, ಕಾಲುವೆ, ಹೊಂಡ, ಬಾವಿ ಮುಂತಾದವುಗಳನ್ನು ನಿರ್ಮಾಣ ಮಾಡಿಕೊಂಡು ತನ್ನ ಅವಶ್ಯಕತೆಗನುಗುಣವಾಗಿ ಅವುಗಳನ್ನು ಬಳಕೆ ಮಾಡಿಕೊಂಡಿದ್ದಾನೆ. ಚಿತ್ರದುರ್ಗ ಜಿಲ್ಲೆಯು ತೀವ್ರ ಅನಾವೃಷ್ಟಿಗೆ ತುತ್ತಾಗುವ ಪ್ರದೇಶಗಳಲ್ಲಿ ಒಂದಾಗಿದೆ.[೧] ಈ ಹಿನ್ನೆಲೆಯಲ್ಲಿ ಬಿದ್ದ ಮಳೆಯ ನೀರನ್ನು ಸಂಗ್ರಹಿಸುವ ಹಾಗೂ ವ್ಯವಸ್ಥಿತವಾಗಿ ಬಳಸಿಕೊಳ್ಳುವ ಕಾರ್ಯ ಮಹತ್ವ ಪಡೆದಿದೆ. ಇಲ್ಲಿ ಆಳ್ವಿಕೆ ಮಾಡಿದ ಪ್ರಭುಗಳು ಕಾಲಕಾಲಕ್ಕೆ ಅನೇಕ ಕೆರೆಗಳನ್ನು ನಿರ್ಮಿಸಿದ್ದಾರೆ. ಅಲ್ಲದೆ ಹಾಳಾದ ಕೆರೆಗಳನ್ನು ಜೀರ್ಣೋದ್ಧಾರ ಮಾಡಿ ಸಮಸ್ತ ಜೀವ ಸಂಕುಲಕ್ಕೆ ಆಸರೆಯಾಗಿದ್ದಾರೆ. ಹಿಂದೆ ಅವರು ಕಲ್ಪಿಸಿದ ನೀರಾವರಿ ವ್ಯವಸ್ಥೆ ಇಂದಿಗೂ ಸಹ ಎಷ್ಟೋ ಕಡೆ ಉಳಿದು ಬಂದಿದ್ದು, ಈಗಲೂ ಪ್ರಯೋಜನಕಾರಿಯಾಗಿದೆ. ಪ್ರಸ್ತುತ ಚಿತ್ರದುರ್ಗ ಜಿಲ್ಲೆಯಲ್ಲಿ ಹಿಂದಿನ ಕಾಲದಲ್ಲಿ ಕೆರೆಗಳ ಮೂಲಕ ರೂಪಿಸಲಾದ ನೀರಾವರಿ ವ್ಯವಸ್ಥೆ ಹೇಗಿತ್ತು? ಮತ್ತು ಈ ಪ್ರದೇಶದ ಬೆಳವಣಿಗೆಯಲ್ಲಿ ಅದರ ಪಾತ್ರ ಏನಿದ್ದಿರಬಹುದು? ಈ ಬಗೆಗಿನ ಪರಿಶೀಲನೆ ಅತ್ಯಂತ ಕುತೂಹಲಕಾರಿಯಾದದು.

ವೇದಾವತಿ, ಚಿನ್ನಹಗರಿ, ಸುವರ್ಣಮುಖಿ ನದಿಗಳು ಜಿಲ್ಲೆಯ ನೀರಾವರಿ ಚೌಕಟ್ಟಿನಲ್ಲಿ ಪ್ರವಹಿಸುತ್ತಿದ್ದು, ಇವುಗಳೊಂದಿಗೆ ನಿಯೋಗಲ್ ಹಳ್ಳ ಹಾಗು ಗರಣಿ ಹಳ್ಳಗಳು ಇಲ್ಲಿ ಪ್ರಮುಖವಾಗಿ ಹರಿಯುತ್ತವೆ. ಇವುಗಳಲ್ಲಿ 'ವೇದಾವತಿ' ಜಿಲ್ಲೆಯ ಆಗ್ನೇಯ ಭಾಗದಲ್ಲಿ ಸುಮಾರು ೧೨೫ ಮೈಲಿ ಹರಿಯುತ್ತದೆ[೨]. ಇವುಗಳೊಂದಿಗೆ ಸರಣಿಯೋಪಾದಿಯಲ್ಲಿ ನಿರ್ಮಾಣಗೊಂಡಿರುವ ಕೆರೆಗಳು ಜಿಲ್ಲೆಯ ಕೃಷಿ ಚಟುವಟಿಕೆಗಳಿಗೆ ಪೂರಕ ಕೊಡುಗೆಗಳನ್ನು ನೀಡಿವೆ. ಈ ಜಿಲ್ಲೆಯಲ್ಲಿ ಕ್ರಿ ಪೂ ೩ನೇ ಶತಮಾನದಿಂದ ೧೯ ಶತಮಾನದವರಗೆ ಆಳಿಕ್ವೆ ನಡೆಸಿದ ವಿವಿಧ ರಾಜ ಮನೆತನಗಳು ಇಲ್ಲಿ ಕೆರೆ ನೀರಾವರಿಯನ್ನು ಪ್ರೋತ್ಸಾಹಿಸಿದ ಹಿನ್ನೆಲೆಯಲ್ಲಿ ಜಿಲ್ಲೆಯಾದ್ಯಂತ ೧೪೮ ದೊಡ್ಡ ಕೆರೆಗಳು ಹಾಗು ೧೩೨ ಸಣ್ಣ ಕೆರೆಗಳಿದ್ದು, ಒಟ್ಟಾರೆ ಸುಮಾರು ೨೮೦ ಕೆರೆಗಳು ನಿರ್ಮಾಣಗೊಂಡಿರುವುದನ್ನು ಶಾಸನಗಳು ಉಲ್ಲೇಖಿಸಿವೆ.[೩]

ಜಿಲ್ಲೆಯಲ್ಲಿ ಅನೇಕ ಮಹತ್ವದ ಕೆರೆಗಳಿವೆ. ಅವುಗಳಲ್ಲಿ ಚಂದ್ರವಳ್ಳಿ, ಭೀಮಸಮುದ್ರದ ಕೆರೆ, ಮಲ್ಲಾಪುರ ಕೆರೆ, ಕಾತ್ರಾಳ್ ಕೆರೆ, ಮಾನಂಗಿ ಕೆರೆ, ಚಿಕ್ಕಪುರ ಕೆರೆ, ಲಕ್ಷ್ಮೀಸಾಗರ ಕೆರೆ, ಚಂದ್ರವಳ್ಳಿ

ಕೆರೆ, ಬರಗೆರೆ, ಮುರುಘಾಮಠದ ಕೆರೆ, ದೊಡ್ಡಣ್ಣನ ಕೆರೆ, ತಿಮ್ಮಣ್ಣನಾಯಕನ ಕೆರೆ, ಗೋನೂರು, ಮೈಲನಹಳ್ಳಿ, ಭರಮಸಾಗರ ಕೆರೆ, ಸಂಗೇನಹಳ್ಳಿ ಕೆರೆ, ಭೀಮಸಮುದ್ರ, ನೀರುಗುಂದ, ದೊಡ್ಡೇರಿ, ಮಧುರೆ, ನಗರಂಗೇರೆ, ತಳಕು, ದೊಡ್ಡ ಉಳ್ಳಾರ್ತಿ, ಸಾಣಿಕೆರೆ, ಪರಶುರಾಂಪುರ, ರಾಣಿಕೆರೆ, ಕ್ಯಾದಿಗುಂಟೆ, ಗೌರಸಮುದ್ರ, ಮುತ್ತಗಾರಹಳ್ಳಿ ಕೆರೆ, ಬಿ.ಜಿ.ಕೆರೆ. ಹೊಳಲ್ಕೆರೆ, ಹಿರೇಕೆರೆನಹಳ್ಳಿ, ನುಂಕಪ್ಪನಗುಡ್ಡದ ಹಳೆಕೆರೆ, ನಾಗಸಮುದ್ರ, ಹೀರೇಕೆರೆಹಳ್ಳಿ, ಚಿಕ್ಕನಹಳ್ಳಿ, ತಮ್ಮೇನಹಳ್ಳಿ, ಗುಡ್ಡದ ರಂಗನಹಳ್ಳಿ, ರಂಗಯ್ಯನದುರ್ಗ, ನಾಯಕನಹಟ್ಟಿ, ಬೋಸೇದೇವರಟ್ಟಿ, ಮಲ್ಲಾಪುರ, ಮುತ್ತುಗದೂರು, ಶಿವಗಂಗೆ, ತಾಳ್ಯ, ರಾಮಗಿರಿ, ಗಂಗಸಮುದ್ರ, ಚಿಕ್ಕಜಾಜೂರು, ಚಿಕ್ಕ ಎಮ್ಮಿಗನೂರು, ಕುಡಿನೀರುಕಟ್ಟೆ, ಹಿರಿಯಕೆರೆ, ಕಿರಿಯಕೆರೆ, ಅರಕೆರೆ, ಹಿರಿಯಅರಕೆರೆ, ದ್ವಂದ್ವಗೆರೆ (ಜೋಡಿಕೆರೆ?), ಒಳಗೆರೆ, ಆಲಕೆರೆ, ಹೊಸಕೆರೆ, ನಿಡುಗೆರೆ, ಮಂಡಗೆರೆ, ಗಜಗೆರೆ (ಗಂಜಿಗೆರೆ?), ಮಲ್ಲಿಗೆಗೆರೆ, ಹೊಲಿಯಕೇಬಡಗೆರೆ, ಬಡಿಲಗೆರೆ, ಕಾಣಾಚಿಕೆರೆ, ಗೊಳಿಯಾದಕೆರೆ, ಕೂನನಕೆರೆ, ಗನ್ನನಕೆರೆ, ಚೆರ್ವ್ವನ ಕೆರೆ, ಅರಸನಕೆರೆ, ಮುದುಗೆರೆ, ಬೇಲಕೆರೆ, ಕೆಂಡನಕೆರೆ, ಕಾಮಸಮುದ್ರ, ಕರಿಯಕೆರೆ, ಗೌಡುಕೆರೆ, ಭೀಮನಕೆರೆ, ಕುಂಬಾರಕೆರೆ, ತೆಲ್ಲಿನಗೆರೆ, ಮೇವನಕೆರೆ, ಬುವಸಮುದ್ರ, ಸೆಟ್ಟಿಯಕೆರೆ, ದೇವರಕೆರೆ, ಯೆಡಗೂರಕೆರೆ, ಮದುಗದಕೆರೆ, ಹರತಿಯಕೆರೆ, ಸಿರಿವೊಳಲಕೆರೆ, ಮುತ್ತಕುರಕೆರೆ, ಬೊಬ್ಬೂರುಕೆರೆ, ಲಕ್ಕಿಹಳ್ಳಿಕೆರೆ, ಬೀರೇನಹಳ್ಳಿಕೆರೆ, ಮೊಸಕಲ್‌ಕೆರೆ, ಆಲೂರುಕೆರೆ, ಭೈರೇಸಮುದ್ರದಕೆರೆ, ಅರಳಿಹಳ್ಳಿಕೆರೆ, ಇಟ್ಟಿಗೆಹಳ್ಳಿಕೆರೆ, ಗವುಡನಹಳ್ಳಿಕೆರೆ, ಕಗ್ಗಲುಕಟ್ಟೆಕೆರೆ, ಹನುಮನಾಯ್ಕನಕಟ್ಟೆಕೆರೆ, ಕೆರೆಯೂರಕೆರೆ, ಮುಗುಳಿಯಕೆರೆ, ಬೇವಿನಹಳ್ಳಿ ಹಿರಿಯಕೆರೆ, ಜೊಂಮಪುರದಕೆರೆ ಮುಂತಾದವು ಅತಿ ಮುಖ್ಯವೆನಿಸಿವೆ.

ಈ ಮೇಲಿನ ಕೆರೆಗಳಲ್ಲದೆ ಪ್ರಾಚೀನ ಕಾಲದಲ್ಲಿ ಇನ್ನೂ ಅನೇಕ ಕೆರೆಗಳು ಚಿತ್ರದುರ್ಗ ಪ್ರಾಂತದಲ್ಲಿದ್ದುದು ಶಾಸನಗಳಿಂದ ತಿಳಿದು ಬರುತ್ತದೆ. ಅವನ್ನು ಹೀಗೆ ಹೆಸರಿಸಬಹುದು. ಪೆರ್ಗ್ಗೆರೆ, ಹೆಗ್ಗೆರೆ, ಪಿರಿಯಕೆರೆ, ಹಿರಿಯಕೆರೆ, ಕಿರಿಯಕೆರೆ, ಅರಕೆರೆ, ಹಿರಿಯಅರಕೆರೆ, ದ್ವಂದ್ವಗೆರೆ (ಜೋಡಿಕೆರೆ?), ಒಳಗೆರೆ, ಆಲಕೆರೆ, ಹೊಸಕೆರೆ, ನಿಡುಗೆರೆ, ಮಂಡಗೆರೆ, ಗಜಗೆರೆ (ಗಂಜಿಗೆರೆ?), ಮಲ್ಲಿಗೆಗೆರೆ, ಹೊಲಿಯಕೇಬಡಗೆರೆ, ಬಡಿಲಗೆರೆ, ಕಾಣಾಚಿಕೆರೆ, ಗೊಳಿಯಾದಕೆರೆ, ಕೂನನಕೆರೆ, ಗದಿಗಿನಕೆರೆ, ಗನ್ನನಕೆರೆ, ಚೆರ್ವ್ವನಕೆರೆ, ಅರಸನಕೆರೆ, ಮುದುಗೆರೆ, ಬೇಲಕೆರೆ, ಕೆಂಡನಕೆರೆ, ಕಾಮಸಮುದ್ರ, ಕರಿಯಕೆರೆ, ಗೌಡುಕೆರೆ, ಭೀಮನಕೆರೆ, ಕುಂಬಾರಕೆರೆ, ತೆಲ್ಲಿನಗೆರೆ, ಮೇವನಕೆರೆ, ಬುವಸಮುದ್ರ, ಸೆಟ್ಟಿಯಕೆರೆ, ದೇವರಕೆರೆ, ಯೆಡಗೂರಕೆರೆ, ಮದುಗದಕೆರೆ, ಹರತಿಯಕೆರೆ, ಸಿರಿವೊಳಲಕೆರೆ, ಮುತ್ತಕುರಕೆರೆ, ಬೊಬ್ಬೂರುಕೆರೆ, ಲಕ್ಕಿಹಳ್ಳಿಕೆರೆ, ಬೀರೇನಹಳ್ಳಿಕೆರೆ, ಮೊಸಕಲ್‌ಕೆರೆ, ಆಲೂರುಕೆರೆ, ಭೈರೇಸಮುದ್ರದ ಕೆರೆ, ಬಸವಾಪಟ್ಟಣಕೆರೆ, ಅರಳಿಹಳ್ಳಿಕೆರೆ, ಇಟ್ಟಿಗೆಹಳ್ಳಿಕೆರೆ, ಗವುಡನಹಳ್ಳಿಕೆರೆ, ಕಗ್ಗಲುಕಟ್ಟೆಕೆರೆ, ಹನುಮನಾಯ್ಕನಕಟ್ಟೆಕೆರೆ, ಕೆರೆಯೂರಕೆರೆ, ಮುಗುಳಿಯಕೆರೆ, ಬೇವಿನಹಳ್ಳಿ ಹಿರಿಯಕೆರೆ, ಜೊಂಮಪುರದಕೆರೆ ಮುಂತಾದವುಗಳು ಪ್ರಮುಖವಾಗಿವೆ.[೪]

ಜಿಲ್ಲೆಯಲ್ಲಿನ ಹಲವು ಕೆರೆಗಳ ಕುರಿತ ವಿವರಗಳನ್ನು ಸುಮಾರು ೨೯ ಶಾಸನಗಳು ದಾಖಲಿಸಿದ್ದು, ಅವುಗಳ ಆಧಾರದ ಮೇಲೆ ಜಿಲ್ಲೆಯ ಕೆರೆಗಳ ನೀರಾವರಿ ವ್ಯವಸ್ಥೆಯನ್ನು ಚಾರಿತ್ರಿಕವಾಗಿ ಅವಲೋಕಿಸಬಹುದು. ಜಿಲ್ಲೆಯ ಕೆರೆ ನಿರ್ಮಾಣದ ಪ್ರಥಮ ಉಲ್ಲೇಖ, ಕದಂಬರ ಮಯೂರಶರ್ಮ

ನಿರ್ಮಿಸಿದ ಎನ್ನಲಾದ ಚಿತ್ರದುರ್ಗ ಬಳಿಯ ಚಂದ್ರವಳ್ಳಿ ಕೆರೆ ಎಂದು ತಿಳಿದುಬರುತ್ತದೆ. ಆದರೆ ಆ ಕೆರೆ ಇನ್ನೂ ಪ್ರಾಚೀನ ಎನ್ನುವುದನ್ನು ವಿದ್ವಾಂಸರು ಗುರುತಿಸಿದ್ದಾರೆ.[೫] ಹಿರಿಯೂರು ತಾಲ್ಲೂಕು ಸಕ್ರೆ ಗ್ರಾಮದ ಕ್ರಿ.ಶ.೮೯೦ರ ಶಾಸನದ ಪ್ರಕಾರ[೬] ಮರುಗೆರೆ ಗ್ರಾಮಸ್ಥರು ಬಿತ್ತಪ್ಪನ ಕೆರೆ ನಿರ್ಮಿಸಿದರೆಂದು ಹಾಗು ಕೆರೆಯ ನಾಲ್ಕು ಕಾಲುವೆಗಳ ಬದಿಯ ಜಮೀನನ್ನು 'ಬಿತ್ತುವಟ್ಟ' ನೀಡಿರುವುದನ್ನು ಉಲ್ಲೇಖಿಸಿದೆ. ರಾಷ್ಟ್ರಕೂಟರ ಕಾಲದ ಕ್ಯಾಸಾಪುರ ಶಾಸನದಲ್ಲಿ ಅಣ್ಣಯ್ಯನಿಂದ ನಿರ್ಮಿಸಲ್ಪಟ್ಟ ಕೆರೆಯ ಅಚ್ಚುಕಟ್ಟಿನ ಭೂಮಿಯನ್ನು, ಎರಡು ಗ್ರಾಮಗಳನ್ನು ಒಂದು ಅಗ್ರಹಾರವನ್ನಾಗಿಸಿ, ಆ ಗ್ರಾಮದ ಕಲ್ಲೇಶ್ವರ ದೇವಾಲಯಕ್ಕೆ ದತ್ತಿ ಬಿಟ್ಟಿರುವುದನ್ನು ಅಲ್ಲಿನ ಶಾಸನ ದಾಖಲಿಸಿದೆ.[೭]

ಕ್ರಿ.ಶ.೧೦೫೧ರ ಮುತ್ತದಗದೂರು ಶಾಸನ, ಕದಂಬಳಿಗಿ ನಾಡಿನ...... ಅಂಗಿರಸ ಮತ್ತು ಭೀಮರಸ ತಮ್ಮ ಗುರುವಿನ ತಮ್ಮ ರಾಜರಸನ ಹೆಸರಿನಲ್ಲಿ ಕೆರೆಯೊಂದನ್ನು ಕಟ್ಟಿಸಿ, ಭೂಮಿಗಳನ್ನು ದತ್ತಿಯಾಗಿ ನೀಡಿರುವುದನ್ನು ದಾಖಲಿಸಿದೆ.[೮] ಚೋಳೂರು ಶಾಸನ ಕ್ರಿ.ಶ.೧೧೦೦ರಲ್ಲಿ ಪಂಡಿತ ಜೀಯನ ಮಗ ವಿಶ್ವೇಶ್ವರಯ್ಯ ಚೋಳೂರು ಕೆರೆಯ ಪಶ್ಚಿಮ ತೂಬನ್ನು ನಿರ್ಮಿಸಿದ್ದನ್ನು ಅದಕ್ಕಾಗಿ 'ಬಿತ್ತುವಟ್ಟ' ನೀಡಿರುವುದನ್ನು ಹೆಸರಿಸಿದೆ.[೯] ಕ್ರಿ.ಶ. ೧೨೮೬ರ ಹೊಯ್ಸಳರ ಕಾಲದ ಶಾಸನದ ಪ್ರಕಾರ ಹೊಯ್ಸಳ ವೀರನರಸಿಂಹನ ಮಂತ್ರಿ ಪೆರುಮಾಳ ದೇವ ದಂಡನಾಯಕ ಬನ್ನೆತ್ತಿನೂರು ಬನೆಕೆಗೌಡನಿಗೆ ಕುರುಬಕಾಲುವೆಯ ಕೆರೆಯ ಅಚ್ಚುಕಟ್ಟಿನ ಜಮೀನುಗಳ ಎಲ್ಲೆ ಕಟ್ಟಿಗೆ ಕಲ್ಲುಗಳನ್ನು ಹಾಕಿ ನಿಗದಿಪಡಿಸಿರುವುದನ್ನು ಹಾಗು ಕೆರೆ ನಿರ್ಮಿಸಿದ ಬೆನಕಗೌಡನಿಗೆ ಸಿಂಹಪಾಲು ಕೊಡುಗೈ ಭೂಮಿ ನೀಡಿ, ಉಳಿದ ಪಾಲನ್ನು ದೇವಾಲಯಗಳು, ಶಾನುಭೋಗ ಮತ್ತು ಇತರೆ ಬ್ರಾಹ್ಮಣರಿಗೆ ನೀಡಿರುವುದನ್ನು ದಾಖಲಿಸಿದೆ[೧೦]. ಕ್ರಿ.ಶ.೧೪೨೮ರ ಸೋಮೇರಹಳ್ಳಿ ಶಾಸನ ಹಿರಿಯೂರು ದಕ್ಷಿಣಕ್ಕೆ ಇರುವ ಮದ್ದೇರಹಳ್ಳಿ ದಕ್ಷಿಣಕ್ಕೆ ಚಿಕ್ಕದೇವಕೆರೆ ನಿರ್ಮಿಸಿರುವುದನ್ನು ಉಲ್ಲೇಖಿಸಿದೆ.[೧೧] ಕ್ರಿ.ಶ.೧೪೩೪ರ ರಾಮಸಾಗರ ಶಾಸನದಲ್ಲಿ ರಾಜನು ಭೇಟಿಗಾಗಿ ಬಂದಿದ್ದು, ರಾಮಗುಡಿಗೆ ದರ್ಶನಕ್ಕಾಗಿ ಹೋದಾಗ ಇಪ್ಪತ್ತು ವರಹ ಆದಾಯದ ಭೂಮಿಯನ್ನು ದತ್ತಿ ನೀಡಲು ಆದೇಶಿಸಿದೆ. ಅದರ ರತಸರಗಬೀರನ ಕಾಲುವೆ ಅಚ್ಚುಕಟ್ಟಿನಲ್ಲಿ ಭೂಮಿಯನ್ನು ದತ್ತಿ ನೀಡಿರುವುದನ್ನು ದಾಖಲಿಸಿದೆ. ಈ ಶಾಸನ ಅಂದಿನ ನೀರಾವರಿ ಚೌಕಟ್ಟಿನಲ್ಲಿ ಕಾಲುವೆಗಳ ನಿರ್ಮಾಣ ಹಾಗೂ ಅದರ ಅಚ್ಚುಕಟ್ಟಿನ ಬಳಕೆ ಕುರಿತು ಬೆಳಕು ಚೆಲ್ಲುತ್ತದೆ. ಕಡೂರು ಶಾಸನ ಜಾಗೀರು ಸೀಮೆಯಲ್ಲಿ ಕಡೂರು ಕೆರೆಯ ಕಟ್ಟೆ ನಿರ್ಮಿಸಿರುವುದನ್ನು ದಾಖಲಿಸಿದೆ.[೧೨] ಕ್ರಿ.ಶ. ೧೬೦೦ರಲ್ಲಿ ಸಿದ್ದಾಪುರ ಶಾಸನ ದೇವಣ್ಣ ಒಡೆಯನ ಶಿಷ್ಯ ಹೊಲಿಯಶೆಟ್ಟಿಯ ಮಗ ಬಾ....ಶೆಟ್ಟಿ ಸತಿ ಹೋದ ತನ್ನ ತಾಯಿಯ ಸ್ಮರಣೆಗಾಗಿ ಕೆರೆಯೊಂದನ್ನು ನಿರ್ಮಿಸಿರುವುದನ್ನು ದಾಖಲಿಸಿದೆ. ಹರಟಿ ಶಾಸನದಲ್ಲಿಯೇ ಸುಗುಯಿಕೆರೆ ನಿರ್ಮಿಸಿದ್ದಕ್ಕಾಗಿ ಬಣವಿಗೌಂಡನಿಗೆ ಭೂದತ್ತಿ ನೀಡಿರುವುದನ್ನು ಉಲ್ಲೇಖಿಸಿದೆ.[೧೩] ಕ್ರಿ.ಶ. ೧೭೦೦ರ ನಲ್ಲಿಕಟ್ಟೆಯ ಶಾಸನದ ಪ್ರಕಾರ ಕಾಮಗೇತಿ ಕಸ್ತೋರಿರಂಗಪ್ಪನಾಯಕ ತನ್ನ ಎರಡನೆಯ ಪಟ್ಟದ ರಾಣಿಯ ನೆನಪಿಗಾಗಿ ನಲ್ಲಿಕಟ್ಟೆ ಕೆರೆ ನಿರ್ಮಿಸಿದ್ದನ್ನು ದಾಖಲಿಸಿ ಅದರ ಕಾಮಗಾರಿಯನ್ನು ನಿರ್ವಹಿಸಿದ ನಲ್ಲಿಕಟ್ಟೆಯ ಬಸಣ್ಣಯ್ಯನ ಮಗ ಕೆಂಚಯ್ಯ ಎಂಬುದನ್ನು ದಾಖಲಿಸಿದೆ.[೧೪]

ಲಭ್ಯ ಶಾಸನಗಳು, ಸಾಹಿತ್ಯಿಕ ಆಕರಗಳು, ಅರಸರ ವಂಶಾವಳಿಗಳು, ಪತ್ರಾಗಾರದಲ್ಲಿನ ಕಾಗದ ಪತ್ರ ದಾಖಲೆಗಳ ಸಹಯದಿಂದ ಜಿಲ್ಲೆಯ ಕೆರೆಗಳ ಕುರಿತ ಒಂದು ಸ್ಥೂಲ ಚಿತ್ರಣ ನೀಡುವ

ಪ್ರಯತ್ನವನ್ನು ಇಲ್ಲಿ ಕೈಗೆತ್ತಿಗೊಳ್ಳಲಾಗಿದ್ದು, ಅಧ್ಯಯನದ ಅನುಕೂಲಕ್ಕಾಗಿ ಜಿಲ್ಲೆಯ ಕೆರೆಗಳನ್ನು ಪ್ರಾಚೀನ ಕೆರೆಗಳು, ಮಧ್ಯಕಾಲೀನ ಕೆರೆಗಳು ಹಾಗೂ ಆಧುನಿಕ(ಸಮಕಾಲೀನ) ಪ್ರಮುಖ ಕೆರೆಗಳು ಎಂದು ಮೂರು ಮುಖ್ಯ ಭಾಗಗಳನ್ನಾಗಿ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ. ಅವುಗಳಲ್ಲಿ ಅತಿ ಪ್ರಾಮುಖ್ಯತೆ ಪಡೆದ ಆಯ್ದ ಕೆರೆಗಳ ವೈಶಿಷ್ಟ್ಯತೆಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ,

**೫.೧. ಪ್ರಾಚೀನ ಕೆರೆಗಳು**

ಮೌರ್ಯ-ಶಾತವಾಹನರಿಂದ ರಾಷ್ಟ್ರಕೂಟರ ಅವನತಿಯವರೆಗಿನ ಕಾಲವನ್ನು ಕರ್ನಾಟಕದ ಚರಿತ್ರೆಯಲ್ಲಿ (ಕ್ರಿ.ಶ.೨-೩ನೇ ಶತಮಾನದಿಂದ ಕ್ರಿ.ಶ.೮ನೇ ಶತಮಾನದವರೆಗಿನ) ಕಾಲವನ್ನು ನಾವು ಪ್ರಾಚೀನ ಕಾಲ ಎಂದು ಗುರುತಿಸಬಹುದು. ಜಿಲ್ಲೆಯಲ್ಲಿ ಚಂದ್ರವಳ್ಳಿ, ಬರಗೆರೆ, ಮುರಘಕೆರೆ, ಬಿದರೆಕೆರೆ, ಬಾಗೂರು, ನಾಗಸಮುದ್ರ, ಮಲ್ಲಾಪುರಕೆರೆ ಮೊದಲಾದೆಡೆ ಪ್ರಾಚೀನ ಕೆರೆಗಳಿವೆ. ಚಿತ್ರದುರ್ಗದ ಅನತಿ ದೂರದ ಶಿಬಾರದ ಬಳಿ (ಇಂದಿನ ದಾವಣಗೆರೆಯ ಉಪನಗರ) ಉಚ್ಚಂಗಿದುರ್ಗದಿಂದ ಆಳ್ವಿಕೆ ಮಾಡುತ್ತಿದ್ದ ತಿಭುವನಮಲ್ಲ ಪಾಂಡ್ಯನು ತನ್ನ ಹೆಸರಿನಲ್ಲಿಯೇ ಕೆರೆಯೊಂದನ್ನು ಕಟ್ಟಿಸಿದ. ಇದನ್ನು ಶಾಸನವು **"ಕದಂಬದೇಸ ಸಹಸ್ರಾಂತರ್ಗತ ಬೆಳ್ತೂರು ದ್ವಾದಶ ಮಧ್ಯೆ ಬೆಳ್ತೂರು ಸೀಮಾಂತರ್ಗತ ಚಾಳುಕ್ಯ ಸಮುದ್ರಂ ನಾಮ ತಟಾಕಂ"**[೧೫] ಎಂದು ಶಾಸನ ವರ್ಣಿಸಿರುವುದು ಉಲ್ಲೇಖನೀಯವಾಗಿದ್ದು, ಇಲ್ಲಿನ ಕೆರೆಗಳ ಪ್ರಾಚೀನತೆಗೆ ಸಾಕ್ಷಿಯಾಗಿದೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಪ್ರಾಚೀನ ಕಾಲದ ಪ್ರಮುಖ ಕೆರೆಗಳ ವಿವರಗಳನ್ನು ಮುಂದಿನಂತೆ ವಿಶ್ಲೇಷಿಸಲಾಗಿದೆ.

**೧. ಚಂದ್ರವಳ್ಳಿಕೆರೆ**

ಚಿತ್ರದುರ್ಗ ನಗರಕ್ಕೆ ಹೊಂದಿಕೊಂಡಂತಿರುವ ಧವಳಪ್ಪನಗುಡ್ಡದ ಕೆಳಗಡೆ ಇರುವ ಕೆರೆಯೇ ಚಂದ್ರವಳ್ಳಿ ಕೆರೆ. ಈ ಪ್ರದೇಶದಲ್ಲಿರುವ ಕೆರೆಗಳಲ್ಲಿಯೇ ಅತ್ಯಂತ ಪ್ರಾಚೀನವಾದದ್ದು ಮತ್ತು ಶಾಸನೋಕ್ತ ಪ್ರಥಮ ಕೆರೆ ಎಂದರೆ ಚಂದ್ರವಳ್ಳಿ ಕೆರೆ. ಇದು ನಮ್ಮ ರಾಜ್ಯದಲ್ಲಿಯೇ ಅತ್ಯಂತ ಪ್ರಾಚೀನವಾದ ಕೆರೆಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟಿದೆ. ಕ್ರಿ.ಶ.೪ನೇ ಶತಮಾನದ ಪೂರ್ವಾರ್ಧ ಕಾಲಕ್ಕೆ ಸೇರಿದ್ದೆಂದು ವಿದ್ವಾಂಸರು ಪರಿಗಣಿಸುವ ಕದಂಬ ಮಯೂರವರ್ಮನ ಚಂದ್ರವಳ್ಳಿ ಶಾಸನದ ಪುನರ್ ಅಧ್ಯಯನದಿಂದ ಅವನು ಕೆರೆಯನ್ನು ಬಲಪಡಿಸಿದ ಸಂಗತಿ ತಿಳಿದುಬರುತ್ತದೆ. ಮಯೂರವರ್ಮನು ಬಲಪಡಿಸಿದ್ದಾಗಿ ಶಾಸನ ಹೇಳುವುದರಿಂದ, ಆ ಕೆರೆ ಅವನಿಗೂ ಬಹುಪೂರ್ವದಲ್ಲೇ ಆದದ್ದು ಎಂಬುದು ಸ್ಪಷ್ಟ.[೧೬] ಅಷ್ಟು ಬಿಟ್ಟರೆ ಅದರ ಉಪಯೋಗ ಕುರಿತು ವಿವರವೇನೂ ಅದರಲ್ಲಿ ಬಂದಿರುವುದಿಲ್ಲ. ಇಲ್ಲಿಯ ಪುರಾತತ್ವ ನಿವೇಶನದ ಉತ್ಖನನಗಳಿಂದ ಮಯೂರವರ್ಮನಿಗೆ ಪೂರ್ವದಲ್ಲಿ ಶಾತವಾಹನರ ಅಧೀನ ಅರಸರ ಆಳ್ವಿಕೆಯ ಪಟ್ಟಣವೊಂದು ಇಲ್ಲಿತ್ತು ಎಂಬ ಸಂಗತಿಯನ್ನು ಗಮನಕ್ಕೆ ತೆಗೆದುಕೊಂಡರೆ, ಇಲ್ಲಿಯ ಕೆರೆ (ಜಲಾಶಯ) ಈ ಪಟ್ಟಣದ ಜನರಿಗೆ ಜಾನುವಾರುಗಳಿಗೆ ಉಪಯೋಗವಾಗುತ್ತಿದ್ದ ಕೆರೆ ಎನ್ನುವುದು ಸ್ಪಷ್ಟವಾಗುವುದಲ್ಲವೆ? ಇದು ಪ್ರಾಯಶಃ ಕೆಲವೊಂದು ಚಿಕ್ಕತೋಟ ತುಡಿಕೆಗಳಿಗೆ ಬಳಕೆಯಾಗಿರುವ ಸಾಧ್ಯತೆ ಇದೆ. ಅಷ್ಟು ಬಿಟ್ಟರೆ, ವಿಸ್ತಾರವಾದ ಜಮೀನುಗಳ ವ್ಯವಸಾಯಕ್ಕೆ ಇದರ ನೀರು ಬಳಕೆಯಾಗಿರುವ ಸಂಭವ ತೀರಾ ಕಡಿಮೆಯೆಂದೇ ತೋರುತ್ತದೆ. ಅದೇನೆ ಇದ್ದರೂ ಇದು

ಸುಮಾರು ಕ್ರಿ.ಶ.ಆರಂಭದ ಹೊತ್ತಿಗಾಗಲೇ ಇದ್ದ ಕೆರೆಯಾಗಿದ್ದಿರಬೇಕೆಂಬ ಕಾರಣಕ್ಕೆ ಚಾರಿತ್ರಿಕ ಮಹತ್ವ ಪಡೆದಿದೆ.

ಚಂದ್ರವಳ್ಳಿ ಕೆರೆಯ ದಕ್ಷಿಣಕ್ಕಿರುವ ಧವಳಪ್ಪನ ಗುಡ್ಡದ ಪೂರ್ವ ಬದಿಯ ಹಾಗೂ ಪಶ್ಚಿಮ ಬದಿಯ ಕಣಿವೆಗಳಿಂದ ಉತ್ತರಕ್ಕೆ ಹರಿದು ಬರುವ ನೀರು ಇಲ್ಲಿ ಕಲೆತು ಶೇಖರಗೊಳ್ಳುವುದರಿಂದ, ಗಣನೀಯ ಪ್ರಮಾಣದಲ್ಲಿ ಇಲ್ಲಿ ನಿಲ್ಲುವ ನೀರನ್ನು ಅಂದಿನ ಜನ ಹೇಗೆ ಬಳಕೆ ಮಾಡಿಕೊಂಡಿರಲಿ, ಕಾಲಕಾಲಕ್ಕೆ ಇದರ ಒಡ್ಡು ಹಾಳಾಗುತ್ತಾ ಜೀರ್ಣೋದ್ಧಾರಗೊಳ್ಳುತ್ತ ಬಂದಿರಬೇಕೆಂದು ಕಾಣುತ್ತದೆ. ಈಗ್ಗೆ ಕೆಲವು ವರ್ಷಗಳ ಹಿಂದೆ ಇಲ್ಲಿದ್ದದ್ದು ಅತ್ಯಂತ ಕಡಿಮೆ ಎತ್ತರದ ಒಡ್ಡು ಮಾತ್ರ, ಅದು ಕೂಡ ಹಾಳಾಗಿ ಹೋಗಿ, ಈಚೆಗೆ ೧೯೭೭ರಲ್ಲಿ ರಾಜ್ಯ ಸರ್ಕಾರ ಇದಕ್ಕೆ ದೊಡ್ಡ ಒಡ್ಡು ಹಾಕಿಸಿ, ಈ ಐತಿಹಾಸಿಕ ಕೆರೆಯ ಜೀರ್ಣೋದ್ಧಾರ ಮಾಡಿದ್ದು, ಇದರ ನೀರು ಕೃಷಿ ಉಪಯೋಗಕ್ಕೆ ದೊರೆಯಲೆಂಬ ಉದ್ದೇಶದಿಂದಲೇ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಆಗ ಸರ್ಕಾರವು ಇಲ್ಲಿ ಸಿಂಪರಣೆ ನೀರಾವರಿ ವ್ಯವಸ್ಥೆಯನ್ನೂ ಮಾಡಿತ್ತು. ಆದರೆ ಅದರ ಉಪಯೋಗ ಆದದ್ದು ತೀರಾ ಕಡಿಮೆ, ಅದೂ ಕೆಲವೇ ಕೆಲವು ವರ್ಷ, ಸ್ವಲ್ಪವೇ ಸ್ವಲ್ಪ ಭೂಮಿಗೆ. ಈಚೆಗೆ ಅದೂ ನಿಂತುಹೋಗಿ, ಮೀನುಗಾರಿಕೆ, ದೋಣಿ ವಿಹಾರಕ್ಕೆ ಮಾತ್ರ ಈ ಕೆರೆ ಈಗ ಬಳಕೆಯಾಗುತ್ತಿರುವುದು ವಿಪರ್ಯಾಸ.

**೨. ಅಶೋಕಸಿದ್ದಾಪುರ ಕೆರೆ**

ಮೊಳಕಾಲ್ಮೂರು ತಾಲ್ಲೂಕು ದೇವಸಮುದ್ರ ಹೋಬಳಿ ವ್ಯಾಪ್ತಿಯಲ್ಲಿ ಬರುವ ಅಶೋಕ ಸಿದ್ದಾಪುರ(ರೇಖಾಂಶ ೭೬°೪೪'೩೬ ಅಕ್ಷಾಂಶ ೧೪°೪೮'೧೬) ಗ್ರಾಮವು ಅದೇ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿದೆ. ಇದು ತಾಲೂಕು ಕೇಂದ್ರದಿಂದ ೨೩ ಕಿ.ಮೀ. ದೂರದಲ್ಲಿದ್ದು, ಹಿಂದೆ ಇಸಿಲಾ ಪಟ್ಟಣವೆಂದು (ರಾಜಧಾನಿಯಲ್ಲಿ ಬರುವ ಮುಖ್ಯ ಪಟ್ಟಣವೆಂದು) ಕರೆಯಲ್ಪಟ್ಟಿತ್ತು.[೯] ಈ ಗ್ರಾಮವು ಕರ್ನಾಟಕ ರಾಜ್ಯದ ಕೊನೆಯ ಭಾಗವಾಗಿ, ಮೌರ್ಯರ ಗಡಿ ಸಾಮ್ರಾಜ್ಯ ಎಂದೆನಿಸಿ ಕೊಂಡಿರುತ್ತದೆ. ಇಲ್ಲಿನ ಬೆಟ್ಟದ ತಪ್ಪಲಲ್ಲಿ ಮೌರ್ಯ ದೊರೆ ಅಶೋಕನ ಶಿಲಾಶಾಸನಗಳಿದ್ದು, ಅವುಗಳನ್ನು ಕೇಂದ್ರ ಪುರಾತತ್ವ ಇಲಾಖೆಯವರು ಸಂರಕ್ಷಿಸಿದ್ದಾರೆ. ಸಿದ್ಧಮತವು ಉಪಕುಲವಾಗಿದ್ದು, ಸಿದ್ದಾರ್ಥನ ಶಿಷ್ಯರಾದ ಸಿದ್ದರು ಇಲ್ಲಿ ಇದ್ದ ಕಾರಣಕ್ಕೆ ಈ ಊರನ್ನು ಸಿದ್ದಾಪುರವೆಂದು, ಇಲ್ಲಿ ಅಶೋಕನ ಶಾಸನಗಳಿರುವುದರಿಂದ ಇದನ್ನು ಅಶೋಕ ಸಿದ್ದಾಪುರವೆಂದು ಕರೆಯಲಾಗುತ್ತದೆ. ಈ ಗ್ರಾಮಕ್ಕೆ ಹೊಂದಿಕ್ಕೊಂಡಂತೆ ಬ್ರಹ್ಮಗಿರಿ ಬೆಟ್ಟವಿದ್ದು, ಅದು ಆಧ್ಯಾತ್ಮಿಕ ಕೇಂದ್ರವೆಂದು ಖ್ಯಾತವಾಗಿದೆ. ಈ ಗ್ರಾಮದಲ್ಲಿ ಹೆಚ್ಚಿನದಾಗಿ ನಾಯಕ ಸಮುದಾಯ ಇದ್ದು, ಇವರೊಂದಿಗೆ ಕುರುಬ, ಲಿಂಗಾಯತ, ಎಸ್.ಸಿ ಇತರೆ ಜನಾಂಗದವರು ಇದ್ದಾರೆ. ಇಲ್ಲಿ ಆಂಜನೇಯ ಸ್ವಾಮಿ, ಈಶ್ವರ, ತಿಮ್ಮಪ್ಪ, ಕೊಲ್ಲಾರಮ್ಮ, ಮಾರಮ್ಮ, ಹಿರಿಯಮ್ಮ, ಚೌಡಮ್ಮ, ಮೊಬ್ಬಲಿಂಗೇಶ್ವರ ಸ್ವಾಮಿ, ಸಿದ್ದೇಶ್ವರ ಸ್ವಾಮಿ ಗುಡಿಗಳಿವೆ. ಪ್ರತಿವರ್ಷ ಎಲ್ಲಾ ದೇವರ ಜಾತ್ರೆಗಳನ್ನು ಮಾಡುತ್ತಾರೆ. ಪ್ರತಿವರ್ಷ ಸಿದ್ದೇಶ್ವರ ದೇವರ

ಜಾತ್ರೆಯನ್ನು ವಿಶೇಷವಾಗಿ ಎಲ್ಲಾ ಸಮುದಾಯದವರೂ ಒಂದಾಗಿ ಆಚರಿಸುತ್ತಾ ಬಂದಿರುತ್ತಾರೆ. ಇಲ್ಲಿ ವಿಶೇಷವಾದ ಪ್ರಾಚೀನ ಪಂಚಾಯತಿ ಕಟ್ಟೆಮನೆ (ಚಾವಡಿ) ಇರುತ್ತದೆ.

ಇಲ್ಲಿ ಮೌರ್ಯರ ಕಾಲದ ಪ್ರಾಚೀನ ಕೆರೆ ಇದ್ದು, ಅದನ್ನು ಅಶೋಕ ಸಿದ್ದಾಪುರ ಕೆರೆ ಎಂದು ಕರೆಯಲಾಗುತ್ತದೆ. ಅದು ತಾಲ್ಲೂಕಿಗೆ ಅತೀ ದೊಡ್ಡ ಕೆರೆ ಎಂದೆನಿಸಿದೆ. ಇದನ್ನು ೧೯೧೮ರಲ್ಲಿ ಬ್ರಿಟಿಷ್ ಸರ್ಕಾರ ಪುನರ್ ನವೀಕರಿಸಿದೆ. ಇದು ಸುಮಾರು ೧೦೦೦ ಎಕರೆ ಅಚ್ಚುಕಟ್ಟು ಹೊಂದಿರುತ್ತದೆ. (ಇದರ ನೋಂದಣಿ ಸಂಖ್ಯೆ ಸಿ.ಡಿ.ಜಿ. ಎಸ್.ನಂ. ೨೧೯/೨೦೦೭-೦೮ ದಿ: ೪.೧೨.೨೦೦೭. ಟೋಪೋ ಶೀಟ್ ಸಂಖ್ಯೆ ೫೭-ಬಿ/೧೩) ಇದು ಸುತ್ತಲಿನ ಮತ್ತು ಗ್ರಾಮಗಳ ರೈತರಿಗೆ ಜೀವನಾಧಾರವಾಗಿದೆ. ಕೆರೆ ಭರ್ತಿಯಾದಾಗ ಗ್ರಾಮಸ್ಥರೆಲ್ಲರೂ ಸೇರಿ ಗಂಗಾ ಪೂಜೆಯನ್ನು ಮಾಡಿ ಅಚ್ಚುಕಟ್ಟು ಪ್ರದೇಶದ ರೈತರ ಜಮೀನುಗಳಿಗೆ ನೀರನ್ನು ಹಾಯಿಸಲಾಗುತ್ತಿದೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ಉತ್ತರ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ಕೆ-೯ ಸರಣಿಯನ್ನು ಹೊಂದಿದ್ದು, ಚಿನ್ನಹಗರಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೫೦೦.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೫೦೧.೦೭ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೫೫.೯೦೦ ಅಡಿ ಇದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೨೫.೨೮ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೧೨೫.೬೮ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೨೨೮.೭೯ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಹರಿವಿನ ಪ್ರಮಾಣ ೧೨.೪೩ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ ೩.೫೩ ಎಂ.ಸಿ.ಎಂ. ಇದ್ದು, ಮತ್ತು ಕೆರೆಯ ಹಾಲಿ ಇರುವ ಸಾಮರ್ಥ್ಯ ೨.೩೩ ಎಂ.ಸಿ.ಎಂ ಇದೆ. ಇದರ ಒಟ್ಟು ವಿನ್ಯಾಸಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೩೪೨ ಹೇಕ್ಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೨೨೮.೭೯ ಕಿ.ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೨೭೩೦ ಮೀಟರ್ ಇದ್ದು, ಗರಿಷ್ಠ ಎತ್ತರ ೩.೬೫ ಮೀಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿಗಳಿವೆ. ಇದರ ಬಲ ಕೋಡಿ ೩೮.೫೧ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೦೦.೦೨ ಇದ್ದು, ಅದು ಇರುವ ಸ್ಥಳ (ಚೈನೇಜ್) ೫೯.೨೩ ಹಾಗೂ ೪೯.೭೭ ಮಿ.ಮೀ ಇದೆ. ಅದೇ ರೀತಿ ಇದರ ಎಡ ಕೋಡಿ ೩೯.೫೧ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೦೦.೦೧೯ ಇದ್ದು, ಅದು ಇರುವ ಸ್ಥಳ (ಚೈನೇಜ್) ೬೪.೨೦ ಹಾಗೂ ೨೨೩೭.೦೧೦ ಮೀಟರ್ ಇದೆ. ಇಲ್ಲಿ ಕೊಂತ ಮತ್ತು ಸರಳು ಮಾದರಿಯ ಎರಡು ತೂಬುಗಳಿವೆ. ಅವುಗಳಲ್ಲಿ ಎಡ ದಂಡೆಯ ತೂಬು ೪೯೭.೧೭೦ ಮೀ

ಇದ್ದು, ಇರುವ ಸ್ಥಳ (ಚೈನೇಜ್) ೧೭೫೨.೭೦೦ ಮೀ. ಎತ್ತರ ಇದೆ. ಅಲ್ಲದೇ ಇದರ ಬಲ ದಂಡೆ ತೂಬು ೪೯೬.೪೧೧ಮೀ. ಇದ್ದು, ಇರುವ ಸ್ಥಳ (ಚೈನೇಜ್) ೧೪೫.೪೬೦.ಮೀ, ಮಟ್ಟವನ್ನು ಹೊಂದಿದೆ. ಇವುಗಳಿಗೆ ಕ್ರಮವಾಗಿ ೩೦೦ ಮೀಟರ್ ಮತ್ತು ೬೦ ಮೀಟರ್ ಕಲ್ಲು ಕಟ್ಟಡದ ಲೈನಿಂಗ್ ಅಳವಡಿಸಲಾಗಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಬಲ, ಮಧ್ಯ, ಎಡ ದಂಡೆಯ ಮೇಲೆ ಮುಖ್ಯ ಮೂರು ಕಾಲುವೆಗಳನ್ನು ಅಳವಡಿಸಲಾಗಿದ್ದು, ಎಡ ಮತ್ತು ಬಲ ಕಾಲುವೆಗೆ ತಲಾ ಮೂರು ಉಪ ಕಾಲುವೆ ಹಾಗೂ ಮದ್ಯದ ಕಾಲುವೆಗೆ ತಲಾ ಎರಡು ಉಪ ಕಾಲುವೆಗಳನ್ನು ಜೋಡಿಸಲಾಗಿದೆ. ಇವುಗಳಿಗೆ ಕ್ರಮವಾಗಿ ೭೬೫.೭೨, ೮೨೭.೬೫. ೧೩೧೨.೫೭, ೧೧೫೮.೪೮, ೨೯೩೭.೭೭, ೨೯೭೯, ೮೬೫.೨೬, ೪೯೮.೯೫ ಮೀಟರ್ ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ.

ಪೂರ್ವಕ್ಕೆ ಅಶೋಕ ಸಿದ್ದಾಪುರ ಗ್ರಾಮ ಮತ್ತು ಬೆಟ್ಟಗುಡ್ಡಗಳು, ಪಶ್ಚಿಮಕ್ಕೆ ಬೆಟ್ಟಗುಡ್ಡಗಳು, ಉತ್ತರಕ್ಕೆ ಕೆರೆಯ ಏರಿ ಮತ್ತು ಕೆರೆ ಏರಿಯ ಹಿಂದೆ ತೋಟಗಳನ್ನು ನಿರ್ಮಿಸಿದ್ದು ಪಶ್ಚಿಮ ಮತ್ತು ದಕ್ಷಿಣ ಭಾಗದಿಂದ ಜಲಮಾರ್ಗವಿದೆ. ಇಲ್ಲಿ ಈ ಬೆಟ್ಟಗಳ ಮೇಲಿಂದ ಜಾರಿ ಬಂದು ನೀರು ಕೆರೆಯಲ್ಲಿ ಸಂಗ್ರಹಣೆಯಾಗುವುದನ್ನು ನಾವು ಕಾಣಬಹುದು. ಇಲ್ಲಿ ಮೀನುಗಾರಿಕೆ, ನೀರಾವರಿ ವ್ಯವಸ್ಥೆಗೆ ಹಾಗೂ ಪಶುಪಾಲನೆಗೆ ಅನುಕೂಲವಾಗಿದೆ. ಈ ಕೆರೆಯ ನೀರು ಅಶೋಕ ಸಿದ್ದಾಪುರ ಗ್ರಾಮಕ್ಕೆ ಮಾತ್ರ ಸೀಮಿತವಾಗಿದ್ದು, ಇಲ್ಲಿನ ಜನರು ಹೆಚ್ಚಿನದಾಗಿ ಕೃಷಿಯನ್ನು ಅವಲಂಬಿಸಿರುತ್ತಾರೆ. ಅವರು ಮೊದಲು ಭತ್ತ, ರಾಗಿ, ಮೆಕ್ಕೆಜೋಳ, ಜೋಳ ಮುಂತಾದ ಬೆಳೆಗಳನ್ನು ಮತ್ತು ಪ್ರಸಕ್ತ ಭತ್ತ, ಶೇಂಗಾ, ಸೂರ್ಯಕಾಂತಿ, ತರಕಾರಿಯನ್ನು ಬೆಳೆಯುತ್ತಾರೆ. ಈ ಕೆರೆಯ ನೀರು ತುಂಬಿದ ನಂತರ ಚಿನ್ನಹಗರಿ ನದಿಗೆ ಬಂದು ತಲುಪುತ್ತದೆ.

**೩. ಸಂಗೇನಹಳ್ಳಿ ಕೆರೆ**

ಚಿತ್ರದುರ್ಗ ತಾಲ್ಲೂಕು ಮತ್ತು ಹೋಬಳಿ ವ್ಯಾಪ್ತಿಯಲ್ಲಿ ಬರುವ ಸಂಗೇನಹಳ್ಳಿ (ರೇಖಾಂಶ ೭೬೦೪೯'೮೬ ಅಕ್ಷಾಂಶ ೧೪೦೫೨'೪೬) ಗ್ರಾಮವು ಕಲ್ಲೇದೇವರಪುರ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿರುತ್ತದೆ. ಇದು ತಾಲೂಕು ಕೇಂದ್ರದಿಂದ ೨೩ ಕಿ.ಮೀ. ದೂರದಲ್ಲಿದ್ದು, ರಾಷ್ಟ್ರೀಯ ಹೆದ್ದಾರಿ–೧೩ಕ್ಕೆ ಹೊಂದಿಕೊಂಡಂತೆ ಇದೆ. ಈ ಗ್ರಾಮದಲ್ಲಿ ಹೆಚ್ಚಿನದಾಗಿ ಲಿಂಗಾಯಿತ, ನಾಯಕ ಸಮುದಾಯ ಇದ್ದು, ಇವರೊಂದಿಗೆ ಕುರುಬ, ಲಿಂಗಾಯತ, ಎಸ್.ಸಿ. ಇತರೆ ಜನಾಂಗದವರು ಇರುತ್ತಾರೆ. ಈ ಕೆರೆಯ ಬಳಿ ಶಿಲಾಯುಗದ ಆಯೋಧೋಪಕರಣಗಳು ಮತ್ತು ಶಾತವಾಹನರ ಕಾಲದ ಕೆಲ ಮುಖ್ಯ ಅವಶೇಷಗಳನ್ನು ಕೆಲ ವರ್ಷಗಳ ಹಿಂದೆ ವಿದ್ವಾಂಸರು ಪತ್ತೆ ಮಾಡಿದ್ದಾರೆ.

ಇಲ್ಲಿ ಶಾತವಾಹನರ ಕಾಲದ ಪ್ರಾಚೀನ ಕೆರೆ ಇದ್ದು, ಅದನ್ನು ಸಂಗೇನಹಳ್ಳಿ ಕೆರೆ ಎಂದು ಅಲ್ಲಿನ ಸ್ಥಳೀಯರು ಕರೆಯುತ್ತಾರೆ. ಅದು ತಾಲ್ಲೂಕಿಗೆ ದೊಡ್ಡ ಕೆರೆ ಎಂದೆನಿಸಿದ್ದು, ಇದನ್ನು ೧೯೧೮ರಲ್ಲಿ ಬ್ರಿಟಿಷರು ಮತ್ತು ೧೯೯೮ ಹಾಗೂ ೨೦೦೭-೦೮ರಲ್ಲಿ ಕರ್ನಾಟಕ ಸರ್ಕಾರ ಪುನರ್ ನವೀಕರಿಸಿದೆ. ಇದು ಸುಮಾರು ೧೦೦೦ ಎಕರೆ ಅಚ್ಚುಕಟ್ಟು ಹೊಂದಿರುತ್ತದೆ. (ಇದರ ನೋಂದಣಿ

ಸಂಖ್ಯೆ ಸಿ.ಡಿ.ಜಿ. ಎಸ್.ನಂ. ೨೧೯/೨೦೦೭-೦೮ ದಿ: ೦೪.೧೨.೨೦೦೭. ಟೋಪೋ ಶೀಟ್ ಸಂಖ್ಯೆ ೫೯-ಎ/೦೭) ಇದು ಸುತ್ತಲಿನ ಮತ್ತು ಗ್ರಾಮಗಳ ರೈತರಿಗೆ ಜೀವನಾಧಾರವಾಗಿದೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ಉತ್ತರ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ನದಿ ಚಿನ್ನಹಗರಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೫೧೮.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೫೦೯.೦೭ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೬೭.೯೦೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೨೫.೨೮ ಚ.ಕಿ.ಮೀ.ಇದ್ದು, ಸಂಯುಕ್ತವಾಗಿ ೧೨೫.೬೮ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೩೨೭.೭೯ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರಇದರ ನೀರು ಹರಿವಿನ ಪ್ರಮಾಣ ೧೨.೪೩ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ ೩.೫೩ ಎಂ.ಸಿ.ಎಂ. ಇದ್ದು, ಮತ್ತು ಕೆರೆಯ ಹಾಲಿ ಇರುವ ಸಾಮರ್ಥ್ಯ (ಎಂ.ಸಿ.ಎಂ). ೨.೩೩ ಇದೆ. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೩೪೨ ಹೇಕ್ಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೨೨೮.೭೯ ಕಿ.ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೨೭೩೦ ಮೀಟರ್ ಇದ್ದು, ಗರಿಷ್ಠ ಎತ್ತರ ೩.೬೫ ಮೀಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿಗಳಿವೆ. ಇದರ ಬಲ ಕೋಡಿ ೩೮.೫೧ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೦೦.೦೨ ಇದ್ದು, ಅದು ಇರುವ ಸ್ಥಳ (ಚೈನೇಜ್) ೫೯.೨೩ ಹಾಗೂ ೪೯.೭೭ ಮಿ.ಮೀ ಇದೆ. ಅದೇ ರೀತಿ ಇದರ ಎಡ ಕೋಡಿ ೩೯.೫೧ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೦೦.೦೧೯ ಇದ್ದು, ಅದು ಇರುವ ಸ್ಥಳ (ಚೈನೇಜ್) ೬೪.೨೦ ಹಾಗೂ ೨೨೩೭.೦೧೦ ಮೀಟರ್ ಇದೆ. ಇಲ್ಲಿ ಕೊಂತ ಮತ್ತು ಸರಳು ಮಾದರಿಯ ಎರಡು ತೂಬುಗಳಿವೆ. ಅವುಗಳಲ್ಲಿ ಎಡ ದಂಡೆಯ ತೂಬು ೪೯೭.೧೭೦ ಮೀ ಇದ್ದು, ಇರುವ ಸ್ಥಳ (ಚೈನೇಜ್) ೧೭೫೨.೭೦೦ ಮೀ. ಎತ್ತರ ಇದೆ. ಅಲ್ಲದೇ ಇದರ ಬಲದಂಡೆ ತೂಬು ೪೯೬.೪೧೧ ಮೀ. ಇದ್ದು, ಇರುವ ಸ್ಥಳ (ಚೈನೇಜ್) ೧೪೫.೪೬೦.ಮೀ, ಮಟ್ಟವನ್ನು ಹೊಂದಿದೆ. ಇವುಗಳಿಗೆ ಕ್ರಮವಾಗಿ ೩೦೦ ಮೀಟರ್ ಮತ್ತು ೬೦ ಮೀಟರ್ ಕಲ್ಲು ಕಟ್ಟಡದ ಲೈನಿಂಗ್ ಅಳವಡಿಸಲಾಗಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಬಲ, ಮಧ್ಯ, ಎಡ ದಂಡೆಯ ಮೇಲೆ ಮುಖ್ಯ ಮೂರು ಕಾಲುವೆಗಳನ್ನು ಅಳವಡಿಸಲಾಗಿದೆ. ಇವುಗಳಿಗೆ ಕ್ರಮವಾಗಿ ೭೬೫.೭೨, ೮೨೭.೬೫. ೧೩೧೨.೫೭, ಮೀಟರ್ ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ.

ಪಶ್ಚಿಮಕ್ಕೆ ಬೆಟ್ಟಗುಡ್ಡಗಳು, ಉತ್ತರಕ್ಕೆ ಕೆರೆಯ ಏರಿ ಮತ್ತು ಕೆರೆ ಏರಿಯ ಹಿಂದೆ ತೋಟಗಳನ್ನು ನಿರ್ಮಿಸಿದ್ದು ಪಶ್ಚಿಮ ಮತ್ತು ದಕ್ಷಿಣ ಭಾಗದಿಂದ ಇಲ್ಲಿಗೆ ಜಲಮಾರ್ಗವಿದೆ. ಇಲ್ಲಿ ಈ ಬೆಟ್ಟಗಳ ಮೇಲಿಂದ ಜಾರಿ ಬಂದು ನೀರು ಕೆರೆಯಲ್ಲಿ ಸಂಗ್ರಹಣೆಯಾಗುವುದನ್ನು ನಾವು ಕಾಣಬಹುದು. ಇಲ್ಲಿ ಮೀನುಗಾರಿಕೆ, ನೀರಾವರಿ ವ್ಯವಸ್ಥೆಗೆ ಹಾಗೂ ಪಶುಪಾಲನೆಗೆ ಅನುಕೂಲವಾಗಿದೆ. ಇಲ್ಲಿ ಮೊದಲು ಭತ್ತ, ರಾಗಿ, ಮೆಕ್ಕೆಜೋಳ, ಜೋಳ ಮುಂತಾದ ಬೆಳೆಗಳನ್ನು ಮತ್ತು ಪ್ರಸಕ್ತ ಭತ್ತ, ಶೇಂಗಾ, ಸೂರ್ಯಕಾಂತಿ, ತರಕಾರಿಯನ್ನು ಬೆಳೆಯುತ್ತಾರೆ. ಇಲ್ಲಿಂದ ಹೆಚ್ಚಾದ ನೀರು ಜಿನಿಗೆ ಹಳ್ಳವನ್ನು ಸೇರಿಕೊಳ್ಳುತ್ತದೆ.

**೪. ಜಾನಕಲ್ಲುದೊಡ್ಡಕೆರೆ**

ಜಾನಕಲ್ಲು ಗ್ರಾಮವು ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನಲ್ಲಿದ್ದು, ಇದು ಹೋಬಳಿ ಕೇಂದ್ರ ಮತ್ತು ಗ್ರಾಮ ಪಂಚಾಯತಿ ಕೇಂದ್ರವಾಗಿದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೧೫ ಕಿ.ಮೀ ದೂರದಲ್ಲಿದೆ. ಈ ಊರಿನಲ್ಲಿ ಪ್ರಾಚೀನ ಕಾಲದಲ್ಲಿ ಅಂದರೆ ಕದಂಬರ ಕಾಲದಲ್ಲಿ ನಿರ್ಮಿತವಾದ (ಕ್ರಿ.ಶ.೮ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಜಾನಕಲ್ಲು ದೊಡ್ಡ ಕೆರೆ ಎನ್ನಲಾಗುತ್ತದೆ. ಇದನ್ನು ಹೊಯ್ಸಳರು, ಚಿತ್ರದುರ್ಗದ ಪಾಳೆಯಗಾರನಾದ ಕಸ್ತೂರಿ ರಂಗಪ್ಪನಾಯ್ಕ ಮತ್ತು ೨೦೦೬-೦೭ರಲ್ಲಿ ಸರ್ಕಾರ ಇದನ್ನು ಪುನಃ ಜೀರ್ಣೋದ್ಧಾರ ಮಾಡಿದ್ದಾರೆ. ಇಲ್ಲಿ ಇದೇ ಸಮಾನ ಲಕ್ಷಣ ಇರುವ ಮತ್ತೊಂದು ಕೆರೆ ಇದ್ದು, ಅದನ್ನು ಕಾಮನಕೆರೆ ಎನ್ನಲಾಗುತ್ತದೆ. ಇಲ್ಲಿ ಅನೇಕ ಶಾಸನಗಳು, ವೀರಗಲ್ಲುಗಳು ಇವೆ. ಇದು ಬಿಚ್ಚುಗತ್ತಿ ಭರಮಣ್ಣನಾಯಕನ ಆಡಳಿತದ ಕೇಂದ್ರವಾಗಿತ್ತು. ಈ ಗ್ರಾಮದಲ್ಲಿ ಶಂಕರಲಿಂಗಸ್ವಾಮಿ ಮತ್ತು ವೆಂಕಟೇಶ್ವರ, ಆಂಜನೇಯ ಸ್ವಾಮಿ, ಓಬಳದೇವರು, ಕೆಂಚಮ್ಮ ದೇವಾಲಯಗಳು ಮತ್ತು ಪಾಳೆಯಗಾರರ ಕಾಲದ ಕೋಟೆ ಕೊತ್ತಲ ಮತ್ತಿತರೆ ಪ್ರಾಚ್ಯಾವಶೇಷಗಳಿವೆ. ಇಲ್ಲಿ ಮೊದಲು ಜೇನು ಹೆಚ್ಚಾಗಿ ದೊರೆಯುತ್ತಿದ್ದವು. ಇಲ್ಲಿ ಜೈನ ಸನ್ಯಾಸಿಗಳು ಮೊದಲು ತಪೋನಿರತರಾಗಿರುತ್ತಿದ್ದರಂತೆ. ಹಾಗಾಗಿ ಇದನ್ನು ಜೇನುಕಲ್ಲು ಎಂದು ಕರೆಯುತ್ತಿದ್ದರು.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮಹತ್ವವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ಪಶ್ಚಿಮ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೧೯ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೯.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೩೯.೦೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೧೯೭.೪೦ ಹೇಕ್ಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ

ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೫೫೫.೬೩ ಮಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿ ಮತ್ತು ಎರಡು ಕಾಲುವೆಗಳನ್ನು ಹೊಂದಿದೆ.

ಈ ಕೆರೆಯು ಅತ್ಯಂತ ವಿಶಾಲವಾಗಿದ್ದು, ಕಪ್ಪು ಮಿಶ್ರಿತವಾದ ಫಲವತ್ತೆಯ ಮಣ್ಣನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ತೂಬುಗಳನ್ನು ಕಾಣಬಹುದು. ನೀರಾವರಿ ವ್ಯವಸ್ಥೆಗೆ ಇಲ್ಲಿನ ಕೆರೆ ಕಾಲುವೆ ವ್ಯವಸ್ಥೆ ಉತ್ತಮವಾಗಿದೆ. ಎಡದಂಡೆ ಕಾಲುವೆ ಉದ್ದ ೨.೫೦೦ ಕಿ.ಮೀ. ಇದೆ.

ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೨೭೩೦ ಮೀಟರ್ ಇದ್ದು, ಗರಿಷ್ಠ ಎತ್ತರ ೩.೬೫ ಮೀಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿಗಳಿವೆ. ಇದರ ಬಲ ಕೋಡಿ ೩೮.೫೧ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೦೦.೦೨ ಇದ್ದು, ಅದು ಇರುವ ಸ್ಥಳ (ಚೈನೇಜ್) ೫೯.೨೩ ಹಾಗೂ ೪೯.೭೭ ಮಿ.ಮೀಟರ್ ಇದೆ. ಅದೇ ರೀತಿ ಇದರ ಎಡ ಕೋಡಿ ೩೯.೫೧ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೦೦.೦೧೯ ಇದ್ದು, ಅದು ಇರುವ ಸ್ಥಳ (ಚೈನೇಜ್) ೬೪.೨೦ ಹಾಗೂ ೨೨೩೭.೦೧೦ ಮೀಟರ್ ಇದೆ. ಇಲ್ಲಿ ಕೊಂತ ಮತ್ತು ಸರಳು ಮಾದರಿಯ ಎರಡು ತೂಬುಗಳಿವೆ. ಅವುಗಳಲ್ಲಿ ಎಡ ದಂಡೆಯ ತೂಬು ೪೯೭.೧೭೦ ಮೀ ಇದ್ದು, ಇರುವ ಸ್ಥಳ (ಚೈನೇಜ್) ೧೭೫೨.೭೦೦ ಮೀ. ಎತ್ತರ ಇದೆ. ಅಲ್ಲದೇ ಇದರ ಬಲ ದಂಡೆ ತೂಬು ೪೯೬.೪೧೧ ಮೀ. ಇದ್ದು, ಇರುವ ಸ್ಥಳ (ಚೈನೇಜ್) ೧೪೫.೪೬೦. ಮೀ, ಮಟ್ಟವನ್ನು ಹೊಂದಿದೆ. ಇವುಗಳಿಗೆ ಕ್ರಮವಾಗಿ ೩೦೦ ಮೀಟರ್ ಮತ್ತು ೬೦ ಮೀಟರ್ ಕಲ್ಲು ಕಟ್ಟಡದ ಲೈನಿಂಗ್ ಅಳವಡಿಸಲಾಗಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ. ಮಾದರಿಯ ಬಲ, ಎಡ ದಂಡೆಯ ಮೇಲೆ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಇವುಗಳಿಗೆ ಕ್ರಮವಾಗಿ ೭೬೫.೭೨, ೮೨೭.೬೫. ಮೀಟರ್ ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ. ಕೆರೆಯ ಹಿಂಬದಿಯಲ್ಲಿ ಅನೇಕ ವೀರಗಲ್ಲುಗಳನ್ನು ಕಾಣಬಹುದಾಗಿದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ತೆಂಗು, ಅಡಿಕೆ, ಜೋಳ, ಸೂರ್ಯಕಾಂತಿ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೫. ನುಂಕಪ್ಪನಗುಡ್ಡ ಹಳೆಕೆರೆ**

ಈ ಕೆರೆಯು ತಾಲ್ಲೂಕು ಕೇಂದ್ರ ಮೊಳಕಾಲ್ಮುರಿನಿಂದ ಅದಕ್ಕೆ ಹೊಂದಿಕೊಂಡಂತೆ ೨ ಕಿ.ಮೀ. ದೂರದ ನುಂಕಪ್ಪನ ಗುಡ್ಡಕ್ಕೆ ಹೋಗುವ ದಾರಿಯಲ್ಲಿದೆ. ಇದು ಪ್ರಮುಖವಾದ ಕೆರೆಯಾಗಿದ್ದು, ಅದನ್ನು ಹಳೆಕೆರೆ ಎಂದು ಕರೆಯಲಾಗುತ್ತಿದೆ. ಇಲ್ಲಿನ ನುಂಕೇ ಭೈರವ ಬೆಟ್ಟವನ್ನು ಕದಂಬರು ಮತ್ತು ರಾಯದುರ್ಗದ ಪಾಳೆಯಗಾರರು ತಮ್ಮ ಅಧೀನಕ್ಕೊಳಪಡಿಸಿಕೊಂಡಿದ್ದರು. ಕದಂಬರ ಸಾಮಂತ ಬೆಂಚ ಅರಸನ ಕಾಲದಲ್ಲಿ ಅಜವರ್ಮನು ಇಲ್ಲಿ ಕೆರೆಯೊಂದನ್ನು ಕಟ್ಟಿಸಿದ ಉಲ್ಲೇಖವನ್ನು ಅಲ್ಲಿನ

ಶಾಸನ ದಾಖಲಿಸಿದೆ.[೧೮] ಈ ಭಾಗದಲ್ಲಿ ಬೇರೆ ಯಾವುದೇ ಕೆರೆಗಳು ಇಲ್ಲ. ಆ ಕಾರಣಕ್ಕೆ ಪ್ರಾಯಶಃ ಶಾಸನನೋಕ್ತ ಕೆರೆ ಇದೆ ಎಂದು ಊಹಿಸಲು ಅವಕಾಶವಿದೆ. ಅಧ್ಯಯನ ದೃಷ್ಟಿಯಿಂದ ಮುಖ್ಯವೆನಿಸಿದ ಈ ಕೆರೆಯನ್ನು ವಿವಿಧ ತಾಂತ್ರಿಕ ಕೌಶಲ್ಯಗಳನ್ನು ಬಳಸಿಕೊಂಡು ನಿರ್ಮಿಸಲಾಗಿದ್ದು, ಅದರ ಭೌಗೋಳಿಕ ಮತ್ತು ತಾಂತ್ರಿಕ ವಿಶೇಷತೆ ಈ ಮುಂದಿನಂತಿದೆ. ಇದು ವಿಶಾಲವಾದ ಅಂಗಳವನ್ನು ಹೊಂದಿದ್ದು, ಇದು ಎತ್ತರವಾದ ಮತ್ತು ಅಗಲವಾದ ಹಾಗೂ ವಿಶಾಲವಾದ ಏರಿಯನ್ನು ಹೊಂದಿದೆ. ಕೆರೆಯ ಬಲದಂಡೆ ಮತ್ತು ಎಡದಂಡೆಗಳಲ್ಲಿ ಎರಡು ಕೋಡಿಗಳನ್ನು ಕಟ್ಟಲಾಗಿದೆ. ಇದರ ವಿನ್ಯಾಸತುಂಬಾ ಅಚ್ಚುಕಟ್ಟಾಗಿದೆ. ಎರಡು ತೂಬುಗಳನ್ನು ಹೊಂದಿದ್ದು, ದೊಡ್ಡ ತೂಬು ಅತ್ಯಂತ ದೊಡ್ಡದಾಗಿದ್ದು, ತಾಂತ್ರಿಕತೆಯಿಂದ ಇದನ್ನು ನಿರ್ಮಿಸಿದ್ದಾರೆ. ಈ ಕೆರೆಗೆ ಜಿನಿಗಿಹಳ್ಳ, ಸೂಲನಹಳ್ಳಿ ಹಳ್ಳ ಮುಂತಾದ ಹಳ್ಳಗಳಿಂದ ನೀರು ಬರುತ್ತದೆ. ಇದು ಕೃಷ್ಣ ನದಿ ಪಾತ್ರದಲ್ಲಿದ್ದು. ಇದರ ಉಪ ಸರಣಿ ವೇದಾವತಿಯಾಗಿದೆ. ಈ ಕೆರೆಯ ಏರಿಯ ಮಟ್ಟ ೧೨.೦೦ ಅಡಿ ಇದೆ. ಇದರ ಜಲಾನಯನ ಪ್ರದೇಶ ಸ್ವತಂತ್ರವಾಗಿ ೨೧.೫೦. ಚ.ಕಿ.ಮೀ. ಇದ್ದು, ಹಾಗೂ ಸಂಯುಕ್ತವಾಗಿ ೭೦೨.೮ ಚ.ಕಿ.ಮೀ. ಇದೆ. ಇದರ ಜಲಾವೃತ ಪ್ರದೇಶ ೫೮೨.೭೬ ಚ.ಕಿ.ಮೀ. ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು  ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಈ ಕೆರೆಯಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯಿದ್ದೂ ನೋಡಲು ಆಕರ್ಷಣೀಯವಾಗಿದೆ. ಈ ಕೆರೆಯ ನೀರನ್ನು ಬಳಸಿಕೊಂಡು ಭತ್ತ, ಜೋಳ, ರಾಗಿ, ಹತ್ತಿಯನ್ನು ಮೊದಲು ಬೆಳೆಯಲಾಗುತ್ತಿತ್ತು. ಪ್ರಸ್ತುತ ರಾಗಿ, ಹತ್ತಿ, ಈರುಳ್ಳಿ, ಭತ್ತ, ತರಕಾರಿ, ಸೂರ್ಯಕಾಂತಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ಕೆರೆಯ ಎಡದಂಡೆ ಕಾಲುವೆ ೭.೪೦ ಕಿ.ಮೀ. ಹಾಗೂ ಬಲದಂಡೆ ಕಾಲುವೆ ೮.೮೦ ಕಿ.ಮೀ. ಉದ್ದವಿದೆ. ಈ ಕೆರೆಯ ಅಂಗಳ ಅತ್ಯಂತ ವಿಶಾಲವಾಗಿದ್ದು, ಬಹಳಷ್ಟು ಜಲ ಸಂಗ್ರಹವಾಗುತ್ತದೆ. ಈ ಕೆರೆಯು ೨೧೯೦ ಎಕರೆ ಪ್ರದೇಶಕ್ಕೆ ನೀರನ್ನು ಒದಗಿಸುತ್ತದೆ. ಈ ಕೆರೆಯ ತೂಬಿನ ಬಳಿ ಎರಡು ನಾಗರಕಲ್ಲು ಮತ್ತು ಗಣೇಶನ ವಿಗ್ರಹಗಳಿವೆ. ಇದರ ಏರಿಯ ಮೇಲೆ ಬಸವಣ್ಣನ ವಿಗ್ರಹವಿರುವ ಭಗ್ನ ದೇವಾಲಯವಿದೆ.

**೬. ಅಬ್ಬೆನಾಯಕನಹಳ್ಳಿ(ಶಿವಗಂಗೆ) ಕೆರೆ**

ಹೊಳಲ್ಕೆರೆ ತಾಲ್ಲೂಕು ಕಸಬಾ ಹೋಬಳಿ ವ್ಯಾಪ್ತಿಯಲ್ಲಿ ಬರುವ ಶಿವಗಂಗಾ ಗ್ರಾಮವು ಅದೇ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿರುತ್ತದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೨೨ ಕಿ.ಮೀ. ದೂರದಲ್ಲಿದೆ. ಐತಿಹಾಸಿಕ ಪ್ರಾಚೀನ ಕೆರೆಯೊಂದಿದ್ದು, ಅದನ್ನು ಅಬ್ಬೆನಾಯಕನಹಳ್ಳಿ (ಶಿವಗಂಗೆ) ಕೆರೆ ಎನ್ನಲಾಗುತ್ತದೆ. ಇದು ಕದಂಬರ ಕಾಲದಲ್ಲಿ ನಿರ್ಮಿತವಾದ ಕೆರೆ ಎಂದು ಅಲ್ಲಿನ ಪ್ರಾಚ್ಯಾವಶೇಷಗಳು ಪುಷ್ಠೀಕರಿಸುತ್ತವೆ. ಅಬ್ಬನಾಯಕ ಇಲ್ಲಿ ಕೆರೆ ಕಟ್ಟಿಸಿದ ಕಾರಣಕ್ಕೆ ಈ ಊರನ್ನು ಅಬ್ಬೆನಾಯಕನಹಳ್ಳಿ ಎಂದು ಕರೆಯಲಾಗುತ್ತದೆ. ಈ ಕೆರೆಯನ್ನು ಕಾಲಾಂತರದಲ್ಲಿ ಅಂದರೆ ೧೯೪೨ರಲ್ಲಿ ಬ್ರಿಟಿಷ್ ಸರ್ಕಾರ ಮತ್ತು ೨೦೧೨ (ಕ್ರಿ.ಶ.೨೦ನೇ ಶತಮಾನ)ರಲ್ಲಿ ಕರ್ನಾಟಕ ಸರ್ಕಾರ ಇದರ ದುರಸ್ತಿ ಮಾಡಿವೆ. ಇಲ್ಲಿ ವರ್ಷಕ್ಕೊಮ್ಮೆ ಮಾರಮ್ಮನ ಜಾತ್ರೆಯನ್ನು ಗ್ರಾಮಸ್ಥರೆಲ್ಲರೂ ಸೇರಿ ಆಚರಿಸುತ್ತಾರೆ.

ಹೆಚ್ಚಿನ ಸಂಖ್ಯೆಯಲ್ಲಿ ನಾಯಕ ಸಮುದಾಯವಿದ್ದು, ಉಳಿದಂತೆ ಎಸ್.ಸಿ ಹಾಗೂ ಇತರೆ ಜನಾಂಗದವರು ಇರುತ್ತಾರೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಇಂತಿವೆ. ಇಲ್ಲಿನ ಕೆರೆಯು ಗ್ರಾಮದ ವಾಯುವ್ಯ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೪೧೨.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೮.೦೦ ಮೀಟರ್ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೧೩.೬೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೩.೯೨೭ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೨೫.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೦೯೧.೬೯ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೨.೨೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ(ಎಂ.ಸಿ.ಎಂ.) ೨.೨೪೦ ಮತ್ತು ಕೆರೆಯ ಹಾಲಿ ಇರುವ ಸಾಮರ್ಥ್ಯ (ಎಂ.ಸಿ.ಎಂ). ೨.೨೫೦ ಇದೆ. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೯೩.೦೬ ಹೇಕ್ಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೩೬೨.೫೫ ಮಿ.ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೫೩೧.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೫.೫೦ ಮೀಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿ ಮತ್ತು ಕಾಲುವೆಗಳಿವೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಿಗೆ ವ್ಯವಸ್ಥಿತವಾಗಿ ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ. ಮಳೆಯಾಶ್ರಿತವಾಗಿರುವ ಈ ಕೆರೆಗೆ ಬಹುತೇಕ ಬಯಲುಸೀಮೆಯ ಪ್ರದೇಶದಿಂದ ಬಂದಂತಹ ನೀರು ಸಂಗ್ರಹಣೆಯಾಗುತ್ತದೆ. ಇಲ್ಲಿ ಮೀನು ಸಾಕಾಣಿಕೆ, ನೀರಾವರಿ ವ್ಯವಸ್ಥೆ ಹಾಗೂ ಪಶುಪಾಲನೆಗೆ ಅನುಕೂಲವಾಗಿದೆ. ಈ ಕೆರೆ ತುಂಬಿದರೆ ರೈತರು ಭತ್ತ, ರಾಗಿ, ಹತ್ತಿ, ರೇಷ್ಮೆ, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ.

**೭. ಬಗ್ಗನಾಡು ಕೆರೆ**

ಈ ಕೆರೆಯು ತಾಲ್ಲೂಕು ಕೇಂದ್ರ ಹಿರಿಯೂರುನಿಂದ ೧೬ ಕಿ.ಮೀ. ದೂರದಲ್ಲಿದೆ. ಇದು ಇಂದಿನ ಬೆಂಗಳೂರು ಪೂನಾ ರಾಷ್ಟ್ರೀಯ ಹೆದ್ದಾರಿಯಿಂದ ೨ ಕಿ.ಮೀ. ದೂರದಲ್ಲಿದ್ದು, ಇಲ್ಲಿ ಪ್ರಾಚೀನ ಕಾಲಘಟ್ಟಕ್ಕೆ ಕ್ರಿ.ಶ.ಸು. ೬–೭ನೇ ಶತಮಾನಕ್ಕೆ ಸೇರಿದ ಕೆರೆಯೊಂದಿದ್ದು, ಅದನ್ನು ಬಗ್ಗನಾಡು ಕೆರೆ ಎಂದು ಕರೆಯಲಾಗುತ್ತಿದೆ. ಕ್ರಿ.ಶ.೧೫೮೯ರಲ್ಲಿ ಈ ಊರು ಸುಮಾರು ೧೧ ಹಳ್ಳಿಗಳ ಆಡಳಿತದ ಕೇಂದ್ರವಾಗಿದ್ದು, ಅದನ್ನು 'ಬಗ್ಗನಾಡು ಸ್ಥಳ' ಎನ್ನಲಾಗುತ್ತಿತ್ತು ಎಂಬ ಉಲ್ಲೇಖವನ್ನು ಮಸ್ಕಲ್ಲಿನ

ತಾಮ್ರ ಶಾಸನ ದಾಖಲಿಸಿದೆ. ಅಧ್ಯಯನ ದೃಷ್ಠಿಯಿಂದ ಮುಖ್ಯವೆನಿಸಿದ ಈ ಕೆರೆಯನ್ನು ವಿವಿಧ ತಾಂತ್ರಿಕ ಕೌಶಲ್ಯಗಳನ್ನು ಬಳಸಿಕೊಂಡು ನಿರ್ಮಿಸಲಾಗಿದ್ದು, ಅದರ ಭೌಗೋಳಿಕ ಮತ್ತು ತಾಂತ್ರಿಕ ವಿಶೇಷತೆ ಈ ಮುಂದಿನಂತಿದೆ. ಇದು ವಿಶಾಲವಾದ ಅಂಗಳವನ್ನು ಹೊಂದಿದ್ದು, ಇದು ಎತ್ತರವಾದ ಮತ್ತು ಅಗಲವಾದ ಹಾಗೂ ವಿಶಾಲವಾದ ಏರಿಯನ್ನು ಹೊಂದಿದೆ. ಕೆರೆಯ ಬಲದಂಡೆ ಮತ್ತು ಎಡದಂಡೆಗಳಲ್ಲಿ ಎರಡು ಕೋಡಿಗಳನ್ನು ಕಟ್ಟಲಾಗಿದೆ. ಇದರ ವಿನ್ಯಾಸತುಂಬಾ ಅಚ್ಚುಕಟ್ಟಾಗಿದೆ. ಎರಡು ತೂಬುಗಳನ್ನು ಹೊಂದಿದ್ದು, ದೊಡ್ಡ ತೂಬು ಅತ್ಯಂತ ದೊಡ್ಡದಾಗಿದ್ದು, ತಾಂತ್ರಿಕತೆಯಿಂದ ಇದನ್ನು ನಿರ್ಮಿಸಿದ್ದಾರೆ. ಈ ಕೆರೆಗೆ ಜನಿಗಿಹಳ್ಳ, ಸೂಲನಹಳ್ಳಿ ಹಳ್ಳ ಮುಂತಾದ ಹಳ್ಳಗಳಿಂದ ನೀರು ಬರುತ್ತದೆ. ಇದು ಕೃಷ್ಣ ನದಿ ಪಾತ್ರದಲ್ಲಿದ್ದು. ಇದರ ಉಪ ಸರಣಿ ವೇದಾವತಿಯಾಗಿದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಈ ಕೆರೆಯಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯಿದ್ದೂ ನೋಡಲು ಆಕರ್ಷಿಣೀಯವಾಗಿದೆ. ಈ ಕೆರೆಯ ನೀರನ್ನು ಬಳಸಿಕೊಂಡು ಭತ್ತ, ಜೋಳ, ರಾಗಿ, ಹತ್ತಿಯನ್ನು ಮೊದಲು ಬೆಳೆಯಲಾಗುತ್ತಿತ್ತು. ಪ್ರಸ್ತುತ ರಾಗಿ, ಹತ್ತಿ, ಈರುಳ್ಳಿ, ಭತ್ತ, ತರಕಾರಿ, ಸೂರ್ಯಕಾಂತಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ಕೆರೆಯ ಅಂಗಳ ಅತ್ಯಂತ ವಿಶಾಲವಾಗಿದ್ದು, ಬಹಳಷ್ಟು ಜಲ ಸಂಗ್ರಹವಾಗುತ್ತದೆ. ಈ ಕೆರೆಯು ೨೯೦ ಎಕರೆ ಪ್ರದೇಶಕ್ಕೆ ನೀರನ್ನು ಒದಗಿಸುತ್ತದೆ. ಈ ಕೆರೆಯ ತೂಬಿನ ಬಳಿ ಎರಡು ವೀರಗಲ್ಲು, ಮೂರು ನಾಗರಕಲ್ಲು ಮತ್ತು ಗಣೇಶನ ವಿಗ್ರಹ ತ್ರುಟಿತ ಶಿಲಾ ಶಾಸನಗಳಿವೆ.

**೮. ಅದಿರಾಳು ಕೆರೆ**

**ಅದಿರಾಳು** ಗ್ರಾಮವು ಜಿಲ್ಲೆಯ ಹಿರಿಯೂರು ತಾಲ್ಲೂಕಿನಲ್ಲಿದ್ದು, ಇದು ಐಮಂಗಲ ಹೋಬಳಿ ಕೇಂದ್ರದ ವ್ಯಾಪ್ತಿಯಲ್ಲಿದೆ. ಚಿಲ್ಲಹಳ್ಳಿ ಗ್ರಾಮ ಪಂಚಾಯತಿಗೆ ಸೇರಿರುವ ಈ ಊರಿನಲ್ಲಿ ಪ್ರಾಚೀನ ಕಾಲದಲ್ಲಿ ಅಂದರೆ ಗಂಗರ ಕಾಲದಲ್ಲಿ ನಿರ್ಮಿತವಾದ (ಕ್ರಿ.ಶ.೭ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಅದಿರಾಳು ಕೆರೆ ಎನ್ನಲಾಗುತ್ತದೆ. ಇದನ್ನು ೨೦೦೬-೭ರಲ್ಲಿ ಸರ್ಕಾರ ಇದನ್ನು ಪುನಃ ಜೀರ್ಣೋದ್ಧಾರ ಮಾಡಿದ್ದಾರೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೧೫ ಕಿ.ಮೀ ದೂರದಲ್ಲಿದೆ. ಇಲ್ಲಿ ಅನೇಕ ಶಾಸನಗಳು, ವೀರಗಲ್ಲುಗಳು ಇವೆ. ಗಂಗ ವಂಶದ ಶ್ರೀ ವಿಕ್ರಮರಾಜನಿಗೆ ಸೇರಿದ ಇಲ್ಲಿನ ತಾಮ್ರ ಶಾಸನವು ಕ್ರಿ.ಶ.ಸು. ೬೦೮ರಲ್ಲಿ ಅಲ್ಲಿನ ನಾಲ್ಕು ಜನ ಬ್ರಾಹ್ಮಣರಿಗೆ ದಾನ ನೀಡಿದ ವಿವರವನ್ನು ದಾಖಲಿಸಿದೆ.[೯] ಈ ಗ್ರಾಮದಲ್ಲಿ ವೀರಭದ್ರಸ್ವಾಮಿ ಮತ್ತು ಬೋರೇದೇವರು, ಆಂಜನೇಯ ಸ್ವಾಮಿ, ಓಬಳದೇವರು, ಮಾರಮ್ಮ ದೇವಾಲಯಗಳಿವೆ. ಇಲ್ಲಿನ ಶಾಸನಗಳಿಂದ ಇದು ಗಂಗ ಕದಂಬರ ಕಾಲಾವಧಿಯಲ್ಲಿ ಪ್ರಮುಖ ಕೇಂದ್ರವಾಗಿತ್ತೆಂದು ಹೇಳಬಹುದು.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮಹತ್ವವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ಪೂರ್ವ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು

ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೧೬ ಅಡಿಯಾಗಿದ್ದು, ಇದರ ಒಟ್ಟು ಜಲಾಯನ ಪ್ರದೇಶ ಸ್ವತಂತ್ರವಾಗಿ ೯.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೧೯.೦೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೯೭.೪೦ ಹೇಕ್ಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೬೫೫.೬೩ ಕಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿ ಮತ್ತು ಎರಡು ಕಾಲುವೆಗಳನ್ನು ಹೊಂದಿದೆ.

ಈ ಕೆರೆಯು ಅತ್ಯಂತ ವಿಶಾಲವಾಗಿದ್ದು, ಕಪ್ಪು ಮಿಶ್ರಿತವಾದ ಫಲವತ್ತೆಯ ಮಣ್ಣನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ತೂಬುಗಳನ್ನು ಕಾಣಬಹುದು. ನೀರಾವರಿ ವ್ಯವಸ್ಥೆಗೆ ಇಲ್ಲಿನ ಕೆರೆ ಕಾಲುವೆ ವ್ಯವಸ್ಥೆ ಉತ್ತಮವಾಗಿದೆ. ಎಡದಂಡೆ ಕಾಲುವೆ ಉದ್ದ ೩.೦೦ ಕೀ.ಮೀ. ಇದೆ. ಕೆರೆಯ ಹಿಂಬದಿಯಲ್ಲಿ ಅನೇಕ ವೀರಗಲ್ಲುಗಳನ್ನು ಕಾಣಬಹುದಾಗಿದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೯. ದೊಡ್ಡಉಳ್ಳಾರ್ತಿ ಕೆರೆ**

ದೊಡ್ಡ ಉಳ್ಳಾರ್ತಿ ಗ್ರಾಮವು ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನಲ್ಲಿದ್ದು, ಇದು ತಳಕು ಹೋಬಳಿ ಕೇಂದ್ರದ ವ್ಯಾಪ್ತಿಯಲ್ಲಿದೆ. ಗ್ರಾಮ ಪಂಚಾಯತಿಯ ಕೇಂದ್ರವಾಗಿರುವ ಈ ಊರಿನಲ್ಲಿ ಪ್ರಾಚೀನ ಕಾಲದಲ್ಲಿ ನಿರ್ಮಿತವಾದ (ಕ್ರಿ.ಶ.೮ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ದೊಡ್ಡ ಉಳ್ಳಾರ್ತಿ ಕೆರೆ ಎನ್ನಲಾಗುತ್ತಿದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೧೦ ಕಿ.ಮೀ ದೂರದಲ್ಲಿದೆ. ಇದು ಮೀರಸಾಬಿಹಳ್ಳಿ, ಘಟಪರ್ತಿಗಳ ಬಳಿ ಇರುವ ಐತಿಹಾಸಿಕ ಗ್ರಾಮವಾಗಿದೆ. ಇಲ್ಲಿ ಅನೇಕ ಶಾಸನಗಳು, ವೀರಗಲ್ಲುಗಳು ಇವೆ. ದೊಡ್ಡ ಉಳ್ಳಾರ್ತಿಯ ಬಯಲಿನ ೩ ವೀರಗಲ್ಲುಗಳಿಂದ ಕ್ರಿ.ಶ.೮೧೧೦ರಲ್ಲಿ ಒಬ್ಬ ಮುಖಂಡನ ಮರಣವನ್ನು, ೨ನೇ ವೀರಗಲ್ಲಿನಿಂದ ಆ ಮುಖಂಡನ ಮಡದಿ ತನ್ನ ಬಂಧುಗಳಿಗೆ ಭೂದತ್ತಿ ನೀಡಿದ ಬಗ್ಗೆ[೨೦], ೩ನೇ ವೀರಗಲ್ಲಿನಿಂದ ಪೆರ್ಮಾಡಿ ಗಂಗರಾಜ, ಇಮ್ಮಡಿ ಶಿವರಾಮನು, ದುಗ್ಗಮರಸನೊಂದಿಗೆ ಸಿಟ್ಟಾಗಿ ಇರುವ ಇವನನ್ನು ಸೆದೆ ಬಡಿಯುವಂತೆ ಸಿಂಹಪೋತನಿಗೆ ಆಜ್ಞೆ ಮಾಡಿದ ವಿಚಾರವನ್ನು, ಶಿವಮಾರನ ಆಜ್ಞೆಯಂತೆ ಸಿಂಹಪೋತನು ದುಗ್ಗಾಮಾರನೊಂದಿಗೆ ಯುದ್ಧ ಮಾಡಿದ ವಿಚಾರವನ್ನು ತಿಳಿಯಬಹುದು.[೨೧] ಈ ಗ್ರಾಮದಲ್ಲಿ ಗೌರಿದೇವಿ, ವೀರಭದ್ರಸ್ವಾಮಿ ಮತ್ತು ಬೋರೇದೇವರು, ಆಂಜನೇಯಸ್ವಾಮಿ ದೇವಾಲಯಗಳು ಪ್ರಮುಖವಾಗಿದೆ. ಗೌರಿದೇವಿಯ ಜಾತ್ರೆಯು ಉಳ್ಳಾರ್ತಿಯ ದೊಡ್ಡಹಬ್ಬ ಮತ್ತು ಸಂಭ್ರಮದ ಜಾತ್ರೆಯಾಗಿದೆ. ಇಲ್ಲಿನ ಕಾವಲಿನಲ್ಲಿ ಕುರಂದ ಶಿಲೆಯ ಖನಿಜ ದೊರೆಯುತ್ತದೆ. ಈ ಕಾವಲಿನಲ್ಲಿ ಗೋ ಶಾಲೆಯನ್ನು ಆರಂಭಿಸಲಾಗಿದೆ. ಇಲ್ಲಿನ ಶಾಸನಗಳಿಂದ ಇದು ನೊಳಂಬರ ಕಾಲಾವಧಿಯಲ್ಲಿ ಪ್ರಮುಖ ಕೇಂದ್ರವಾಗಿತ್ತೆಂದು ಹೇಳಬಹುದು.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮಹತ್ವವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ಪೂರ್ವ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೧೯ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೦೮.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೧೨.೦೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೭೧.೪೦ ಹೇಕ್ಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೬೫೫.೬೩ ಕಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ.

ಈ ಕೆರೆಯು ಅತ್ಯಂತ ವಿಶಾಲವಾಗಿದ್ದು, ಕಪ್ಪು ಮಿಶ್ರಿತವಾದ ಫಲವತ್ತೆಯ ಮಣ್ಣನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ತೂಬುಗಳನ್ನು ಕಾಣಬಹುದು. ನೀರಾವರಿ ವ್ಯವಸ್ಥೆಗೆ ಇಲ್ಲಿನ ಕೆರೆ ಕಾಲುವೆ ವ್ಯವಸ್ಥೆ ಉತ್ತಮವಾಗಿದೆ. ಎಡದಂಡೆ ಕಾಲುವೆ ಉದ್ದ ೨.೦೦ ಕೀ.ಮೀ.ಇದೆ. ಕೆರೆಯ ಹಿಂಬದಿಯಲ್ಲಿ ಅನೇಕ ವೀರಗಲ್ಲುಗಳನ್ನು ಕಾಣಬಹುದಾಗಿದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೧೦. ಬಾಗೂರು ಕೆರೆ**

ಬಾಗೂರು ಗ್ರಾಮವು ಜಿಲ್ಲೆಯ ಹೊಸದುರ್ಗ ತಾಲ್ಲೂಕಿನಲ್ಲಿದ್ದು, ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೨೦ ಕಿ.ಮೀ ದೂರದಲ್ಲಿದೆ. ಈ ಊರಿನಲ್ಲಿ ಪ್ರಾಚೀನ ಕಾಲದಲ್ಲಿ ಅಂದರೆ ರಾಷ್ಟ್ರಕೂಟರ ಕಾಲದ(ಕ್ರಿ.ಶ.೮ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಬಾಗೂರು ಕೆರೆ ಎಂದು ಕರೆಯಲಾಗುತ್ತದೆ. ಇಲ್ಲಿ ವಿಜಯನಗರದ ಅರಸರು, ಚಿತ್ರದುರ್ಗದ ಪಾಳೆಯಗಾರರು, ಮತ್ತೂಡು ಪಾಳೆಯಗಾರರ ಕಾಲದ ಅನೇಕ ದೇವಾಲಯ, ಶಾಸನಗಳು, ಕಾಲದ ಕೋಟೆ ಕೊತ್ತಲ, ವೀರಗಲ್ಲುಗಳು ಇವೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮಹತ್ವವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ಉತ್ತರ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೨೩ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೯.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೩೯.೦೨ ಚ.ಕಿ.ಮೀ. ಇದೆ. ಇದರ

ಒಟ್ಟಾರೆ ಜಲಾವೃತ ಪ್ರದೇಶ ೧೯೭.೪೦ ಹೇಕ್ಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೩೬೦.೬೩ ಮಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿ ಮತ್ತು ಎರಡು ಕಾಲುವೆಗಳನ್ನು ಹೊಂದಿದೆ.

ಈ ಕೆರೆಯು ಅತ್ಯಂತ ವಿಶಾಲವಾಗಿದ್ದು, ಕಪ್ಪು ಮಿಶ್ರಿತವಾದ ಫಲವತ್ತೆಯ ಮಣ್ಣನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ತೂಬುಗಳನ್ನು ಕಾಣಬಹುದು. ನೀರಾವರಿ ವ್ಯವಸ್ಥೆಗೆ ಇಲ್ಲಿನ ಕೆರೆ ಕಾಲುವೆ ವ್ಯವಸ್ಥೆ ಉತ್ತಮವಾಗಿದೆ. ಎಡದಂಡೆ ಕಾಲುವೆ ಉದ್ದ ೨.೪೩.೦೦ ಕೀ.ಮೀ.ಇದೆ. ಕೆರೆಯ ಏರಿಯ ಮೇಲೆ ಅನೇಕ ವೀರಗಲ್ಲುಗಳನ್ನು ಕಾಣಬಹುದಾಗಿದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ತೆಂಗು, ಅಡಿಕೆ, ಜೋಳ, ಸೂರ್ಯಕಾಂತಿ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

### ೧೧. ಚಿಕ್ಕಮಧುರೆಕೆರೆ

ಚಿಕ್ಕಮಧುರೆಯು ಜಿಲ್ಲೆಯ ಚಳ್ಳಕೆರೆ ತಾಲ್ಲೂಕು ಮತ್ತು ಕಸಬಾ ಹೋಬಳಿಯ ಸೋಮಗುದ್ದು ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಬರುತ್ತದೆ. ಇಲ್ಲಿ ಮಧ್ಯಯುಗೀನ ಕಾಲದಲ್ಲಿ ನಿರ್ಮಿತವಾದ ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಚಿಕ್ಕಮಧುರೆಕೆರೆ ಎನ್ನಲಾಗುತ್ತದೆ. ಇದು ತಾಲ್ಲೂಕು ಕೇಂದ್ರದಿಂದ ೧೨ ಕಿ.ಮೀ. ದೂರದಲ್ಲಿದೆ. ಇದರ ಪಕ್ಕದಲ್ಲಿ ಹಿರೇ ಮಧುರೆ ಎಂಬ ಗ್ರಾಮವೂ ಸಹ ಇದೆ. ಇಲ್ಲಿ ಎಸ್.ಸಿ, ಎಸ್.ಟಿ, ಲಿಂಗಾಯಿತ ಸಮುದಾಯದ ಜನರು ವಾಸವಾಗಿದ್ದು, ಕೋಮು ಸಾಮರಸ್ಯವನ್ನು ಇಲ್ಲಿ ಕಾಣಬಹುದಾಗಿದೆ. ಹಿಂದೆ ಪಲ್ಲವರ ರಾಜಧಾನಿಯಾಗಿದ್ದ ಚಿಕ್ಕ ಮಧುರೆ ಗ್ರಾಮದಲ್ಲಿಂದು ನವಶಿಲಾಯುಗದಿಂದ ಹಿಡಿದು ಐತಿಹಾಸಿಕ ಯುಗದವರೆಗೂ ಪ್ರಾಚ್ಯಾವಶೇಷಗಳು ಕಂಡು ಬಂದಿವೆ. ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದ ಸಮಾಧಿಗಳು ಸಹ ಇಲ್ಲಿವೆ. ಇಲ್ಲಿ ಪ್ರಾಚೀನ ಮಲ್ಲೇಶ್ವರ ದೇವಾಲಯವಿದೆ. ಇದನ್ನು ಪ್ರಸ್ತುತ ದಿನಗಳಲ್ಲಿ ನೂತನವಾಗಿ ನಿರ್ಮಿಸಲಾಗಿದೆ. ದೇವಾಲಯದ ಮುಂಭಾಗ ಮತ್ತು ಅದರ ಪಕ್ಕದಲ್ಲಿ ವೀರಗಲ್ಲುಗಳು, ಶಾಸನಗಳಿವೆ. ಇಲ್ಲಿಯ ಕಂಬ ಶಾಸನದಿಂದ ಕ್ರಿ.ಶ.೧೦೮೫ರಲ್ಲಿ ಸಿಂಹ ಪೋತನ ಮಗ ಪರಮೇಶ್ವರ ಪಲ್ಲವಾದಿ ರಾಜ ಮತ್ತು ಅವನ ಮಗ ಪಲ್ಲವ ಮಲ್ಲ ಇವರು ರಾಷ್ಟ್ರಕೂಟರ ಸಾಮಂತರಾಗಿದ್ದರೆಂದು[೨], ತಲಕಾಡಿನ ಗಂಗರು ಇವರಿಗೆ ಸೋತು ಸಾಮಂತರಾಗಿದ್ದಾರೆಂದು ಪರಮೇಶ್ವರ ಪಲ್ಲವನು ನೊಳಂಬಾಳಿಗೆ ನೀರುಗುಂದ ನಾಡನ್ನು ಆಳುತ್ತಿದ್ದಾಗ ಅವರ ರಾಣಿ ಗಾವನಗಜ್ಜಿ ನಾಗಮಾರಜ್ಜಿಯರು ಇಲ್ಲಿನ ಶಿವಾಲಯಕ್ಕೆ ದತ್ತಿ ಬಿಟ್ಟಿದ್ದನ್ನು ಹಾಗೂ ಪರಮೇಶ್ವರನ ಸಹೋದರಿ ಪೆರ್ಮಾಡಿಯ ರಾಣಿಯಾಗಿದ್ದನ್ನು, ಆಕೆ ದೇವಾಲಯವನ್ನು ಕಟ್ಟಿಸಿ, ಭೂದತ್ತಿ ನೀಡಿದ ವಿವರವನ್ನು ಇಲ್ಲಿನ ಕನ್ನಡ ಲಿಪಿಯ ಶಾಸನ ಉಲ್ಲೇಖಿಸಿದೆ.[೩]

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ನೊಳಂಬರ ಕಾಲಾವಧಿಯಲ್ಲಿ ನಿರ್ಮಾಣವಾಗಿರಬಹುದಾದ ಇಲ್ಲಿನ ಕೆರೆಯನ್ನು ವಿವಿಧ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೧೨ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೨೦.೦೦ ಚ.ಕಿ.ಮೀ ಇದ್ದು, ಸಂಯುಕ್ತವಾಗಿ ೧೮ ಚ.ಕಿ.ಮೀ ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೧೪೯.೨೯ ಚ.ಕಿ.ಮೀ ಆಗಿದ್ದು, ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ.

ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತ, ಕಡಲೆ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಪ್ರಸ್ತುತ ರೈತರು ಈ ಬೆಳೆಗಳೊಂದಿಗೆ ಸೂರ್ಯಕಾಂತಿ, ಈರುಳ್ಳಿಗಳನ್ನು ಬೆಳೆಯುತ್ತಾರೆ. ಚಿಕ್ಕ ಮಧುರೆ ಕೆರೆಯು ವಿಶಾಲವಾದ ಅಂಗಳವನ್ನು ಹೊಂದಿದ್ದು, ಉದ್ದನೆಯ ಏರಿಯನ್ನು ಹೊಂದಿದೆ. ಈ ಕೆರೆಯ ಏರಿಯು ಪ್ರತಿ ವರ್ಷವೂ ಕೆರೆಗೆ ನೀರು ಬಂದಾಗ ಒಡೆದು ಹೋಗಿ, ಈ ಕೆರೆಯ ನೀರು ಹಳ್ಳದ ಮೂಲಕ ಗರಣಿ ಹಳ್ಳಕ್ಕೆ ಸೇರುತ್ತದೆ. ಕಾರಣ ಗುಣಮಟ್ಟತೆಯ ಕೊರತೆ ಎಂದೇ ಹೇಳಬಹುದು. ಈ ಕೆರೆಗೆ ಕಲ್ಲಹಳ್ಳಿಕೆರೆ ಕೋಡಿ ಬಿದ್ದ ನೀರು ಬಂದು ಸೇರುತ್ತದೆ. ಈ ಕೆರೆ ಕೋಡಿ ಬಿದ್ದ ನಂತರ ಇದರ ನೀರು ಗರಣಿ ಹಳ್ಳದ ಮುಖಾಂತರ ದೊಡ್ಡೇರಿ ಮತ್ತು ರಾಣಿಕೆರೆಗೆ ಸೇರುತ್ತದೆ. ಈ ಕೆರೆಗೆ ಎರಡು ತೂಬುಗಳಿವೆ. ಎರಡೂ ಕಡೆಯೂ ಕೂಡ ಕೋಡಿಗಳನ್ನು ನಿರ್ಮಿಸಲಾಗಿದೆ. ತೂಬಿನಿಂದ ಹೊರಬಂದ ನೀರು ಕೃಷಿ ಭೂಮಿಗೆ ಸರಾಗವಾಗಿ ಹೋಗುವಂತೆ ಕಾಲುವೆಯನ್ನು ವ್ಯವಸ್ಥಿತವಾಗಿ ನಿರ್ಮಿಸಲಾಗಿದೆ. ಕೋಡಿ ಬಿದ್ದ ನೀರು ಹೋಗಲು ವ್ಯವಸ್ಥಿತವಾಗಿ ಕಾಲುವೆಯನ್ನು ನಿರ್ಮಿಸಿದ್ದಾರೆ. ಆದರೆ ಈ ಕೆರೆಯ ದುರಂತವೆಂದರೆ, ಪ್ರತಿ ವರ್ಷವೂ ಕೆರೆಗೆ ನೀರು ತುಂಬಿದಾಗ ಇದು ಒಡೆದು ಹೋಗುತ್ತದೆ. ಆದ್ದರಿಂದ ಇದನ್ನು ವ್ಯವಸ್ಥಿತವಾಗಿ ಸಂರಕ್ಷಿಸಬೇಕಾದ ಅವಶ್ಯಕತೆ ಇದೆ.

**೧೨. ಸಖರಕೆರೆ**

ಸಖರಿ ಗ್ರಾಮವು ಹಿರಿಯೂರು ತಾಲ್ಲೂಕಿನಲ್ಲಿದೆ. ತಾಲೂಕಿನ ಗಡಿ ಗ್ರಾಮವಾಗಿರುವ ಇದು ಧರ್ಮಪುರಿ ಹೋಬಳಿಗೆ ಸೇರಿದ್ದು, ತಾಲೂಕು ಕೇಂದ್ರದಿಂದ ಈಶಾನ್ಯಕ್ಕೆ ೨೯ ಕಿ.ಮೀ. ದೂರದಲ್ಲಿದೆ. ವೇಣುಕಲ್ಲು ಗುಡ್ಡದ ಪಕ್ಕದಲ್ಲಿರುವ ಈ ಊರಿನಲ್ಲಿ ನೊಳಂಬರ ಕಾಲಾವಧಿಯಲ್ಲಿ ಅಂದರೆ ಮಧ್ಯ ಕಾಲದಲ್ಲಿ ನಿರ್ಮಿಸಿದ (ಕ್ರಿ.ಶ.೯-೧೦ನೇ ಶತಮಾನ) ಕೆರೆ ಇದೆ. ಇಲ್ಲಿನ ಕೆರೆಯ ದಡದಲ್ಲಿರುವ ಕ್ರಿ.ಶ.೮೯೦ರ ಶಾಸನವು ನೊಳಂಬ ಪಲ್ಲವರಾಜ ಮಹೇಂದ್ರನ ಆಳ್ವಿಕೆಯಲ್ಲಿ ಇಲ್ಲಿನ ಚಿತ್ತಪ್ಪನ ಕೆರೆ ನಿರ್ಮಾಣವಾಗಿರುವುದನ್ನು ದಾಖಲಿಸಿದೆ.[೨೪] ಈ ಗ್ರಾಮದಲ್ಲಿ ಬಸವಣ್ಣ, ಆಂಜನೇಯ, ಈಶ್ವರ, ಗಂಗಮ್ಮ, ಮಾರಮ್ಮ ಮೊದಲಾದ ಗುಡಿಗಳಿವೆ. ಅಲ್ಲದೇ ಇಲ್ಲಿ ಕೆಲ ಶಾಸನಗಳು ಮತ್ತು ಇತರೆ ಪ್ರಾಚ್ಯಾವಶೇಷಗಳಿವೆ.

ಇಲ್ಲಿನ ಕೆರೆಯನ್ನು ಕರ್ನಾಟಕ ಸರ್ಕಾರದ ಜಲಸಂಪನ್ಮೂಲ ಹಾಗೂ ಸಣ್ಣ ನೀರಾವರಿ ಇಲಾಖೆಯವರು ಜಿಲ್ಲಾ ಪಂಚಾಯತಿಯ ಅನುದಾನದಲ್ಲಿ ಈ ಕೆರೆಯನ್ನು ಇತ್ತೀಚಿಗೆ ದುರಸ್ತಿ ಮಾಡಿದ್ದಾರೆ. ಪ್ರಸಕ್ತ ಕೆರೆ ಬರಿದಾಗಿದ್ದು, ಹೂಳು ತುಂಬಿದೆ. ಇಲ್ಲಿ ಸರಿಯಾದ ನಿರ್ವಹಣೆ ಇಲ್ಲದ ಕಾರಣ ಸಾಕಷ್ಟು ಗಿಡಮರಗಳು ಬೆಳದಿವೆ. ಅಲ್ಲದೇ ಕೆರೆಯ ಏರಿಯಲ್ಲಿಯೂ ಗಿಡಮರ ಬೆಳದು ಅದು ಅಲ್ಲಲ್ಲಿ ಶಿಥಿಲವಾಗಿದ್ದು, ಸಾಕಷ್ಟು ದುಸ್ಥಿತಿಯಲ್ಲಿದೆ. ಕೆರೆ ಏರಿಯ ಉದ್ದ ೮೭೯ ಮೀಟರ್ ಇದ್ದು, ಅದರ ಎತ್ತರ ೧೨ ಅಡಿ ಇದೆ. ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮಹತ್ವವಾಗಿದ್ದು, ಇಲ್ಲಿನ ಕೆರೆಯನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೆರೆಯ ಒಳ ಭಾಗಕ್ಕೆ ಸಮಗಾತ್ರದ ಬೆಣೆಯಾಕಾರದ (WEDGE SHAFE) ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಏರಿಯನ್ನು ನಿರ್ಮಿಸಲಾಗಿದೆ. ಕೆರೆ ಏರಿಯು ಬಾಗಿದ ಆಕಾರದಲ್ಲಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೪೬೮.೦೦ ಮಿ. ಮಿ. ಮಳೆಯಾಗುತ್ತದೆ. ಚೌಕಕಾರದ ತೂಬನ್ನು ಇಲ್ಲಿ ಮಾಡಲಾಗಿದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ಕಾಲುವೆ ಮತ್ತು ತೂಬುಗಳಿವೆ. ಎಡದಂಡೆ ಕಾಲುವೆ ಉದ್ದ ೫.೦೦ ಕೀ. ಮೀ. ಇದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ತೆಂಗು, ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಉತ್ತಮ ಮಳೆ ಬಂದು ಕೆರೆ ಭರ್ತಿಯಾದಲ್ಲಿ ಪ್ರಸಕ್ತ ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೧೩. ಮುತ್ತಗದೂರುಕೆರೆ**

ಹೊಳಲ್ಕೆರೆ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಮುತ್ತಗದೂರು ಗ್ರಾಮವು ಜಿಲೆಯಲ್ಲಿಯೇ ಪ್ರಸಿದ್ಧಿ ಪಡೆದ ಗ್ರಾಮವಾಗಿದೆ. ಇದನ್ನು ಮುತ್ತಗದೂರು, ಮುತ್ತುಗದೂರು, ಮುತ್ತಗನೂರು, ಮುದಕದೂರು ಎಂದು ಕರೆಯಲಾಗುತ್ತದೆ. ಇಲ್ಲಿ ಕಲ್ಲೇಶ್ವರ, ಮಾರಮ್ಮ, ಬಸವಣ್ಣನ ಗುಡಿಗಳಿವೆ. ವರ್ಷಕ್ಕೊಮ್ಮೆ ಮಾರಮ್ಮನ ಜಾತ್ರೆಯನ್ನು ಗ್ರಾಮಸ್ಥರೆಲ್ಲರೂ ಸೇರಿ ಆಚರಿಸುತ್ತಾರೆ. ಹೆಚ್ಚಿನದಾಗಿ ನಾಯಕ ಸಮುದಾಯ ಇದ್ದು, ಉಳಿದಂತೆ ಎಸ್.ಸಿ ಹಾಗೂ ಇತರೆ ಸಮುದಾಯದವರು ಇರುತ್ತಾರೆ.

ಇದು ಸಿರಿಗೆರೆ ಮಠದ ಶ್ರೀ ಶಿವಕುಮಾರ ಶಿವಚಾರ್ಯ ಸ್ವಾಮಿಗಳ ಜನ್ಮಸ್ಥಳ. ಇದು ಸಾಸಲು ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿರುತ್ತದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೨೨ ಕಿ.ಮೀ. ದೂರದಲ್ಲಿದೆ. ಇಲ್ಲಿ ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಮುತ್ತಗದೂರುಕೆರೆ ಎನ್ನಲಾಗುತ್ತದೆ. ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿತವಾದ ಕೆರೆ ಎಂದು ಅಲ್ಲಿನ ಪ್ರಾಚ್ಯಾವಶೇಷಗಳು ಪುಷ್ಟೀಕರಿಸುತ್ತವೆ. ಇಲ್ಲಿನ ಕಲ್ಲೇಶ್ವರ ಗುಡಿಯ ಕ್ರಿ.ಶ.೭೭೪ರ ಶಾಸನವು ರಾಚರಸನೆಂಬುವನು ಇಲ್ಲಿ ಕೆರೆ ಕಟ್ಟಿಸಿ ದತ್ತಿ ಬಿಟ್ಟ ವಿಚಾರವನ್ನು ದಾಖಲಿಸಿದೆ. ಅಲ್ಲದೇ ಇಲ್ಲಿನ ಮತ್ತೊಂದು ಶಾಸನ ಕ್ರಿ.ಶ.೧೦೫೧ರಲ್ಲಿ ಕದಂಬಳಿಗಿ ನಾಡಿನ.... ಅಂಗಿರಸ ಮತ್ತು ಭೀಮರಸರು ತಮ್ಮ ಗುರುವಿನ ತಮ್ಮ

ರಾಚರಸನ ಹೆಸರಿನಲ್ಲಿ ಕೆರೆಯೊಂದನ್ನು ಕಟ್ಟಿಸಿ, ಭೂಮಿಗಳನ್ನು ದತ್ತಿಯಾಗಿ ನೀಡಿರುವುದನ್ನು ದಾಖಲಿಸಿದೆ.[೨೫]

ಜಿಲ್ಲೆಯಲ್ಲಿನ ಅತಿ ದೊಡ್ಡ ಕೆರೆಗಳಲ್ಲಿ ಇದೊಂದು ದೊಡ್ಡ ಕೆರೆಯಾಗಿದೆ. ಇದನ್ನು ಮೈಸೂರು ಒಡೆಯರ ಕಾಲದಲ್ಲಿ ಸಿರಿಗೆರೆಯ ಹಿರಿಯ ಜಗದ್ಗುರುಗಳ ಆದೇಶದ ಮೇರೆಗೆ ಜಗಳೂರು ಇಮಾಮ್‌ಸಾಬ್ ಎನ್ನುವ ಪ್ರಜಾ ನಾಯಕ ಇದನ್ನು ದುರಸ್ತಿ ಮಾಡಿಸಿದರು. ಇದೇ ಕೆರೆಯನ್ನು ಕಾಲಾಂತರದಲ್ಲಿ ಅಂದರೆ ೨೦೧೨ ಕರ್ನಾಟಕ ಸರ್ಕಾರದ ಸಣ್ಣ ನೀರಾವರಿ ಇಲಾಖೆಯವರು ಇದರ ದುರಸ್ತಿ ಮಾಡಿಸಿದ್ದಾರೆ. ಅಲ್ಲದೆ ಈಗಲೂ ಇದರ ನಿರ್ವಹಣೆಯನ್ನು ಸಹ ಅದೇ ಇಲಾಖೆಯವರೇ ನೋಡಿಕೊಳ್ಳುತ್ತಿದ್ದಾರೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ವಾಯುವ್ಯ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಪ್ರಸಕ್ತ ಕೆರೆಯಲ್ಲಿ ಹೂಳು ತುಂಬಿದ್ದು, ಸರಿಯಾದ ರೀತಿಯ ನಿರ್ವಹಣೆ ಇಲ್ಲದೇ ಅಲ್ಲಲ್ಲಿ ಗಿಡಮರ ಬೆಳದು ಶಿಥಿಲವಾಗಿದೆ. ಕೆರೆ ಸುತ್ತಲಿನ ಬೆಟ್ಟಗುಡ್ಡಗಳಿಂದ ಬಿದ್ದ ಮಳೆ ನೀರು ಇಲ್ಲಿನ ತಗ್ಗು ಪ್ರದೇಶಗಳಲ್ಲಿರುವ ಹಳ್ಳಗಳ ಮೂಲಕ ಹರಿದು ಇಲ್ಲಿನ ಕೆರೆಗೆ ಬಂದು ಸೇರ್ಪಡೆಯಾಗುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೪೧೧.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೯.೦೦ ಮೀಟರ್ ಹಾಗೂ ಗರಿಷ್ಠ ನೀರಿನ ಪ್ರಮಾಣ ೬೧೦.೦೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೧.೯೦೭ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೨೩.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೧೦೧.೬೯ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೪.೨೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ (ಎಂ.ಸಿ.ಎಂ.) ೧.೯೭೦. ಇದರ ಒಟ್ಟು ವಿನ್ಯಾಸದ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೯೩.೦೬ ಹೇಕ್ಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೩೬೨.೫೫ ಮಿ.ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೫೩೮.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೪.೯೦ ಮೀಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರ್ಯಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿ ಇದ್ದು, ಅದು ೭೯.೮೩೦ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೬೭೨.೦೦ಇದ್ದು, ಅದು ಇರುವ ಸ್ಥಳ (ಚೈನೇಜ್) ೦ ಮೀ ಹಾಗೂ ೬೩.೯೩ ಮೀಟರ್ ಇದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಚೌಕಕಾರದ ಎರಡು ತೂಬುಗಳಿವೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ೩೬೯.೦೦ ಮೀ, ಎಡದಂಡೆ ಕಾಲುವೆ ೨೩೦ ಮೀ. ಉದ್ದಗಳನ್ನು ಹೊಂದಿವೆ.

ಮಳೆಯಾಶ್ರಿತವಾಗಿರುವ ಈ ಕೆರೆಗೆ ಬಹುತೇಕ ಬಯಲು ಸೀಮೆಯ ಪ್ರದೇಶಗಳಿಂದ ಬಂದಂತಹ ನೀರು ಸಂಗ್ರಹಣೆಯಾಗುತ್ತದೆ. ಇಲ್ಲಿ ಮೀನು ಸಾಕಾಣಿಕೆ, ನೀರಾವರಿ ವ್ಯವಸ್ಥೆ ಹಾಗೂ ಪಶುಪಾಲನೆಗೆ ಅನುಕೂಲವಾಗಿದೆ. ಈ ಕೆರೆ ತುಂಬಿದರೆ ರೈತರು ಭತ್ತ, ರಾಗಿ, ಹತ್ತಿ, ರೇಷ್ಮೆ, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಇಲ್ಲಿ ಹೆಚ್ಚಾದ ನೀರು ಸಾಸಲು, ತಣಿಗೇನಹಳ್ಳಿ ಕೆರೆಗಳಿಗೆ ಹೋಗಿ ತಲುಪುತ್ತದೆ.

**೧೪. ಬೂದಿಹಾಳು ಕೆರೆ**

ಬೂದಿಹಾಳು ಗ್ರಾಮವು ಹೊಸದುರ್ಗ ತಾಲ್ಲೂಕಿನಲ್ಲಿದೆ. ಹೊಸದುರ್ಗ-ಹುಳಿಯಾರು ಮಾರ್ಗ ಮಧ್ಯೆ ಇರುವ ಇದು ತಾಲೂಕು ಕೇಂದ್ರದಿಂದ ೩೨ ಕಿ.ಮೀ. ದೂರದಲ್ಲಿದೆ. ಇದನ್ನು ಭಸ್ಮಾಪುರ, ವಿಭೂತಿಪುರ, ಕಾಯಿಬೂದಾಳು, ಬೂದುಹಾಲು, ಬೇದಂಡೆಕೋಟೆ, ಅವನಿಗಿರಿದುರ್ಗ, ಹರಪುರ ಎಂದೆಲ್ಲಾ ಕರೆಯಲಾಗುತ್ತದೆ. ಇಲ್ಲಿನ ಬೂದಿಯ ಮೇಲೆ ಹಸುಗಳು ಹಾಲು ಸುರಿಸುತ್ತಿದ್ದರಿಂದ ಇದನ್ನು ಬೂದಿಹಾಲು ಎಂದು ಮೊದಲು ಕರೆದು ನಂತರ ಇದನ್ನೇ ಬೂದಿಹಾಳು ಎಂದು ಕರೆಯಲಾಯಿತು ಎಂಬುದು ಸ್ಥಳೀಯರ ಅಭಿಪ್ರಾಯ. ಪ್ರಸಕ್ತ ಹೋಬಳಿ ಕೇಂದ್ರವಾಗಿರುವ ಇದನ್ನು ಶ್ರೀರಾಂಪುರವೆಂದು ಕರೆಯಲಾಗುತ್ತದೆ. ಇತಿಹಾಸ ಪೂರ್ವ ಕಾಲದ ನೆಲೆಯಾದ ಇಲ್ಲಿ ಹೊಯ್ಸಳರು, ವಿಜಯನಗರದ ಅರಸರು, ಸಂತೇಬೆನ್ನೂರು ನಾಯಕರು, ಬಿಜಾಪುರದ ಆದಿಲ್‌ಶಾಹಿಗಳು, ಪೇಶ್ವೆಗಳು, ಮೈಸೂರು ಒಡೆಯರು, ಬೂದಿಹಾಳು ಪಾಳೆಯಗಾರರು ಇಲ್ಲಿ ಆಳ್ವಿಕೆ ಮಾಡಿದ್ದಾರೆ. ಇಲ್ಲಿ ಪಾಳೆಯಗಾರರ ಕಾಲದಲ್ಲಿ ನಿರ್ಮಿತವಾದ(ಕ್ರಿ.ಶ.೧೭ನೇ ಶತಮಾನ) ಎರಡು ಐತಿಹಾಸಿಕ ಭಗ್ನ ಕೆರೆಗಳಿವೆ. ಅವುಗಳನ್ನು ಬೂದಿಹಾಳು ಕೆರೆಗಳು ಎನ್ನಲಾಗುತ್ತದೆ. ಈ ಗ್ರಾಮದಲ್ಲಿ ಸೋಮೇಶ್ವರ, ಲಕ್ಷ್ಮಿಕಾಂತ, ಆಂಜನೇಯ, ಬನಶಂಕರಿ, ವೀರಭದ್ರಸ್ವಾಮಿ ಮತ್ತು ಈಶ್ವರ ದೇವಾಲಯಗಳಿವೆ. ಅಲ್ಲದೇ ಸಂತ ಪರಪ್ಪಸ್ವಾಮಿಗಳ ಮಠ ಮತ್ತು ಬೂದಿಹಾಳು ಪಾಳೆಯಗಾರರ ಕಾಲದ ಕೋಟೆ ಮತ್ತು ಇಲ್ಲಿ ಅನೇಕ ಶಾಸನಗಳು, ವೀರಗಲ್ಲುಗಳು ಹಾಗೂ ಇತರೆ ಪ್ರಾಚ್ಯಾವಶೇಷಗಳಿವೆ. ಇಲ್ಲಿ ವರ್ಷಕ್ಕೊಮ್ಮೆ ಗ್ರಾಮದೇವತೆಯ ಜಾತ್ರೆ ಮತ್ತು ಪರಪ್ಪ ಸ್ವಾಮಿಯ ರಥೋತ್ಸವ ಅದ್ದೂರಿಯಾಗಿ ನಡೆಯುತ್ತದೆ.

ಕೋಟೆಯ ಒಳ ಭಾಗದಲ್ಲಿ ಇರುವ ಕೆರೆಯು ಸಂಪೂರ್ಣ ಬತ್ತಿ ಭಗ್ನವಾಗಿ ಹೋಗಿದ್ದು, ಅದರ ಕೆಲ ಅವಶೇಷಗಳು ಮಾತ್ರ ಅಲ್ಲಿ ಉಳಿದುಕೊಂಡಿವೆ. ಕೋಟೆಯ ಹೊರ ಭಾಗದಲ್ಲಿರುವ ಬೂದಿಹಾಳು ಪಾಳೆಯಗಾರರ ಕಾಲದ ದೊಡ್ಡ ಕೆರೆಯನ್ನು ಕರ್ನಾಟಕ ಸರ್ಕಾರದ ಜಲಸಂಪನ್ಮೂಲ/ ಸಣ್ಣ ನೀರಾವರಿ ಇಲಾಖೆಯವರು ಜಿಲ್ಲಾ ಪಂಚಾಯತಿಯ ಅನುದಾನದಲ್ಲಿ ಈ ಕೆರೆಯನ್ನು ೨೦೦೮-೦೯ರಲ್ಲಿ ದುರಸ್ತಿ ಮಾಡಿದ್ದಾರೆ. ಪ್ರಸ್ತುತ ಕೆರೆಯಲ್ಲಿ ಹೂಳು ತುಂಬಿದ್ದು, ಸಂಪೂರ್ಣ ಬರಿದಾಗಿದೆ. ಇಲ್ಲಿ ಸರಿಯಾದ ನಿರ್ವಹಣೆ ಇಲ್ಲದ ಕಾರಣ ಸಾಕಷ್ಟು ಗಿಡ ಮರಗಳು ಬೆಳೆದಿವೆ. ಅಲ್ಲದೇ ಕೆರೆಯ ಏರಿಯಲ್ಲಿಯೂ ಗಿಡ ಮರ ಬೆಳದು ಅದು ಅಲ್ಲಲ್ಲಿ ಶಿಥಿಲವಾಗಿದೆ. ಕೆರೆ ಸುತ್ತಲಿನ ಬೆಟ್ಟ ಗುಡ್ಡಗಳಿಂದ ಬಿದ್ದ ಮಳೆ ನೀರು ಇಲ್ಲಿನ ತಗ್ಗು ಪ್ರದೇಶಗಳಲ್ಲಿರುವ ಹಳ್ಳಗಳ ಮೂಲಕ ಹರಿದು ಇಲ್ಲಿನ ಕೆರೆಗೆ ಬಂದು ಸೇರ್ಪಡೆಯಾಗುತ್ತದೆ. ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮಹತ್ವವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಇಂತಿವೆ. ಇಲ್ಲಿನ ಕೆರೆಯು

ಗ್ರಾಮದ ವಾಯುವ್ಯ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೆರೆಯ ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಡೊಲರೈಟ್(ಕಪ್ಪು) ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೪೫೫.೬೩ ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ಕಾಲುವೆ ಮತ್ತು ತೂಬುಗಳಿವೆ. ಎಡದಂಡೆ ಕಾಲುವೆ ಉದ್ದ ೪.೦೦ ಕಿ.ಮೀ. ಇದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ತೆಂಗು, ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಉತ್ತಮ ಮಳೆ ಬಂದು ಕೆರೆ ಭರ್ತಿಯಾದಲ್ಲಿ ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

ಬೂದಿಹಾಳು ಪಾಳೆಯಗಾರರಲ್ಲಿ ಪ್ರಖ್ಯಾತನಾದವನು ಸಿರುಮ. ಇವನನ್ನು ಸಿರುಮಯ್ಯ ಸಿರುಮಣನಾಯಕ, ಸಿರುಮಯ್ಯ ನಾಯಕ ಎಂದೂ ಕರೆಯಲಾಗಿದೆ. ಈತ ಈ ಕೆರೆಯ ನಿರ್ಮಾಣ ಮಾಡಿದನೆಂದು ಇಲ್ಲಿನ ಜಾನಪದ ಹಾಡುಗಳಲ್ಲಿ ಉಲ್ಲೇಖಿಸಲಾಗಿದೆ. ಚಿಕ್ಕ ಪಾಳೆಯಪಟ್ಟಾಗಿದ್ದರೂ, "ಬೂದಿಹಾಳು ಸಮೃದ್ಧ ಕೃಷಿಯ ರಾಜ್ಯವಿದ್ದಿರಬೇಕು. ತೆಂಗು, ಅಡಕೆ, ಬಾಳೆ, ಕಿತ್ತಳೆ, ಹಲಸು ಮುಂತಾದ ತೋಟಗಳಿಂದ ಹಿಂದೆ ಸಮೃದ್ಧವಾಗಿತ್ತೆಂದು ಸಮಕಾಲೀನ ಕವಿಗಳು ದಾಖಲಿಸಿದ್ದಾರೆ. ಇದರಿಂದ ಇಲ್ಲಿ ಸಮೃದ್ಧ ಕೃಷಿ ಇದ್ದು, ಅದರಿಂದ ರಾಜ್ಯದ ಬೊಕ್ಕಸಕ್ಕೆ ಸಾಕಷ್ಟು ಆದಾಯವೂ ಇದ್ದಿರುವ ಸಾಧ್ಯತೆಯನ್ನು ನಾವು ಅಲ್ಲಗೆಳೆಯುವಂತಿಲ್ಲ. ಇಲ್ಲಿನ ಚಿಕ್ಕಂಗಳ, ಹಿರಿಯಂಗಳ ಎಂಬುವುಗಳಿಂದ ಲಕ್ಷ ತೆರಿಗೆ ಸಲ್ಲುತ್ತಿತ್ತೆಂದು ಹೇಳಲಾಗಿದೆ. ಆ ಗ್ರಾಮಗಳು ಅಂಥ ಬೃಹತ್ ಮೊತ್ತದ ಆದಾಯವನ್ನು ನೀಡುವಂತಾಗಿದ್ದುದಕ್ಕೆ ಅದರ ಕೃಷಿಯ ಬೃಹತ್ ಪ್ರಮಾಣವೇ ಮತ್ತು ಅವುಗಳ ನೆರೆಯ ಕೆರೆಗಳೇ ಕಾರಣವಾಗಿರುವ ಸಾಧ್ಯತೆ ಇದೆ.

### ೧೫. ಮೈಲನಹಳ್ಳಿ ಕೆರೆ

ಚಳ್ಳಕೆರೆ ತಾಲ್ಲೂಕು ಕಸಬಾ ಹೋಬಳಿ ವ್ಯಾಪ್ತಿಯಲ್ಲಿ ಬರುವ ಮೈಲನಹಳ್ಳಿ ಗ್ರಾಮವು (ರೇಖಾಂಶ ೭೬°೬೯'೨೮" ಅಕ್ಷಾಂಶ ೧೪°೪೯'೭೮") ಅದೇ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿರುತ್ತದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೧೨ ಕಿ.ಮೀ. ದೂರದಲ್ಲಿದೆ. ಐತಿಹಾಸಿಕ ಕೆರೆಯೊಂದಿದ್ದು ಅದನ್ನು ಮೈಲನಹಳ್ಳಿ ಕೆರೆ ಎನ್ನಲಾಗುತ್ತದೆ. ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿತವಾದ ಕೆರೆ ಎಂದು ಅಲ್ಲಿನ ಪ್ರಾಚ್ಯಾವಶೇಷಗಳು ಪುಷ್ಟೀಕರಿಸುತ್ತವೆ. ಅಲ್ಲಿನ ಶಾಸನ ಇದನ್ನು **ತೆಂಕನ ಕೆರೆ** ಎಂದು ಕರೆದಿದ್ದು, ಪ್ರಾಯಶಃ ಇದನ್ನು ಕಲಿಯಮ್ಮ ಗವುಣ್ಣನ ಮೊಮ್ಮಗ ಪುಟ್ಟಯ್ಯ ಎಂಬುವನು ನಿರ್ಮಿಸಿದ ಎನ್ನುವುದನ್ನು ಅಲ್ಲಿನ ಅರ್ಧಂಬರ್ಧ ಮಸುಕಾದ ಶಾಸನವೊಂದು ಉಲ್ಲೇಖಿಸಿದೆ.[೨೬] ಈ ಕೆರೆಯನ್ನು ಕಾಲಾಂತರದಲ್ಲಿ ಅಂದರೆ ೧೯೩೭ರಲ್ಲಿ ಬ್ರಿಟಿಷ್ ಸರ್ಕಾರ ಮತ್ತು ೨೦೦೧(ಕ್ರಿ.ಶ.೨೦ನೇ ಶತಮಾನ)ರಲ್ಲಿ ಕರ್ನಾಟಕ ಸರ್ಕಾರ ಇದರ ದುರಸ್ತಿ ಮಾಡಿವೆ. ಇಲ್ಲಿ

ವರ್ಷಕ್ಕೊಮ್ಮೆ ಗೌರಸಂದ್ರ ಮಾರಮ್ಮನ ಜಾತ್ರೆಯನ್ನು ಗ್ರಾಮಸ್ಥರೆಲ್ಲರೂ ಸೇರಿ ಆಚರಿಸುತ್ತಾರೆ. ಹೆಚ್ಚಿನ ಸಂಖ್ಯೆಯಲ್ಲಿ ನಾಯಕ ಸಮುದಾಯ ಇದ್ದು, ಉಳಿದಂತೆ ಎಸ್.ಸಿ ಹಾಗೂ ಇತರೆ ಜನಾಂಗದವರು ಇರುತ್ತಾರೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ವಾಯುವ್ಯ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೪೧೨.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೮.೦೦ ಮೀಟರ್ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೧೩.೬೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೩.೯೨೬ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೨೫.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೦೯೧.೬೯ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೨.೨೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ(ಎಂ.ಸಿ.ಎಂ.) ೨.೨೪೦ ಮತ್ತು ಕೆರೆಯ ಹಾಲಿ ಇರುವ ಸಾಮರ್ಥ್ಯ (ಎಂ.ಸಿ.ಎಂ). ೨.೨೫೦ ಇದೆ. ಇದರ ಒಟ್ಟು ವಿನ್ಯಾಸಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೯೩.೦೬ ಹೇಕ್ಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೩೬೨.೫೫ ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೫೩೧.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೫.೫೦ ಮೀಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿ ಇದ್ದು, ಅದು ೬೯.೯೩೦ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೬೨.೦೦ ಇದ್ದು, ಅದು ಇರುವ ಸ್ಥಳ (ಚೈನೇಜ್) ೦ ಮೀ ಹಾಗೂ ೬೩.೯೩ ಮೀಟರ್ ಇದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಎರಡು ತೂಬುಗಳಿವೆ. ಅವುಗಳಲ್ಲಿ ಬಲದಂಡೆಯ ತೂಬು ೧೫೯.೦೦ ಮೀ. ಇದ್ದು, ಇರುವ ಸ್ಥಳ (ಚೈನೇಜ್) ೪೬೮.೭೧೯.ಮೀ ಎತ್ತರ ಇದೆ. ಅಲ್ಲದೇ ಇದರ ಎಡದಂಡೆ ತೂಬು ೦೯೮ ಮೀ, ಇದ್ದು, ಇರುವ ಸ್ಥಳ (ಚೈನೇಜ್) ೪೪೮.೫೧೨ ಮಿ. ಮೀ. ಮಟ್ಟವನ್ನು ಹೊಂದಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ೩೮೫.೦೦ ಮೀ, ಎಡದಂಡೆ ಕಾಲುವೆ ೧೨೦ ಮೀ. ಉದ್ದಗಳನ್ನು ಹೊಂದಿವೆ. ಇವುಗಳಿಗೆ ಕ್ರಮವಾಗಿ ೧೬೦೦.೦೦ ಮೀ, ೫೦೦.೦೦ ಮೀಟರ್ ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ.

ಮಳೆ ಆಶ್ರಿತವಾಗಿರುವ ಈ ಕೆರೆಗೆ ಬಹುತೇಕ ಬಯಲು ಸೀಮೆಯ ಪ್ರದೇಶದಿಂದ ಬಂದಂತಹ ನೀರು ಸಂಗ್ರಹಣೆಯಾಗುತ್ತದೆ. ಇಲ್ಲಿ ಮೀನು ಸಾಕಾಣಿಕೆ, ನೀರಾವರಿ ವ್ಯವಸ್ಥೆ ಹಾಗೂ ಪಶುಪಾಲನೆಗೆ

ಅನುಕೂಲವಾಗಿದೆ. ಈ ಕೆರೆ ತುಂಬಿದರೆ ರೈತರು ಭತ್ತ, ರಾಗಿ, ಹತ್ತಿ, ರೇಷ್ಮೆ, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಇಲ್ಲಿ ಹೆಚ್ಚಾದ ನೀರು ಗೌರಸಮುದ್ರ ಕೆರೆಗೆ ಹೋಗಿ ತಲುಪುತ್ತದೆ.

**೧೬. ಹೊನ್ನೆಕೆರೆ**

ಹೊನ್ನೆಕೆರೆ ಗ್ರಾಮವು ಹೊಸದುರ್ಗ ತಾಲ್ಲೂಕಿನಲ್ಲಿದೆ. ಇದು ತಾಲೂಕು ಕೇಂದ್ರದಿಂದ ೭ ಕಿ.ಮೀ. ದೂರದಲ್ಲಿದ್ದು, ಹೊಸದುರ್ಗ-ತರಿಕೆರೆ ಮಾರ್ಗದ ಅರಳಿಹಳ್ಳಿ, ಗೊಲ್ಲರಹಟ್ಟಿಯ ಹತ್ತಿರದಲ್ಲಿದೆ. ಚಾರಿತ್ರಿಕ ನೆಲೆಯಾದ ಇಲ್ಲಿ ಮಧ್ಯ ಕಾಲದಲ್ಲಿ ನಿರ್ಮಿಸಿದ (ಕ್ರಿ.ಶ.೧೧-೧೨ನೇ ಶತಮಾನ) ಕೆರೆ ಇದೆ. ಹಿಂದೆ ನೀರ‍್ಗುಂದ ನಾಡು ಪ್ರಾಬಲ್ಯ ಪಡೆದಾಗ ಇದು ಅದರ ಅಧೀನವಾಗಿತ್ತು. ಹಿಂದೆ ಇಲ್ಲಿದ್ದ ವ್ಯಾಪಾರಿಗಳಿಗೆ "ಮಹಾ ವಡ್ಡ ವ್ಯವಹಾರಿಗಳು" ಎನ್ನಲಾಗುತ್ತಿತ್ತು. ಪ್ರಾಯಶಃ ಇಲ್ಲಿನ ಕೆರೆಯಿಂದಾಗಿ ಈ ಊರಿಗೆ ಹೊನ್ನೆಕೆರೆ ಎಂದು ಹೆಸರು ಬಂದಿರುವ ಸಾಧ್ಯತೆ ಇದೆ.[೨] ಈ ಗ್ರಾಮದಲ್ಲಿ ಕಲ್ಲೇಶ್ವರ, ಮಲ್ಲಿನಾಥ, ಗೌರವೇಶ್ವರ ಮೊದಲಾದ ದೇವಾಲಯಗಳಿವೆ. ಅಲ್ಲದೇ ಇಲ್ಲಿ ಕೆಲ ಶಾಸನಗಳು ಹಾಗೂ ಇತರೆ ಪ್ರಾಚ್ಯಾವಶೇಷಗಳಿವೆ.

ಇಲ್ಲಿನ ಕೆರೆಯನ್ನು ಕರ್ನಾಟಕ ಸರ್ಕಾರದ ಅನುದಾನದಲ್ಲಿ ಈ ಕೆರೆಯನ್ನು ಸ್ಥಳೀಯ ಗ್ರಾಮ ಪಂಚಾಯತಿ ಇತ್ತೀಚಿಗೆ ದುರಸ್ತಿ ಮಾಡಿದ್ದಾರೆ. ಆದರೆ ಕೆರೆಯಲ್ಲಿ ಗಿಡಮರ ಬೆಳದು, ಕೆರೆ ಅಲ್ಲಲ್ಲಿ ಶಿಥಿಲವಾಗಿದ್ದು, ಸಾಕಷ್ಟು ದುಸ್ಥಿತಿಯಲ್ಲಿದೆ. ಕೆರೆಯ ಒಳಭಾಗಕ್ಕೆ ಕಗ್ಗಲ್ಲು ಮತ್ತು ಗ್ರ್ಯಾನೈಟ್ ಕಲ್ಲನ್ನು ಹಾಗೂ ಹೊರಭಾಗವನ್ನು ಗಟ್ಟಿ ಕಲಸು ಮಣ್ಣನ್ನು(ಗ್ರಾವೆಲ್) ಬಳಸಿ ಇಲ್ಲಿನ ಏರಿಯನ್ನು ನಿರ್ಮಿಸಲಾಗಿದೆ. ಕೆರೆ ಕೋಡಿಯು ಅಂಕು-ಡೊಂಕಿನ ಆಕಾರದಲ್ಲಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೪೭೮.೦೦ ಮಿ. ಮಿ. ಮಳೆಯಾಗುತ್ತದೆ. ಚೌಕಕಾರದ ತೂಬನ್ನು ಇಲ್ಲಿ ಮಾಡಲಾಗಿದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಇಲ್ಲಿ ಎರಡು ಕಾಲುವೆ ಮತ್ತು ತೂಬುಗಳಿವೆ. ಎಡದಂಡೆ ಕಾಲುವೆ ಉದ್ದ ೫.೦೦ ಕಿ.ಮೀ. ಇದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ತೆಂಗು, ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಉತ್ತಮ ಮಳೆ ಬಂದು ಕೆರೆ ಭರ್ತಿಯಾದಲ್ಲಿ ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೧೭. ನೀರಗುಂದ ಕೆರೆ**

ಹೊಸದುರ್ಗ ತಾಲ್ಲೂಕು ಕಸಬಾ ಹೋಬಳಿ ವ್ಯಾಪ್ತಿಯಲ್ಲಿ ಬರುವ ನೀರಗುಂದ ಗ್ರಾಮವು (ರೇಖಾಂಶ. ೭೬°೪೧'೨೮ ಅಕ್ಷಾಂಶ ೧೪°೫೬'೨೭) ಅದೇ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿರುತ್ತದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೧೯ ಕಿ.ಮೀ. ದೂರದಲ್ಲಿದೆ. ಇಲ್ಲಿ ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ನೀರಗುಂದ ಕೆರೆ ಎನ್ನಲಾಗುತ್ತದೆ. ಕ್ರಿ ಪೂ ೧೫೦ ರಲ್ಲಿ ಇಲ್ಲಿ ನೀಲಶೇಖರ ರಾಜನು 'ನೀಲವತಿ' ಪಟ್ಟಣ ಕಟ್ಟಿ ಆಳಿದನೆಂದು ಪ್ರತೀತಿ ಇದೆ. ಗಂಗರ ಕಾಲದಲ್ಲಿ ಪ್ರಸಿದ್ಧ ಜೈನ ಕೇಂದ್ರ(ಕ್ರಿ ಪೂ ೧೫೦೦)ವಾಗಿದ್ದ ಇದು ಆಗ್ರಹಾರವಾಗಿ, ೩೦೦ ಹಳ್ಳಿಗಳ ಆಡಳಿತದ ನೀದ್ಗುಂದ ನಾಡು ಮತ್ತು 'ವಿಷಯ'ವಾಗಿತ್ತು. ಇಲ್ಲಿ ಸಿದ್ದೇಶ್ವರ, ಚನ್ನಕೇಶವ, ಗಣೇಶ ಮೊದಲಾದ ಪ್ರಾಚೀನ ಗುಡಿಗಳಿದ್ದು,

ಹಲವು ವೀರಗಲ್ಲು ಮೊದಲಾದ ಪ್ರಾಚ್ಯಾವಶೇಷಗಳಿವೆ. ಇದು ಹೊಯ್ಸಳರ ಕಾಲದಲ್ಲಿ ನಿರ್ಮಿತವಾದ ಕೆರೆ ಎಂದು ಅಲ್ಲಿನ ಪ್ರಾಚ್ಯಾವಶೇಷಗಳು ಪುಷ್ಟೀಕರಿಸುತ್ತವೆ. ಇಲ್ಲಿನ ವರ್ತಕರ ಸಂಘ ಅಂದು ಖ್ಯಾತವಾಗಿತ್ತು. ಈ ಸಂಘದ ಮುಖ್ಯಸ್ಥ ನೀರಗುಂದದ ನಲ್ಲೆಸೆಟ್ಟಿ ಎಂಬುವವನು ಇಲ್ಲಿಯ ಕೆರೆಯನ್ನು ಜೀರ್ಣೋದ್ಧಾರ ಮಾಡಿದ. ಹಲವಾರು ಕೆರೆ ದುರಸ್ತಿ ಮಾಡಿದ್ದ ಆತನಿಗೆ ಅಂದು 'ಒಡಗೆರೆಮಲ್ಲ' ಎಂಬ ಬಿರುದಿತ್ತೆಂಬುದನ್ನು ಹೊಯ್ಸಳ ಚಕ್ರವರ್ತಿ ಸೋಮೇಶ್ವರನ (ಕ್ರಿ.ಶ.೧೨೩೩-೬೭)ರ ಕಾಲದ ಇಲ್ಲಿಯ ಶಾಸನವೊಂದು ತಿಳಿಸುತ್ತದೆ. ಈ ಶಾಸನೋಕ್ತಿಯಿಂದ ಕೆರೆಗಳ ಜೀರ್ಣೋದ್ಧಾರ ಕಾರ್ಯದಲ್ಲಿ ಹಿಂದಿನ ಪ್ರಭುಗಳು, ಪ್ರಾಂತ ಪಾಲಕರೂ ಅಲ್ಲದೆ ಪ್ರಜಾ ಪ್ರಮುಖರು, ಪ್ರಜೆಗಳೂ ಸಹ ಹೇಗೆ ಆಸಕ್ತಿ ವಹಿಸುತ್ತಿದ್ದರು ಎಂಬುದನ್ನು ತಿಳಿಯಬಹುದಾಗಿದೆ.[೫೯] ಇತ್ತೀಚೆಗೆ ಮಳೆಯ ಪ್ರಮಾಣ ಕಡಿಮೆಯಾಗಿದ್ದು, ಒಂದು ಸಮಸ್ಯೆಯಾದರೆ ಮತ್ತೊಂದೆಡೆ ಈ ಕೆರೆಯು ಶಿಥಿಲಾವಸ್ಥೆಯಲ್ಲಿರುವ ಕಾರಣ ಬಂದ ಅಲ್ಪಸ್ವಲ್ಪ ನೀರು ಸಂಗ್ರಹವಾಗದೆ ಪೋಲಾಗುತ್ತಿದೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ಉತ್ತರ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೩೭೮.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೬.೦೦ ಮೀಟರ್ ಹಾಗೂ ಗರಿಷ್ಠ ನೀರಿನ ಪ್ರಮಾಣ ೩೯೬.೬೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೧.೯೨೭ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೩೫.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೧.೯೧.೬೯ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೮.೨೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ(ಎಂ.ಸಿ.ಎಂ.) ೩.೨೪೦ ಮತ್ತು ಕೆರೆಯ ಹಾಲಿ ಇರುವ ಸಾಮರ್ಥ್ಯ (ಎಂ.ಸಿ.ಎಂ). ೨.೨೫೦ ಇದೆ. ಇದರ ಒಟ್ಟು ವಿನ್ಯಾಸಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೫೬೧.೦೬ ಹೇಕ್ಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಪ್ರತಿ ವರ್ಷ ೬೬೨.೫೫ ಕಿ.ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ(ಕೋಡಿಯ ಉದ್ದ ಸೇರಿ) ೭೩೧.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೬.೩೮ ಮೀಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿಗಳಿದ್ದು ಮತ್ತು ಎಸ್.ಎಸ್.ಎಂ. ಮಾದರಿಯ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳು ಜೀರ್ಣಾವಸ್ಥೆಯಲ್ಲಿವೆ.

ಮಳೆ ಆಶ್ರಿತವಾಗಿರುವ ಈ ಕೆರೆಗೆ ಬಹುತೇಕ ಬಯಲು ಸೀಮೆಯ ಪ್ರದೇಶದಿಂದ ಬಂದಂತಹ ನೀರು ಸಂಗ್ರಹಣೆಯಾಗುತ್ತದೆ. ಇಲ್ಲಿ ಮೀನು ಸಾಕಾಣಿಕೆ, ನೀರಾವರಿ ವ್ಯವಸ್ಥೆ ಹಾಗೂ ಪಶುಪಾಲನೆಗೆ ಅನುಕೂಲವಾಗಿದೆ. ಈ ಕೆರೆ ತುಂಬಿದರೆ ರೈತರು ತೆಂಗು, ಅಡಿಕೆ, ಭತ್ತ, ರಾಗಿ, ಕಡಲೆ, ಕೊತ್ತಂಬರಿ

ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಇಲ್ಲಿ ಹೆಚ್ಚಾದ ನೀರು ಮುಂದಿನ ಕೆರೆಗೆ ಹೋಗಿ ತಲುಪುವಂತೆ ಮಾಡಿರುವುದು ಆ ಕೆರೆ ನಿರ್ಮಾತೃಗಳಿಗಿದ್ದ ಜಾಣ್ಮೆ ಅಂದಿನ ಕೆರೆಗಳ ಸರಪಳಿ ವ್ಯವಸ್ಥೆಯನ್ನು ಸೂಚಿಸುತ್ತದೆ.

**೧೮. ಬರಗೆರೆ**

ಚಿತ್ರದುರ್ಗ ನಗರಕ್ಕೆ ಹೊಂದಿಕೊಂಡಂತಿರುವ ಚೋಳುಗುಡ್ಡದ ಕೆಳಗಡೆ ಇರುವ ಕೆರೆಯೇ ಈ 'ಬರಗೆರೆ'. ಸ್ಥಳೀಯರ ಅತಿಕ್ರಮಣದಿಂದಾಗಿ ಈಗ ಅದು ಕೆರೆಯಾಗಿ ಉಳಿದಿಲ್ಲ. ಸಂಪೂರ್ಣ ಭಗ್ನ ಸ್ಥಿತಿಯಲ್ಲಿರುವ ಈ ಕೆರೆಯ ಕೆಲ ಅವಶೇಷಗಳು ಮಾತ್ರ ಉಳಿದಿದ್ದು, ಅವು ಸಹ ಸಂಪೂರ್ಣ ಹಾಳಾಗುವ ಸ್ಥಿತಿಯಲ್ಲಿವೆ. ಕ್ರಿ.ಶ.೧೨೮೬ರ ಒಂದು ಶಾಸನದಿಂದ ಈ ಪ್ರಾಚೀನ ಕೆರೆಯ ಹೆಸರು ಮೊದಲಿಗೆ 'ಕುರುಬರ ಕಾಳೆಯನ ಕೆರೆ' ಎಂದಿದ್ದು, ಆಮೇಲೆ 'ಪೆರುಮಾಳೆ ಸಮುದ್ರ' ಎಂದಾಯಿತೆಂದು ತಿಳಿದುಬರುತ್ತದೆ.[೨೯] ಹೊಯ್ಸಳ ಚಕ್ರವರ್ತಿ ೩ನೇ ವೀರನರಸಿಂಹದೇವನ ಮಹಾ ಪ್ರಧಾನವಾಗಿದ್ದ ಪೆರುಮಾಳೆದೇವ ದುಣ್ಣಾಯಕನು ಚಿತ್ರದುರ್ಗವನ್ನು ಆಳುತ್ತಿದ್ದಾಗ ಕಾಮಗವುಡನ ಮಗನಾದ ಬೆನಕಗವುಡ ಎಂಬುವನ ವಶದಲ್ಲಿದ್ದ 'ಕುರುಬರ ಕಾಳೆಯನ ಕೆರೆ'ಯನ್ನು ಆ ಕಾಲಕ್ಕೆ ಸಲ್ಲುವ ಕ್ರಯದ ಹಣವನ್ನು ಕೊಟ್ಟು ಕೊಂಡುಕೊಂಡು, ಅದನ್ನು ಹೊಸದಾಗಿ ಕಟ್ಟಿಸಿ, ಅಂದರೆ ಪ್ರಾಯಶಃ ಅದರ ಒಡ್ಡಿನ ಉದ್ದ ಎತ್ತರಗಳನ್ನು ಹೆಚ್ಚಿಸಿ, ಅದಕ್ಕೆ 'ಪೆರುಮಾಳೆ ಸಮುದ್ರ' ಎಂದು ಹೆಸರಿಟ್ಟನು.[೩೦] ಆ ಕೆರೆಯ ಕೆಳಗಿನ ಎಲ್ಲ ಗದ್ದೆ ಭೂಮಿಯನ್ನು ೨೪ ಭಾಗ ಮಾಡಿ, ಅದರಲ್ಲಿ ಒಂದಷ್ಟು ಭಾಗವನ್ನು ಇಲ್ಲಿಯ ಹಿಂಡಿಬೇಶ್ವರ ಚೋಳೇಶ್ವರ ದೇವರ ಸೇವೆಗೆ ಮತ್ತು ಕೆಲವು ಉತ್ಸವ ಪರ್ವ ಆಚರಣೆಗಳಿಗಾಗಿಯೂ, ಇನ್ನಷ್ಟು ಭಾಗವನ್ನು ಅವನ ಆಪ್ತ ಅಧಿಕಾರಿ ವರ್ಗದವರಿಗೂ, ಉಳಿದ ಬಹುಪಾಲು ಭೂಮಿಯನ್ನು ತಾನು ಮೇಲುದುರ್ಗದಲ್ಲಿ ಸ್ಥಾಪಿಸಿದ ದೇವಾಲಯಕ್ಕೆ ದತ್ತಿ ನೀಡಿದ.

'ಪೆರುಮಾಳೆ ಸಮುದ್ರ'ವು ಅನೇಕ ವರ್ಷಗಳ ಕಾಲ ಬಹು ವಿಸ್ತಾರವಾಗಿ ಗದ್ದೆ ಭೂಮಿಗೆ ನೀರುಣಿಸುತ್ತಿದ್ದ ಈ ಪರಿಸರದ ಬಹುದೊಡ್ಡ ಕೆರೆಯಾಗಿತ್ತು. ಆಮೇಲೆ ಬಹುಶಃ ಚಿತ್ರದುರ್ಗ ಪಾಳೆಯಗಾರರ ಕಾಲದ ಹೊತ್ತಿಗೆ, ಇದಕ್ಕೆ 'ಬರಗೆರೆ' ಎಂಬ ಹೆಸರು ಬಂದಿದ್ದು. ಇಂದಿಗೂ ಅದೇ ಹೆಸರೇ ಇದೆ. ಇತ್ತೀಚೆಗೆ ಇದರಲ್ಲಿ ನೀರಿಲ್ಲದೆ, ಬರಗೆರೆ ಎಂಬುದು 'ಬರಗೆರೆ' ಆಗಿ, ಅದರ ಒಳ ಪ್ರದೇಶ ಮತ್ತು ಕೆಳ ಪ್ರದೇಶಗಳೆರಡೂ ಹೊಸ ಬಡಾವಣೆಗಳು ತಲೆಯೆತ್ತಲು ಎಡೆಮಾಡಿ ಕೊಟ್ಟಿರುವುದನ್ನು ಕಾಣಬಹುದು. ಒಡ್ಡು ಕೂಡ ಮಧ್ಯೆ ಮಧ್ಯೆ ಕತ್ತರಿಸಲ್ಪಟ್ಟಿದ್ದರೂ, ಇನ್ನೂ ಮುಕ್ಕಾಲು ಪಾಲು ಹಾಗೇ ಉಳಿದಿದ್ದು, ಇಲ್ಲಿ ಗತಕಾಲದ ದೊಡ್ಡ ಕೆರೆಯೊಂದಿತ್ತು ಎಂಬುದನ್ನು ಸಾರುವ ಸಾಕ್ಷಿಯಾಗಿ ನಿಂತಿದೆ. ಈ ಕೆರೆಗೆ ಚಂದ್ರವಳ್ಳಿ ಕೆರೆಯಿಂದ ಹೆಚ್ಚಾದ ನೀರು ದಕ್ಷಿಣಕ್ಕೆ ಹರಿದು, ಚೋಳಗುಡ್ಡದ ಬದಿಯ ಕಣಿವೆಯ ನೀರು ಈ ಕೆರೆಯನ್ನು ತುಂಬುತ್ತಿದ್ದಿತೆಂದು ಕಾಣುತ್ತದೆ. ಆದರೆ ಈಗ ಆ ಮೂಲ ಸ್ರೋತಗಳು ಬತ್ತಿ ಕಣ್ಮರೆಯಾಗಿವೆ.

**೧೯. ಕಾಮನಕೆರೆ**

ಕಾಮನಕೆರೆ ಗ್ರಾಮವು ಹೊಸದುರ್ಗ ತಾಲ್ಲೂಕಿನಲ್ಲಿದೆ. ಇದು ಹೋಬಳಿ ಕೇಂದ್ರ ಮತ್ತು ಗ್ರಾಮ ಪಂಚಾಯತಿಯ ಕೇಂದ್ರವಾಗಿದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೧೫ ಕಿ.ಮೀ ದೂರದಲ್ಲಿದೆ. ಈ ಊರಿನಲ್ಲಿ ಪ್ರಾಚೀನ ಕಾಲದಲ್ಲಿ ಅಂದರೆ ಹೊಯ್ಸಳರ ಕಾಲದಲ್ಲಿ ಕ್ರಿ.ಶ.೧೩೦೩ರಲ್ಲಿ

೩ನೇ ಬಲ್ಲಾಳನಿಂದ ನಿರ್ಮಿತವಾದ (ಕ್ರಿ.ಶ.೧೩ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಜಾನಕಲ್ಲು ಕಾಮನ ಕೆರೆ ಎನ್ನಲಾಗುತ್ತಿದೆ. ಇದನ್ನು ಹೊಯ್ಸಳರು, ಚಿತ್ರದುರ್ಗದ ಪಾಳೆಯಗಾರನಾದ ಕಸ್ತೂರಿ ರಂಗಪ್ಪನಾಯ್ಕ ಮತ್ತು ೨೦೦೬-೭ರಲ್ಲಿ ಸರ್ಕಾರ ಇದನ್ನು ಪುನಃ ಜೀರ್ಣೋದ್ಧಾರ ಮಾಡಿಸಿದ್ದಾರೆ. ಇದೇ ಸಮಾನ ಲಕ್ಷಣ ಇರುವ ಮತ್ತೊಂದು ಕೆರೆ ಇದ್ದು, ಅದನ್ನು ದೊಡ್ಡಕೆರೆ ಎನ್ನಲಾಗುತ್ತದೆ. ಇಲ್ಲಿ ಅನೇಕ ಶಾಸನಗಳು, ವೀರಗಲ್ಲುಗಳು ಇವೆ. ಇದು ಭಿಚ್ಚುಗತ್ತಿ ಭರಮಣ್ಣನಾಯಕನ ಆಡಳಿತದ ಕೇಂದ್ರವಾಗಿತ್ತು.[೫] ಈ ಗ್ರಾಮದಲ್ಲಿ ಶಂಕರಲಿಂಗಸ್ವಾಮಿ ಮತ್ತು ವೆಂಕಟೇಶ್ವರ, ಆಂಜನೇಯ ಸ್ವಾಮಿ, ಓಬಳದೇವರು, ಕೆಂಚಮ್ಮ ದೇವಾಲಯಗಳು ಮತ್ತು ಪಾಳೆಯಗಾರರ ಕಾಲದ ಕೋಟೆ ಕೊತ್ತಲ ಮತ್ತಿತರೆ ಪ್ರಾಚ್ಯಾವಶೇಷಗಳಿವೆ. ಇಲ್ಲಿ ಮೊದಲು ಜೇನು ಹೆಚ್ಚಾಗಿ ದೊರೆಯುತ್ತಿದ್ದಿತು. ಇಲ್ಲಿ ಜೈನ ಸಂನ್ಯಾಸಿಗಳು ಮೊದಲು ತಪೋನಿರತರಾಗಿರುತ್ತಿದ್ದರಂತೆ. ಹಾಗಾಗಿ ಇದನ್ನು ಜೇನುಕಲ್ಲು ಎಂದು ಕರೆಯುತ್ತಿದ್ದರು.

ಇಲ್ಲಿನ ಕೆರೆಯು ಗ್ರಾಮದ ಪಶ್ಚಿಮ ಭಾಗದಲ್ಲಿದ್ದು, ಕೃಷ್ಣ ನದಿ ಪಾತ್ರದ ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೧೯ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೯.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೩೯.೦೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೧೯೭.೪೦ ಹೇಕ್ಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೫೫೫.೬೩ ಮಿ.ಮಿ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿ ಮತ್ತು ಎರಡು ಕಾಲುವೆಗಳನ್ನು ಹೊಂದಿದೆ.

ಈ ಕೆರೆಯು ಅತ್ಯಂತ ವಿಶಾಲವಾಗಿದ್ದು, ಕಪ್ಪು ಮಿಶ್ರಿತವಾದ ಫಲವತ್ತತೆಯ ಮಣ್ಣನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ತೂಬುಗಳನ್ನು ಕಾಣಬಹುದು. ನೀರಾವರಿ ವ್ಯವಸ್ಥೆಗೆ ಉತ್ತಮ ಕಾಲುವೆ ವ್ಯವಸ್ಥೆ ಇದೆ. ಎಡದಂಡೆ ಕಾಲುವೆ ಉದ್ದ ೨.೫೦೦ ಕೀ.ಮೀ. ಇದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿಗಳಿವೆ. ಇದರ ಬಲ ಕೋಡಿ ೩೮.೫೧ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೦೦.೦೨ ಇದ್ದು, ಅದು ಇರುವ ಸ್ಥಳ (ಚೈನೇಜ್) ೫೯.೨೩ ಹಾಗೂ ೪೯.೭೭ ಮಿ.ಮೀ ಇದೆ. ಅದೇ ರೀತಿ ಇದರ ಎಡ ಕೋಡಿ ೩೯.೫೧ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೦೦.೦೧೯ ಇದ್ದು, ಅದು ಇರುವ ಸ್ಥಳ (ಚೈನೇಜ್) ೬೪.೨೦ ಹಾಗೂ ೨೨೩೭.೦೧೦ ಮೀಟರ್ ಇದೆ. ಇಲ್ಲಿ ಕೊಂತ ಮತ್ತು ಸರಳು ಮಾದರಿಯ ಎರಡು ತೂಬುಗಳಿವೆ. ಅವುಗಳಲ್ಲಿ ಎಡ ದಂಡೆಯ ತೂಬು ೪೯೭.೧೭೦ ಮೀ ಇದ್ದು, ಇರುವ ಸ್ಥಳ (ಚೈನೇಜ್) ೧೭೫೨.೭೦೦ ಮೀ. ಎತ್ತರ ಇದೆ. ಅಲ್ಲದೇ ಇದರ ಬಲ ದಂಡೆ ತೂಬು ೪೯೬.೪೧೧ ಮೀ. ಇದ್ದು, ಇರುವ ಸ್ಥಳ (ಚೈನೇಜ್) ೧೪೫.೪೬೦. ಮೀ, ಮಟ್ಟವನ್ನು ಹೊಂದಿದೆ. ಇವುಗಳಿಗೆ ಕ್ರಮವಾಗಿ ೩೦೦ ಮೀಟರ್ ಮತ್ತು ೬೦ ಮೀಟರ್ ಕಲ್ಲು ಕಟ್ಟಡದ ಲೈನಿಂಗ್ ಅಳವಡಿಸಲಾಗಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಬಲ ಹಾಗೂ ಎಡ ದಂಡೆಯ ಮೇಲೆ ಎರಡು

ಕಾಲುವೆಗಳನ್ನು ಅಳವಡಿಸಲಾಗಿದ್ದು, ಇವುಗಳಿಗೆ ಕ್ರಮವಾಗಿ ೭೬೫.೭೨, ೮೨೭.೬೫. ಮೀಟರ್ ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ. ಕೆರೆಯ ಹಿಂಬದಿಯಲ್ಲಿ ಅನೇಕ ವೀರಗಲ್ಲುಗಳನ್ನು ಕಾಣಬಹುದಾಗಿದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ತೆಂಗು, ಅಡಿಕೆ, ಜೋಳ, ಸೂರ್ಯಕಾಂತಿ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೨೦. ಹೆಗ್ಗರೆ ಕೆರೆ**

ಹೆಗ್ಗರೆ ಗ್ರಾಮವು ಹೊಸದುರ್ಗ ತಾಲ್ಲೂಕಿನಲ್ಲಿದೆ. ಇದು ತಾಲೂಕು ಕೇಂದ್ರದಿಂದ ೩೬ ಕಿ.ಮೀ. ದೂರದಲ್ಲಿದ್ದು, ಹೊಸದುರ್ಗ–ಹುಳಿಯಾರು ಮಾರ್ಗದ ಗವಿರಂಗಾಪುರದ ಹತ್ತಿರದಲ್ಲಿದೆ. ಈ ತಾಲೂಕಿನ ಗಡಿ ಗ್ರಾಮವಾದ ಈ ಚಾರಿತ್ರಿಕ ನೆಲೆಯಲ್ಲಿ ಪ್ರಾಚೀನ ಕಾಲದಲ್ಲಿ ನಿರ್ಮಿಸಿದ(ಕ್ರಿ.ಶ.೮–೯ನೇ ಶತಮಾನ) ಕೆರೆ ಇದೆ. ಚಾಲುಕ್ಯ–ಹೊಯ್ಸಳರ ಕಾಲಾವಧಿಯಲ್ಲಿ ಇದು ಪ್ರಸಿದ್ಧ ಜೈನ ನೆಲೆಯಾಗಿತ್ತು. ಇಲ್ಲಿನ ಕೆಂಪಮ್ಮನಕೆರೆ, ಗೌಡನಕೆರೆ, ಪಾಪರಾಜನ ಕೆರೆಗಳ ಪ್ರತೀಕವಾಗಿ ಇದನ್ನು ಹಿರಿದಾದ ಕೆರೆ ಎನ್ನುವ ಅರ್ಥದಲ್ಲಿ 'ಹೆಗ್ಗರೆ' ಎಂದು ಕರೆಯಲಾಯಿತಂತೆ. ಈ ಗ್ರಾಮದಲ್ಲಿ ಈಶ್ವರ, ತೀರ್ಥಂಕರ ಬಸದಿಗಳಿವೆ. ಅಲ್ಲದೇ ಇಲ್ಲಿ ಕೆಲ ಶಾಸನಗಳು ಹಾಗೂ ಇತರೆ ಪ್ರಾಚ್ಯಾವಶೇಷಗಳಿವೆ. ಕ್ರಿ.ಶ.೧೧೬೦ರಲ್ಲಿ ಗವಿದೇವನು ತನ್ನ ಪತ್ನಿ ಮಹಾದೇವಿಯ ಹೆಸರಿನಲ್ಲಿ ಮಹಾದೇವಿ ಬಸದಿಯನ್ನು ಕಟ್ಟಿಸಿದ. ಕ್ರಿ.ಶ.೧೫೪೯ರಲ್ಲಿ ಬೂದಿಹಾಳು ಸೀಮೆಗೆ ಸೇರಿದ ಈ ಬಸದಿಯನ್ನು ಜೀರ್ಣೋದ್ಧಾರ ಮಾಡಿ ಗೌಡನಕೆರೆ, ಮೋಟನಹಳ್ಳಿ ಕೆರೆಗಳ ಗದ್ದೆಗಳನ್ನು ದಾನ ಮಾಡಿದ ವಿವರ ಅಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ.[೨] ಇಲ್ಲಿ ಬೂದಿಹಾಳಿನ ಸಿರುಮನೃಪಾಲನ ಸಹೋದರ ರಾಜ್ಯವಾಳಿದ ಎಂದು ತಿಳಿದುಬರುತ್ತದೆ. ಊರಿನ ವಾಯುವ್ಯದಲ್ಲಿರುವ ಇಲ್ಲಿನ ಗೌಡನ ಕೆರೆಯನ್ನು ಕರ್ನಾಟಕ ಸರ್ಕಾರದ ಜಲಸಂಪನ್ಮೂಲ ಹಾಗೂ ಸಣ್ಣ ನೀರಾವರಿ ಇಲಾಖೆಯವರು ಜಿಲ್ಲಾ ಪಂಚಾಯತಿಯ ಅನುದಾನದಲ್ಲಿ ಈ ಕೆರೆಯನ್ನು "ಕೆರೆ ಸಂಜೀವಿನಿ" ಯೋಜನೆಯಡಿಯಲ್ಲಿ ಇತ್ತೀಚಿಗೆ ದುರಸ್ತಿ ಮಾಡಿಸಿದ್ದಾರೆ. ಪ್ರಸಕ್ತ ಕೆರೆಯಲ್ಲಿ ಹೂಳು ತುಂಬಿದೆ. ಇಲ್ಲಿ ಸರಿಯಾದ ನಿರ್ವಹಣೆ ಇಲ್ಲದ ಕಾರಣ ಸಾಕಷ್ಟು ಗಿಡಮರಗಳು ಬೆಳದಿವೆ. ಅಲ್ಲದೇ ಕೆರೆಯ ಏರಿಯಲ್ಲಿಯೂ ಗಿಡಮರ ಬೆಳೆದು ಅದು ಅಲ್ಲಲ್ಲಿ ಶಿಥಿಲವಾಗಿದೆ.

ಈ ಕೆರೆಯ ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು(ಗ್ರಾವೆಲ್) ಬಳಸಿ ಇಲ್ಲಿನ ಏರಿಯನ್ನು ನಿರ್ಮಿಸಲಾಗಿದೆ. ಕೆರೆ ಕೋಡಿಯು ಇಂಗ್ಲೀಷ್ ವರ್ಣಮಾಲೆಯ "ಯು" ಆಕಾರದಲ್ಲಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೪೮೮.೦೦ ಮಿ.ಮೀ. ಮಳೆಯಾಗುತ್ತದೆ. ಚೌಕಕಾರದ ತೂಬನ್ನು ಇಲ್ಲಿ ಮಾಡಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಇಲ್ಲಿ ಪ್ರಮುಖವಾಗಿ ಎರಡು ಕಾಲುವೆ ಮತ್ತು ತೂಬುಗಳಿವೆ. ಎಡದಂಡೆ ಕಾಲುವೆ ಉದ್ದ ೬.೦೦ ಕೀ.ಮೀ. ಇದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ತೆಂಗು, ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಉತ್ತಮ ಮಳೆ ಬಂದು ಕೆರೆ ಭರ್ತಿಯಾದಲ್ಲಿ ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

## ೨೧. ಧರ್ಮಪುರ ಕೆರೆ

ಹಿರಿಯೂರು ತಾಲ್ಲೂಕು ಕಸಬಾ ಹೋಬಳಿ ವ್ಯಾಪ್ತಿಯಲ್ಲಿ ಬರುವ ಧರ್ಮಪುರ ಗ್ರಾಮವು ಅದೇ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿರುತ್ತದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೨೨ ಕಿ.ಮೀ. ದೂರದಲ್ಲಿದೆ. ಇಲ್ಲಿ ಐತಿಹಾಸಿಕ ಪ್ರಾಚೀನ ಕೆರೆಯೊಂದಿದ್ದು, ಅದನ್ನು ಧರ್ಮಪುರದ ಕೆರೆ ಎನ್ನಲಾಗುತ್ತದೆ. ಇದು ನೊಳಂಬರ ಕಾಲದಲ್ಲಿ ೧೨ನೇ ಶತಮಾನದಲ್ಲಿ ನಿರ್ಮಿತವಾದ ಕೆರೆ ಎಂದು ಅಲ್ಲಿನ ಪ್ರಾಚ್ಯಾವಶೇಷಗಳು ಪುಷ್ಠೀಕರಿಸುತ್ತವೆ. ಇಲ್ಲಿ ಪಾಂಡವರ ಧರ್ಮರಾಯನ ನೆನಪಿನಲ್ಲಿ ಈ ಊರನ್ನು ಧರ್ಮಪುರ ಎಂದು ಕರೆಯಲಾಗುತ್ತದೆ. ಈ ಕೆರೆಯನ್ನು ಕಾಲಾಂತರದಲ್ಲಿ ಅಂದರೆ ೧೮೯೭ರಲ್ಲಿ ಬ್ರಿಟಿಷ್ ಸರ್ಕಾರ ಮತ್ತು ೧೯೯೮ (ಕ್ರಿ.ಶ.೨೦ನೇ ಶತಮಾನ)ರಲ್ಲಿ ಕರ್ನಾಟಕ ಸರ್ಕಾರ ಇದರ ದುರಸ್ತಿ ಮಾಡಿವೆ. ಇಲ್ಲಿನ ಕೆರೆಯ ಬಳಿ ಶ್ರವಣಪ್ಪ ಎನ್ನುವ ಮೂರ್ತಿಯೊಂದಿದೆ. ಇದು ಮಾದಿಗ ಸಮುದಾಯಕ್ಕೆ ಸಂಬಂಧಪಟ್ಟ ತಳವಾರನ ವಿಗ್ರಹವೆಂದು ಸ್ಥಳೀಯರು ಹೇಳುತ್ತಾರೆ. "ಒಮ್ಮೆ ಗಂಗೆ ನಾನು ಈ ಊರನ್ನು ಬಿಟ್ಟು ಹೋಗುವೆನು ಎಂದಾಗ ಊರ ಪ್ರಮುಖರ ಅಪ್ಪಣೆಯನ್ನು ಕೇಳಿ ಬರುವವರಿಗೆ ನೀನು ಹೋಗಬಾರದೆಂದು ಆಕೆಯಿಂದ ಅಪ್ಪಣೆ ಪಡೆದು ಊರ ಪ್ರಮುಖರ ಬಳಿ ಬಂದಾಗ ಅವರು ಆತನನ್ನು ಪುನಃ ಗಂಗೆ ಬಳಿಗೆ ಕಳುಹಿಸಿದರೆ ಗಂಗೆ ಊರು ಬಿಡುವಳೆಂದು, ಇದರಿಂದ ಊರಿನ ಗತಿ ಏನು ಎಂದು ಯೋಚಿಸಿ ಅವನನ್ನು ಅಲ್ಲಿಗೆ ಹೋಗಲು ಬಿಡದೇ ಅವನನ್ನು ಸಾಯಿಸುತ್ತಾರೆ. ಊರಿನ ಹಿತಕ್ಕಾಗಿ ಮಡಿದ ಈತನ ವಿಗ್ರಹವನ್ನು ಮಕ್ಕಳಾಗದ ಮಹಿಳೆಯರು ಹೋಗಿ ಅಪ್ಪಿಕೊಂಡರೆ ಮಕ್ಕಳಾಗುತ್ತವೆ ಎನ್ನುವ ನಂಬಿಕೆ ಸ್ಥಳೀಯರಲ್ಲಿದೆ."[೩]

ಈ ಕೆರೆಯು ಗ್ರಾಮದ ದಕ್ಷಿಣ ಭಾಗದಲ್ಲಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೪೧೨.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೧೨.೦೦ ಮೀಟರ್ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೧೩.೬೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೩.೯೨೭ ಚ.ಕಿ.ಮೀ. ಮತ್ತು ಸಂಯುಕ್ತವಾಗಿ ೨೫.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೧.೨೧.೬೯ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೨.೨೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ (ಎಂ.ಸಿ.ಎಂ.) ೨.೨೪೦ ಮತ್ತು ಕೆರೆಯ ಖಾಲಿ ಇರುವ ಸಾಮರ್ಥ್ಯ (ಎಂ.ಸಿ.ಎಂ)೨.೨೫೦ ಇದೆ. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೯೩.೦೬ ಹೇಕ್ಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೪೩೫.೫೫ ಕಿ.ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೫೩೧.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೫.೫೦ ಮೀಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿ ಮತ್ತು

ಕಾಲುವೆಗಳಿವೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಿಗೆ ವ್ಯವಸ್ಥಿತವಾಗಿ ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ.

ಮಳೆ ಆಶ್ರಿತವಾಗಿರುವ ಈ ಕೆರೆಯಲ್ಲಿ ಮೀನು ಸಾಕಾಣಿಕೆ, ನೀರಾವರಿ ವ್ಯವಸ್ಥೆ ಹಾಗೂ ಪಶುಪಾಲನೆಗೆ ಅನುಕೂಲವಾಗಿದೆ. ಈ ಕೆರೆ ತುಂಬಿದರೆ ರೈತರು ಭತ್ತ, ರಾಗಿ, ಹತ್ತಿ, ರೇಷ್ಮೆ, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಇಲ್ಲಿನ ಕೆರೆ ದಂಡೆಯಲ್ಲಿ ಉಮಾಮಹೇಶ್ವರ, ಗಣೇಶ, ವೀರಗಲ್ಲು ಹಾಗೂ ಮತ್ತಿತರೆ ಪ್ರಾಚ್ಯಾವಶೇಷಗಳಿವೆ.

**೨೨. ಬಲ್ಲಾಳಸಮುದ್ರ ಕೆರೆ**

ಬಲ್ಲಾಳ ಸಮುದ್ರ ಗ್ರಾಮವು ಹೊಸದುರ್ಗ ತಾಲ್ಲೂಕಿನಲ್ಲಿದೆ. ಶ್ರೀರಾಮಪುರ ಹೋಬಳಿಗೆ ಸೇರಿದ ಈ ಗ್ರಾಮವು ತಾಲ್ಲೂಕು ಕೇಂದ್ರದಿಂದ ೨೫ ಕಿ.ಮೀ ದೂರದಲ್ಲಿ ವೇದಾವತಿ ನದಿ ದಡದಲ್ಲಿದ್ದು, ಕಲ್ಕೆರೆ ಗ್ರಾಮದ ಸಮೀಪದಲ್ಲಿದೆ. ಈ ಊರಿನಲ್ಲಿ ಪ್ರಾಚೀನ ಕಾಲದಲ್ಲಿ ಅಂದರೆ ಹೊಯ್ಸಳರ ೩ನೇ ಬಲ್ಲಾಳನಿಂದ ನಿರ್ಮಿತವಾದ (ಕ್ರಿ.ಶ.೧೩ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಬಲ್ಲಾಳ ಸಮುದ್ರ ಕೆರೆ ಎಂದು ಕರೆಯಲಾಗುತ್ತದೆ. ಇಲ್ಲಿ ಅನೇಕ ಶಾಸನಗಳು, ವೀರಗಲ್ಲುಗಳು ಇವೆ. ಈ ಗ್ರಾಮದಲ್ಲಿ ಹಲವು ಚಾರಿತ್ರಿಕ ದೇವಾಲಯಗಳು ಮತ್ತು ಪಾಳೆಯಗಾರರ ಕಾಲದ ಕೋಟೆ ಕೊತ್ತಲ ಮತ್ತಿತರೆ ಪ್ರಾಚ್ಯಾವಶೇಷಗಳಿವೆ. ಇಲ್ಲಿನ ಕೆರೆ ಕೋಡಿ ಮೊಗಲರ ಕಾಲದಲ್ಲಿ ಒಡೆದಾಗ ಊರಗೌಡ ರೇವಣ್ಣ, ಚಿಗ ಹಲಗ ಹೈಯ್ಯನ ರಾಮಯ್ಯ, ಮಹಂತಯ್ಯ ಮೊದಲಾದವರು ಆ ಕೆರೆ ಕೋಡಿಯನ್ನು ನಿರ್ಮಿಸಿ ಗದ್ದೆಗಳನ್ನು ದಾನವಾಗಿ ನೀಡಿದರು ಎಂದು ಇಲ್ಲಿನ ಶಾಸನ ದಾಖಲಿಸಿದೆ.[೩೪]

ಗ್ರಾಮದ ಉತ್ತರ ಭಾಗದಲ್ಲಿರುವ ಇದು ಕೃಷ್ಣ ನದಿ ಪಾತ್ರದಲ್ಲಿನ ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೧೯ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೯.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೩೯.೦೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೧೯೭.೪೦ ಹೇಕ್ಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೩೬೦.೬೩ ಮಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿ ಮತ್ತು ಎರಡು ಕಾಲುವೆಗಳನ್ನು ಹೊಂದಿದೆ.

ಈ ಕೆರೆಯು ಅತ್ಯಂತ ವಿಶಾಲವಾಗಿದ್ದು, ಕಪ್ಪು ಮಿಶ್ರಿತವಾದ ಫಲವತ್ತೆಯ ಮಣ್ಣನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ತೂಬುಗಳನ್ನು ಕಾಣಬಹುದು. ನೀರಾವರಿ ವ್ಯವಸ್ಥೆಗೆ ಇಲ್ಲಿನ ಕಾಲುವೆ ವ್ಯವಸ್ಥೆ ಉತ್ತಮವಾಗಿದೆ. ಎಡದಂಡೆ ಕಾಲುವೆ ಉದ್ದ ೩.೦೦ ಕೀ.ಮೀ. ಇದೆ. ಕೆರೆಯ ಏರಿಯ ಮೇಲೆ ಅನೇಕ ವೀರಗಲ್ಲುಗಳನ್ನು ಕಾಣಬಹುದಾಗಿದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ತೆಂಗು, ಅಡಿಕೆ, ಜೋಳ, ಸೂರ್ಯಕಾಂತಿ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

## ೨೩. ಕೆಲ್ಲೋಡು ಕೆರೆ

ಹೊಸದುರ್ಗ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಕೆಲ್ಲೋಡು ಗ್ರಾಮವು ಹೊಸದುರ್ಗ-ಹುಳಿಯೂರು ರಸ್ತೆಯಲ್ಲಿದ್ದು, ವೇದಾವತಿ ನದಿಯ ದಡದ ಮೇಲಿದೆ. ಇದನ್ನು ಇಲ್ಲಿನ ಶಾಸನಗಳು ಕೆಲಗೋಡು, ಕೆಲ್ಲನಡು ಎಂದು ಉಲ್ಲೇಖಿಸಿದ್ದು, ಇದನ್ನು ಕೆಲ್ಲೋಡು ಎಂದು ಕರೆಯಲಾಗುತ್ತದೆ. ಇಲ್ಲಿ ಈಶ್ವರ, ಆಂಜನೇಯ, ಬಸವಣ್ಣನ ಗುಡಿಗಳಿವೆ. ಹೊಯ್ಸಳರ ತಿರುಮಲನಿಗೆ ಸಂಬಂಧಿಸಿದ ಗ್ರಾಮ ಇದೆಂದು ಮತ್ತು ಸಂತೆಬೆನ್ನೂರಿನ ಹನುಮನಾಯಕನ ಸಂಬಂಧಿಯೊರ್ವನು ಇಲ್ಲಿನ ಆಂಜನೇಯ ದೇವಾಲಯಕ್ಕೆ ಕುರುಬರಹಳ್ಳಿಯನ್ನು ದತ್ತಿಬಿಟ್ಟು, ಗ್ರಾಮದ ಮುಖ್ಯಸರಿಗೆ ಕೆಲ ಮಾನ್ಯಗಳನ್ನು ಬಿಟ್ಟಿರುವುದನ್ನು ಇಲ್ಲಿನ ಶಾಸನಗಳು ದಾಖಲಿಸಿವೆ.[೩೫] ಇಲ್ಲಿ ನಾಯಕರು, ಲಿಂಗಾಯಿತರು, ಎಸ್.ಸಿ ಹಾಗೂ ಇತರೆ ಜನಾಂಗದವರು ವಾಸವಾಗಿದ್ದಾರೆ.

ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೨೭ ಕಿ.ಮೀ. ದೂರದಲ್ಲಿದೆ. ಇಲ್ಲಿ ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಕೆಲ್ಲೋಡು ಆಣೆಕಟ್ಟು/ಕೆರೆ ಎಂದು ಸ್ಥಳೀಯರು ಕರೆಯುತ್ತಾರೆ. ಇದು ಹೊಯ್ಸಳರ ಕಾಲದಲ್ಲಿ ನಿರ್ಮಿತವಾದ ಕೆರೆ ಎಂದು ಅಲ್ಲಿನ ವೀರಗಲ್ಲು, ಶಾಸನ ದೇವಾಲಯ ಮೊದಲಾದ ಪ್ರಾಚ್ಯಾವಶೇಷಗಳು ಪುಷ್ಠೀಕರಿಸುತ್ತವೆ. ಇದನ್ನು ಕಾಲಾಂತರದಲ್ಲಿ ಮೈಸೂರು ಒಡೆಯರು ಮತ್ತು ಬ್ರಿಟಿಷರು ಹಾಗೂ ೨೦೦೨ರಲ್ಲಿ ಕರ್ನಾಟಕ ಸರ್ಕಾರದ ಸಣ್ಣ ನೀರಾವರಿ ಇಲಾಖೆಯವರು ಇದರ ದುರಸ್ತಿ ಮಾಡಿಸಿದ್ದಾರೆ. ಅಲ್ಲದೇ ಈಗಲೂ ಇದರ ನಿರ್ವಹಣೆಯನ್ನು ಸಹ ಅದೇ ಇಲಾಖೆಯವರೇ ನೋಡಿಕೊಳ್ಳುತ್ತಿದ್ದಾರೆ.

ಇಲ್ಲಿನ ಕೆರೆಯು ಗ್ರಾಮದ ನೈರುತ್ಯ ಭಾಗದಲ್ಲಿದ್ದು, ಇದರಲ್ಲಿ ಸಾಕಷ್ಟು ಹೂಳು ತುಂಬಿರುವುದರಿಂದ ನೀರು ಸಂಗ್ರಹಣಾ ಪ್ರಮಾಣವು ಕಡಿಮೆಯಾಗಿದೆ. ಇಲ್ಲಿ ಸರಿಯಾದ ರೀತಿಯ ನಿರ್ವಹಣೆ ಇಲ್ಲದೇ ಇರುವುದರಿಂದ ಅಲ್ಲಲ್ಲಿ ಗಿಡಮರ ಬೆಳದು ಕೆರೆಯ ಏರಿ ಶಿಥಿಲವಾಗಿದೆ. ಕೆರೆ ಸುತ್ತಲಿನ ಬೆಟ್ಟಗುಡ್ಡಗಳಿಂದ ಬಿದ್ದ ಮಳೆ ನೀರು ಇಲ್ಲಿನ ತಗ್ಗು ಪ್ರದೇಶಗಳಲ್ಲಿರುವ ಹಳ್ಳಗಳ ಮೂಲಕ ಹರಿದು ಇಲ್ಲಿನ ಕೆರೆಗೆ ಬಂದು ಸೇರ್ಪಡೆಯಾಗುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೩೮೯.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೭.೦೦ ಮೀಟರ್ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೭೯.೦೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೫.೧೨ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೨೫.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೧೯೮.೭೯ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೩.೧೨ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ(ಎಂ.ಸಿ.ಎಂ.) ೧.೯೭೦. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೧೨೩.೦೬ ಹೇಕ್ಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೫೧೨.೯೫ ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ(ಕೋಡಿಯ ಉದ್ದ ಸೇರಿ) ೬೩೬.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೧೪.೦೦ ಮೀಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು(ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್

ಮಾದರಿಯ ಎರಡು ಕೋಡಿ ಇದ್ದು, ಅದು ೧೧೯.೮೩೦ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೪೫೪.೦೦ ಇದ್ದು, ಅದು ಇರುವ ಸ್ಥಳ(ಚೈನೇಜ್) ೧೨.೩೪ ಮೀ ಹಾಗೂ ೨೯.೯೩ ಮೀಟರ್ ಇದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಚೌಕಾಕಾರದ ಎರಡು ತೂಬುಗಳಿವೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ೯೮೬.೦೦ ಮೀ, ಎಡದಂಡೆ ಕಾಲುವೆ ೫೬೦ ಮೀ. ಉದ್ದಗಳನ್ನು ಹೊಂದಿವೆ.

ಈ ಕೆರೆಯು ಮೀನು ಸಾಕಾಣಿಕೆಗೆ, ನೀರಾವರಿ ವ್ಯವಸ್ಥೆಗೆ ಹಾಗೂ ಪಶು ಪಾಲನೆಗೆ ಅನುಕೂಲಕರವಾಗಿದೆ. ಈ ಕೆರೆ ತುಂಬಿದರೆ ರೈತರು ಪ್ರಸಕ್ತ ವಿಶೇಷವಾಗಿ ತೆಂಗು, ರಾಗಿ, ಹತ್ತಿ, ರೇಷ್ಮೆ, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ.

**೫.೨. ಜಿಲ್ಲೆಯ ಮಹತ್ವದ ಮಧ್ಯಕಾಲೀನ ಕೆರೆಗಳು**

ಕರ್ನಾಟಕದಲ್ಲಿ ರಾಷ್ಟ್ರಕೂಟರ ಅವನತಿಯಿಂದ ವಿವಿಧ ಪಾಳೆಯಗಾರರ ಅವನತಿಯವರೆಗಿನ (ಕ್ರಿ.ಶ.೧೯ನೇ ಶತಮಾನದಿಂದ ಕ್ರಿ.ಶ.೧೭ನೇ ಶತಮಾನದವರೆಗೆ) ಕಾಲವನ್ನು ನಾವು ಮಧ್ಯಯುಗವೆಂದು ಕರ್ನಾಟಕಕ್ಕೆ ಸೀಮಿತಿಗೊಳಿಸಿ ಹೇಳಬಹುದು. ಈ ಕಾಲಾವಧಿಯಲ್ಲಿ ಚಾಲುಕ್ಯ, ಹೊಯ್ಸಳ, ಸಿಂಧರು, ದೇವಗಿರಿಯ ಯಾದವರು, ನೋಳಂಬರು, ವಿಜಯನಗರ ಅರಸರು ಹಾಗೂ ಇವರೊಂದಿಗೆ ಅನೇಕ ಸಣ್ಣಪುಟ್ಟ ಸಾಮಂತ ರಾಜ ಮನೆತನಗಳು, ಮೈಸೂರು ಒಡೆಯರು, ಟಿಪ್ಪು, ಬ್ರಿಟಿಷರು ಈ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದರು. ಇವರಿಂದ ನಿರ್ಮಾಣವಾದ ಕೆರೆಗಳು ಚಾರಿತ್ರಿಕವಾಗಿ ತನ್ನದೇ ಆದ ಮಹತ್ವವನ್ನು ಪಡೆದಿವೆ. ಹಾಗಾಗಿ ಈ ಕಾಲದ ಜಿಲ್ಲೆಯ ಪ್ರಮುಖ ಕೆರೆಗಳನ್ನು ಈ ಮುಂದೆ ವಿಶ್ಲೇಷಿಸಲಾಗಿದೆ.

**೨೪. ಭೀಮಸಮುದ್ರ ಕೆರೆ**

ಭೀಮಸಮುದ್ರವು (ರೇಖಾಂಶ ೭೬° ೬೦° ೩೦° ೨೮ ಮತ್ತು ಅಕ್ಷಾಂಶ-೧೪೦ ೧೯೦ ೬೪.೭೪) ಜಿಲ್ಲೆಯ ಚಿತ್ರದುರ್ಗ ತಾಲ್ಲೂಕು ಮತ್ತು ಅದೇ ಹೋಬಳಿಗೆ ಸೇರಿದ್ದು, ಗ್ರಾಮ ಪಂಚಾಯತಿಯ ಕೇಂದ್ರವಾಗಿದೆ. ಇದು ತಾಲ್ಲೂಕು ಕೇಂದ್ರದಿಂದ ೧೪ ಕಿ.ಮೀ. ದೂರದಲ್ಲಿದೆ. ಇಲ್ಲಿ ಕ್ರಿ.ಶ.೧೧ನೇ ಶತಮಾನದಲ್ಲಿ ನಿರ್ಮಿತವಾದ ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಭೀಮಸಮುದ್ರ ಕೆರೆ ಎನ್ನಲಾಗುತ್ತದೆ (ಈ ಕೆರೆಯ ನೋಂದಣಿ ಸಂಖ್ಯೆ ೨೪೫/೨೦೦೯-೧೦ ಇದ್ದು, ಅದರ ಟೋಪೋಶೀಟ್ ಸಂಖ್ಯೆ ೫೭ಸಿ/೧೯ ಇದೆ.). ಕ್ರಿ.ಶ.೧೦೨೨ರಷ್ಟು ಪೂರ್ವದ ಒಂದು ಶಾಸನ ಇಲ್ಲಿಯ ಕೆರೆಯನ್ನು 'ಹೊನ್ನುಂದದ ಪಿರಿಯ ಕೆರೆ' ಎಂದು ಕರೆದಿರುವುದರಿಂದ, ಈ ಕೆರೆ ಆ ಕಾಲಕ್ಕೂ ಹಿಂದಿನದು ಎಂದು ಸ್ಪಷ್ಟವಾಗುತ್ತದೆ. ಇಲ್ಲಿ ಹೊನ್ನುಂದ ಎನ್ನುವುದು ಭೀಮಸಮುದ್ರಕ್ಕೆ ಆಗ ಇದ್ದ ಹೆಸರು. ಹೀಗಾಗಿ ಜಿಲ್ಲೆಯ ಅತ್ಯಂತ ಪ್ರಾಚೀನ ಕೆರೆಗಳಲ್ಲಿ ಇದೂ ಒಂದಾಗಿದೆ. ವಿಜಯನಗರ ಚಕ್ರವರ್ತಿ ೨ನೇ ಹರಿಹರರಾಯನ ಮಗನಾದ ಕಂಪಣ್ಣೊಡೆಯನು ಚಿಮ್ಮತ್ತೂರ ಕಲ್ಲ (ಚಿತ್ರದುರ್ಗ) ರಾಜ್ಯವನ್ನು ಆಳುತ್ತಿದ್ದಾಗ, ಅವನ ಮನೆಯ ಪ್ರಧಾನವಾಗಿದ್ದ ಲಕ್ಷ್ಮೀಧರ ಪಂಡಿತನ ಮಗ ಕಂಪಣ್ಣನು, ಕ್ರಿ.ಶ.೧೧೩೭ರಲ್ಲಿ ಕಕ್ಕೆಯ ಹರವಿನ(ಈಗಿನ ಕಕ್ಕೇರು) ಬಳಿ ಜನ್ನಿಗೆಯ ಹಳ್ಳ

ಎಂಬ ಹಳ್ಳವೊಂದನ್ನು ಕಟ್ಟಿ, ಅಂದರೆ ಅಡ್ಡಗಟ್ಟೆ ಹಾಕಿ, ಅದರ ದಿಕ್ಕನ್ನು ಬದಲಿಸಿ, ಹುಂಕುಂದ (ಭೀಮಸಮುದ್ರದ ಆಗಿನ ಹೆಸರು)ದ ಕೆರೆಗೆ ಹರಿದು ಬರುವಂತೆ ಮಾಡಿದನು. ಆ ಕಾಲುವೆಗೆ ಮಂಗಳ ಮಹಾ ಶ್ರೀ ಶ್ರೀ ಶ್ರೀ ಎಂದು ಅಲ್ಲಿ ದೊರೆತ ಶಾಸನವೊಂದು ತಿಳಿಸುತ್ತದೆ. ಕೆರೆಗಳಿಗೆ ಒದಗುತ್ತಿದ್ದ ಜಲಾಭಾವ ಸಮಸ್ಯೆಗೆ ಶಾಶ್ವತ ಪರಿಹಾರ ಎಲ್ಲಾ ಕಡೆಯಲ್ಲಿ ಆಗದಿದ್ದರೂ, ಅಲ್ಲಲ್ಲಿ ಪೂರಕ ಕಾಲುವೆ (ಫೀಡರ್ ಚಾನೆಲ್)ಗಳನ್ನು ತೆಗೆಯಲು ಆಗಿನ ಆಡಳಿತ ಮತ್ತು ಕೆಲವು ಪ್ರಮುಖರು ಹೇಗೆ ಗಂಭೀರವಾಗಿ ಚಿಂತಿಸುತ್ತಿದ್ದರು ಮತ್ತು ಮಾರ್ಗೋಪಾಯವನ್ನು ಕೈಗೊಳ್ಳುತ್ತಿದ್ದರು ಎಂಬುದಕ್ಕೆ ಇದು ಒಂದು ಉತ್ತಮ ನಿದರ್ಶನವಾಗಿದೆ. ಈಗಿನ ಕಾಲದಂತೆ ಹೆಚ್ಚು ಸೌಕರ್ಯಗಳಿಲ್ಲದ ಆ ಕಾಲದಲ್ಲಿ ಹತ್ತಾರು ಕಿಲೋಮೀಟರುಗಳಷ್ಟು ದೂರದಿಂದ ಪೂರಕ ಕಾಲುವೆಗಳನ್ನು ತೋಡಿಕೊಂಡು ಬಂದಿರುವುದು ಸಾಧಾರಣ ಸಂಗತಿಯಲ್ಲ. ಅದೊಂದು ಅಸಾಮಾನ್ಯ ತಾಂತ್ರಿಕ ಜ್ಞಾನದ ಸಾಧನೆ ಎಂದರೆ ಅತಿಶಯೋಕ್ತಿಯಾಗಲಾರದು. ಮುಂದೆ ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ ಬಹುಶಃ ಈ ಹುಂಕುಂದಲೇ ಹೊಲತಿಹಾಳು ಎಂಬ ಹೆಸರಿನ ಊರಾಗಿದ್ದಂತೆ ಕಂಡುಬರುತ್ತದೆ. ಭರಮಣ್ಣ ನಾಯಕನ (ಕ್ರಿ.ಶ.೧೬೮೯-೧೭೨೧) ಕಾಲದಲ್ಲಿ ಈ ಹೊಲತಿಹಾಳಿನ ಹಳೆಯ ಕೆರೆಯನ್ನು ಬಿಚ್ಚಿಸಿ, ಪುನಃ ದೊಡ್ಡದಾಗಿ ಕಟ್ಟಿದಂತೆ ಆಮೇಲೆ ಅದಕ್ಕೆ ಭೀಮಸಮುದ್ರದ ಕೆರೆ ಎಂದು ಹೆಸರು ಕರೆದಂತೆ ಈ ಪಾಳೆಯಗಾರರ ಚಾರಿತ್ರಿಕ ದಾಖಲೆಗಳು ಸೂಚಿಸುತ್ತವೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಗ್ರಾಮದ ಪೂರ್ವಕ್ಕೆ ಈ ಕೆರೆ ಇದೆ. ಈ ಕೆರೆಯ ಏರಿಯ ಉದ್ದ ೮೮೦ ಗಜ: ಅದು ಒಂದು ಗುಡ್ಡದಿಂದ ಇನ್ನೊಂದು ಗುಡ್ಡಕ್ಕೆ ಅಡ್ಡವಾಗಿ ಹಾಕಲ್ಪಟ್ಟಿದೆ. ಏರಿಯ ನೆತ್ತಿಯ ಮೇಲೆ ೪೫ ಅಡಿ ಅಗಲವಿದೆ. ಹಿಂದೆ ಮುಂದೆ ಕಲ್ಲು ಕಟ್ಟಿದೆ. ಮೂರು ತೂಬು ಇವೆ. ಇವುಗಳಿಂದ ೫ ನಾಲೆಗಳೂ ಹೊರಡುವವು. ನೀರು ೧೩ ಗ್ರಾಮಕ್ಕೆ ಹರಿಯುವುದು. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಕಬ್ಬಿಣದ ಕಿಟ್ಟದಂತಹ 'ಲ್ಯಾಟಿರೈಟು' (ಗುಬ್ಬಿ ಕಲ್ಲಿನ) ಮಣ್ಣನ್ನು/ ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇದನ್ನು ಸಾಧಾರಣ ಗುದ್ದಲಿಗಳಿಂದಲೂ, ಹಾರೆಗಳಿಂದಲೂ ಅಗೆಯುವುದು ಕಷ್ಟ. ಇದೇ ಕೆರೆಯ ಏರಿಯ ಮೇಲೆ ಈ ಕೆರೆಗೆ ಆಹುತಿಯಾದ ಬಾಣಂತಿಯೊರ್ವಳ ಸಮಾಧಿ ಇದೆ.

ಈಗಿನ ಕಕ್ಕೇರು ಗ್ರಾಮದ ಬಳಿ ಹಿಂದೆ ಕಟ್ಟಲಾಗಿದ್ದ ಆ ಅಡ್ಡಗಟ್ಟೆಯಾಗಲಿ, ಭೀಮಸಮುದ್ರದ ಕೆರೆಗೆ ತಂದ ಆ ಕಾಲುವೆಯಾಗಲಿ ಈಗ ಗುರ್ತಿಸಲು ಸಾಧ್ಯವಿಲ್ಲವಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಗೆ ಬಂಡಿಹಳ್ಳ-ಅಂಡುಮೂರನ ಹಳ್ಳದ ನೀರು ಮತ್ತು ಸುತ್ತಲಿನ ಬೆಟ್ಟದಿಂದ ಬರುವ ಮಳೆ ನೀರು ಇಲ್ಲಿ ಬಂದು ಸಂಗ್ರಹವಾಗುತ್ತದೆ. ಈ ಕೆರೆ ಮೀನು ಸಾಕಾಣಿಕೆ, ನೀರಾವರಿ ವ್ಯವಸ್ಥೆ ಹಾಗೂ ಪಶು ಪಾಲನೆಗೆ ಅನುಕೂಲವಾಗಿದೆ. ರೈತರು ಇಲ್ಲಿ ತೆಂಗು, ಅಡಿಕೆ, ಬಾಳೆ, ವೀಳೆಯದೆಲೆ, ಕಬ್ಬು, ಭತ್ತ, ರಾಗಿ, ಹತ್ತಿ, ರೇಷ್ಮೆ, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಈಗಲೂ ಈ ಕೆರೆಯು ಪ್ರಾಯಶಃ ಅಜೀರ್ಣೋದ್ಧಾರಗೊಂಡ ರೂಪದಲ್ಲೇ ಇದ್ದು, ಇದರ ಕೆಳಗಿನ ಸಾವಿರಾರು ಎಕರೆಗಳಷ್ಟು

ಪ್ರದೇಶದಲ್ಲಿ ತೆಂಗು, ಅಡಿಕೆ, ಬಾಳೆ, ವೀಳೆಯದೆಲೆಯ ಅನೇಕ ತೋಟಗಳು ಕಂಗೊಳಿಸುತ್ತಿರುವುದನ್ನು ಕಾಣಬಹುದು. ಆದರೆ ಈಚಿನ ದಿನಗಳಲ್ಲಿ ಈ ಕೆರೆ ನೀರಿನ ಅಭಾವಕ್ಕೆ ಸಿಲುಕಿರುವುದರಿಂದ ಅಲ್ಲಿನ ಅನೇಕ ತೋಟಗಳ ಸ್ಥಿತಿ ಚಿಂತಾಜನಕವಾಗಿದೆ.

**೨೫. ಮಿಟ್ಟಿಗನಕಟ್ಟೆ ಕೆರೆ**

ಚಿತ್ರದುರ್ಗ ತಾಲೂಕಿನ ಇಂದಿನ ಮಿಟ್ಲಕಟ್ಟೆಯನ್ನು ಹಿಂದೆ ಪ್ರಾಯಶಃ ಮಿಟ್ಟಿಗನಕಟ್ಟೆ ಎಂದು ಕರೆಯುತ್ತಿದ್ದರಬೇಕು. ಇದು ಚಿತ್ರದುರ್ಗದಿಂದ ೨೦ಕಿ.ಮೀ ದೂರದಲ್ಲಿದೆ. ಇಂದು ಮಿಟ್ಟಿಗನಕಟ್ಟೆ ಎಂದು ಕರೆಯಲ್ಪಡುವ ಬೇಚರಾಕ್ ಗ್ರಾಮವು ಸಂಪೂರ್ಣ ಅಳಿದು ಹೋಗಿ ಕೇವಲ ಕೆಲವೇ ಕುರುಹುಗಳನ್ನು ಮಾತ್ರ ಉಳಿದಿವೆ. ಆದರೆ ಇಲ್ಲಿರುವ ಕೆರೆಯ ಅಳಿದುಳಿದಿರುವ ಭಾಗಗಳಿಂದ ಮತ್ತು ಇಲ್ಲಿನ ಶಾಸನದ ಸಹಾಯದಿಂದ ಇಲ್ಲೊಂದು ವಿಜಯನಗರ ಕಾಲದ ಕೆರೆ ಇತ್ತೆಂದು ಹೇಳಲು ಸಾಧ್ಯವಿದೆ. ಇಲ್ಲಿರುವ ಶಾಸನವು ಮಿಟ್ಟಲಿಗ ಎಂಬ ಗೊಲ್ಲಗೆ ಕಟ್ಟಿಸಿಕೊಟ್ಟ ಮಿಟ್ಟಿಗನ ಕಟ್ಟೆಯೆಂಬುದನ್ನು ಹೆಸರಿಸಿ, ಅದರಲ್ಲಿಯೇ ಆ ಕಟ್ಟೆಯ ಚತುಃಸೀಮೆಯ ವಿವರವನ್ನು ಹೀಗೆ ಉಲ್ಲೇಖಿಸಲಾಗಿದೆ.[೨೨] "ಆ ಗ್ರಾಮದಿಂದ ಮೂಡಲು ನಾಗೇನೂರೆಂಬ ಗ್ರಾಮ ಭಾಗದಿಂ/ಪಾಂಡವರ ಮರಡಿಯ ಮೇಲೆ ಮಧ್ಯದಿ ನೆಟ್ಟ ಕರವನಂತ ಕಲ್ಲು ಗ್ರಾಮದಿಂ, ಟಂಕಲ್ಲು, ಮುದಿಹದಡ, ಯೆಂಬ ಗ್ರಾಮದ ಬಿಳೆಕಲ್ಲ ಮರಡೀ ಬದೀಲಿ, ನೆಟ್ ಬಿಳೇಕಲ್ಲುಗಳೆಯೆರಡು/ ಗ್ರಾಮದ ಪಡುವಲು (ಪಶ್ಚಿಮಕ್ಕೆ) ಸಾಲಕಟ್ಟೆಯೆಂಬ ಗ್ರಾಮದ ಸಂಣಕಲ್ಲು ಮರಡಿಯ ಮೇಲೆ ನೆಟ್ಟ ಕಲ್ಲು ರೇವನದ (?) ಕಲ್ಲುಗಳು ಮೂರು ಬಡಗಲು ಕುಂದುವಾಡೀಯೆಂಬ ಗ್ರಾಮದ ಬಿಳೇಕಲ್ಲ ಮರಡಿ..... ಮೊದಲಾದ ಸಾಲುಗಲ್ಲುಗಳು/ ಈ ಬಗೆ ಚತುಃಶೀಮಾಸಹಿತವಂ ಮಾಡಿ/ಶ್ರೀ ವಿರೂಪಾಕ್ಷ ದೇವರ ಸನ್ನಿಧಿಯಲ್ಲಿ ಮಾಡಿಕೊಟ್ಟ ಧರ್ಮಶಾಸನ". ಈ ಶಾಸನೋಕ್ತ ಭೂಮಿ ವಿವರಗಳು ಮತ್ತು ಹಳ್ಳಿಗಳು ಈಗಲೂ ಇದ್ದು, ಆ ಎಲ್ಲಾ ಭೂಮಿಗಳಿಗೆ ಈ ಕೆರೆಯಿಂದಲೇ ನೀರು ಪೂರೈಕೆಯಾಗುವ ವ್ಯವಸ್ಥೆ ಇತ್ತೆಂಬುದನ್ನು ನಾವು ಗುರುತಿಸಬಹುದಾಗಿದೆ.

**೨೬. ಹೊಳಲ್ಕೆರೆ ಕೆರೆ**

ಚಿತ್ರದುರ್ಗ ಜಿಲ್ಲೆಯ ತಾಲೂಕುಗಳಲ್ಲಿ ಹೊಳಲ್ಕೆರೆಯೂ ಒಂದಾಗಿದೆ. ಹೊಳಲ್ಕೆರೆ ನಗರವು ಚಿತ್ರದುರ್ಗದಿಂದ ಅದರ ವಾಯುವ್ಯಕ್ಕೆ ೩೨ ಕಿ.ಮೀ. ದೂರದಲ್ಲಿದೆ. ಈ ಊರಿನಲ್ಲಿ ಮಧ್ಯಯುಗದಲ್ಲಿ ನಿರ್ಮಿತವಾದ (ಕ್ರಿ.ಶ.೧೫ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಹೊಳಲ್ಕೆರೆ ಕೆರೆ ಎನ್ನಲಾಗುತ್ತದೆ. ಇದು ಐತಿಹಾಸಿಕ ಗ್ರಾಮವಾಗಿದ್ದು, ಇಲ್ಲಿ ಅನೇಕ ದೇವಾಲಯ, ಶಾಸನಗಳು, ವೀರಗಲ್ಲುಗಳು ಇವೆ. ಇಲ್ಲಿ ಬಯಲು ಗಣೇಶ, ಶಾಂತಿನಾಥೇಶ್ವರ ಬಸದಿ, ಗೋಪಾಲಸ್ವಾಮಿ, ವೀರಭದ್ರಸ್ವಾಮಿ ಮತ್ತು ಆಂಜನೇಯ ಸ್ವಾಮಿ ಮೊದಲಾದ ೧೦೧ ಚಾರಿತ್ರಿಕ ದೇವಾಲಯಗಳಿವೆ. ಇದನ್ನು ಮೊದಲು "ಪೊಳಲ್‌ಕೆರೆ" ಎನ್ನಲಾಗುತ್ತಿತ್ತು. ಇಲ್ಲಿ ವಿವಿಧ ರಾಜ ಮನೆತನಗಳು ಆಳ್ವಿಕೆ ಮಾಡಿವೆ. ಇಲ್ಲಿನ ಕ್ರಿ.ಶ. ೧೫೬೮ರ ಶಾಸನದಿಂದ ಮತ್ತಿ ತಿಮ್ಮಣ್ಣನಾಯ್ಕನು ಹೊಳಲ್ಕೆರೆ ಮಾಗಣಿಗೆ ಸೇರಿದ ಕೆಲವು ಹಳ್ಳಿಗಳನ್ನು ಶ್ರೀ ಗೋಪಾಲಸ್ವಾಮಿಗೆ ದತ್ತಿ ಬಿಟ್ಟ ವಿಚಾರ ಉಲ್ಲೇಖಗೊಂಡಿದೆ.[೨೩]

ಇಲ್ಲಿನ ಕೆರೆ ಕೋಡಿಯ ಬಳಿ ಹೊಳಲಮ್ಮನ ಗುಡಿ ಇದ್ದು, ಆಕೆ ಹೊಳಲ್ಕೆರೆ ಪಟ್ಟಣಕ್ಕೆ ರಕ್ಷಣೆಯಾಗಿರುವಳೆಂದು ನಂಬಲಾಗಿದೆ.

ಇಲ್ಲಿನ ಕೆರೆಯು ನಗರದ ಪೂರ್ವ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ಬಾಗಿದ(ಕರ್ವ)ರೀತಿಯಲ್ಲಿ ನಿರ್ಮಿಸಲಾಗಿದೆ. ಪ್ರಸಕ್ತ ಸಣ್ಣ ನೀರಾವರಿ ಇಲಾಖೆಯ ಸುಪರ್ದಿಯಲ್ಲಿರುವ ಈ ಕೆರೆಯಲ್ಲಿ ಹೂಳು ತುಂಬಿದ್ದು, ಸರಿಯಾದ ರೀತಿಯ ನಿರ್ವಹಣೆ ಇಲ್ಲದೇ ಅಲ್ಲಲ್ಲಿ ಗಿಡಮರ ಬೆಳೆದು ಶಿಥಿಲವಾಗಿದೆ. ಕೆರೆ ಸುತ್ತಲಿನ ಬೆಟ್ಟ ಗುಡ್ಡಗಳಿಂದ ಬಿದ್ದ ಮಳೆ ನೀರು ಇಲ್ಲಿನ ತಗ್ಗು ಪ್ರದೇಶಗಳಲ್ಲಿರುವ ಹಳ್ಳಗಳ ಮೂಲಕ ಹರಿದು ಇಲ್ಲಿನ ಕೆರೆಗೆ ಬಂದು ಸೇರ್ಪಡೆಯಾಗುತ್ತದೆ. ಈ ಕೆರೆಯ ಏರಿಯ ಮಟ್ಟ ೧೬ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೦.೨೭ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೧೩.೦೫ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೫೭.೨೦ ಹೇಕ್ಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೬೫೫.೬೩ ಮಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ.

ಈ ಕೆರೆಯು ಅತ್ಯಂತ ವಿಶಾಲವಾಗಿದ್ದು, ಕಪ್ಪು ಮಿಶ್ರಿತವಾದ ಫಲವತ್ತತೆಯ ಮಣ್ಣನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ಕಾಲುವೆ ಮತ್ತು ತೂಬುಗಳನ್ನು ಕಾಣಬಹುದು. ಇಲ್ಲಿನ ತೂಬುಗಳು ಚೌಕಾಕಾರವಾಗಿದ್ದು, ನೀಳ ಮತ್ತು ಚಪ್ಪಟೆಯಾಕಾರದ ಗ್ರಾನೈಟ್ ಕಂಬಗಳನ್ನು ಬಳಸಿ ನಿರ್ಮಿಸಲಾಗಿದ್ದು, ಅದರ ಮೇಲೆ ಕೆಲವು ಶಿಲ್ಪಗಳಿವೆ. ಕೆರೆಯ ಹಿಂಬದಿಯಲ್ಲಿ ಮತ್ತು ಕೋಡಿಯ ಬಳಿ ಕೆಲವು ದೇವಾಲಯ ಮತ್ತು ಕೆಲ ವೀರಗಲ್ಲುಗಳನ್ನು ಕಾಣಬಹುದಾಗಿದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ಅತಿ ಕಡಿಮೆ ಪ್ರಮಾಣದಲ್ಲಿ ತೆಂಗು, ತರಕಾರಿ ಮತ್ತಿತರೆ ಬೆಳೆಗಳನ್ನು ಬೆಳೆಯುತ್ತಾರೆ. ಏಕೆಂದರೆ ದುರಸ್ತಿ ಸ್ಥಿತಿಯಲ್ಲಿರುವ ಈ ಕೆರೆಗೆ ನಗರದ ಚರಂಡಿ ನೀರು ಪ್ರಸಕ್ತ ಬಂದು ಶೇಖರಣೆಗೊಳ್ಳುತ್ತದೆ.

**೨೭. ಕಡಲೂರು(ಕಡೂರು) ಕೆರೆ**

ಕಡಲೂರು (ಕಡೂರು)ಗ್ರಾಮವು ಹೊಳಲ್ಕೆರೆ ತಾಲ್ಲೂಕಿನಲ್ಲಿದ್ದು, ಇದು ಚಿಕ್ಕಜಾಜೂರು ಹೋಬಳಿ ಕೇಂದ್ರದ ವ್ಯಾಪ್ತಿಯಲ್ಲಿದೆ. ಈ ಊರಿನಲ್ಲಿ ಮಧ್ಯಯುಗದಲ್ಲಿ ನಿರ್ಮಿತವಾದ (ಕ್ರಿ.ಶ.೧೫ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಕಡಲೂರು (ಕಡೂರು) ಕೆರೆ ಎನ್ನಲಾಗುತ್ತಿದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೨೫ ಕಿ.ಮೀ ದೂರದಲ್ಲಿದೆ. ಇದು ಐತಿಹಾಸಿಕ ಗ್ರಾಮವಾಗಿದ್ದು, ಇಲ್ಲಿ ಅನೇಕ ದೇವಾಲಯ, ಶಾಸನಗಳು, ವೀರಗಲ್ಲುಗಳು ಇವೆ. ಇಲ್ಲಿನ ಶಾಸನವು ಈ ಊರನ್ನು ಕಡಲೂರು ಎಂದಿದೆ. ಈ ಗ್ರಾಮದಲ್ಲಿ ವೀರಭದ್ರಸ್ವಾಮಿ ಮತ್ತು ಆಂಜನೇಯ ಸ್ವಾಮಿ ದೇವಾಲಯಗಳು ಪ್ರಮುಖವಾಗಿವೆ. ಇಲ್ಲಿನ ವೀರಭದ್ರ ದೇವಾಲಯದ ಬಳಿಯ ಶಾಸನವು ೧೪೭೮ರಲ್ಲಿ ಶ್ರೀವೀರಭದ್ರ

ದೇವರ ಅಮೃತಪಡಿಗೆ ಈ ಊರನ್ನು ದತ್ತಿ ಬಿಟ್ಟಿದ್ದನ್ನು ದಾಖಲಿಸಿದೆ. ಇಲ್ಲಿನ ಹಿರೇಕೆರೆಯ ಬಳಿ ಇರುವ ವಾಮರಸಯ್ಯನವರು ಹಾಕಿಸಿದ ಶಾಸನದಿಂದ ಯಲುಮಲನಾಯ್ಕರು ಈ ಕೆರೆಯನ್ನು ನಿರ್ಮಿಸಿ ಜೀರ್ಣೋದ್ಧಾರ ಮಾಡಿದ ಸಂಗತಿ ಉಲ್ಲೇಖಗೊಂಡಿದೆ.[೩೮]

ಗ್ರಾಮದ ಪೂರ್ವ ಭಾಗದಲ್ಲಿರುವ ಈ ಕೆರೆಯು ಕೃಷ್ಣ ನದಿ ಪಾತ್ರದಲ್ಲಿದ್ದು, ವೇದಾವತಿ ನದಿಯ ಉಪಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಪ್ರಸಕ್ತ ಸಣ್ಣ ನೀರಾವರಿ ಇಲಾಖೆಯ ಸುಪರ್ದಿಯಲ್ಲಿರುವ ಈ ಕೆರೆಯಲ್ಲಿ ಹೂಳು ತುಂಬಿದ್ದು, ಸರಿಯಾದ ರೀತಿಯ ನಿರ್ವಹಣೆ ಇಲ್ಲದೇ ಅಲ್ಲಲ್ಲಿ ಗಿಡಮರ ಬೆಳದು ಶಿಥಿಲವಾಗಿದೆ. ಕೆರೆಯ ಸುತ್ತಲಿನ ಬೆಟ್ಟಗುಡ್ಡಗಳಿಂದ ಬಿದ್ದ ಮಳೆ ನೀರು ಇಲ್ಲಿನ ತಗ್ಗು ಪ್ರದೇಶಗಳಲ್ಲಿರುವ ಹಳ್ಳಗಳ ಮೂಲಕ ಹರಿದು ಇಲ್ಲಿನ ಕೆರೆಗೆ ಬಂದು ಸೇರ್ಪಡೆಯಾಗುತ್ತದೆ. ಈ ಕೆರೆಯ ಏರಿಯ ಮಟ್ಟ ೧೯ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೦೭.೯೮ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೧೨.೦೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೬೯.೪೦ ಹೇಕ್ಟರ್ ಇದೆ. ಒಳಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೬೫೫.೬೩ ಮಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ.

ಈ ಕೆರೆಯಲ್ಲಿ ಎರಡು ತೂಬುಗಳನ್ನು ಕಾಣಬಹುದು. ನೀರಾವರಿ ವ್ಯವಸ್ಥೆಗೆ ಇಲ್ಲಿನ ಕಾಲುವೆ ವ್ಯವಸ್ಥೆ ಉತ್ತಮವಾಗಿದೆ. ಎಡದಂಡೆ ಕಾಲುವೆ ಉದ್ದ ೨.೦೦ ಕಿ.ಮೀ. ಇದೆ. ಕೆರೆಯ ಹಿಂಬದಿಯಲ್ಲಿ ಅನೇಕ ವೀರಗಲ್ಲುಗಳನ್ನು ಕಾಣಬಹುದಾಗಿದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ತೆಂಗು, ಜೋಳ, ಶೇಂಗಾ ಮತ್ತಿತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೨೮. ಸಿಡ್ಲಯ್ಯನಕೋಟೆ ಕೆರೆ**

ಸಿಡ್ಲಯ್ಯನಕೋಟೆ ಗ್ರಾಮವು ಹಿರಿಯೂರು ತಾಲ್ಲೂಕಿನಲ್ಲಿದೆ. ಇದು ತಾಲೂಕು ಕೇಂದ್ರದಿಂದ ಈಶಾನ್ಯಕ್ಕೆ ೨೭ ಕಿ.ಮೀ. ದೂರದಲ್ಲಿದ್ದು, ಇದನ್ನು ಸಿದ್ದಯ್ಯನಕೋಟೆ, ಸಿಡಿಲಯ್ಯನ ಕೋಟೆ, ಸಿಡ್ಲೈಯ್ಯನಕೋಟೆ, ಸಿಡ್ಲಯ್ಯನಕೋಟೆ ಎಂದು ಕರೆಯುತ್ತಾರೆ. ಹಿರಿಯೂರಿನ ೨೫ನೇ ಶಾಸನವು ಕ್ರಿ.ಶ.೧೫೭೩ರಲ್ಲಿ ಈ ಸ್ಥಳವು ಹರತಿ ಸ್ಥಳಕ್ಕೆ ಸೇರಿತ್ತೆಂದು ಹೇಳಲಾಗುತ್ತದೆ. ಇಲ್ಲಿನ ಕೋಟೆಯನ್ನು ಕಾಣಾಚಿಯ ಗೌಡ ಕಟ್ಟಿಸಿದ. ಇಲ್ಲಿನ ಬ್ರಹ್ಮದೇವರ ಗುಡಿಯನ್ನು ಈ ಗೌಡನ ಮೊಮ್ಮಗ ಸಿರಿಯಗೊಂಡ ಚಿಕ್ಕಯ್ಯನು ಮತ್ತು ಅವರ ಚಿಕ್ಕಪ್ಪ ದೊಡ್ಡಲಕ್ಕಯ್ಯ ಹಾಗೂ ಕಲ್ಲುಟಿಗ ಪೋಲೋಜರು ಕಟ್ಟಿಸಿದರೆಂದು ಇಲ್ಲಿನ ಶಾಸನ ವಿವರಿಸುತ್ತದೆ.[೩೯] ಚಾರಿತ್ರಿಕ ನೆಲೆಯಾದ ಇಲ್ಲಿ ಮಧ್ಯ ಕಾಲದಲ್ಲಿ ನಿರ್ಮಿಸಿದ (ಕ್ರಿ.ಶ.೧೫ನೇ ಶತಮಾನ) ಕೆರೆ ಇದೆ. ಇಲ್ಲಿನ ಓಲೇಕಾರ ಸಿದ್ದನ ಹೊಲದಲ್ಲಿರುವ ಶಾಸನವು ಕ್ರಿ.ಶ.೧೪೯೬ರಲ್ಲಿ ಸಿಡ್ಲಯ್ಯನಕೋಟೆ ಪಶ್ಚಿಮ ಭಾಗದಲ್ಲಿ ಗೌಡ, ಶಾನಬೋವರು ಕೆರೆ ಕಟ್ಟಿಸಿರುವುದನ್ನು ಉಲ್ಲೇಖಿಸಿದೆ. ಈ ಗ್ರಾಮದಲ್ಲಿ ಬ್ರಹ್ಮೇಶ್ವರ, ಗಂಗಮ್ಮ, ಮಾರಮ್ಮ ಮೊದಲಾದ ದೇವಾಲಯಗಳಿವೆ. ಅಲ್ಲದೇ ಇಲ್ಲಿ ಕೆಲ ಶಾಸನಗಳು ಹಾಗೂ ಕೋಟೆ ಮತ್ತು ಇತರೆ ಪ್ರಾಚ್ಯಾವಶೇಷಗಳಿವೆ.

ಇಲ್ಲಿನ ಕೆರೆಯನ್ನು ಕರ್ನಾಟಕ ಸರ್ಕಾರದ ಜಲಸಂಪನ್ಮೂಲ/ಸಣ್ಣ ನೀರಾವರಿ ಇಲಾಖೆಯವರು ಜಿಲ್ಲಾ ಪಂಚಾಯತಿಯ ಅನುದಾನದಲ್ಲಿ ಈ ಕೆರೆಯನ್ನು ಇತ್ತೀಚಿಗೆ ದುರಸ್ತಿ ಮಾಡಿಸಿದ್ದಾರೆ. ಪ್ರಸಕ್ತ ಕೆರೆಯಲ್ಲಿ ಹೂಳು ತುಂಬಿದೆ. ಇಲ್ಲಿ ಸರಿಯಾದ ನಿರ್ವಹಣೆ ಇಲ್ಲದ ಕಾರಣ ಸಾಕಷ್ಟು ಗಿಡಮರಗಳು ಬೆಳದಿವೆ. ಅಲ್ಲದೇ ಕೆರೆಯ ಏರಿಯಲ್ಲಿಯೂ ಗಿಡಮರ ಬೆಳದು ಅದು ಅಲ್ಲಲ್ಲಿ ಶಿಥಿಲವಾಗಿದ್ದು, ಸಾಕಷ್ಟು ದುಸ್ಥಿತಿಯಲ್ಲಿದೆ. ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮಹತ್ವವಾಗಿದ್ದು, ಇಲ್ಲಿನ ಕೆರೆಯನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೆರೆಯ ಒಳ ಭಾಗಕ್ಕೆ ಸಮಗಾತ್ರದ ಬೆಣೆಯಾಕಾರದ (WEDGE SHAFE) ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಏರಿಯನ್ನು ನಿರ್ಮಿಸಲಾಗಿದೆ. ಕೆರೆ ಏರಿಯು ಅಂಕು-ಡೊಂಕಿನ ಆಕಾರದಲ್ಲಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೪೮೮.೦೦ಕಿ.ಮೀ. ಮಳೆಯಾಗುತ್ತದೆ. ಚೌಕಕಾರದ ತೂಬನ್ನು ಇಲ್ಲಿ ಮಾಡಲಾಗಿದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ಕಾಲುವೆ ಮತ್ತು ತೂಬುಗಳಿವೆ. ಎಡದಂಡೆ ಕಾಲುವೆ ಉದ್ದ ೭.೦೦ ಕೀ.ಮೀ. ಇದೆ. ಈ ಕೆರೆಯ ಹೆಚ್ಚಾದ ನೀರು ಪರುಶುರಾಮ ದೇವರ ಕೆರೆಗೆ ಹರಿದು ಹೋಗುತ್ತದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ತೆಂಗು, ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಉತ್ತಮ ಮಳೆ ಬಂದು ಕೆರೆ ಭರ್ತಿಯಾದಲ್ಲಿ ಪ್ರಸಕ್ತ ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೨೯. ಗಂಗಸಮುದ್ರ ಕೆರೆ**

ಗಂಗಸಮುದ್ರ ಗ್ರಾಮವು ಹಿರಿಯೂರು ತಾಲ್ಲೂಕಿನಲ್ಲಿದ್ದು, ಇದು ರಾಮಗಿರಿ ಹತ್ತಿರದಲ್ಲಿದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೨೫ ಕಿ.ಮೀ ದೂರದಲ್ಲಿದೆ. ಇಲ್ಲಿ ಅನೇಕ ಶಾಸನಗಳು, ವೀರಗಲ್ಲುಗಳು ಇವೆ. ಈ ಊರಿನಲ್ಲಿ ಮಧ್ಯಯುಗೀನ ಕಾಲದಲ್ಲಿ ಅಂದರೆ ವಿಜಯನಗರ ಕಾಲದಲ್ಲಿ ನಿರ್ಮಿತವಾದ (ಕ್ರಿ.ಶ.೧೫ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಗಂಗಸಮುದ್ರ ಕೆರೆ ಎನ್ನಲಾಗುತ್ತದೆ. ಇದನ್ನು ೨೦೧೦-೧೧ರಲ್ಲಿ ಸರ್ಕಾರ ಇದನ್ನು ಪುನಃ ಜೀರ್ಣೋದ್ಧಾರ ಮಾಡಿಸಿದೆ. ಈ ಗ್ರಾಮದಲ್ಲಿ ಕೆಲ ಪ್ರಾಚೀನ ದೇವಾಲಯ ಮತ್ತು ಶಾಸನಗಳಿವೆ. ಇಲ್ಲಿನ ಕೆರೆ ಕಟ್ಟೆಯ ಶಾಸನವು ಕ್ರಿ.ಶ.೧೪೪೧ರಲ್ಲಿ ವಾಮರಸಯ್ಯ ಕೆರೆಯನ್ನು ಜೀರ್ಣೋದ್ಧಾರ ಮಾಡಿಸಿದನೆಂಬ ಅಂಶ ಸ್ಪಷ್ಟವಾಗುತ್ತದೆ.[೮೦]

ಇಲ್ಲಿನ ಕೆರೆಯು ಗ್ರಾಮದ ಪೂರ್ವ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣಾ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೧೪ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೮.೫೯ ಚ.ಕಿ.ಮೀ. ಇದ್ದು,

ಸಂಯುಕ್ತವಾಗಿ ೧೬.೦೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೭೬.೨೦ ಹೆಕ್ಟರ್ ಇದೆ. ಒಳಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಪ್ರತಿವರ್ಷ ೪೬೫.೬೮ ಮಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿ ಮತ್ತು ಎರಡು ಕಾಲುವೆಗಳನ್ನು ಹೊಂದಿದೆ. ನೀರಾವರಿ ವ್ಯವಸ್ಥೆಗೆ ಇಲ್ಲಿನ ಕಾಲುವೆ ವ್ಯವಸ್ಥೆ ಉತ್ತಮವಾಗಿದೆ. ಎಡದಂಡೆ ಕಾಲುವೆ ಉದ್ದ ೩.೦೦ ಕಿ.ಮೀ. ಇದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

ಇದೇ ಸಮಾನ ಲಕ್ಷಣಗಳನ್ನು ಹೊಂದಿದ ಚಿತ್ರದುರ್ಗದ ಪಾಳೆಯಗಾರನಾದ ಭಿಚ್ಚುಗತ್ತಿ ಭರಮಣ್ಣ ನಾಯಕನ ಕಾಲದ ಶೃಂಗೇರಿ ಹನುಮನಹಳ್ಳಿ ಕೆರೆ ಮತ್ತು ಗುಂಡೇರಿ ಕೆರೆಗಳು ಇದೇ ಹೊಳಲ್ಕೆರೆ ತಾಲೂಕಿನಲ್ಲಿದ್ದು, ಅಧ್ಯಯನ ದೃಷ್ಟಿಯಿಂದ ಪ್ರಮುಖವಾಗಿವೆ.

### ೩೦. ವೇಣುಕಲ್ಲುಗುಡ್ಡದ ಕೆರೆ

ವೇಣುಕಲ್ಲುಗುಡ್ಡ ಗ್ರಾಮವು ಹಿರಿಯೂರು ತಾಲ್ಲೂಕಿನಲ್ಲಿದೆ. ಇದು ಹರಿಯಬ್ಬೆಗೆ ಹತ್ತಿರದಲ್ಲಿದ್ದು, ತಾಲೂಕು ಕೇಂದ್ರದಿಂದ ಈಶಾನ್ಯಕ್ಕೆ ೧೯ ಕಿ.ಮೀ. ದೂರದಲ್ಲಿದೆ. ವೇಣು ಕಲ್ಲುಗುಡ್ಡದ ಸೀಮೆಯನ್ನು ಹರತಿ–ಐಮಂಗಲದ ತಿಪ್ಪಳ ನಾಯಕಾಚಾರ್ಯನು ಆಳುತ್ತಿದ್ದನೆಂದು ಹಿರಿಯೂರಿನ ಕ್ರಿ.ಶ.೧೫೩೩ರ ೩೫ನೇ ಶಾಸನ ವಿವರಿಸುತ್ತದೆ. ಈ ಊರಿನಲ್ಲಿ ಮಧ್ಯ ಕಾಲದಲ್ಲಿ ನಿರ್ಮಿಸಿದ(ಕ್ರಿ.ಶ.೧೫ನೇ ಶತಮಾನ) ಕೆರೆ ಇದೆ. ಇಲ್ಲಿನ ಕ್ರಿ.ಶ.೧೪೭೦ರ ಶಾಸನವು ಕೀಲಕ ಸಂವತ್ಸರದಲ್ಲಿ ಮಹಾಮಂಡಲೇಶ್ವರನಾದ ಕೊಂಡ ಕೊಂಡರಾಯದೇವ ಮಹಾ ಅರಸನು ಗುಡ್ಡದ ಗಿರಿಯಗೊಂಡನಿಗೆ "ಕಟ್ಟು ಕೊಡಿಗೆ ಮಾನ್ಯ" ಕೊಟ್ಟ ವಿಚಾರವನ್ನು ಮತ್ತು ಗುಡ್ಡದ ಸೀಮೆ ಶಿಥಿಲವಾದಾಗ ಅದನ್ನು ಕಟ್ಟಲು ಗದ್ದೆ ದಾನ ಮಾಡಿದ ವಿವರವನ್ನು ದಾಖಲಿಸಿದೆ.[೮೧] ಈ ಗ್ರಾಮದಲ್ಲಿ ಮಠ, ಬಸವಣ್ಣ, ಆಂಜನೇಯ, ಈಶ್ವರ, ಗಂಗಮ್ಮ, ಮಾರಮ್ಮ ಮೊದಲಾದ ಗುಡಿಗಳಿವೆ. ಅಲ್ಲದೇ ಇಲ್ಲಿ ಕೆಲ ಶಾಸನಗಳು, ಕೋಟೆ–ಕೊತ್ತಲ, ಮತ್ತು ಇತರೆ ಪ್ರಾಚ್ಯಾವಶೇಷಗಳಿವೆ.

ಕರ್ನಾಟಕ ಸರ್ಕಾರದ ಜಲಸಂಪನ್ಮೂಲ ಹಾಗೂ ಸಣ್ಣ ನೀರಾವರಿ ಇಲಾಖೆಯವರು ಜಿಲ್ಲಾ ಪಂಚಾಯತಿಯ ಅನುದಾನದಲ್ಲಿ ಈ ಕೆರೆಯನ್ನು "ಕೆರೆ ಸಂಜೀವಿನಿ" ಯೋಜನೆಯಡಿಯಲ್ಲಿ ಇತ್ತೀಚೆಗೆ ದುರಸ್ತಿ ಮಾಡಿಸಿದ್ದಾರೆ. ಪ್ರಸಕ್ತ ಕೆರೆಯಲ್ಲಿ ಹೂಳು ತುಂಬಿದೆ. ಇಲ್ಲಿ ಸರಿಯಾದ ನಿರ್ವಹಣೆ ಇಲ್ಲದ ಕಾರಣ ಸಾಕಷ್ಟು ಗಿಡಮರಗಳು ಬೆಳದಿವೆ. ಅಲ್ಲದೇ ಕೆರೆಯ ಏರಿಯಲ್ಲಿಯೂ ಗಿಡಮರ ಬೆಳದು ಅದು ಅಲ್ಲಲ್ಲಿ ಶಿಥಿಲವಾಗಿದೆ. ಕೆರೆಯ ಒಳ ಭಾಗಕ್ಕೆ ಸಮಗಾತ್ರದ ಬೆಣೆಯಾಕಾರದ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಏರಿಯನ್ನು ನಿರ್ಮಿಸಲಾಗಿದೆ. ಕೆರೆ ಕೋಡಿಯು ಇಂಗ್ಲೀಷ್ ವರ್ಣಮಾಲೆಯ

"ಯು" ಆಕಾರ(ಅರೆ ವೃತ್ತಾಕಾರ)ದಲ್ಲಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೩೯೮.೦೦ ಮಿ.ಮೀ. ಮಳೆಯಾಗುತ್ತದೆ. ಚೌಕಕಾರದ ತೂಬನ್ನು ಇಲ್ಲಿ ಮಾಡಲಾಗಿದ್ದು, ಅದರ ಮೇಲ್ಗಡೆ ಕೆಲ ದೇವತಾ ಶಿಲ್ಪಗಳಿವೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ಕಾಲುವೆ ಮತ್ತು ತೂಬುಗಳಿವೆ. ಎಡದಂಡೆ ಕಾಲುವೆ ಉದ್ದ ೯.೦೦ ಕೀ.ಮೀ. ಇದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ತೆಂಗು, ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಉತ್ತಮ ಮಳೆ ಬಂದು ಕೆರೆ ಭರ್ತಿಯಾದಲ್ಲಿ ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೩.೧. ಚಿಕ್ಕಜಾಜೂರು ಕೆರೆ**

ಈ ಗ್ರಾಮವು ಹೊಳಲ್ಕೆರೆ ತಾಲ್ಲೂಕಿನಲ್ಲಿದ್ದು, ಇದು ಚಿಕ್ಕಜಾಜೂರು ಹೋಬಳಿ ಕೇಂದ್ರದ ವ್ಯಾಪ್ತಿಯಲ್ಲಿದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೨೦ ಕಿ.ಮೀ ದೂರದಲ್ಲಿದೆ. ಇದು ಐತಿಹಾಸಿಕ ಗ್ರಾಮವಾಗಿದ್ದು, ಇಲ್ಲಿ ಅನೇಕ ದೇವಾಲಯ, ಶಾಸನಗಳು, ವೀರಗಲ್ಲುಗಳು ಇವೆ. ವಿಜಯನಗರದರಸರ ಮತ್ತು ಪಾಳೇಯಗಾರರ ಕಾಲದವರೆಗೆ ಈ ಊರನ್ನು "ಜಾಜೂರು ಸೀಮೆ" ಎಂದು ಕರೆಯಲಾಗುತ್ತಿತ್ತು. ಈ ಗ್ರಾಮದಲ್ಲಿ ಸಿದ್ದರಾಮೇಶ್ವರ ಮತ್ತು ಆಂಜನೇಯ ಸ್ವಾಮಿ ದೇವಾಲಯಗಳು ಪ್ರಮುಖವಾಗಿವೆ. ಇಲ್ಲಿನ ಆಂಜನೇಯ ದೇವಾಲಯದ ಬಳಿಯ ಶಾಸನವು ೧೪೬೨ರಲ್ಲಿ ಪೆನುಗೊಂಡೆಯ ವೀರಪ್ಪನಾಯ್ಕರು ಮದುವೆ ಸುಂಕ ಮಾನ್ಯ ಮಾಡಿದ್ದನ್ನು ಮತ್ತು ೧೪೩೮ರ ವಿಜಯನಗರದ ಶ್ರೀಕೃಷ್ಣದೇವರಾಯರ ನಾಯಕತನ ಪಾಲಿಸಿದ್ದಕ್ಕಾಗಿ ಮಲ್ಲರಸರು ಅಲ್ಲಿನ ತಿರುಮಲದೇವರಿಗೆ ತ್ಯಾಗದಹಳ್ಳಿಯನ್ನು ದಾನಬಿಟ್ಟದ್ದನ್ನು ದಾಖಲಿಸಿದೆ. ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮಹತ್ವವಾಗಿದ್ದು, ಈ ಊರಿನಲ್ಲಿ ಮಧ್ಯಯುಗದಲ್ಲಿ ನಿರ್ಮಿತವಾದ (ಕ್ರಿ.ಶ.೧೫ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಹೊಲತಿ ಹಾಳು ಕೆರೆ ಎನ್ನಲಾಗುತ್ತಿದೆ. ಇಲ್ಲಿನ ಹೊಲತಿಯೊರ್ವಳ ಶಾಪದಿಂದಾಗಿ ಮೂಲ ಊರು ಹಾಳಾಯಿತೆಂದು, ಆನಂತರ ಜನರು ಈಗ ಜಾಜೂರು ಎಂದು ಕರೆಯಲಾಗುವ ಪ್ರದೇಶಕ್ಕೆ ಸ್ಥಳಾಂತರ ಗೊಂಡರೆಂದು ಹಾಗೂ ಹೊಲತಿಯಿಂದಾಗಿ ಹಾಳದ ಹಳೆಯ ಸರಹದ್ದಿನಲ್ಲಿರುವ ಈ ಕೆರೆಯನ್ನು ಹೊಲತಿಹಾಳು ಕೆರೆ ಎಂದು ಕರೆಯಲಾಗುತ್ತಿತ್ತೆಂದು ಅಭಿಪ್ರಾಯಪಡುತ್ತಾರೆ.[೨]

ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಹೀಗಿವೆ. ಇಲ್ಲಿನ ಕೆರೆಯು ಗ್ರಾಮದ ದಕ್ಷಿಣ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಪ್ರಸಕ್ತ ಸಣ್ಣ ನೀರಾವರಿ ಇಲಾಖೆಯ ಸುಪರ್ದಿಯಲ್ಲಿರುವ ಈ ಕೆರೆ ಬಹುತೇಕ ಶಿಥಿಲವಾಗಿದೆ. ಈ ಕೆರೆಯ ಏರಿಯ ಮಟ್ಟ ೧೬ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೬.೯೮ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೧೮.೦೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೫೬.೪೦ ಹೇಕ್ಟರ್ ಇದೆ. ಒಳಭಾಗಕ್ಕೆ ಕಗ್ಗಲ್ಲು

ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು(ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೪೬೮.೦೦ ಮಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಈ ಕೆರೆಯು ಅತ್ಯಂತ ವಿಶಾಲವಾಗಿದ್ದು, ಇಲ್ಲಿನ ಪ್ರದೇಶವು ಕಪ್ಪು ಮಿಶ್ರಿತವಾದ ಫಲವತ್ತೆಯ ಮಣ್ಣನ್ನು ಹೊಂದಿದೆ.

ಇಲ್ಲಿ ಎರಡು ತೂಬುಗಳನ್ನು ಕಾಣಬಹುದು. ನೀರಾವರಿ ವ್ಯವಸ್ಥೆಗೆ ಇಲ್ಲಿನ ಕಾಲುವೆ ವ್ಯವಸ್ಥೆ ಉತ್ತಮವಾಗಿದೆ. ಎಡದಂಡೆ ಕಾಲುವೆ ಉದ್ದ ೧.೬೭ ಕಿ.ಮೀ. ಇದೆ. ಕೆರೆಯ ಹಿಂಬದಿಯಲ್ಲಿ ಅನೇಕ ಪ್ರಾಚ್ಯಾವಶೇಷಗಳಿವೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ತೆಂಗು, ಜೋಳ, ಶೇಂಗಾ ಮತ್ತಿತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೩.೨. ಮಲ್ಲಾಪುರ ಕೆರೆ**

ಮಲ್ಲಾಪುರ ಕೆರೆಯು ಜಿಲ್ಲೆಯ ಚಿತ್ರದುರ್ಗ ತಾಲ್ಲೂಕಿನಲ್ಲಿದ್ದು, ಚಿತ್ರದುರ್ಗ ನಗರಕ್ಕೆ ಹೊಂದಿಕೊಂಡಂತಿರುವ ಪಿಳ್ಳೆಕೆರನಹಳ್ಳಿ ಉಪನಗರ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಸಮೀಪವೇ ರಾಷ್ಟ್ರೀಯ ಹೆದ್ದಾರಿ-೧೩ ಹಾದು ಹೋಗಿದೆ. ಈ ಊರಿನಲ್ಲಿ ಚಿತ್ರದುರ್ಗದ ಪಾಳೆಯಗಾರನಾದ ತಿಮ್ಮಣ್ಣ ನಾಯಕನ ಕಾಲಾವಧಿಯಲ್ಲಿ ನಿರ್ಮಿತವಾದ (ಕ್ರಿ.ಶ.೧೬ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, (ಚಿತ್ರದುರ್ಗ ಪಾಳೆಯಗಾರರ ಕಾಲದ ಚಾರಿತ್ರಿಕ ದಾಖಲೆಗಳಲ್ಲಿ ಇದರ ಪ್ರಸ್ತಾಪ ಬರುವುದರಿಂದ ಇದು ಪ್ರಾಯಶಃ ಅವರ ಕಾಲಕ್ಕಿಂತ ಪೂರ್ವದ್ದು ಎಂದು ಹೇಳಬಹುದೆಂದು ವಿದ್ವಾಂಸರಾದ ಡಾ ರಾಜಶೇಖರಪ್ಪ ಅಭಿಪ್ರಾಯಪಟ್ಟಿದ್ದಾರೆ). ಅದನ್ನು ಮಲ್ಲಾಪುರ ಕೆರೆ/ಪಿಳ್ಳೆಕೆರೆನಹಳ್ಳಿಕೆರೆ ಎನ್ನಲಾಗುತ್ತದೆ. ಈ ಸ್ಥಳವು ನಗರ ಕೇಂದ್ರ ಭಾಗದಿಂದ ೨ಕಿ.ಮೀ. ದೂರದಲ್ಲಿದೆ. ಕೆರೆ ನಿರ್ಮಾಣದ ವೇಳೆ ಅದರ ಕೆರೆಯ ಏರಿ ನಿಲ್ಲಲ್ಲು ಒಬ್ಬ ಪಿಳ್ಳೆ (ಕನ್ಯೆ ಹುಡುಗಿ) ಯನ್ನು ಬಲಿ ನೀಡಿದ ಕಾರಣಕ್ಕೆ ಈ ಕೆರೆಗೆ ಪಿಳ್ಳೆಕೆರೆ ಎಂದು ಹೆಸರು ಬಂತೆಂದು ಸ್ಥಳೀಯರಲ್ಲಿ ಐತಿಹ್ಯವಿದೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಉತ್ತರ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೩೨.೦೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೨೮.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೩೯.೭೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೧೧೨೩.೦೦ ಹೇಕ್ಟರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಹರಿವಿನ ಪ್ರಮಾಣ ೩೯.೩೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ (ಎಂ.ಸಿ.ಎಂ.) ೪.೩೬೩ ಇದೆ. ಇದರ ಉಪಯುಕ್ತತೆ ೨.೩೩೫ (ಎಂ.ಸಿ.ಎಂ.) ಮಾತ್ರ. ಇದರ ಒಟ್ಟು ವಿನ್ಯಾಸದ ಅಚ್ಚುಕಟ್ಟು ಪ್ರದೇಶ ೧೯೭.೨೧ ಹೇಕ್ಟರಾಗಿದ್ದು, ಮಳೆ ಆಶ್ರಿತವಾಗಿರುವ

ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೪೫೫.೬೩ ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ.

ಈ ಕೆರೆಯು ವಿಶಾಲವಾದ ಅಂಗಳವನ್ನು ಹೊಂದಿದ್ದು, ಫಲವತ್ತತೆಯ ಮಣ್ಣಿನಿಂದ ಕೂಡಿದೆ. ಮಳೆ ಆಶ್ರಿತವಾಗಿರುವ ಈ ಕೆರೆಗೆ ಸುತ್ತಲಿನ ಎತ್ತರದ ಬೆಟ್ಟ ಪ್ರದೇಶದಿಂದ ನೀರು ಬಂದು ಹಿಂದೆ ಸೇರ್ಪಡೆಯಾಗುತ್ತಿತ್ತು. ಆದರೆ ಇಂದು ಆ ಮಾರ್ಗಗಳಿಗೆ ಅಡ್ಡಲಾಗಿ ಮನೆಗಳನ್ನು ಕಟ್ಟಿರುವುದರಿಂದ ಆ ನೀರು ಬೇರೆಡೆ ಹೋಗುತ್ತದೆ. ಅಲ್ಲದೇ ನಗರದ ಎಲ್ಲಾ ಕೊಳಚೆ ನೀರು ಇಲ್ಲಿಗೆ ಬಂದು ಸೇರ್ಪಡೆಯಾಗುತ್ತಿರುವುದು ವಿಷಾದನೀಯ. ಈ ಕೆರೆಯಲ್ಲಿ ತೂಬಿನ ವ್ಯವಸ್ಥೆ ಇದೆ. ಎಡದಂಡೆಯ ಭಾಗದಲ್ಲಿ ಮತ್ತು ಬಲದಂಡೆಯ ಭಾಗದಲ್ಲಿ ನೀರು ಹೊರ ಹೋಗಲು ಕಾಲುವೆಗಳಿವೆ. ಕೆರೆಯ ಮುಂಭಾಗದಲ್ಲಿ ನಶಿಸಿದ ಚಿಕ್ಕ, ಗಂಗಮ್ಮನ ಗುಡಿ ಇದೆ. ಈ ಕೆರೆಯು ತುಂಬಿದರೆ ಕೃಷಿಗೆ ಪ್ರಮುಖ ಉತ್ತೇಜನಕಾರಿಯಾಗಿರುತ್ತದೆ. ಕೆರೆಯ ಏರಿಯು ಭದ್ರತೆಯಿಂದ ಕೂಡಿದೆ. ಇತ್ತೀಚೆಗೆ ಸೀಮೆ ಜಾಲಿ ಗಿಡಗಳು ಬೆಳೆದು ಹಾದಿಗೆ ಅಡ್ಡವಾಗಿದ್ದು, ಅವುಗಳನ್ನು ತೆಗದು ದುರಸ್ತಿ ಮಾಡಬೇಕಾದ ಅವಶ್ಯಕತೆ ಇದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ಜೋಳ, ಅಡಿಕೆ, ತೆಂಗು, ಭತ್ತ ಹಾಗೂ ಇತರೆ ವಾಣಿಜ್ಯ ಬೆಳೆಗಳನ್ನು ಕಡಿಮೆ ಪ್ರಮಾಣದಲ್ಲಿ ಬೆಳೆಯುತ್ತಾರೆ. ಒಳ್ಳೆಯ ಮಳೆಯಾದರೆ ಗಣನೀಯ ಪ್ರಮಾಣದಲ್ಲಿ ನೀರು ಸಂಗ್ರಹಗೊಳ್ಳುವ ಕೆರೆಯಾಗಿದ್ದು, ಈಗಲೂ ಅದರ ನೀರು ಸ್ವಲ್ಪ ಮಟ್ಟಿಗೆ ಕೆರೆಗೆ ಕೆಳಗಿನ ಪ್ರದೇಶದಲ್ಲಿರುವ ತೋಟದ ಕೃಷಿಗೆ ಬಳಕೆ ಮಾಡಿಕೊಳ್ಳುವ ಸ್ಥಿತಿಯಲ್ಲಿದೆ. ಇನ್ನುಳಿದಂತೆ, ಇತರೆಲ್ಲ ಕೆರೆಗಳಂತೆ ಇದು ಕೂಡಾ ಜಾನುವಾರುಗಳಿಗೆ ಉಪಯೋಗವಾಗುತ್ತಿದೆ.

**೩೩. ಹರ್ತಿಕೋಟೆ ಕೆರೆ**

ಹರ್ತಿಕೋಟೆ ಗ್ರಾಮವು ಹಿರಿಯೂರು ತಾಲ್ಲೂಕಿನಲ್ಲಿದೆ. ಇದು ತಾಲೂಕು ಕೇಂದ್ರದಿಂದ ೨೬ ಕಿ.ಮೀ. ದೂರದಲ್ಲಿದೆ. ಬಹು ಕಾಲದ ಇತಿಹಾಸವುಳ್ಳ ಇದನ್ನು ವಿಜಯನಗರದ ಅರಸನಾದ ಬುಕ್ಕರಾಯನಿಂದ ಜಹಗೀರನ್ನು ಪಡೆದು ಇಲ್ಲಿ ಆಳ್ವಿಕೆ ಮಾಡುತ್ತಿದ್ದ ಪಾಳೇಯಗಾರನಾದ ತಿಪ್ಪರಾಜ(ಕ್ರಿ.೧೩೪೦-೧೩೫೫) ತನ್ನ ಹಿರಿಯರ ಹೆಸರಿನಲ್ಲಿ ಸ್ಥಾಪಿಸಿದನೆಂದು ಪ್ರತೀತಿ ಇದೆ. ಇದನ್ನು ಹರತಿಕೋಟೆ, ಹರ್ತಿಕೋಟೆ, ಅರ್ತಿಕೋಟೆ ಎಂದು ಕರೆಯಲಾಗುತ್ತದೆ. ಚಿತ್ರದುರ್ಗ ಪಾಳೇಯಗಾರರಿಗೂ ಮೊದಲೇ ಇಲ್ಲಿ ಹರತಿ ಪಾಳೇಯಗಾರ ವಂಶದವರು ಸುಮಾರು ೧೪ ಜನರು ಇಲ್ಲಿ ಮತ್ತು ೪೫ ಜನರು ಐಮಂಗಳ, ರತ್ನಗಿರಿ, ಮೊದಲಾದೆಡೆ ಆಳ್ವಿಕೆ ಮಾಡಿದ್ದಾರೆ. ಇಲ್ಲಿ ಅನೇಕ ಪ್ರಾಚೀನ ದೇವಾಲಯ, ಶಾಸನಗಳು, ಕೋಟೆ-ಕೊತ್ತಲದ ಅವಶೇಷಗಳು, ವೀರಗಲ್ಲುಗಳು ಇವೆ.

ಈ ಊರಿನಲ್ಲಿ ಹರತಿ ಪಾಳೇಯಗಾರರ ಕಾಲದಲ್ಲಿ ಅಂದರೆ ೧೫೩೩-೧೭೭೯ರಲ್ಲಿ ನಿರ್ಮಿಸಲಾದ (ಕ್ರಿ.ಶ.೧೬-೧೭ನೇ ಶತಮಾನ) ಎರಡು ಐತಿಹಾಸಿಕ ಕೆರೆಗಳಿವೆ. ಅವುಗಳನ್ನು ದೊಡ್ಡ ಕೆರೆ ಮತ್ತು ಚಿಕ್ಕ ಕೆರೆ ಎನ್ನಲಾಗುತ್ತದೆ. ಇಲ್ಲಿನ ದೊಡ್ಡ ಕೆರೆಯನ್ನು ೨೦೦೨ ರಲ್ಲಿ ಸರ್ಕಾರ ಇದನ್ನು ಜೀರ್ಣೋದ್ಧಾರ ಮಾಡಿಸಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಎರಡು ಕೆರೆಗಳು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತವೆ. ದೊಡ್ಡ ಕೆರೆಯು ಊರಿನ ಪ್ರವೇಶ ದ್ವಾರದ ಬಳಿ ಇದ್ದು,

ಚಿಕ್ಕ ಕೆರೆಯು ಯರಬಳ್ಳಿ ಮಾರೆಕ್ಕನ ಗುಡಿಯ ಮುಂಭಾಗದಲ್ಲಿದೆ. ಬಹತೇಕ ಈ ಎರಡು ಕೆರೆಗಳು ಸಮಾನ ಲಕ್ಷಣಗಳನ್ನೊಂದಿದ್ದು, ಗಾತ್ರದಲ್ಲಿ ಮಾತ್ರ ವ್ಯಾತ್ಯಾಸವಿದೆ. ಈ ಹಿನ್ನೆಲೆಯಲ್ಲಿ ಇಲ್ಲಿನ ದೊಡ್ಡ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಈ ಕೆರೆಯ ಏರಿಯ ಮಟ್ಟ ೧೫ ಅಡಿಯಾಗಿದ್ದು, ಹಾಗೂ ಗರಿಷ್ಠ ನೀರಿನ ಪ್ರಮಾಣ ೫೯೮.೦೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೩.೧೨ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೩೨.೨೪ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೯೮.೯೦ ಹೇಕ್ಟರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೩.೧೨ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ (ಎಂ.ಸಿ.ಎಂ.) ೧.೯೭೦. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೧೨೩.೦೬ ಹೇಕ್ಟರ್ ಇದೆ. ಒಳ ಭಾಗಕ್ಕೆ ಸಮಗಾತ್ರದ ಬೆಣೆಯಾಕಾರದ (WEDGE SHAFE) ಕಗ್ಗಲ್ಲು ಮತ್ತು ಗ್ರ್ಯಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೭೦೦.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೧೪.೦೦ ಮೀಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೪೧೫.೦೦ ಮಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿ ಮತ್ತು ಎರಡು ಕಾಲುವೆಗಳನ್ನು ಹೊಂದಿದೆ. ಅದು ೧೪೨.೩೦ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೪೮೪.೦೦ ಇದ್ದು, ಅದು ಇರುವ ಸ್ಥಳ (ಚೈನೇಜ್) ೧೯.೦೦ ಮೀ ಹಾಗೂ ೧೫.೯೩ ಮೀಟರ್ ಇದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಚೌಕಾಕಾರದ ಎರಡು ತೂಬುಗಳಿವೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ೯೬೦.೦೦ ಮೀ, ಎಡದಂಡೆ ಕಾಲುವೆ ೮೮೦ ಮೀ. ಉದ್ದಗಳನ್ನು ಹೊಂದಿವೆ.

ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೩೪. ಭರಮಸಾಗರದ ಕೆರೆ**

ಭರಮಸಾಗರವು ಜಿಲ್ಲೆಯ ಚಿತ್ರದುರ್ಗ ತಾಲ್ಲೂಕಿಗೆ ಸೇರಿದ್ದು, ಚಿತ್ರದುರ್ಗ ಮತ್ತು ದಾವಣಗೆರೆಯ ಮಧ್ಯ ಭಾಗಕ್ಕಿದ್ದು, ರಾಷ್ಟ್ರೀಯ ಹೆದ್ದಾರಿ-೪ರ ಬಳಿ ಇದೆ. ಹೋಬಳಿ ಮತ್ತು ಗ್ರಾಮ ಪಂಚಾಯತಿಯ ಕೇಂದ್ರವಾಗಿದೆ. ಇಲ್ಲಿ ದುರ್ಗದ ಖ್ಯಾತ ಪಾಳೆಯಗಾರನಾದ ಭರಮಣ್ಣನಾಯಕನ ಕಾಲದಲ್ಲಿ ನಿರ್ಮಿತವಾದ (ಕ್ರಿ.ಶ.೧೭ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಭರಮಸಾಗರ ಕೆರೆ ಎನ್ನಲಾಗುತ್ತದೆ (ಟೋಪೋಶೀಟ್ ಸಂಖ್ಯೆ ೫೭ಸಿ/೧೯ ಇದೆ.). ಇದು ತಾಲ್ಲೂಕು ಕೇಂದ್ರದಿಂದ ೨೪ ಕಿ.ಮೀ. ದೂರದಲ್ಲಿದೆ. ಇಲ್ಲಿ ನಾಯಕ, ಲಿಂಗಾಯಿತ, ಆದಿ ಕರ್ನಾಟಕ, ವಡ್ಡರು, ಮುಸ್ಲಿಮರು ಮುಂತಾದ ಸಮುದಾಯದ ಜನರು ವಾಸವಾಗಿದ್ದು, ಅವರಲ್ಲಿ ಕೋಮು ಸಾಮರಸ್ಯವಿದೆ. ಈ ಗ್ರಾಮದ ಹೊರವಲಯದಲ್ಲಿ ಕಲ್ಲೇಶ್ವರ, ಈಶ್ವರ, ಬಸವೇಶ್ವರ, ಗಣೇಶ, ದುರ್ಗಾದೇವಿ ದೇವಾಲಯಗಳಿವೆ.

ಇಲ್ಲಿ ೫ ವರ್ಷಕ್ಕೊಮ್ಮೆ ನಡೆಯುವ ಗ್ರಾಮ ದೇವತೆಯ ಜಾತ್ರೆಯು ಅತ್ಯಂತ ವಿಶೇಷ ಮತ್ತು ದೊಡ್ಡ ಜಾತ್ರೆಯಾಗಿದೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದೆ. ಇದು ಗ್ರಾಮದ ಪಶ್ಚಿಮ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಸರಣಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೭೭.೨೧ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೨೪.೧೮ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೨೯೧.೭೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೧೭೮.೪೨ ಹೇಕ್ಟರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೨೫.೩೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ (ಎಂ.ಸಿ.ಎಂ.) ೧೨.೩೬೩ ಇದೆ. ಇದರ ಉಪಯುಕ್ತತೆ ೨೮.೩೩೫ (ಎಂ.ಸಿ.ಎಂ.) ಮಾತ್ರ. ಇದರ ಒಟ್ಟು ವಿನ್ಯಾಸದ ಅಚ್ಚು ಕಟ್ಟು ಪ್ರದೇಶ ೨೭೭.೨೧ ಹೇಕ್ಟರ್ ಆಗಿದ್ದು, ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೫೫೫.೬೩ ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಇದು ಅಷ್ಟು ದೊಡ್ಡ ಕೆರೆ ಎನ್ನಿಸಿಕೊಳ್ಳದಿದ್ದರೂ ಸಹ ಇದರ ಏರಿ ಕಟ್ಟಡವನ್ನು ವಿಶೇಷವಾಗಿ ನಿರ್ಮಿಸಲಾಗಿದೆ. ಈ ಕೆರೆಯ ಹಿಂದುಗಡೆ ಒಂದು ಏರಿಗೆ ಮತ್ತೊಂದು ಏರಿಯನ್ನು ಜೋಡಿಸಿ ಒಟ್ಟು ೩ ಏರಿಗಳನ್ನು ಕೆರೆಯ ಭದ್ರತೆ ಮತ್ತು ರಕ್ಷಣೆಯ ದೃಷ್ಟಿಯಿಂದ ನಿರ್ಮಿಸಿದ್ದಾರೆ. ಮೊದಲನೆ ಏರಿಯ ಮುಂದುಗಡೆ ಸೂಜಿಕಲ್ಲು ಕಟ್ಟಡ ಕಟ್ಟಿ ಅದರಲ್ಲಿ ಉರುಳುಗಲ್ಲುಗಳನ್ನು ವಿಶೇಷವಾಗಿ ಇಳಿ ಬಿಟ್ಟಿದ್ದಾರೆ. ಈ ಕಾರಣಕ್ಕಾಗಿ ಈ ಕಟ್ಟಡವನ್ನು ಜಿಲ್ಲೆಯಲ್ಲಿಯೇ ವಿಶೇಷವಾಗಿ ನಿರ್ಮಿಸಲಾಗಿದೆ ಎಂದು ಹೇಳಬಹುದು. ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತ, ಜೋಳ, ಶೇಂಗಾ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಸಣ್ಣ ನೀರಾವರಿ ಇಲಾಖೆಯವರು ಇಲ್ಲಿ ಮೀನು ಮರಿ ಉತ್ಪಾದನೆ ಮಾಡಿ ಮೀನು ಕೃಷಿಗೆ ಒತ್ತು ನೀಡಿದ್ದಾರೆ. ಇದರಿಂದ ಈ ಭಾಗದ ಕೆಲವರಿಗೆ ಉದ್ಯೋಗ ದೊರೆತು ಅವರ ಆದಾಯಕ್ಕೂ ಆಧಾರವಾಗಿದೆ.

**೩.೫. ನಗರಂಗೆರೆಕೆರೆ**

ನಗರಂಗೆರೆಯು (ರೇಖಾಂಶ ೭೬° ೪೦° ೨೦° ೫೮" ಮತ್ತು ಅಕ್ಷಾಂಶ-೧೪° ೧೭° ೩೪.೧೪" E) ಜಿಲ್ಲೆಯ ಚಳ್ಳಕೆರೆ ತಾಲ್ಲೂಕು ಮತ್ತು ಅದೇ ಹೋಬಳಿಗೆ ಸೇರಿದ್ದು, ಗ್ರಾಮ ಪಂಚಾಯತಿಯ ಕೇಂದ್ರವಾಗಿದೆ. ಇಲ್ಲಿ ಪಾಳೆಯಗಾರರ ಕಾಲದಲ್ಲಿ ನಿರ್ಮಿತವಾದ (ಕ್ರಿ.ಶ.೧೭ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ನಗರಂಗೆರೆ ಕೆರೆ ಎನ್ನಲಾಗುತ್ತದೆ (ಈ ಕೆರೆಯ ನೋಂದಣಿ ಸಂಖ್ಯೆ ೬೪೫/೨೦೦೯-೧೦ ಇದ್ದು, ಅದರ ಟೋಪೋಶೀಟ್ ಸಂಖ್ಯೆ ೫೭ಬಿ/೧೧ ಇದೆ.). ಇದು ತಾಲ್ಲೂಕು ಕೇಂದ್ರದಿಂದ ೪ ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಚಳ್ಳಕೆರೆ ಪಟ್ಟಣಕ್ಕೆ ಹೊಂದಿಕೊಂಡಿದ್ದು, ಇಲ್ಲಿ ಪ್ರಮುಖವಾಗಿ ಎಣ್ಣೆ ಮತ್ತು ಕಟ್ಟಿಗೆಯ ಕಾರ್ಖಾನೆಗಳನ್ನು ಕಾಣಬಹುದಾಗಿದೆ. ಗ್ರಾಮದ ಹೊರ ವಲಯದಲ್ಲಿ ಈ ಗಿರಣಿಗಳನ್ನು ಸಾಲು ಪಂಕ್ತಿಗಳಲ್ಲಿ ಕಾಣಬಹುದು. ಇಲ್ಲಿ

ನಾಯಕ, ಲಿಂಗಾಯಿತ, ಆದಿ ಕರ್ನಾಟಕ, ವಡ್ಡರು, ಮುಸ್ಲಿಮ್ ಮುಂತಾದ ಸಮುದಾಯದ ಜನರು ವಾಸವಾಗಿದ್ದಾರೆ. ಕೋಮು ಸಾಮರಸ್ಯವನ್ನು ಇಲ್ಲಿ ಕಾಣಬಹುದಾಗಿದೆ. ಈ ಗ್ರಾಮದ ಹೊರ ವಲಯದಲ್ಲಿ ಅಂದರೆ ಉಪ್ಪಾರಹಟ್ಟಿ ಮತ್ತು ದೊಡ್ಡೇರಿಗಳ ಮಧ್ಯದಲ್ಲಿ ಗರೀಬ್ ಷಾ–ವಲಿ ಎನ್ನುವ ದರ್ಗಾವಿದೆ. ಇಲ್ಲಿ ಪ್ರತಿ ವರ್ಷವೂ ಉರುಸ್ ಮಹೋತ್ಸವವನ್ನು ನಡೆಸಲಾಗುತ್ತದೆ. ಹಿಂದೂ–ಮುಸ್ಲಿಮರು ಭಾವೈಕ್ಯತೆಯನ್ನು ಮೆರೆಯುವುದು ಇಲ್ಲಿನ ಜಾತ್ರೆಯ ವಿಶೇಷ. ಈ ಗ್ರಾಮದಲ್ಲಿ ಕೋಡಿ ಮಲ್ಲೇಶ್ವರ, ತೇರು ಮಲ್ಲೇಶ್ವರ, ಬನಶಂಕರಿ ದೇವಾಲಯಗಳು ಪ್ರಮುಖವಾಗಿವೆ. ಇಲ್ಲಿ ೫ ವರ್ಷಕ್ಕೊಮ್ಮೆ ನಡೆಯುವ ಗ್ರಾಮ ದೇವತೆಯ ಜಾತ್ರೆಯು ಅತ್ಯಂತ ವಿಶೇಷ ಮತ್ತು ದೊಡ್ಡ ಜಾತ್ರೆಯಾಗಿದೆ. ಅದಲ್ಲದೆ ಪ್ರತಿ ಕಾರ್ತಿಕ ಮಾಸದಲ್ಲಿ ಮೈಲಾರಲಿಂಗೇಶ್ವರ ಸ್ವಾಮಿಯ ಕಾರ್ತಿಕೋತ್ಸವ ಸಹ ಇಲ್ಲಿ ನಡೆಯುತ್ತದೆ.

ಇಲ್ಲಿನ ಕೆರೆಯು ಗ್ರಾಮದ ಪಶ್ಚಿಮ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಸರಣಿಯಲ್ಲಿ ಮತ್ತು ಗರಣಿ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೭೭.೨೧ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೨೪.೧೮ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೯೧.೭೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೧೧೬.೪೨ ಹೇಕ್ಟರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೨೫.೩೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ (ಎಂ.ಸಿ.ಎಂ.) ೨.೩೬೩ ಇದೆ. ಇದರ ಉಪಯುಕ್ತತೆ ೨.೩೩೫ (ಎಂ.ಸಿ.ಎಂ.) ಮಾತ್ರ. ಇದರ ಒಟ್ಟು ವಿನ್ಯಾಸದ ಅಚ್ಚು ಕಟ್ಟು ಪ್ರದೇಶ ೭೭.೨೧ ಹೇಕ್ಟರ್ ಆಗಿದ್ದು, ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಪ್ರತಿ ವರ್ಷ ೪೫೫.೬೩ ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಅಳವಡಿಸಲಾಗಿದೆ.

ಈ ಕೆರೆಯು ಅತ್ಯಂತ ವಿಶಾಲವಾದ ಅಂಗಳವನ್ನು ಹೊಂದಿದ್ದು, ಇಂದು ಜಾಲಿಮರ ಮತ್ತು ಸೀಮೆ ಜಾಲಿ ಗಿಡಗಳಿಂದ ಆವೃತವಾಗಿದೆ. ಈ ಕೆರೆಗೆ ಕೆರೆಕಲ್ ಕೆರೆ ಹಳ್ಳದಿಂದ ಮತ್ತು ಸೋಮಗುದ್ದು ಹಳ್ಳದಿಂದ ನೀರು ಬರುತ್ತದೆ. ಕೆರೆಯ ಏರಿಯು ಅತ್ಯಂತ ವಿಶಾಲ ಮತ್ತು ಉದ್ದವಾಗಿದ್ದು, ಇದು ಎರಡು ತೂಬುಗಳನ್ನು ಹೊಂದಿದೆ. ಕೆರೆಯ ಕೋಡಿ ಪಕ್ಕದಲ್ಲಿ ಕೋಡಿ ಮಲ್ಲೇಶ್ವರನ ದೇವಾಲಯವಿದೆ. ಚಿಕ್ಕ ಕೋಡಿಯ ಪಕ್ಕದಲ್ಲಿ ನಿಸರ್ಗ ನಿರ್ಮಿತ ಕಪ್ಪು ಶಿಲೆ (ಕೆರೆಕಲ್) ಹೇರಳವಾಗಿ ದೊರೆಯುತ್ತದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತ, ಜೋಳ, ಶೇಂಗಾ ಬೆಳೆಗಳನ್ನು ಬೆಳೆಯುತ್ತಿದ್ದರು. ಇದರ ನೀರು ಕೃಷಿ ಭೂಮಿಗೆ ಹೆಚ್ಚಿನದಾಗಿ ಉಪಯುಕ್ತವಾಗಿತ್ತೆಂದು ಅಲ್ಲಿನ ಸ್ಥಳೀಯರು ಹೇಳುತ್ತಾರೆ. ಈ ಕೆರೆಯ ಅಂಗಳದಲ್ಲಿ ಇತ್ತೀಚೆಗೆ ನಗರೀಕರಣದ ಪ್ರಭಾವದಿಂದಾಗಿ ಮನೆಗಳನ್ನು ನಿರ್ಮಿಸಿರುವುದು ಮತ್ತು ಗುಡಿಸಲುಗಳನ್ನು ಹಾಕಿರುವುದು ವಿಷಾದನೀಯವಾಗಿದೆ. ಕೆರೆಯಲ್ಲಿನ ಮಣ್ಣನ್ನು ಜನರು ಕೃಷಿ ಭೂಮಿಗೆ ಟ್ರಾಕ್ಟರ್‌ಗಳ ಮೂಲಕ ಹೇರಿಸುವುದು ಪ್ರಮುಖವಾದ ಅಂಶವಾಗಿದೆ. ಇದರಿಂದ ಕೆರೆಯ ಊಳನ್ನು ತೆಗೆದಂತಾಗುತ್ತದೆ. ಕೆರೆಯಲ್ಲಿ ಬೆಳೆದ ಸೀಮೆಜಾಲಿ

ಗಿಡಗಳು ಅನೇಕ ಬಡವರಿಗೆ ಜೀವನಾಧಾರವಾಗಿವೆ. ಕಟ್ಟಿಗೆ ಕಡಿದು ಜೀವನ ನಡೆಸುವ ಕುಟುಂಬಗಳಿಗೆ ಸಹಯಕವಾಗಿವೆ ಎಂದು ಹೇಳಬಹುದು.

**೩.೬. ಬೆಲಗೂರುಕೆರೆ**

ಬೆಲಗೂರು ಗ್ರಾಮವು ಹೊಸದುರ್ಗ ತಾಲ್ಲೂಕಿನಲ್ಲಿದೆ. ಹೊಸದುರ್ಗ-ಹುಳಿಯಾರು ಮಾರ್ಗ ಮಧ್ಯೆ ಇರುವ ಇದು ತಾಲೂಕು ಕೇಂದ್ರದಿಂದ ೨೫ ಕಿ.ಮೀ. ದೂರದಲ್ಲಿದೆ. ಇದನ್ನು ೧೪೬೩ರಲ್ಲಿ ಸಾಳ್ವ ನರಸಿಂಗರಾಯನು ಮುತ್ತಿದನು ಎಂದು ತೆಲುಗಿನ ವರಾಹ ಪುರಾಣ ದಾಖಲಿಸಿದೆ. ಇಲ್ಲಿ ಭೈರವನಾಯಕ ಆಳ್ವಿಕೆ ಮಾಡುತ್ತಿದ್ದ. ಈತನ ಮಗಳನ್ನು ಬೂದಿಹಾಳು ಪಾಳೇಯಗಾರನಾದ ಸಿರುಮನ ಮಗನಾದ ರಾಜೇಂದ್ರನಾಯಕನಿಗೆ ಮದುವೆ ಮಾಡಿಕೊಡಲಾಗಿತ್ತು.[೨] ಚಿತ್ರದುರ್ಗದ ಪಾಳೇಯಗಾರರ ಕಾಲದಲ್ಲಿ ಇಲ್ಲಿನ ಮಠದಲ್ಲಿ ಹೈದರಾಲಿ ತಂಗಿದ್ದನೆಂದು ಪ್ರತೀತಿ ಇದೆ. ಇಲ್ಲಿ ಅನೇಕ ಪ್ರಾಚೀನ ದೇವಾಲಯ, ಶಾಸನಗಳು, ವೀರಗಲ್ಲುಗಳು ಇವೆ. ಈ ಊರಿನಲ್ಲಿ ಮಧ್ಯಯುಗೀನ ಕಾಲದಲ್ಲಿ ಅಂದರೆ ಪಾಳೇಯಗಾರರ ಕಾಲದಲ್ಲಿ ನಿರ್ಮಿತವಾದ (ಕ್ರಿ.ಶ.೧೭-೧೮ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಬೆಲಗೂರು ಕೆರೆ ಎನ್ನಲಾಗುತ್ತದೆ. ಇದನ್ನು ೨೦೧೦-೧೧ರಲ್ಲಿ ಸರ್ಕಾರ ಪುನಃ ಜೀರ್ಣೋದ್ಧಾರ ಮಾಡಿದ್ದಾರೆ.

ಇಲ್ಲಿನ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ಪೂರ್ವ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೧೨ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೯.೫೯ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೧೯.೭೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೯೮.೨೦ ಹೇಕ್ಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೪೫೫.೦೦ ಕಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿ ಮತ್ತು ಎರಡು ಕಾಲುವೆಗಳನ್ನು ಹೊಂದಿದೆ. ನೀರಾವರಿ ವ್ಯವಸ್ಥೆಗೆ ಇಲ್ಲಿನ ಕೆರೆ ಕಾಲುವೆ ವ್ಯವಸ್ಥೆ ಉತ್ತಮವಾಗಿದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೩.೭. ದೊಡ್ಡೇರಿ ಕೆರೆ**

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕು ಕೇಂದ್ರದಿಂದ ೬ ಕಿ.ಮೀ ದೂರದಲ್ಲಿರುವ ಗ್ರಾಮವೇ ದೊಡ್ಡೇರಿ. ಇದರ ಪಕ್ಕದಲ್ಲಿರುವ ಇನ್ನೊಂದು ಗ್ರಾಮ ಡಿ. ಉಪ್ಪಾರಹಟ್ಟಿ ಈ ಎರಡು ಗ್ರಾಮಗಳ ಮಧ್ಯೆ ಇರುವ ಗ್ರಾಮವೇ ಹಳೇ ದೊಡ್ಡೇರಿ. ಈ ದೊಡ್ಡೇರಿ ಗ್ರಾಮವು ೧೮೮೨ರ ವರೆಗೆ

ತಾಲ್ಲೂಕು ಕೇಂದ್ರವಾಗಿತ್ತು. ಇದೊಂದು ಐತಿಹಾಸಿಕ ಸ್ಥಳವಾಗಿದ್ದು, ಪಾಳೆಯಗಾರರು ಆಳಿದ ಪ್ರದೇಶವಾಗಿದೆ. ಇಲ್ಲಿ ಈಗಲೂ ಸಹ ಅನೇಕ ಕೋಟೆ ಕೊತ್ತಲಗಳ ಅವಶೇಷಗಳು, ಬುರುಜುಗಳನ್ನು ಕಾಣಬಹುದಾಗಿದೆ. ಇಲ್ಲಿ ಐತಿಹಾಸಿಕವಾದ ಹಳೇ ದೊಡ್ಡೇರಿಯಲ್ಲಿ ಕ್ರಿ.ಶ.೧೭೯೦-೧೭೯೬ರ ವರೆಗೆ ದೊಡ್ಡೇರಿ ಕದನವು ಮೊಗಲರಿಗೂ, ಮರಾಠರಿಗೂ ನಡೆಯಿತು. ಮೊಗಲರ ಪರವಾಗಿದ್ದ ಶಿರಾದ ಖಾಸಿಂಖಾನನಿಗೂ ಮರಾಠಿಯವರ ನೇತಾಜಿ ಘೋರ್ಪಡೆಯವರೆಗೂ ಈ ಭಾರಿ ಕಾಳಗ ನಡೆಯಿತು. ಚಿತ್ರದುರ್ಗದ ಬಿಚ್ಚುಗತ್ತಿ ಭರಮಣ್ಣನಾಯಕ ಮರಾಠರಿಗೆ ಸಹಾಯ ಮಾಡಿದಾಗ ಮೊಗಲರು ಸೋತರು. ಮರಾಠರಿಗೆ ಜಯವಾಯಿತು. ಈ ಸ್ಥಳದಲ್ಲಿ ಹಿಂದೆ ಕಾಗದದ ಕಾರ್ಖಾನೆ ಇದ್ದು, ದೊಡ್ಡೇರಿ(ಕಾ)ಗಜ ಎಂದೇ ಖ್ಯಾತಿ ಪಡೆದಿತ್ತು ಮತ್ತು ಕಪ್ಪುಶಾಯಿಗೆ ಪ್ರಸಿದ್ಧವಾಗಿತ್ತು. ಈ ಗ್ರಾಮದಲ್ಲಿ ಆಂಜನೇಯಸ್ವಾಮಿ, ವೀರಭದ್ರಸ್ವಾಮಿ, ಕನ್ನೇಶ್ವರ ಸ್ವಾಮಿ ದೇವಾಲಯಗಳಿವೆ. ಅಂಜನೆಯ ಗುಡಿಯ ಮುಂಭಾಗ ಅನೇಕ ವೀರಗಲ್ಲುಗಳಿವೆ. ದೊಡ್ಡೇರಿಯಿಂದ ೧ ಕಿ.ಮೀ ದೂರದಲ್ಲಿ ಶ್ರೀ ಸತ್ ಉಪಾಸಿ ಮಲ್ಲಪ್ಪ ಸ್ವಾಮೀಜಿಯವರ ಶ್ರೀ ದತ್ತಾವಧೂತ ಕನ್ನೇಶ್ವರ ಆಶ್ರಮವಿದೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಹೋಬಳಿ ಮತ್ತು ಗ್ರಾಮ ಪಂಚಾಯತಿಯ ಕೇಂದ್ರವಾಗಿರುವ ಈ ದೊಡ್ಡೇರಿ ಗ್ರಾಮದಲ್ಲಿರುವ ಈ ಕೆರೆಯನ್ನು ದೊಡ್ಡೇರಿ ಕೆರೆ ಎಂದು ಕರೆಯಲಾಗುತ್ತಿದೆ. ಇದು ದೊಡ್ಡೇರಿ ಪಕ್ಕದಲ್ಲಿರುವ ಉಪ್ಪಾರಹಟ್ಟಿಯಿಂದ ಕೆಂಚವೀರನಹಳ್ಳಿಗೆ ತೆರಳುವ ಮಾರ್ಗದಲ್ಲಿ ಕಂಡುಬರುತ್ತದೆ. ಈ ಕೆರೆಗೆ ಗರಣಿಹಳ್ಳ, ತಾಯಿಹಳ್ಳ, ದೊಡ್ಡಹಳ್ಳ ಬುರುಜನಕಟ್ಟೆ ಹಳ್ಳಗಳಿಂದ ನೀರು ಬಂದು ಸೇರುತ್ತದೆ. ಇದನ್ನು ೧೮೮೧ರಲ್ಲಿ ನಿರ್ಮಿಸಲಾಯಿತು. ಇದರ ನಿರ್ಮಾಣದ ವೆಚ್ಚ ೨.೯ ಲಕ್ಷ ರೂಪಾಯಿಗಳು. ಕೃಷ್ಣ ನದಿ ಪಾತ್ರಕ್ಕೆ ಒಳಪಟ್ಟಿರುವ ಈ ಭೂಪ್ರದೇಶ ವೇದಾವತಿ ಉಪ ಸರಣಿಯೊಂದಿಗೆ ಗುರುತಿಸಲ್ಪಟ್ಟಿದೆ. ಈ ಕೆರೆಯ ಏರಿಯ ಎತ್ತರ ೧೨.೦೦ ಅಡಿಗಳಾಗಿದೆ. ಇದರ ಜಲಾಯನದ ಪ್ರದೇಶ ಸ್ವತಂತ್ರವಾಗಿ ೨೧.೫೦ ಚ.ಕಿ.ಮೀ. ಮತ್ತು ಸಂಯುಕ್ತವಾಗಿ ೨೭.೦೦ ಚ.ಕಿ.ಮೀ. ಇದೆ. ಈ ಕೆರೆಯ ಕೋಡಿಯು ಸ್ಲೋಪಿಂಗ್ ಎಪ್ರಾನ್ ಮಾದರಿಯದಾಗಿದ್ದು, ಅಧ್ಯಯನ ಯೋಗ್ಯವಾಗಿದೆ. ಇದು ಅತೀ ದೊಡ್ಡ ಕೆರೆಯಾಗಿದ್ದು, ವಿಶಾಲವಾದ ಅಂಗಳವನ್ನು ಹೊಂದಿದೆ. ಎರಡು ದಂಡೆಯ ಮೇಲೆಯೂ ಸಹ ಎರಡು ತೂಬುಗಳನ್ನು ಹೊಂದಿದೆ. ದೊಡ್ಡ ತೂಬಿನ ನೀರು ಹೋಗಲು ಚಕ್ರಗಟ್ಟೆಯನ್ನು ಕಟ್ಟಿ ಅದರಿಂದ ಮುಖ್ಯ ಕಾಲುವೆಗೆ ನೀರು ಹರಿಯುವಂತೆ ಮಾಡಲಾಗಿದೆ. ಕೆರೆಯ ಏರಿಯು ಅತ್ಯಂತ ಉದ್ದವಾಗಿದೆ. ಕೆರೆಯ ಏರಿಯ ಮೇಲೆ ಸಪ್ತ ಮಾತೃಕೆಯರ ಶಿಲ್ಪಿಗಳಿವೆ. ನಂದಿಯ ವಿಗ್ರಹವಿದೆ. ಚಿಕ್ಕತೂಬಿನ ಹತ್ತಿರ ಒಂದು ಸ್ತ್ರೀ ದೇವತೆಯ ಶಿಲೆಯಿದೆ ಹಾಗೂ ಪಾದಗಳ ಶಿಲ್ಪಗಳನ್ನು ಕೆತ್ತಲಾಗಿದೆ. ಈ ಪಾದಗಳಿಗೆ ಸರ್ಪವು ಸುತ್ತುವರಿದಿದೆ. ಈ ಕೆರೆಯು ಮೊದಲು ಎರಡು ಕೋಡಿಗಳನ್ನು ಹೊಂದಿತ್ತು. ನಂತರ ದೊಡ್ಡ ಕೋಡಿಯನ್ನು ಮುಚ್ಚಿ ಹಾಕಿ ಚಿಕ್ಕ ಕೋಡಿಯಿಂದ ನೀರು ಹೊರ ಹೋಗಲು ವ್ಯವಸ್ಥೆ ಮಾಡಲಾಗಿದೆ. ಮೊದಲು ಇಲ್ಲಿನ ನೀರನ್ನು ಬಳಕೆ ಮಾಡಿಕೊಂಡು ರೈತರು ರಾಗಿ, ಜೋಳ, ಭತ್ತ, ಮೆಕ್ಕೆಜೋಳ

ಇತ್ಯಾದಿ ಬೆಳೆಗಳನ್ನು ಹಾಗೂ ಪ್ರಸಕ್ತ ರಾಗಿ, ಜೋಳ, ಭತ್ತ, ಮೆಕ್ಕೆಜೋಳ, ತರಕಾರಿಗಳನ್ನು ಬೆಳೆಗಳನ್ನು ಬೆಳೆಯುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ.

ಈ ಕೆರೆಯಲ್ಲಿ ಬಹಳಷ್ಟು ಊಳು ತುಂಬಿದೆ. ಇದನ್ನು ತೆಗಿಸುವ ಕಾರ್ಯ ಆಗಬೇಕಿದೆ. ಕೆರೆಯ ತುಂಬೆಲ್ಲಾ ಸೀಮೆ ಜಾಲಿ ಗಿಡಗಳು ಆವೃತವಾಗಿವೆ. ಈ ಕೆರೆ ಕೋಡಿ ಬಿದ್ದ ನೀರು ಗರಣಿಗೆ ಸೇರುತ್ತದೆ. ಅಲ್ಲಿಂದ ಆ ನೀರು ರಾಣಿ ಕೆರೆಗೆ ಸೇರುತ್ತದೆ. ಕೆರೆಯ ಹಿಂಭಾಗದಲ್ಲಿ ಹಳೇ ದೊಡ್ಡೇರಿ ಅಥವಾ ರಣ ದೊಡ್ಡೇರಿ ಎಂದು ಕೆರೆಯುವ ಸ್ಥಳದಲ್ಲಿ ಅನೇಕ ವೀರಗಲ್ಲುಗಳಿವೆ. ಸೂಕ್ಷ್ಮ ಶಿಲಾಯುಗ, ನವ ಶಿಲಾಯುಗ ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದ ಆಯುಧಗಳು, ಅವಶೇಷಗಳು ಅಲ್ಲಲ್ಲಿ ಇರುವುದನ್ನು ಗಮನಿಸಬಹುದು.

**೩೮. ಮತ್ತೋಡು ಕೆರೆ**

ಮತ್ತೋಡು ಗ್ರಾಮವು ಹೊಸದುರ್ಗ ತಾಲ್ಲೂಕಿನಲ್ಲಿದೆ. ಇದು ತಾಲೂಕು ಕೇಂದ್ರದಿಂದ ೩೨ ಕಿ.ಮೀ ದೂರದಲ್ಲಿದೆ. ಇದನ್ನು ನತ್ತನಡು, ಮತ್ತಿನಾಡು, ಮುತ್ತೋಡು ಎಂದೆಲ್ಲಾ ಕರೆಯಲಾಗುತ್ತದೆ. ಇತಿಹಾಸ ಪೂರ್ವ ಕಾಲದ ನೆಲೆಯಾದ ಇಲ್ಲಿ ಹೊಯ್ಸಳರು, ವಿಜಯನಗರದರಸರು, ಸಂತೇಬೆನ್ನೂರು ನಾಯಕರು, ಬಿಜಾಪುರದ ಆದಿಲ್ ಶಾಹಿಗಳು, ಪೇಶ್ವೆಗಳು, ಮೈಸೂರು ಒಡೆಯರು, ಮತ್ತೋಡು ಪಾಳೇಯಗಾರರು ಇಲ್ಲಿ ಆಳ್ವಿಕೆ ಮಾಡಿದ್ದಾರೆ.[೪೯] ಇಲ್ಲಿ ಮತ್ತೋಡು ಪಾಳೆಯಗಾರನಾದ ದೊಡ್ಡಹಾಲಪ್ಪ ನಾಯಕ ಕ್ರಿ.ಶ.೧೭೧೦ರಲ್ಲಿ ನಿರ್ಮಿಸಿದ (ಕ್ರಿ.ಶ.೧೭ನೇ ಶತಮಾನ) ಎರಡು ಕೆರೆಗಳಿವೆ. ಅವುಗಳನ್ನು ಮತ್ತೋಡು ಕೆರೆಗಳು ಎನ್ನಲಾಗುತ್ತದೆ. (ಚಿಕ್ಕಕೆರೆ ಮತ್ತು ಹಳೇಕೆರೆ/ಹಿರೇಕೆರೆ) ಆಗ್ರಹಾರವಾಗಿದ್ದ ಈ ಗ್ರಾಮದಲ್ಲಿ ಸಿದ್ಧರಾಮೇಶ್ವರ, ಕಂಚಿ ವರದರಾಜಸ್ವಾಮಿ, ಆಂಜನೇಯ, ಬಾಗಿ ಮರದಮ್ಮ, ಕರಿಯಮ್ಮ ಮೊದಲಾದ ದೇವಾಲಯಗಳಿವೆ. ಅಲ್ಲದೇ ಮಠ ಮತ್ತು ಪಾಳೆಯಗಾರರ ಕಾಲದ ಕೋಟೆ ಮತ್ತು ಇಲ್ಲಿ ಅನೇಕ ಶಾಸನಗಳು, ವೀರಗಲ್ಲುಗಳು ಹಾಗೂ ಇತರೆ ಪ್ರಾಚ್ಯಾವಶೇಷಗಳಿವೆ.

ಊರಿನ ಹೊರ ಭಾಗದಲ್ಲಿರುವ ಮತ್ತೋಡು ಪಾಳೇಯಗಾರರ ಕಾಲದ ಅಂದರೆ ದೊಡ್ಡ ಹಾಲಪ್ಪನಾಯಕ ನಿರ್ಮಿಸಿದ ಹಳೇಕೆರೆ/ಹಿರೇಕೆರೆಯನ್ನು ಕರ್ನಾಟಕ ಸರ್ಕಾರದ ಜಲಸಂಪನ್ಮೂಲ/ಸಣ್ಣ ನೀರಾವರಿ ಇಲಾಖೆಯವರು ಜಿಲ್ಲಾ ಪಂಚಾಯತಿಯ ಅನುದಾನದಲ್ಲಿ ೨೦೧೧-೧೨ರಲ್ಲಿ ದುರಸ್ತಿ ಮಾಡಿದ್ದಾರೆ. ಪ್ರಸಕ್ತ ಕೆರೆಯಲ್ಲಿ ಹೂಳು ತುಂಬಿದೆ. ಇಲ್ಲಿ ಸರಿಯಾದ ನಿರ್ವಹಣೆ ಇಲ್ಲದ ಕಾರಣ ಸಾಕಷ್ಟು ಗಿಡ ಮರಗಳು ಬೆಳದಿವೆ. ಅಲ್ಲದೇ ಕೆರೆಯ ಏರಿಯಲ್ಲಿಯೂ ಗಿಡಮರ ಬೆಳದು ಅದು ಅಲ್ಲಲ್ಲಿ ಶಿಥಿಲವಾಗಿದೆ. ಕೆರೆ ಸುತ್ತಲಿನ ಬೆಟ್ಟಗುಡ್ಡಗಳಿಂದ ಬಿದ್ದ ಮಳೆ ನೀರು ಇಲ್ಲಿನ ತಗ್ಗು ಪ್ರದೇಶಗಳಲ್ಲಿರುವ ಹಳ್ಳಗಳ ಮೂಲಕ ಹರಿದು ಇಲ್ಲಿನ ಕೆರೆಗೆ ಬಂದು ಸೇರ್ಪಡೆಯಾಗುತ್ತದೆ. ಇಲ್ಲಿನ ಕೆರೆಯನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೆರೆಯ ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಡೊಲರೈಟ್(ಕಪ್ಪು) ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೪೬೭೮.೬೩ ಮಿ. ಮಿ. ಮಳೆಯಾಗುತ್ತದೆ.

ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ಕಾಲುವೆ ಮತ್ತು ತೂಬುಗಳಿವೆ. ಎಡದಂಡೆ ಕಾಲುವೆ ಉದ್ದ ೮.೦೦ ಕೀ ಮೀ ಇದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ತೆಂಗು, ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಉತ್ತಮ ಮಳೆ ಬಂದು ಕೆರೆ ಭರ್ತಿಯಾದಲ್ಲಿ ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

ಕೆರೆಯ ನೀರನ್ನು ಕೃಷಿಗೆ ಬಳಕೆ ಮಾಡಿಕೊಳ್ಳುವುದು ಸಾಧಾರಣ ಸಂಗತಿಯಾದರೂ, ಮತ್ತೋಡಿನಲ್ಲಿ ಕೋಟೆಯನ್ನು ಸುತ್ತುವರಿದಿದ್ದ ಕಂದಕಗಳನ್ನು ತುಂಬಲು ಬಳಕೆಯಾಗುತ್ತಿತ್ತೆಂದು ಹೇಳಲಾಗಿದೆ. ಕೆರೆಯ ತೂಬನ್ನು ಎತ್ತಿದರೆ ಕಂದಕ ನೀರಿನಿಂದ ಭರ್ತಿಯಾಗುವಂತೆ ತಾಂತ್ರಿಕ ಕೌಶಲ್ಯದಿಂದ ಅದನ್ನು ನಿರ್ಮಿಸಲಾಗಿತ್ತು. "ವಿಸ್ತಾರವಾಗಿರುವ ಆ ಕೆರೆ ಪ್ರತಿ ೧೨ ವರ್ಷಕ್ಕೊಮ್ಮೆ ತುಂಬುವುದಾಗಿ ಅಲ್ಲಿನ ಸ್ಥಳೀಯರು ಹೇಳುತ್ತಾರೆ". ಮತ್ತೋಡಿನ ಕೆರೆಯ ಬಗ್ಗೆ ಈಗ್ಗೆ ಎರಡು ಶತಮಾನಗಳಷ್ಟು ಹಿಂದೆ ಬ್ರಟಿಷ್ ಸರ್ವೇಕ್ಷಣಾಧಿಕಾರಿಯೊಬ್ಬ ಹೇಳಿರುವ ಮಾತು ಇಲ್ಲಿ ಉಲ್ಲೇಖನೀಯ. "ಮತ್ತೋಡು ಕಣಿವೆಯಲ್ಲಿ ನೆಲೆಸಿದೆ. ಅದರ ನೆರೆಯಲ್ಲೇ ಅಲ್ಪ ಖರ್ಚಿನಲ್ಲಿ ಚೆನ್ನಾಗಿ ಅಭಿವೃದ್ಧಿ ಪಡಿಸಬಹುದಾದ ಒಂದು ಒಳ್ಳೆಯ ಜಲಾಶಯವಿದೆ. ಮಳೆಗಾಲ ಬೇಗನೇ ಪ್ರಾರಂಭವಾದರೆ, ಈ ಕೆರೆ ವರ್ಷದಲ್ಲಿ ಎರಡು ಬೆಳೆಗಳಿಗೆ ನೀರುಣಿಸಬಲ್ಲದು. ಒಂದು ಬೆಳೆಗಂತೂ ಎಂದಿಗೂ ಮೋಸವಿಲ್ಲ. ಅವಗಡಗಳಿಂದ ತಾವು ಸುರಕ್ಷಿತವಾಗಿರಬೇಕೆಂದು ರೈತರು ಕೆರೆ ಭರ್ತಿಯಾಗುವವರೆಗೂ ವ್ಯವಸಾಯವನ್ನು ಪ್ರಾರಂಭಿಸುವುದಿಲ್ಲ.

**೩೯ ಸಣ್ಣಕೆರೆ**

ಚಿತ್ರದುರ್ಗ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ವಿವಿಧ ರಾಜಮನೆತನಗಳಲ್ಲಿ ಹಾಗೂ ಪಾಳೆಯಗಾರರು ಮತ್ತು ಆಧಿಕಾರಿಗಳು, ನೀರಾವರಿಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ಹಲವು ಕೆರೆಗಳನ್ನು ನಿರ್ಮಿಸಿದ್ದು ಅವುಗಳ ಸಹಾಯದಿಂದ ಜಿಲ್ಲೆಯ ಚಾರಿತ್ರಿಕ ಕೆರೆಗಳ ನಿರ್ಮಾಣದ ಕಾಲನುಕ್ರಮ ಬೆಳವಣಿಗೆಯನ್ನು ಗುರುತಿಸಲು ಸಾಧ್ಯವಿದೆ. ಹಾಗೆಯೇ ಚಿತ್ರದುರ್ಗದಲ್ಲಿ ಪಾಳೆಯಗಾರರು ಕೇವಲ ಆಡಳಿತ ಮತ್ತು ಯುದ್ಧಗಳಿಗಷ್ಟೆ ತಮ್ಮ ಸಮಯವನ್ನು ವ್ಯರ್ಥ ಮಾಡಿದೇ ಅನೇಕ ಜನೋಪಯೋಗಿ ಕಾರ್ಯಗಳನ್ನು ಕೈಗೊಂಡರು.

ಚಿತ್ರದುರ್ಗ ನಗರದ ದಕ್ಷಿಣ ಭಾಗದಲ್ಲಿ ಬೆಟ್ಟದ ಪ್ರದೇಶದಲ್ಲಿರುವ ಸಣ್ಣಕೆರೆಯು ಚಿತ್ರದುರ್ಗ ಪಾಳೆಯಗಾರನಾಗಿದ್ದ ತಿಮ್ಮಣ್ಣನಾಯಕನಿಂದ ನಿರ್ಮಿತವಾಗಿದೆ.[೫೫] ಈ ಪ್ರದೇಶದ ಪ್ರಾಚೀನ ಕೆರೆಗಳಲ್ಲಿ ಈ ಕೆರೆಯು ಒಂದು. ಈ ಕೆರೆಯೂ ಮೂರು ನಾಲ್ಕು ಕೆರೆಗಳ ಸಮೀಪದಲ್ಲಿಯೇ ಒಂದಕ್ಕೊಂದು ಹೊಂದಿಕೊಂಡಂತೆ (ಒಂದೇ ಮಾರ್ಗ) ನಿರ್ಮಿಸಲಾಗಿದೆ. ಇದರಿಂದಾಗುವ ಪ್ರಯೋಜನವೆಂದರೆ ಕೆರೆ ತುಂಬಿದಾಗ ಹೆಚ್ಚುವರಿ ನೀರು ಮತ್ತೊಂದು ಕೆರೆಗೆ ಹರಿದು ಬರುತ್ತದೆ. ಈ ಕೆರೆಯು ಮಧ್ಯಭಾಗದಲ್ಲಿ ಕಲ್ಲು ಗುಡ್ಡೆಯು ವೃತ್ತಾಕಾರದಿಂದ ಇರುವುದನ್ನು ನೋಡಬಹುದು. ಅಲ್ಲಿನ ಈ ಕಟ್ಟಡವನ್ನು ಕಲ್ಲಿನಿಂದ ನಿರ್ಮಿಸಲಾಗಿದೆ. ಕಟ್ಟಡದ ಮಧ್ಯ ಗಿಡ ಮರಗಳು ಇವೆ. ಈ ರೀತಿಯಾಗಿ ನಿರ್ಮಿಸಿದ್ದರಿಂದ ಮೂರು ರೀತಿಯಲ್ಲಿ ಉಪಯೋಗವಾಗಲೆಂದು ನಿರ್ಮಿಸಲಾಗಿದೆ.

೧. ಕೆರೆ ತುಂಬಿದಾಗ ಕಲ್ಲು ಕಟ್ಟಡದ ಮೇಲೆ ಬಂದು ನೀರನ್ನು ಪಕ್ಷಿಗಳು ನೀರು ಕುಡಿಯಲೆಂದು

೨. ಈ ಚಿಕ್ಕ ಕೆರೆಯ ಮಧ್ಯ ಭಾಗದಲ್ಲಿ ವಿಶಾಲ ಮಂಟಪವೊಂದಿದ್ದು, ಅದು ನೋಡಲು ದ್ವೀಪದಂತೆ ಕಂಡು ಬರುತ್ತದೆ. ಇಲ್ಲಿಗೆ ಅರಮನೆ ಪರಿವಾರದವರು ನಿಸರ್ಗದ ರಮಣೀಯತೆಯನ್ನು ನೋಡಲು ಮತ್ತು ಅಗಿದಾಂಗ್ಗೆ ತಮ್ಮ ಬೇಸರ ಕಳೆದುಕೊಳ್ಳಲು ಬರುತ್ತಿದ್ದರೆಂದು ಹೇಳಬಹುದು.

೩. ಕೋಟೆ ಪರಿಸರದಲ್ಲಿ ಈ ಕೆರೆ ಇರುವುದರಿಂದ ಬೆಟ್ಟ ಪ್ರದೇಶದಿಂದ ರಭಸವಗಿ ಬರುವ ನೀರಿನ ದಿಕ್ಕನ್ನು ಹಾಗೂ ಒತ್ತಡವನ್ನು ಬದಲಿಸುವುದಕ್ಕಾಗಿ ಈ ರೀತಿ ಕಲ್ಲು ಗುಡ್ಡೆಯನ್ನು ನಿರ್ಮಿಸಿದ್ದಾರೆ. ಹೀಗೆ ಈ ಒಂದು ಚಿಕ್ಕ ಕೆರೆಯಿಂದ ಈ ರೀತಿ ಉಪಯೋಗಗಳನ್ನು ನಾವು ನೋಡಬಹುದು.

ಈ ಕೆರೆಯನ್ನು ಚಿತ್ರದುರ್ಗದ ಪಾಳೆಯಗಾರನಾದ ತಿಮ್ಮಣ್ಣನಾಯಕನು ಕಟ್ಟಿಸಿದ್ದು ಅವರ ವಂಶಾವಳಿಗಳು ಹೇಳುವುದರಿಂದ ಇದು ಅವನ ಕಾಲದ್ದೇ ಎನ್ನಬಹುದು. ಆದರೆ ತಿಮ್ಮಣ್ಣನಾಯಕನ ಕಾಲ ಕ್ರಿ.ಶ. ೧೭ನೇ ಶತಮಾನದ ಒಂದು ಶಾಸನದಲ್ಲಿ ಇದಕ್ಕೆ ಪೂರಕ ಉಲ್ಲೇಖವಿದೆ. "ಚಿಮ್ಮತ್ತನೂರಿನ ನಖರಮುಂಮುರಿದಂಡಗಳು ಆ ಅರಕೆಯ ಮೂಡಗೋಡಿಯ ಕಲ್ಲು ಕಡಿಸಿ ಕೋಡಿಯು ಮಾಡಿಸಿದರು" ಎನ್ನುವ ವಿವರವಿದೆ. ಇದರಿಂದ ಇಲ್ಲಿಯ ವರ್ತಕ ವರ್ಗದವರು ಈ ಕೆರೆಗಳ ಅಂದರೆ ತಿಮ್ಮಣ್ಣನಾಯಕನ ಕೆರೆ ಮತ್ತು ಚಿಕ್ಕಕೆರೆಗೆ ಒಂದೇ ಕೋಡಿಯ ನಿರ್ಮಾಣಮಾಡಿದ್ದಾರೆ. ಈ ಶಾಸನ ತಿಮ್ಮಣ್ಣನಾಯಕನ ಕೆರೆಯಲ್ಲಿ ಬಂಡೆಯ ಮೇಲೆ ಇದೆ, ಈ ಕೆರೆಯನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೆರೆಯ ಅರ್ಥಭಾಗ ಮಾತ್ರ ಕಗ್ಗಲ್ಲು ಮತ್ತು ಬೃಹತ್ ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸುಮಣ್ಣನ್ನು (ಗ್ರಾವೆಲ್ಸ್) ಬಳಸಿ ಇಲ್ಲಿನ ಕೆರೆಯ ಏರಿಯನ್ನು ನಿರ್ಮಿಸಿದ್ದಾರೆ. ಇನ್ನು ಅರ್ಧಭಾಗ ಗುಡ್ಡದಿಂದ ಸುತ್ತುವರೆದಿದೆ. ಈ ಎರಡು ಜೋಡಿ ಕೆರೆಯ ಕೆಳಭಾಗದಲ್ಲಿ ವಿಶಾಲವಾದ ಕಣಿವೆಯ ಬಯಲಲ್ಲಿ ಮರದ ಒಂದು ತೋಪು ಇದೆ. ಈಗ ಅಲ್ಲಿ ಕೆಲವೇ ಮರಗಳಿವೆ, ಬಹುಶಃ ಇಲ್ಲಿ ಪೂರ್ವಕಾಲದಲ್ಲಿ ತೋಟಗಳಿದ್ದು ಅವುಗಳ ಕೃಷಿಗೆ ಈ ನೀರನ್ನು ಬಳಕೆಯಾಗಿರುವಂತೆ ಕಾಣುತ್ತದೆ. ಇದಷ್ಟೇ ಅಲ್ಲದೇ, ಮೊನ್ನೆ ಮೊನ್ನೆಯವರೆಗೂ ಚಿತ್ರದುರ್ಗ ನಗರಕ್ಕೆ ಕುಡಯುವ ನೀರು ಸಹ ಪೂರೈಕೆಯಾಗಯುತ್ತಿದ್ದದ್ದು ಈ ಕೆರೆಗಳಿಂದಲೇ ಈ ಕೆರೆಯೂ ವಿಶಾಲವಾದ ಅಂಗಳವನ್ನು ಹೊಂದಿದ್ದು ಅಗಲವಾದ ಏರಿಯನ್ನು ಹೊಂದಿದೆ. ನಾಲ್ಕು ಕಾಲಿನ ತೂಬನ್ನು ಹೊಂದಿದೆ. ಈ ಕೆರೆಯೂ ಬಹಳಷ್ಟು ಊಳು ತುಂಬಿದೆ. ಇದನ್ನು ಊಳು ತೆಗೆಸುವ ಕಾರ್ಯ ಆಗಬೇಕಾಗಿದೆ. ಈ ಕೆರೆಯು ಸ್ವಲ್ಪ ಪ್ರಮಾಣದಲ್ಲಿ ನೀರು ಇದೆ. ಕೆರೆ ಏರಿಯ ಮೇಲೆ ಚೌಡೇಶ್ವರಿ ದೇವಾಲಯ, ಅಂಜನೇಯ ದೇವಾಲಯ ಇದೆ.

**೪೦. ಹೊರಕೆರೆದೇವರಪುರ ಕೆರೆ**

ಹೊಳಲ್ಕೆರೆ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಹೊರಕೆರೆ ದೇವರಪುರ ಗ್ರಾಮವು ಇಲ್ಲಿನ ರಂಗನಾಥಸ್ವಾಮಿ (ಲಕ್ಷ್ಮಿನರಸಿಂಹಸ್ವಾಮಿ) ದೇವಾಲಯದಿಂದಾಗಿ ಜಿಲ್ಲೆಯಲ್ಲಿಯೇ ಪ್ರಸಿದ್ಧಿ ಪಡೆದ ಗ್ರಾಮವಾಗಿದೆ. ಊರ ಹೊರಗಿನ ಕೆರೆಯಿಂದಾಗಿ ಈ ಊರಿಗೆ ಹೊರಕೆರೆ ದೇವರಪುರ ಎಂದು ಹೆಸರಾಗಿದೆಯೆಂದು ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಇದು ಚಿತ್ರದುರ್ಗ ಹೊಳಲ್ಕೆರೆ ಮುಖ್ಯ

ಹೆದ್ದಾರಿಯಲ್ಲಿನ ಚಿತ್ರಹಳ್ಳಿ ಗೇಟ್‌ನಿಂದ ಸುಮಾರು.೪ ಕೀ.ಮೀ. ದೂರದಲ್ಲಿದೆ. ಅಲ್ಲದೇ ಚಿತ್ರದುರ್ಗದಿಂದ ೨೪.ಕಿ.ಮೀ ದೂರದಲ್ಲಿದೆ. ಇಲ್ಲಿ ರಂಗನಾಥ, ಈಶ್ವರ, ಆಂಜನೇಯ, ಮಾರಮ್ಮ, ಬಸವಣ್ಣನ ಗುಡಿಗಳಿವೆ. ವರ್ಷಕ್ಕೊಮ್ಮೆ ರಂಗನಾಥಸ್ವಾಮಿ ಜಾತ್ರೆಯನ್ನು ಗ್ರಾಮಸ್ಥರೆಲ್ಲರೂ ಸೇರಿ ಅದ್ದೂರಿಯಾಗಿ ಆಚರಿಸುತ್ತಾರೆ. ಇಲ್ಲಿ ನಾಯಕ, ಲಿಂಗಾಯಿತ, ಸಮುದಾಯ ಹೆಚ್ಚಾಗಿದ್ದು, ಉಳಿದಂತೆ ಎಸ್.ಸಿ ಹಾಗೂ ಇತರೆ ಜನಾಂಗದವರು ಇರುತ್ತಾರೆ.

ಇಲ್ಲಿ ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಹೊರಕೆರೆ ದೇವರಪುರ ಕೆರೆ ಎನ್ನಲಾಗುತ್ತದೆ. ಇದು ಪಾಳೆಯಗಾರರ ಕಾಲದಲ್ಲಿ ನಿರ್ಮಿತವಾದ ಕೆರೆ ಎಂದು ಅಲ್ಲಿನ ಪ್ರಾಚ್ಯಾವಶೇಷಗಳು ಪುಷ್ಠೀಕರಿಸುತ್ತವೆ. ಈ ಕೆರೆಯನ್ನು ಕಾಲಾಂತರದಲ್ಲಿ ಅಂದರೆ ೧೯೯೦ರಲ್ಲಿ ಕರ್ನಾಟಕ ಸರ್ಕಾರದ ಸಣ್ಣ ನೀರಾವರಿ ಇಲಾಖೆಯವರು ಇದರ ದುರಸ್ತಿ ಮಾಡಿಸಿದ್ದಾರೆ. ಅಲ್ಲದೇ ಈಗಲೂ ಇದರ ನಿರ್ವಹಣೆಯನ್ನು ಸಹ ಅದೇ ಇಲಾಖೆಯವರೇ ನೋಡಿಕೊಳ್ಳುತ್ತಿದ್ದಾರೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ಈಶಾನ್ಯ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಪ್ರಸಕ್ತ ಕೆರೆಯಲ್ಲಿ ಹೂಳು ತುಂಬಿದ್ದು, ಸರಿಯಾದ ರೀತಿಯ ನಿರ್ವಹಣೆ ಇಲ್ಲದೇ ಅಲ್ಲಲ್ಲಿ ಗಿಡಮರ ಬೆಳದು ಶಿಥಿಲವಾಗಿದೆ. ಕೆರೆ ಸುತ್ತಲಿನ ಬೆಟ್ಟಗುಡ್ಡಗಳಿಂದ ಬಿದ್ದ ಮಳೆ ನೀರು ಇಲ್ಲಿನ ತಗ್ಗು ಪ್ರದೇಶಗಳಲ್ಲಿರುವ ಹಳ್ಳಗಳ ಮೂಲಕ ಹರಿದು ಇಲ್ಲಿನ ಕೆರೆಗೆ ಬಂದು ಸೇರ್ಪಡೆಯಾಗುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ३೮೦.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೧೨.೦೦ ಮೀಟರ್ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೧೮.೦೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೦.೪೦೫ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೩೫.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೯೬.೩೪ ಹೆಕ್ಟೇರ್ ಇದೆ.

ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೩.೦೦ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ (ಎಂ.ಸಿ.ಎಂ.) ೧.೪೫. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೯೮.೦೬ ಹೇಕ್ಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ३೮೯.೬೭ ಕಿ.ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೬೯೭.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೫.೦೨೦ ಮೀಟರ್ ಇದೆ. ಒಳಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿ ಇದ್ದು, ಅದು ೭೯.೮೩೦ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೬೭೨.೦೦ ಇದ್ದು, ಅದು ಇರುವ ಸ್ಥಳ(ಚೈನೇಜ್) ೬೩.೯३ ಮೀಟರ್ ಇದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಚೌಕಕಾರದ ಎರಡು ತೂಬುಗಳಿವೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ३೬೯.೦೦ ಮೀ, ಎಡದಂಡೆ ಕಾಲುವೆ ೨३೦ ಮೀ.ಉದ್ದವನ್ನು ಹೊಂದಿವೆ.

ಮಳೆಯಾಶ್ರಿತವಾಗಿರುವ ಈ ಕೆರೆಗೆ ಬಹುತೇಕ ಬಯಲು ಸೀಮೆಯ ಪ್ರದೇಶದಿಂದ ಬಂದಂತಹ ನೀರು ಸಂಗ್ರಹಣೆಯಾಗುತ್ತದೆ. ಇಲ್ಲಿ ಮೀನು ಸಾಕಾಣಿಕೆ, ನೀರಾವರಿ ವ್ಯವಸ್ಥೆ ಹಾಗೂ ಪಶುಪಾಲನೆಗೆ ಅನುಕೂಲವಾಗಿದೆ. ಈ ಕೆರೆ ತುಂಬಿದರೆ ರೈತರು ಇಲ್ಲಿ ಭತ್ತ, ರಾಗಿ, ಹತ್ತಿ, ರೇಷ್ಮೆ, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ.

**೪೧. ನಾಯಕನಹಟ್ಟಿ ಹಿರೇಕೆರೆ**

ನಾಯಕನಹಟ್ಟಿಯು ತಾಲ್ಲೂಕು ಕೇಂದ್ರ ಚಳ್ಳಕೆರೆಯಿಂದ ೨೧ ಕಿ.ಮೀ. ದೂರದಲ್ಲಿದೆ. ಇದು ಕಾಯಕಯೋಗಿ ಶ್ರೀ ಗುರು ತಿಪ್ಪೇರುದ್ರಸ್ವಾಮಿ ನೆಲೆಸಿದ ಪುಣ್ಯ ಕ್ಷೇತ್ರ. ಇದನ್ನು ಪಾಳೆಯಗಾರರು ಆಳುತ್ತಿದ್ದರು. ಆ ಕಾರಣಕ್ಕೆ ಅವರನ್ನು ನಾಯಕನಹಟ್ಟಿ ಪಾಳೆಯಗಾರರು ಎಂದೇ ಅವರನ್ನು ಕರೆಯಲಾಗುತ್ತದೆ. ಇಲ್ಲಿ ನ್ಯಾಯ ತೀರ್ಮಾನ ಮಾಡುವ ಕಟ್ಟೆಮನೆ ಇದೆ. ಇದನ್ನು ನಾಯಕನಹಟ್ಟಿ ಕಟ್ಟೆಮನೆ ಎಂದು ಕರೆಯುತ್ತಾರೆ. ಹಟ್ಟಿ ದೊರೆ ಮಲ್ಲಪ್ಪ ನಾಯಕನು ಇಲ್ಲಿ ಪ್ರಸಿದ್ಧ ಪಾಳೆಯಗಾರನಾಗಿದ್ದನು. ಪ್ರತಿವರ್ಷ ಮಾರ್ಚ್ ತಿಂಗಳಲ್ಲಿ ಗುರು ತಿಪ್ಪೇರುದ್ರ ಸ್ವಾಮಿಯ ಜಾತ್ರೆಯು ನಡೆಯುತ್ತದೆ. ಅಲ್ಲದೇ ನವೆಂಬರ್, ಡಿಸೆಂಬರ್‌ನಲ್ಲಿ ಕಾರ್ತಿಕೋತ್ಸವವು ಇಲ್ಲಿ ನಡೆಯುತ್ತದೆ. ಇಲ್ಲಿನ ಪ್ರಮುಖ ಆಕರ್ಷಣೆ ಎಂದರೆ ತಿಪ್ಪೇರುದ್ರಸ್ವಾಮಿಗಳವರ ಒಳಮಠ ಮತ್ತು ಹಿಂದೂ-ಮುಸ್ಲಿಂ ಶೈಲಿಯಲ್ಲಿರುವ ಹೊರಮಠ ಹಾಗೂ ದೊಡ್ಡಕೆರೆ ಮತ್ತು ಚಿಕ್ಕಕೆರೆಗಳಾಗಿವೆ.

ನಾಯಕನಹಟ್ಟಿಯ ಹಿರೇಕೆರೆಯು ಚಳ್ಳಕೆರೆ ತಾಲ್ಲೂಕಿನಲ್ಲಿ ಪ್ರಮುಖವಾದ ದೊಡ್ಡ ಕೆರೆಯಾಗಿದೆ. ಈ ಕೆರೆಯನ್ನು ಹಿರೇಕೆರೆ ಎಂದು ಕರೆಯಲಾಗುತ್ತಿದೆ. ಇದು ವಿಶಾಲವಾದ ಅಂಗಳವನ್ನು ಹೊಂದಿದ್ದು, ದೊಡ್ಡದಾದ, ಅಗಲವಾದ, ವಿಶಾಲವಾದ ಏರಿಯನ್ನು ಹೊಂದಿದೆ. ಕೆರೆಯ ಬಲದಂಡೆ ಮತ್ತು ಎಡದಂಡೆಗಳಲ್ಲಿ ಕೋಡಿಯನ್ನು ಕಟ್ಟಲಾಗಿದೆ. ಇದರ ವಿನ್ಯಾಸ ತುಂಬಾ ಅಚ್ಚುಕಟ್ಟಾಗಿದೆ. ಎರಡು ತೂಬುಗಳನ್ನು ಹೊಂದಿದ್ದು, ದೊಡ್ಡ ತೂಬು ಅತ್ಯಂತ ದೊಡ್ಡದಾಗಿದ್ದು, ತಾಂತ್ರಿಕತೆಯಿಂದ ಇದನ್ನು ನಿರ್ಮಿಸಿದ್ದಾರೆ. ಚರಿತ್ರೆಯ ಪ್ರಕಾರ ಇದನ್ನು ನಾಯಕನಹಟ್ಟಿ ದೊರೆ ಬೋಡಿ ಮಲ್ಲಪ್ಪ ನಾಯಕನು, ಶ್ರೀಗಳ ಇಚ್ಛೆಯಂತೆ ಅವರ ಸಹಾಯ ಸಹಕಾರದಿಂದ ನಿರ್ಮಿಸಿದನು ಎಂದು ತಿಳಿಯುತ್ತದೆ.[೬] ಈ ಕೆರೆಗೆ ಪೆದ್ದವಂಕ (ದೊಡ್ಡಹಳ್ಳ) ಹೂವಿನ ಹಳ್ಳ ಮುಂತಾದ ಹಳ್ಳಗಳಿಂದ ನೀರು ಬರುತ್ತದೆ. ಇದು ಕೃಷ್ಣ ನದಿ ಪಾತ್ರದಲ್ಲಿದ್ದು. ಇದರ ಉಪ ಸರಣಿ ವೇದಾವತಿಯಾಗಿದೆ. ಇದರ ನಿರ್ಮಾಣಕ್ಕೆ ಆದ ಖರ್ಚು ೨.೬೯ ಲಕ್ಷ ರೂಪಾಯಿಗಳು. ಈ ಕೆರೆಯ ಏರಿಯ ಮಟ್ಟ ೧೨.೦೦ ಅಡಿ ಇದೆ. ಇದರ ಜಲಾಯನ ಪ್ರದೇಶ ಸ್ವತಂತ್ರವಾಗಿ ೨೧.೫೦. ಚ.ಕಿ.ಮೀ. ಇದ್ದು ಹಾಗೂ ಸಂಯುಕ್ತವಾಗಿ ೭೦೨.೮ ಚ.ಕಿ.ಮೀ. ಇದೆ. ಇದರ ಜಲಾವೃತ ಪ್ರದೇಶ ೫೮೨.೭೬ ಚ.ಕಿ.ಮೀ. ಇದೆ. ಈ ಕೆರೆಯಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯಿದ್ದೂ ನೋಡಲು ಆಕರ್ಷಣೀಯವಾಗಿದೆ.

ಈ ಕೆರೆಯ ನೀರನ್ನು ಬಳಸಿಕೊಂಡು ಭತ್ತ, ಜೋಳ, ರಾಗಿ, ಹತ್ತಿಯನ್ನು ಮೊದಲು ಬೆಳೆಯಲಾಗುತ್ತಿತ್ತು. ಪ್ರಸ್ತುತ ರಾಗಿ, ಹತ್ತಿ, ಈರುಳ್ಳಿ, ಭತ್ತ, ತರಕಾರಿ, ಸೂರ್ಯಕಾಂತಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ಕೆರೆಯ ಎಡದಂಡೆ ಕಾಲುವೆ ೭.೮೦ ಕಿ.ಮೀ. ಹಾಗೂ ಬಲದಂಡೆ ಕಾಲುವೆ

೮.೮೦ ಕಿ.ಮೀ. ಉದ್ದವಿದೆ. ಈ ಕೆರೆಯ ಅಂಗಳ ಅತ್ಯಂತ ವಿಶಾಲವಾಗಿದ್ದು, ಬಹಳಷ್ಟು ಜಲ ಸಂಗ್ರಹವಾಗುತ್ತದೆ. ಈ ಕೆರೆಯು ೨೧೯೦ ಎಕರೆ ಪ್ರದೇಶಕ್ಕೆ ನೀರನ್ನು ಒದಗಿಸುತ್ತದೆ. ನಾಯಕನಹಟ್ಟಿಯ ದೊಡ್ಡ ಕೆರೆ ಮತ್ತು ಅದರ ಒಡ್ಡಿನ ಸೋಪಾನ ರಚನೆಯು ವಿಶೇಷವಾಗಿದೆ. ಇಲ್ಲಿನ ಒಂದು ಸೋಪಾನದ ಮೇಲೆ ಮತ್ತು ಒಂದು ಕೊನೆಯಲ್ಲಿ ನೀರಿನ ಆಳ ಎಷ್ಟು ಇರುವುದೋ ಅಷ್ಟೇ ಆಳ ಅದೇ ಸೋಪಾನದ ಮೆಟ್ಟಿಲ ಮೇಲೆ ಉದ್ದಕ್ಕೂ ಇರುವುದು ಇಲ್ಲಿನ ಒಂದು ವಿಶಿಷ್ಟ ಸಂಗತಿಯಾಗಿದೆ. ಈ ಕೆರೆಯ ತೂಬಿನ ಎರಡು ನಾಗರಕಲ್ಲು ಮತ್ತು ಗಣೇಶನ ವಿಗ್ರಹಗಳಿವೆ. ಈ ದೊಡ್ಡ ಕೆರೆಯ ಏರಿಯ ಮೇಲೆ ಬಸವಣ್ಣನ ವಿಗ್ರಹವಿರುವ ದೇವಾಲಯವಿದೆ. ಕೆರೆಯ ಪಕ್ಕದಲ್ಲಿ ಅಂದರೆ ದೇವರ ಹಟ್ಟಿಯ ಹತ್ತಿರ ರಾಮದುರ್ಗದಲ್ಲಿ (ಹೊಸಗುಡ್ಡದಲ್ಲಿ) ಏಕ ಶಿಲಾ ಗುಹಾಂತರ ದೇವಾಲಯವಿದೆ.

ಈ ಹಿರೇಕೆರೆಯಲ್ಲಿ ಒಂದು ಆಚರಣೆಯನ್ನು ಇಂದಿಗೂ ಮಾಡಿಕೊಂಡು ಬರಲಾಗುತ್ತಿದೆ. ಮಳೆ ಬರಲಿಲ್ಲವೆಂದಾಗ ಶ್ರಾವಣ ಮಾಸದಲ್ಲಿ ತೆಪ್ಪೋತ್ಸವ ಆಚರಿಸಲು ನಿರ್ಧರಿಸುವರು. ಕೋರಿಕೆಯಂತೆ ಮಳೆಯಾದ ಕಾಲದಲ್ಲಿ ಕೆರೆ ಕೋಡಿ ಬಿದ್ದರೆ, ಬೆಳೆ ಸಮೃದ್ಧಿಯಾದರೆ ತೆಪ್ಪೋತ್ಸವವನ್ನು ಇಂದಿಗೂ ಆಚರಿಸುತ್ತಾರೆ.

**೪೨. ನಾಯಕನಹಟ್ಟಿ ಚಿಕ್ಕಕೆರೆ**

ಚಳ್ಳಕೆರೆ ತಾಲ್ಲೂಕಿನ ನಾಯಕನಹಟ್ಟಿಯ ಚಿಕ್ಕಕೆರೆಯನ್ನು ಹೊರ ಮಠದ ಮುಂಭಾಗದಲ್ಲಿ ನಿರ್ಮಿಸಲಾಗಿದೆ. ಸ್ವಾಮಿಯ ಸ್ಮರಣೆಗಾಗಿ ಈ ಕೆರೆಯನ್ನು ನಿರ್ಮಿಸಲಾಗಿದೆ. ಈ ಕೆರೆಯ ಏರಿಯ ಪಕ್ಕದಲ್ಲಿ ಜಗಳೂರಿಗೆ ಹೋಗುವ ರಸ್ತೆ ಇದೆ. ವಿಶಾಲವಾದ ಅಂಗಳವನ್ನು ಹೊಂದಿದ್ದು, ಎರಡು ತೂಬುಗಳನ್ನು ಹೊಂದಿದೆ. ಬಲದಂಡೆ ಮತ್ತು ಎಡ ದಂಡೆಯ ಕಡೆಯಲ್ಲಿ ಎರಡು ಕೋಡಿಗಳನ್ನು ಮತ್ತು ತೂಬುಗಳನ್ನು ಕಾಣಬಹುದಾಗಿದೆ. ಈ ಕೆರೆಯ ಕಾಲುವೆಗಳ ವ್ಯವಸ್ಥೆ ಅಚ್ಚುಕಟ್ಟಾಗಿದೆ ಎಂದು ಹೇಳಬಹುದಾಗಿದೆ.

ಈ ಕೆರೆಗೆ ಸಂಬಂಧಿಸಿದ ತಾಂತ್ರಿಕ ಮಾಹಿತಿ ಇಂತಿದೆ. ಇದು ಕೃಷ್ಣ ನದಿ ಪಾತ್ರದಲ್ಲಿದ್ದು. ಇದರ ಉಪಸರಣಿ ವೇದಾವತಿಯಾಗಿದೆ. ಇದರ ನಿರ್ಮಾಣಕ್ಕೆ ೨.೬೯ ಲಕ್ಷ ರೂಪಾಯಿಗಳು ಖರ್ಚಾಗಿದೆ. ಈ ಕೆರೆಯ ಏರಿಯ ಮಟ್ಟ ೧೨.೦೦ ಅಡಿ ಇದೆ. ಇದರ ಜಲಾಯನ ಪ್ರದೇಶ ಸ್ವತಂತ್ರವಾಗಿ ೨೧.೫೦. ಚ.ಕಿ.ಮೀ. ಇದ್ದು, ಹಾಗೂ ಸಂಯುಕ್ತವಾಗಿ ೨೪.೧೪ ಚ.ಕಿ.ಮೀ. ಇದೆ. ಇದರ ಜಲಾವೃತ ಪ್ರದೇಶ ೫೮೨.೭೬ ಚ.ಕಿ.ಮೀ. ಇದೆ. ಈ ಕೆರೆಯಲ್ಲಿ ಸ್ಲೋಪಿಂಗ್ ಮಾದರಿಯ ಕೋಡಿಯಿದ್ದೂ ನೋಡಲು ಆಕರ್ಷಣೀಯವಾಗಿದ್ದು, ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ಭತ್ತ, ಜೋಳ, ರಾಗಿ, ಹತ್ತಿಯನ್ನು ಮೊದಲು ಬೆಳೆಯಲಾಗುತ್ತಿತ್ತು. ಪ್ರಸ್ತುತ ರಾಗಿ, ಹತ್ತಿ, ಈರುಳ್ಳಿ, ಭತ್ತ, ತರಕಾರಿ, ಸೂರ್ಯಕಾಂತಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ಕೆರೆಯ ಎಡದಂಡೆ ಕಾಲುವೆ ೭.೪೦ ಕಿ.ಮೀ. ಹಾಗೂ ಬಲದಂಡೆ ಕಾಲುವೆ ೮.೮೦ ಕಿ.ಮೀ. ಉದ್ದವಿದೆ. ಇದು ೨,೩೬೩ ಕ್ಯೂಸೆಕ್ಸ್ ನೀರು ಶೇಖರಣಾ ಸಾಮಾರ್ಥ್ಯವನ್ನೊಂದಿದೆ. ಈ ಕೆರೆಯ ಅಂಗಳ ಅತ್ಯಂತ ವಿಶಾಲವಾಗಿದ್ದು, ಬಹಳಷ್ಟು ಜಲ ಸಂಗ್ರಹವಾಗುತ್ತದೆ. ಈ ಕೆರೆಯು ೧೮೯೦ ಎಕರೆ ಪ್ರದೇಶಕ್ಕೆ ನೀರನ್ನು ಒದಗಿಸುತ್ತದೆ. ಈ ಕೆರೆಯ ತೂಬಿನಲ್ಲಿ ಎರಡು ನಾಗರಕಲ್ಲು ಮತ್ತು ಮಹಿಷಾಸುರ ಮರ್ದಿನಿ ವಿಗ್ರಹಹಗಳಿವೆ.

## ೪೩. ತಿಮ್ಮಣ್ಣನಾಯಕನ ಕೆರೆ

ಚಿತ್ರದುರ್ಗ ನಗರದ ದಕ್ಷಿಣ ಭಾಗದಲ್ಲಿ ಬೆಟ್ಟದ ಪ್ರದೇಶದಲ್ಲಿರುವ 'ತಿಮ್ಮಣ್ಣನಾಯಕನ ಕೆರೆ' ಚಿತ್ರದುರ್ಗದ ಪಾಳೆಯಗಾರನಾಗಿದ್ದ ತಿಮ್ಮಣ್ಣನಾಯಕನಿಂದ ನಿರ್ಮಿತವಾಗಿತ್ತು. ಇದು ಅಧ್ಯಯನ ದೃಷ್ಟಿಯಿಂದ ಪ್ರಾಮುಖ್ಯತೆ ಗಳಿಸಿಕೊಂಡಿದೆ. ಇದು ಈ ಪ್ರದೇಶದ ಪ್ರಾಚೀನ ಕೆರೆಗಳಲ್ಲಿ ಒಂದು. ಈಗಿರುವ ಹೆಸರಿನ ಮೇಲಿನಿಂದ ಹಾಗೂ ಚಿತ್ರದುರ್ಗದ ಮೊದಲ ಪಾಳೆಯಗಾರನಾದ ತಿಮ್ಮಣ್ಣನಾಯಕನ ಕಟ್ಟಿಸಿದ ಕೆರೆ ಎಂದು ಅವರ ವಂಶಾಗಳಿಗಳು ಹೇಳುವುದರಿಂದ ಇದು ಅವನ ಕಾಲದ್ದೇ ಎನ್ನಿಸುವುದು ಸಹಜ. ಆದರೆ ತಿಮ್ಮಣ್ಣನಾಯಕನ ಕಾಲದ (ಕ್ರಿ.ಶ.೧೪ನೇ ಶತಮಾನ) ಒಂದು ಶಾಸನದಲ್ಲಿ ಇದಕ್ಕೆ ಪೂರಕ ಉಲ್ಲೇಖವಿದೆ. "ಚಿಮ್ಮತ್ತನೂರಿನ ನಖರ ಮುಂಮುರಿದಂಡಂಗಳು ಆ ಅರಕೆರೆಯ ಮೂಡಗೋಡಿಯ ಕಲ್ಲ ಕಡಿಸಿ ಕೋಡಿಯ ಮಾಡಿಸಿದರು" ಎನ್ನುವ ವಿವರವಿದೆ. ಇದರಿಂದ ಇಲ್ಲಿಯ ವರ್ತಕ ವರ್ಗದವರು ಈ ಕೆರೆಯ ಪೂರ್ವ ಭಾಗದ ಕೋಡಿಯ ನಿರ್ಮಾಣದಲ್ಲಿ ಆಸಕ್ತಿ ತೋರಿದ್ದರು. ಮತ್ತು ಆ ಕೆರೆ ತಿಮ್ಮಣ್ಣನಾಯಕನ ಕಾಲದಲ್ಲಿ ಆಸ್ತಿತ್ವದಲ್ಲಿತ್ತೆಂದು ಅರ್ಥವಾಗುತ್ತದೆ.[೪೭]

ಈ ಕೆರೆಯನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಬೃಹತ್ ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಕೆರೆಯ ಪೂರ್ವ ಭಾಗದಲ್ಲಿ ಹೆಚ್ಚಾದ ನೀರು ಅದರ ಮೂಲಕ ಹರಿದು ಪೂರ್ವ ಬದಿಯಲ್ಲಿನ ಇನ್ನೊಂದು ಕೆರೆಗೆ ಹೋಗಿ ಸಂಗ್ರಹವಾಗುವಂತೆ ಈ ಕೆರೆಯನ್ನು ನಿರ್ಮಿಸಿರುವುದು ಅವರ ತಾಂತ್ರಿಕ ಕೌಶಲ್ಯ ಮತ್ತು ಕೆರೆ ಸರಪಳಿ ವ್ಯವಸ್ಥೆಯ ಕೈಗನ್ನಡಿಯಾಗಿದೆ. ಹೀಗಾಗಿ ಇಲ್ಲಿ ಒಂದರ ಪಕ್ಕಕ್ಕೆ ಒಂದು ಹೀಗೆ ಎರಡು ಕೆರೆಗಳಿವೆ. ಚಿಕ್ಕದ್ದನ್ನು ಈಗ 'ಸಣ್ಣಕೆರೆ' ಎಂದು ಹೆಸರಿಸುವುದುಂಟು. ಈ ಕೆರೆಗಳ ನಡುವೆ ಬೆಟ್ಟಕ್ಕೆ ಹೋಗಲು ಒಂದು ಸೇತುವೆಯ ರೀತಿಯ ರಸ್ತೆ ಮಾಡಲಾಗಿದೆ(ತಿಮ್ಮಣ್ಣನಾಯಕನು ಮಾಡಿಸಿದ್ದು, ಈ ಕೆರೆಯ ನಿರ್ಮಾಣವಲ್ಲ, ಪುನರುಜ್ಜೀವನ ಕಾರ್ಯ ಎಂದು ಈ ಮೇಲಿನ ವಿವರದಿಂದ ಸ್ಪಷ್ಟವಾಗುತ್ತದೆ.). ತಿಮ್ಮಣ್ಣನಾಯಕನ ಕೆರೆಯ ಕೆಳ ಭಾಗದಲ್ಲಿ ವಿಶಾಲವಾದ ಕಣಿವೆಯ ಬಯಲಲ್ಲಿ ಮರದ ಒಂದು ತೋಪು ಇದ್ದದ್ದು ತಿಳಿದುಬರುತ್ತದೆ. ಈಗ ಅಲ್ಲಿ ಕೆಲವೇ ಕೆಲವು ಮರಗಳಿವೆ. ಬಹುಶಃ ಇಲ್ಲಿ ಪೂರ್ವ ಕಾಲದಲ್ಲಿ ತೋಟಗಳಿದ್ದು, ಅವುಗಳ ಕೃಷಿಗೆ ಈ ಕೆರೆಯ ನೀರು ಬಳಕೆಯಾಗಿರುವಂತೆ ಕಾಣುತ್ತದೆ. ಇದಷ್ಟೇ ಅಲ್ಲದೆ, ಮೊನ್ನೆ ಮೊನ್ನೆಯವರೆಗೂ ಚಿತ್ರದುರ್ಗ ನಗರಕ್ಕೆ ಕುಡಿಯುವ ನೀರು ಸಹ ಪೂರೈಕೆಯಾಗುತ್ತಿದ್ದುದ್ದು ಈ ಕೆರೆಯಿಂದಲೇ.

## ೪೪. ದೊಡ್ಡಣ್ಣನ ಕೆರೆ

ಚಿತ್ರದುರ್ಗದ ತಿಮ್ಮಣ್ಣನಾಯಕನ ಕೆರೆಯ ಹಿಂದಕ್ಕೆ ಅಂದರೆ ದಕ್ಷಿಣಕ್ಕೆ ಸ್ವಲ್ಪ ದೂರ ಸಾಗಿದರೆ, ಅಲ್ಲಿ ಇಂಥದೇ ಇನ್ನೊಂದು ದೊಡ್ಡ ಕೆರೆ ಕಾಣಿಸುತ್ತದೆ. ಇದನ್ನು 'ದೊಡ್ಡಣ್ಣನ ಕೆರೆ' ಎಂದು ಕರೆಯುತ್ತಾರೆ. ಇದೂ ಸಹ ಪ್ರಾಚೀನವಾದ ಕೆರೆ ಇರುವಂತೆ ತೋರುತ್ತದೆ. ಆದರೆ ಅದನ್ನು ತಿಳಿಸುವ ಯಾವ ಶಾಸನಗಳೂ ಸದ್ಯದವರೆಗೆ ಲಭ್ಯವಾಗಿಲ್ಲ. ತಿಮ್ಮಣ್ಣನಾಯಕನ ಆಪ್ತ ಬಂಧುಗಳಲ್ಲಿ ಒಡನಾಡಿಗಳಲ್ಲಿ ಒಬ್ಬನಾದ ಉಚ್ಚಂಗಿದುರ್ಗದ ನಾಯಕನೂ ಆಗಿದ್ದ ದೊಡ್ಡಣ್ಣ ನಾಯಕನು ಇಲ್ಲಿಯ

ಸೀತೆ ಕಲ್ಲು ಹಳ್ಳಕ್ಕೆ ಅಡ್ಡಗಟ್ಟೆ ಹಾಕಿಸಿ, ಈ ಕೆರೆ ಕಟ್ಟಿಸಿದಂತೆ ಚಿತ್ರದುರ್ಗ ಪಾಳೆಯಗಾರರ ವಂಶಾವಳಿಗಳು ವಿವರಿಸುತ್ತವೆ. ಈ ಕೆರೆಯನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಒಳಭಾಗಕ್ಕೆ ಕಗ್ಗಲ್ಲು ಮತ್ತು ಬೃಹತ್ ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ.

ಹೆಚ್ಚು ಕಡಿಮೆ ತಿಮ್ಮಣ್ಣನಾಯಕನ ಕೆರೆಯ ಕೆಳಗಿನಷ್ಟೇ ವಿಶಾಲವಾದ ಕಣಿವೆಯ ಬಯಲು ಪ್ರದೇಶ ಈ ಕೆರೆಯ ಕೆಳಗಿದ್ದು, ಹಿಂದೆ ಇದು ಕೃಷಿ ನಡೆಯುತ್ತಿದ್ದ ಕ್ಷೇತ್ರವಾಗಿದ್ದಂತೆ ಕಾಣುತ್ತದೆ. ಇಲ್ಲಿ ಕೃಷಿ ನಡೆಯದಿದ್ದಲ್ಲಿ ಇಂತಹ ದೊಡ್ಡ ಕೆರೆಯನ್ನು ಇಲ್ಲಿ ಕಟ್ಟುವ ಪ್ರಮೇಯವೇ ಇರುತ್ತಿರಲಿಲ್ಲ ಎನಿಸುತ್ತದೆ. ದಕ್ಷಿಣಕ್ಕಿರುವ ಜೋಗಿಮಟ್ಟಿ ಬೆಟ್ಟ ಸಂಕೀರ್ಣದ ಮೇಲೆ ಬಿದ್ದ ಮಳೆ ನೀರು ಕೆಳಗೆ ಹರಿದು ಇಲ್ಲಿ ಸಂಗ್ರಹಗೊಂಡು ಇದೊಂದು ದೊಡ್ಡ ಜಲಾಶಯದಂತೆ ಕಾಣಿಸುತ್ತದೆ. ಈ ಕೆರೆಯಲ್ಲಿ ದುರಸ್ತಿ ಕಾರ್ಯ ಕೈಗೊಂಡರೆ ಈಗಲೂ ಇದು ವ್ಯವಸ್ಥಿತವಾದ ಒಂದು ಜಲಾಶಯವಾಗಿ ಮಾರ್ಪಟ್ಟು ಕೃಷಿ ಮತ್ತಿತರ ಉಪಯೋಗಕ್ಕೆ ನೀರನ್ನು ನೀಡಬಲ್ಲದು.

**೪೫. ಕರಿವರ್ತಿ ಕೆರೆ**

ಚಿತ್ರದುರ್ಗದ ತಿಮ್ಮಣ್ಣನಾಯಕನ ಕೆರೆಯಿಂದ ಉತ್ತರಕ್ಕೆ ಕಣಿವೆಯ ಮಧ್ಯದಲ್ಲಿ ದಕ್ಷಿಣೋತ್ತರವಾಗಿ ಹಾಗೂ ಪೂರ್ವ ಪಶ್ಚಿಮವಾಗಿ ವಿಶಿಷ್ಟ ವಾಸ್ತು ಎನ್ನಬಹುದಾದ ರೀತಿಯ ಒಡ್ಡು ಹಾಕಿ ಮಾಡಿರುವ 'ಕರಿವರ್ತಿ ಕೆರೆ' ಎನ್ನುವ ಒಂದು ಚಿಕ್ಕ ಕೆರೆ ಇದೆ. ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಬೃಹತ್ ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿಯ ಒಡ್ಡನ್ನು 'ಶ್ರೀ ರಾಮದೇವರ ಒಡ್ಡು' ಎಂದು ಕರೆಯುವುದುಂಟು. ತಿಮ್ಮಣ್ಣನಾಯಕನ ಆಪ್ತಬಂಧುಗಳಲ್ಲಿ ಒಬ್ಬನಾದ ಗುಲುಪಿ ನಾಯಕ ಮಾಡಿಸಿದನೆಂದು ಹೇಳಲಾಗಿರುವ ರಾಮದೇವರ ಒಡ್ಡು ಇದೇ ಇರಬೇಕು. ಇದರಲ್ಲಿ ಹೆಚ್ಚಾದ ನೀರು ಪಾರ್ಶ್ವಭಾಗದಲ್ಲಿ ಹರಿದು ಹೋಗುವಂತೆ, ಚಚ್ಚೌಕವಾದ ಒಂದು ಸುರಂಗ ಮಾರ್ಗವನ್ನು, ಇಲ್ಲಿಯ ನೀರನ್ನು ಕೆರೆಯ ಕೆಳಗಿನ ಪ್ರದೇಶಕ್ಕೆ ಹಾಯಿಸಿಕೊಳ್ಳಲು ತೂಬಿನ ವ್ಯವಸ್ಥೆಯನ್ನೂ ಕಲ್ಪಿಸಲಾಗಿದೆ. ಇಲ್ಲಿ ಹೆಚ್ಚಾದ ನೀರು ಪಕ್ಕದಲ್ಲೇ 'ತೀಟೆ ಒಡ್ಡು' (ಇದು ಬಹುಶಃ 'ತೀಟೆ ಒಡ್ಡು' ಇರಬಹುದೇ?) ಎಂಬಲ್ಲಿಗೆ ಹರಿದು ಸಂಗ್ರಹವಾಗುವಂತೆ ವ್ಯವಸ್ಥೆ ಮಾಡಲಾಗಿದೆ.

ಇಲ್ಲಿ ಈಗ ಯಾವ ಕೃಷಿ ಕಾರ್ಯವೂ ನಡೆಯುತ್ತಲ್ಲವಾದರೂ, ಹಿಂದೊಂದು ಕಾಲಕ್ಕೆ ಕೃಷಿ ಕಾರ್ಯಕ್ಕೆ ಇದು ಉಪಯೋಗವಾಗಿರಬೇಕೆನಿಸುತ್ತದೆ. ಒಡ್ಡಿನ ಹೊರ ಬದಿಯಲ್ಲಿ ಬೆಟ್ಟದ ಬುಡದಲ್ಲಿ ಇದ್ದ ಸುಂದರವಾದ ತೂಬಿನ ಮಂಟಪ ಈಚೆಗೆ ಕೆಲವು ವರ್ಷಗಳ ಹಿಂದೆ ಕಣ್ಮರೆಯಾಗಿ ಹೋಗಿದೆ. ದೊಡ್ಡಣ್ಣನ ಕೆರೆಯಲ್ಲಿ ಹೆಚ್ಚಾದ ನೀರು ತಿಮ್ಮಣ್ಣನಾಯಕನ ಕೆರೆಗೆ, ಅದರಲ್ಲಿ ಹೆಚ್ಚಾದ ನೀರು ಸಣ್ಣ ಕೆರೆಗೆ, ಅಲ್ಲಿ ಹೆಚ್ಚಾದದ್ದು ಕರಿವರ್ತಿ ಕೆರೆ ಮತ್ತು ತೀಟೆ ಒಡ್ಡುಗಳಿಗೆ, ಅಲ್ಲೂ ಹೆಚ್ಚಾದ

ನೀರು ಕಾಮನ ಬಾಗಿಲ ಕೋಟೆಯ ಸುತ್ತಿನ ಅಗಳಿಗೆ ಹರಿದು ಸಂಗ್ರಹಗೊಳ್ಳುವಂತೆ ಮಾಡಿರುವುದು ಅಂದಿನ ಕೆರೆ ನಿರ್ಮಾಣದ ಕೌಶಲ್ಯಕ್ಕೆ ಸಾಕ್ಷಿಯಾಗಿದ್ದು, ಆಶ್ಚರ್ಯ ಹುಟ್ಟಿಸುವಂತಿದೆ.

**೪೬. ಸಾಣಿಕೆರೆ**

ಸಾಣಿಕೆರೆ ಗ್ರಾಮವು ಜಿಲ್ಲೆಯ ಚಳ್ಳಕೆರೆ ತಾಲ್ಲೂಕು ಕೇಂದ್ರದಿಂದ ೧೮ ಕಿ.ಮೀ. ದೂರದಲ್ಲಿದೆ. ಹೋಬಳಿ ಮತ್ತು ಗ್ರಾಮ ಪಂಚಾಯತಿ ಕೇಂದ್ರವಾಗಿರುವ ಇಲ್ಲಿ ಮಧ್ಯಯುಗೀನ ಕಾಲದಲ್ಲಿ ನಿರ್ಮಿತವಾದ ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಸಾಣಿಕೆರೆ ಎನ್ನಲಾಗುತ್ತದೆ. ಇದು ಐತಿಹಾಸಿಕ ಸ್ಥಳವಾಗಿದ್ದು, ಚಿತ್ರದುರ್ಗ ಸಂಸ್ಥಾನದ (ಪಾಳೆಯಗಾರರ) ಆಳ್ವಿಕೆಗೆ ಒಳಪಟ್ಟಿದ್ದು. ಅವರ ಆಯುಧಗಳಾದ ಕತ್ತಿ, ಕಠಾರಿಗಳಿಗೆ ಸಾಣೆ ಹಿಡಿಯಲು ಈ ಗ್ರಾಮದಲ್ಲಿ ವಿಶೇಷ ಸ್ಥಾನವಿತ್ತಂತೆ. ಅದಕ್ಕಾಗಿಯೇ ಇಲ್ಲಿ ಯಾರಿಗೂ ತಿಳಿಯದ ಒಂದು ಗುಪ್ತ ನೆಲ ಮಾಳಿಗೆ ಇತ್ತಂತೆ. ಇಲ್ಲಿ ಆಯುಧಗಳಿಗೆ ಸಾಣೆ ಹಿಡಿಯುತ್ತಿದ್ದರಂತೆ, ನಂತರ ಕೆರೆ ನಿರ್ಮಾಣವಾದ ಮೇಲೆ ಸಾಣೆ ಹಿಡಿಯುವ ಕೆರೆ ಸಾಣಿ ಕೆರೆಯಾಗಿದೆ ಎನ್ನುತ್ತಾರೆ ಇಲ್ಲಿನ ಸ್ಥಳೀಯರು. ಅದಲ್ಲದೆ, ಈ ಸಾಣಿಕೆರೆ ಗ್ರಾಮವನ್ನು ಸಾಣಪ್ಪ ನಾಯಕ ಎಂಬ ರಾಜ ಆಳುತ್ತಿದ್ದರಿಂದ ಸಾಣಪ್ಪ ನಾಯಕನ ಕೆರೆ ಸಾಣಿಕೆರೆಯಾಗಿದೆ ಎನ್ನುವ ಮತ್ತೊಂದು ಅಭಿಪ್ರಾಯ ಸ್ಥಳೀಯರಲ್ಲಿದೆ.[೮೮] ಇಲ್ಲಿನ ಕೆರೆಯ ಸಮೀಪ ಕೆರೆ ಮುಂದಲ ಗೊಲ್ಲರಹಟ್ಟಿ, ಖಂಡೇನಹಳ್ಳಿ, ಗೊಲ್ಲರಹಟ್ಟಿ, ಕಲ್ಲುಗುಡ್ಡೆ ಗೊಲ್ಲರಹಟ್ಟಿ ಎಂಬ ಮೂರು ಹಟ್ಟಿಗಳಿವೆ.

ಈ ಗ್ರಾಮದ ಹೊರವಲಯದಲ್ಲಿ ಅರಣ್ಯವಿದ್ದು, ಅಲ್ಲಿ ೨ ಕೆರೆಗಳಿದ್ದು, ಅವುಗಳಲ್ಲಿ ಒಂದನ್ನು ಹಳೆಯ ಕೆರೆ ಎಂದೂ, ಮತ್ತೊಂದನ್ನು ಹೊಸಕೆರೆ ಎಂದು ಕರೆಯಲಾಗುತ್ತದೆ. ಇಲ್ಲಿ ಐತಿಹಾಸಿಕವಾದ ಅನೇಕ ಕುರುಹುಗಳಿವೆ. ಅದಲ್ಲದೆ ಈ ಊರಿನಲ್ಲಿ ಕರಿಯಮ್ಮ ದೇವಿ ಗ್ರಾಮದೇವತೆ, ಶ್ರೀ ಗಂಜಿ ಗುಂಟಮ್ಮ ದೇವಾಲಯ, ಶ್ರೀ ಏಕನಾಥೇಶ್ವರಿ, ದುರ್ಗಮ್ಮ ದೇವಾಲಯಗಳು ಮತ್ತು ಗೊಲ್ಲರ ಹಟ್ಟಿಗಳಲ್ಲಿ ತಿಮ್ಮಪ್ಪ, ಜುಂಜಪ್ಪ ಮುಂತಾದ ದೇವರುಗಳು ಇವೆ. ಇಲ್ಲಿ ಕೋಟೆ, ಬುರುಜುಗಳು, ವೀರಗಲ್ಲುಗಳು, ಶಾಸನಗಳು, ಮಹಾಸತಿ ಕಲ್ಲುಗಳು, ರಾಜರ ಮನೆಯ ಅವಶೇಷಗಳು, ಉಯ್ಯಾಲೆ ಕಂಬ, ಕಲ್ಯಾಣಿ ಮುಂತಾದ ಐತಿಹಾಸಿಕ ಕುರುಹುಗಳನ್ನು ಕಾಣಬಹುದಾಗಿದೆ.

ಇಲ್ಲಿನ ಹಳೆಕೆರೆಯು ಗ್ರಾಮದ ನೈರುತ್ಯ ಭಾಗದಲ್ಲಿದ್ದು, ವಿಜಯನಗರ ಕಾಲಾವಧಿಯಲ್ಲಿ ನಿರ್ಮಾಣವಾಗಿರಬಹುದಾದ ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೧೨ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೮.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೨೧. ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೧೦೪.೦೦ ಚ.ಕೀ.ಮೀ. ಆಗಿದ್ದು, ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಈ ಕೆರೆಯು ವಿಶಾಲವಾದ ಅಂಗಳವನ್ನು ಹೊಂದಿದ್ದು, ಉದ್ದನೆಯ ಏರಿಯನ್ನು ಹೊಂದಿದೆ. ಈ ಕೆರೆಗೆ ಕಲ್ಲಹಳ್ಳಿ, ಮಧುರೆ ಕೆರೆ, ಕೋಡಿ ಬಿದ್ದ ನಂತರ ನೀರು ದೊಡ್ಡ ಹಳ್ಳದ ಮೂಲಕ ಬಂದು ಸೇರುತ್ತದೆ. ವಿಶಾಲವಾದ ಕೆರೆಯ

ಅಂಗಳವನ್ನು ಹೊಂದಿದೆ. ಎರಡು ತೂಬುಗಳನ್ನು ಹೊಂದಿದೆ. ಎರಡೂ ಕೋಡಿಗಳ ಭಾಗದಲ್ಲಿ ಕೆರೆ ಕಾಲುವೆಯ ಮುಖಾಂತರ ನೀರು ಕೃಷಿ ಭೂಮಿಗೆ ಹಂಚಿಕೆಯಾಗುವಂತೆ ತಾಂತ್ರಿಕವಾಗಿ ಈ ಕೆರೆಯನ್ನು ನಿರ್ಮಿಸಲಾಗಿದೆ.

ಈ ಕೆರೆಯ ವಾಯುವ್ಯ ಮೂಲೆಯಲ್ಲಿ ಕೆರೆಯ ನೀರು ಅಚ್ಚುಕಟ್ಟು ಪ್ರದೇಶಕ್ಕೆ ಹೊರ ಹೋಗಲು ನಿರ್ಮಿಸಿರುವ ಹಳೆಯ ತೂಬು ಇದೆ. ಈ ಪ್ರದೇಶದಲ್ಲಿ ಹಳೆಯ ಊರು ಇದ್ದು, ಕೆರೆ ಏರಿ ನಿರ್ಮಾಣವಾದ ಮೇಲೆ ಕೆರೆ ಏರಿ ಒಡೆದು ನೀರು ಏರಿಯ ಹಿಂಬದಿಯಲ್ಲಿದ್ದ ಊರ ಒಳಗೆ ನುಗ್ಗಿದ್ದರಿಂದ, ಈ ಊರನ್ನು ಪ್ರಸ್ತುತ ಇರುವ ಜಾಗಕ್ಕೆ ಸ್ಥಳಾಂತರಿಸಲಾಗಿದೆ. ಈ ತೂಬಿನಿಂದ ನೀರು ಸರಿಯಾಗಿ ಸರಬರಾಜು ಆಗುತ್ತಿರಲಿಲ್ಲ. ಆದಕಾರಣ ಈ ತೂಬನ್ನು ಮುಚ್ಚಿ, ಈಶಾನ್ಯ ಭಾಗದಲ್ಲಿ ೧೯೮೭ರಲ್ಲಿ ಸರ್ಕಾರದವರು ಹೊಸ ತೂಬನ್ನು ನಿರ್ಮಾಣ ಮಾಡಿದ್ದಾರೆ. ಹೊಸ ತೂಬನ್ನು ನಿರ್ಮಾಣ ಮಾಡಲು ಪ್ರಮುಖ ಕಾರಣವೆಂದರೆ, ಹಳೆಯ ತೂಬಿನ ಒಳಗಡೆ ಅಡ್ಡಗತ್ತಿಯನ್ನು ಅಳವಡಿಸಿದ್ದರಂತೆ. ನೀರು ತೂಬಿನ ಮೂಲಕ ಹೋಗುವಾಗ ಮೀನುಗಳು ಕತ್ತರಿ ಬಾಯಿಗೆ ಸಿಕ್ಕು ತುಂಡಾಗುತ್ತಿದ್ದವು ಮತ್ತು ಕೆರೆಯ ಏರಿಯಿಂದ ಈ ತೂಬು ಸುಮಾರು ೧೫ ಅಡಿ ಇರುವುದರಿಂದ ನೀರಿನಲ್ಲಿ ಈಜಿಕೊಂಡು ಹೋಗಿ ತೂಬಿನ ಕಟ್ಟಡದ ಬಳಿ ಅಡ್ಡವಾಗಿರುವ ಗುಂಡನ್ನು ತೆಗೆಯಬೇಕಿತ್ತು. ಆ ಗುಂಡು ತೆಗೆದಾಗ ನೀರು ಹೊರ ಹೋಗುತ್ತಿತ್ತು. ಒಮ್ಮೆ ಮಧ್ಯ ವಯಸ್ಸಿನ ವ್ಯಕ್ತಿಯು ಕಾಲುವೆಗೆ ನೀರು ಹರಿಸಲು ತೂಬಿನ ಗುಂಡು ಸರಿಸುವಾಗ ನೀರಿನ ಸೆಳೆಯುವಿಕೆಯಿಂದ ನೀರಿನ ಜೊತೆ ಆ ವ್ಯಕ್ತಿಯೂ ಹೋಗಿ ಕತ್ತರಿ ಬಾಯಿಗೆ ಸಿಕ್ಕು ಎರಡು ತುಂಡಾಗಿ ಆಚೆ ಬಂದಿದ್ದನಂತೆ, ಆಗಿನಿಂದ ಈ ತೂಬನ್ನು ಬಳಸುವುದನ್ನು ಬಿಟ್ಟು ಹೊಸ ತೂಬನ್ನು ನಿರ್ಮಾಣ ಮಾಡಿದರು.

ಹೊಸ ತೂಬಿನಲ್ಲಿ ಮರದ ಕೊರಡನ್ನು ತೂಬಿಗೆ ಜೋಡಿಸಿ ಕಬ್ಬಿಣದ ಸರಪಳಿ ಅಳವಡಿಸಿದ್ದಾರೆ. ಕೆರೆ ಏರಿಯ ಹಿಂದೆ ಹೊಸ ತೂಬಿಗೆ ಸೇತುವೆ ನಿರ್ಮಿಸಲಾಗಿದೆ. ಎರಡೂ ತೂಬುಗಳನ್ನು ದೊಡ್ಡ ದೊಡ್ಡ ಕಲ್ಲು ಕಂಬಗಳನ್ನು ಬಳಸಿಕೊಂಡು ನಿರ್ಮಿಸಲಾಗಿದೆ. ಸುಮಾರು ೩೦ ಅಡಿಗೂ ಮೇಲ್ಪಟ್ಟು ನಾಲ್ಕು ಕಂಬಗಳನ್ನು ನೆಡಲಾಗಿದೆ. ಇದನ್ನು ನಿರ್ಮಿಸಿರುವುದು ತುಂಬಾ ಶ್ರಮದ ಸಾಧನೆ. ಆಗಿನ ಕಾಲದಲ್ಲಿ ಯಂತ್ರಗಳ ಸಹಯವಿಲ್ಲದೇ, ಪ್ರಾಣಿಗಳು ಮತ್ತು ಮನುಷ್ಯರ ಬುದ್ಧಿ ಮತ್ತು ಶ್ರಮದಿಂದಾಗಿ ನಿರ್ಮಿಸಿರುವುದು ತುಂಬಾ ಶ್ಲಾಘನೀಯವಾದುದಾಗಿದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತ, ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಪ್ರಸ್ತುತ ರೈತರು ಈ ಬೆಳೆಗಳೊಂದಿಗೆ ಸೂರ್ಯಕಾಂತಿ, ಶೇಂಗಾ, ಜೋಳಗಳನ್ನು ಬೆಳೆಯುತ್ತಾರೆ.

**೪೭. ಗೋನೂರು ಕೆರೆ**

ಗೋನೂರು (ರೇಖಾಂಶ ೭೬°, ೪೯°, ೨೯°, ೭೮" ಮತ್ತು ಅಕ್ಷಾಂಶ–೧೪೦ ೨೭೦ ೮೪.೧೪") ಜಿಲ್ಲೆಯ ಚಿತ್ರದುರ್ಗ ತಾಲ್ಲೂಕು ಮತ್ತು ಅದೇ ಹೋಬಳಿಗೆ ಸೇರಿದ್ದು, ಚಿತ್ರದುರ್ಗ ನಗರಕ್ಕೆ ಹೊಂದಿಕೊಂಡಂತಿದೆ. ಇಲ್ಲಿ ಸುಮಾರು ಕ್ರಿ.ಶ.೧೦ನೇ ಶತಮಾನಕ್ಕೆ ಸೇರಿದ ಕೆರೆ ಇದ್ದು, ಅದನ್ನು ನಂತರ ಕಾಲದಲ್ಲಿ ಚಿತ್ರದುರ್ಗದ ಪಾಳೆಯಗಾರರು ದುರಸ್ತಿ ಮಾಡಿಸಿದ್ದಾರೆ.(ಕ್ರಿ.ಶ.೧೭ ಶತಮಾನ) ಈ ಐತಿಹಾಸಿಕ ಕೆರೆಯನ್ನು ಗೋನೂರುಕೆರೆ ಎನ್ನಲಾಗುತ್ತದೆ. ಇದು ತಾಲ್ಲೂಕು

ಕೇಂದ್ರದಿಂದ ೪ ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಇಲ್ಲಿ ನಾಯಕ, ಲಿಂಗಾಯಿತ, ಆದಿ ಕರ್ನಾಟಕ, ವಡ್ಡರು, ಮುಸ್ಲಿಮರು ಮುಂತಾದ ಸಮುದಾಯದ ಜನರು ವಾಸವಾಗಿದ್ದಾರೆ. ಕೋಮು ಸಾಮರಸ್ಯವನ್ನು ಇಲ್ಲಿ ಕಾಣಬಹುದಾಗಿದೆ. ಇಲ್ಲಿ ವರ್ಷಕ್ಕೊಮ್ಮೆ ನಡೆಯುವ ಗ್ರಾಮ ದೇವತೆಯ ಜಾತ್ರೆಯು ಅತ್ಯಂತ ವಿಶೇಷ ಮತ್ತು ದೊಡ್ಡ ಜಾತ್ರೆಯಾಗಿದೆ. ಅಲ್ಲದೆ ಪ್ರತಿ ಕಾರ್ತಿಕ ಮಾಸದಲ್ಲಿ ಮೈಲಾರಲಿಂಗೇಶ್ವರ ಸ್ವಾಮಿಯ ಕಾರ್ತಿಕೋತ್ಸವ ಸಹ ಇಲ್ಲಿ ನಡೆಯುತ್ತದೆ.

ಇಲ್ಲಿನ ಕೆರೆಯು ಗ್ರಾಮದ ಪಶ್ಚಿಮ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಸರಣಿಯಲ್ಲಿ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೭೭.೨೧ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೨೪.೧೮ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೯೧.೭೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೧೧೬.೪೨ ಹೇಕ್ಟರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೨೫.೩೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ (ಎಂ.ಸಿ.ಎಂ.) ೨.೩೬೩ ಇದೆ. ಇದರ ಉಪಯುಕ್ತತೆ ೨.೩೩೫ (ಎಂ.ಸಿ.ಎಂ.) ಮಾತ್ರ, ಇದರ ಒಟ್ಟು ವಿನ್ಯಾಸದ ಅಚ್ಚು ಕಟ್ಟು ಪ್ರದೇಶ ೭೭.೨೧ ಹೇಕ್ಟರಾಗಿದ್ದು, ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಪ್ರತಿ ವರ್ಷ ೪೫೫.೬೩ ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಈ ಕೆರೆಯು ಅತ್ಯಂತ ವಿಶಾಲವಾದ ಅಂಗಳವನ್ನು ಹೊಂದಿದ್ದು, ಇಂದು ಜಾಲಿಮರ ಮತ್ತು ಸೀಮೆ ಜಾಲಿ ಗಿಡಗಳಿಂದ ಆವೃತವಾಗಿದೆ. ಕೆರೆಯ ಏರಿಯು ಅತ್ಯಂತ ವಿಶಾಲ ಮತ್ತು ಉದ್ದವಾಗಿದ್ದು, ಇದು ಎರಡು ತೂಬುಗಳನ್ನು ಹೊಂದಿದೆ. ಕೆರೆಯ ಕೋಡಿ ಪಕ್ಕದಲ್ಲಿ ಗಂಗಮ್ಮನ ದೇವಾಲಯವಿದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತ, ಜೋಳ, ಶೇಂಗಾ ಬೆಳೆಗಳನ್ನು ಬೆಳೆಯುತ್ತಿದ್ದರು. ಇದರ ನೀರು ಕೃಷಿ ಭೂಮಿಗೆ ಹೆಚ್ಚಿನದಾಗಿ ಉಪಯುಕ್ತವಾಗಿತ್ತೆಂದು ಅಲ್ಲಿನ ಸ್ಥಳೀಯರು ಹೇಳುತ್ತಾರೆ. ಈ ಕೆರೆಯ ಅಂಗಳದಲ್ಲಿ ಇತ್ತೀಚೆಗೆ ನಗರೀಕರಣದ ಪ್ರಭಾವದಿಂದಾಗಿ ಮನೆಗಳನ್ನು ನಿರ್ಮಿಸಿರುವುದು ಮತ್ತು ಗುಡಿಸಲುಗಳನ್ನು ಹಾಕಿರುವುದು ವಿಷಾದನೀಯವಾಗಿದೆ. ಈ ಕೆರೆಯ ಸಮೀಪ ಸುಮಾರು ಕ್ರಿ.ಶ.೧೦ನೇ ಶತಮಾನಕ್ಕೆ ಸೇರಿದೆ. ಸಪ್ತ ಮಾತೃಕೆಯರ ಶಿಲ್ಪವೊಂದು ಈ ಕೆರೆಯ ಒಡ್ಡಿನಲ್ಲಿ ಇದ್ದು, ಇದು ಕೆರೆಯ ಪ್ರಾಚೀನತೆಗೆ ಸಾಕ್ಷಿ ಎನ್ನುವಂತಿದೆ. ಈ ಕೆರೆಯಲ್ಲಿ ಇಂದು ಅಷ್ಟಾಗಿ ನೀರು ಸಂಗ್ರಹಗೊಳ್ಳದಿದ್ದರೂ ಹಿಂದೊಂದು ಕಾಲಕ್ಕೆ ಅಧಿಕ ಪ್ರಮಾಣದ ನೀರಿನ ಸಂಗ್ರಹ ಇದರಲ್ಲಿರುತ್ತಿದ್ದು, ಅದು ಕೃಷಿ, ಮೀನುಗಾರಿಕೆ ಮತ್ತು ಪಶುಪಾಲನೆಗೆ ಬಳಕೆಯಾಗುತ್ತಿತ್ತೆಂಬುದನ್ನು ಗುರುತಿಸಬಹುದು.

**೪೮. ತಾಳ್ಯ ಕೆರೆ**

ಈ ಕೆರೆಯು ತಾಲ್ಲೂಕು ಕೇಂದ್ರವಾದ ಹೊಳಲ್ಕೆರೆಯಿಂದ ೨೦ ಕಿ.ಮೀ. ದೂರದಲ್ಲಿದೆ. ಹಾಲು ರಾಮೇಶ್ವರಕ್ಕೆ ಹೋಗುವ ಮಾರ್ಗಮಧ್ಯದಲ್ಲಿದ್ದು, ಇದು ಹೋಬಳಿ ಮತ್ತು ಗ್ರಾಮಪಂಚಾಯತಿ ಕೇಂದ್ರವಾಗಿದೆ. ಇದು ಪ್ರಮುಖವಾದ ಕೆರೆಯಾಗಿದ್ದು, ಇಲ್ಲಿ ಶಿಲಾಯುಗ ಕಾಲದ ಅವಶೇಷಗಳು

ದೊರೆತಿವೆ. ಅಲ್ಲದೇ ಆಂಜನೇಯ, ವೀರಭದ್ರ, ಬಂಡೆಮ್ಮ ಮೊದಲಾದ ದೇವಾಲಯ, ಶಾಸನ ಮತ್ತು ಇತರೆ ಪ್ರಾಚ್ಯಾವಶೇಷಗಳಿವೆ. ಕೆರೆ ಕೋಡಿಯ ಬಳಿಯ ತೋಪಿನಲ್ಲಿರುವ ಹನುಮಪ್ಪನಾಯಕನ ಶಾಸನವು ಹೊರಕೆರೆ ರಂಗನಾಥ ದೇವಸ್ಥಾನಕ್ಕೆ ಕೋಡಿಹಳ್ಳಿಯನ್ನು ದಾನ ನೀಡಿದ ವಿವರವನ್ನು ದಾಖಲಿಸಿದೆ. ಹೈದರಾಲಿ ಸೈನ್ಯ ಸಮೇತನಾಗಿ ಈ ಮಾರ್ಗದಲ್ಲಿ ಪ್ರಯಾಣಿಸುತ್ತಿದ್ದಾಗ ಬಾಯರಿಕೆಯಿಂದ ಬಳಲಿ ಬೆಂಡಾಗಿ ಇಲ್ಲಿನ ತುಂಬಿದ ಕೆರೆಯನ್ನು ಕಂಡು ಸಂತೋಷ ಭರಿತನಾಗಿ ತಲಾಟ್–ತಾಲಾಬ್ ಎಂದು ತೃಪ್ತಿಯಾಗುವ ತನಕ ನೀರು ಕುಡಿದನಂತೆ. ತಾಲಾಟ್–ತಾಲಾಬ್ ಪದಗಳೆ ಮುಂದೆ ತಾಳ್ಯ ಎಂದು ಹೆಸರಾಯಿತೆಂದು ಸ್ಥಳೀಯರು ಹೇಳುತ್ತಾರೆ.

ಇದು ವಿಶಾಲವಾದ ಅಂಗಳವನ್ನು ಹೊಂದಿದ್ದು, ಇದು ಎತ್ತರವಾದ ಮತ್ತು ಅಗಲವಾದ ಹಾಗೂ ವಿಶಾಲವಾದ ಏರಿಯನ್ನು ಹೊಂದಿದೆ. ಇಲ್ಲಿ ಸರಿಯಾದ ನಿರ್ವಹಣೆ ಇಲ್ಲದ ಕಾರಣ ಸಾಕಷ್ಟು ಗಿಡಮರಗಳು ಬೆಳೆದಿವೆ. ಅಲ್ಲದೆ ಕೆರೆಯ ಏರಿಯಲ್ಲಿಯೂ ಗಿಡಮರ ಬೆಳೆದು ಅದು ಅಲ್ಲಲ್ಲಿ ಶಿಥಿಲವಾಗಿದೆ. ಕೆರೆ ಸುತ್ತಲಿನ ಹಳ್ಳಗಳ ನೀರು ಹರಿದು, ಇಲ್ಲಿನ ಕೆರೆಗೆ ಬಂದು ಸೇರ್ಪಡೆಯಾಗುತ್ತದೆ. ಕೆರೆಯ ಬಲದಂಡೆ ಮತ್ತು ಎಡದಂಡೆಗಳಲ್ಲಿ ಎರಡು ಕೋಡಿಗಳನ್ನು ಕಟ್ಟಲಾಗಿದೆ. ಇದರ ಕೆರೆ ಏರಿಯ ವಿನ್ಯಾಸ ತುಂಬಾ ಅಚ್ಚುಕಟ್ಟಾಗಿದ್ದು, ಬಳುಕಿರುವ ಬಳ್ಳಿಯ ರೀತಿಯಲ್ಲಿದೆ. ಇದು ಎರಡು ತೂಬುಗಳನ್ನು ಹೊಂದಿದ್ದು, ಅವುಗಳನ್ನು ನೀಳವಾದ ಮತ್ತು ಚೌಕಾಕಾರದ ಕಂಬಗಳನ್ನು ಬಳಸಿ ತಾಂತ್ರಿಕತೆಯಿಂದ ನಿರ್ಮಿಸಿದ್ದಾರೆ. ಕೋಡಿಯ ಮೇಲೆ ಕೆಲ ಶಿಲ್ಪಗಳಿದ್ದು, ನೋಡಲು ಆಕರ್ಷಣೀಯವಾಗಿವೆ. ಇದು ಕೃಷ್ಣ ನದಿ ಪಾತ್ರದಲ್ಲಿದ್ದು. ಇದರ ಉಪ ಸರಣಿ ವೇದಾವತಿಯಾಗಿದೆ. ಈ ಕೆರೆಯ ಏರಿಯ ಮಟ್ಟ ೧೮.೦೦ ಅಡಿ ಇದೆ. ಇದರ ಜಲಾಯನ ಪ್ರದೇಶ ಸ್ವತಂತ್ರವಾಗಿ ೧೯.೫೦. ಚ.ಕಿ.ಮೀ. ಇದ್ದು ಹಾಗೂ ಸಂಯುಕ್ತವಾಗಿ ೯೦೨.೮ ಚ.ಕಿ.ಮೀ. ಇದೆ. ಇದರ ಜಲಾವೃತ ಪ್ರದೇಶ ೬೯೨.೭೬ ಚ.ಕಿ.ಮೀ. ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಈ ಕೆರೆಯಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯಿದ್ದು ನೋಡಲು ಆಕರ್ಷಣೀಯವಾಗಿದೆ. ಈ ಕೆರೆಯ ನೀರನ್ನು ಬಳಸಿಕೊಂಡು ಭತ್ತ, ಜೋಳ, ರಾಗಿ, ಹತ್ತಿಯನ್ನು ಮೊದಲು ಬೆಳೆಯಲಾಗುತ್ತಿತ್ತು. ಪ್ರಸ್ತುತ ರಾಗಿ, ಹತ್ತಿ, ಈರುಳ್ಳಿ, ಭತ್ತ, ತರಕಾರಿ, ಸೂರ್ಯಕಾಂತಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ಕೆರೆಯ ಎಡದಂಡೆ ಕಾಲುವೆ ೯.೦೦ ಕಿ.ಮೀ. ಹಾಗೂ ಬಲದಂಡೆ ಕಾಲುವೆ ೮.೦೦ ಕಿ.ಮೀ. ಉದ್ದವಿದೆ. ಈ ಕೆರೆಯ ಅಂಗಳ ಅತ್ಯಂತ ವಿಶಾಲವಾಗಿದ್ದು, ಬಹಳಷ್ಟು ಜಲ ಸಂಗ್ರಹವಾಗುತ್ತದೆ. ಈ ಕೆರೆಯು ೧೯೮೭ ಎಕರೆ ಪ್ರದೇಶಕ್ಕೆ ನೀರನ್ನು ಒದಗಿಸುತ್ತದೆ. ಈ ಕೆರೆಯ ತೂಬಿನ ಬಳಿ ಕೆಲ ಪ್ರಾಚ್ಯಾವಶೇಷಗಳಿವೆ.

**೪೯. ಮುರುಘಮಠದ ಕೆರೆಗಳು**

ಚಿತ್ರದುರ್ಗದಿಂದ ದಾವಣಗೆರೆಗೆ ಹೋಗುವ ರಸ್ತೆಯ ಎಡಬದಿಯಲ್ಲಿ ಶ್ರೀಮಠದ ಎದುರಿಗೆ ಅಂದರೆ ಪೂರ್ವಕ್ಕೆ ಒಂದು, ಎಡ ಮಗ್ಗುಲಿಗೆ, ಅಂದರೆ ವಾಯುವ್ಯಕ್ಕೆ ಇನ್ನೊಂದು ಕೆರೆ ಇದೆ.

ಚಿತ್ರದುರ್ಗ ನಗರದ ವಾಯುವ್ಯಕ್ಕಿರುವ ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠಕ್ಕೆ ಸೇರಿದ ಈ ಎರಡು ಕೆರೆಗಳು ಅಧ್ಯಯನ ದೃಷ್ಟಿಯಿಂದ ಪ್ರಮುಖವಾಗಿವೆ. ಈ ಎರಡೂ ಕೆರೆಗಳ ಮಧ್ಯೆ ಎತ್ತರದ ವಿಶಾಲ ಪ್ರದೇಶದಲ್ಲಿ ಬೃಹನ್ಮಠ ನೆಲೆಗೊಂಡಿದೆ. ಚಿತ್ರದುರ್ಗದ ಪಾಳೆಯಗಾರರ ಚಾರಿತ್ರಿಕ ದಾಖಲೆಗಳ ಪ್ರಕಾರ, ಇವೆರಡೂ ಸಹ ಭರಮಣ್ಣನಾಯಕನ (ಕ್ರಿ.ಶ.೧೬೮೯-೧೭೨೧) ಕಾಲದಲ್ಲಿ ನಿರ್ಮಾಣವಾಗಿವೆ. ಇವೆರಡಕ್ಕೂ ಆ ದಾಖಲೆಗಳಲ್ಲಿ 'ಮುರುಘಮಠದ ಕೆರೆಗಳು' ಎಂದು ಹೆಸರಿದೆ. ಆದರೆ ಈಚಿನ ಕಾಲದ ರೆವೆನ್ಯೂ ದಾಖಲೆಗಳಲ್ಲಿ ಮಠದ ಮುಂಭಾಗದ (ಪೂರ್ವ ಭಾಗದ) ಕೆರೆಯನ್ನು 'ಅರಸಿನ ಕೆರೆ' ಎಂತಲೂ, ಹಿಂಭಾಗದ (ವಾಯುವ್ಯ ಭಾಗದ) ಕೆರೆಯನ್ನು 'ಮಠದ ಕೆರೆ' ಎಂತಲೂ ಹೆಸರಿಸಿರುವುದುಂಟು. ಈ ಎರಡೂ ಕೆರೆಗಳಿಗೆ ಏಕವಾಗಿ ಆಗ್ನೇಯ ವಾಯುವ್ಯವಾಗಿ ಹಾಕಲಾಗಿರುವ ಎತ್ತರವಾದ ಒಡ್ಡಿನ ಮೇಲೆಯೇ ಈಗಿನ ಪೂನಾ-ಬೆಂಗಳೂರು ರಾಷ್ಟ್ರೀಯ ಹೆದ್ದಾರಿ ಹಾದು ಹೋಗಿದೆ.

ಈ ಎರಡೂ ಕೆರೆಗಳ ಕೆಳಗಿನ ಪ್ರದೇಶವೆಲ್ಲವೂ ಒಂದು ಕಾಲಕ್ಕೆ ಗದ್ದೆಯ ಭೂಮಿಯಾಗಿದ್ದು, ಅದಕ್ಕೆ ಈ ಕೆರೆಗಳ ನೀರಿನ ಸಂಗ್ರಹ ಬಳಕೆಯಾಗುತ್ತಿತ್ತು ಎನ್ನುವುದಕ್ಕೆ ಎರಡೂ ಕೆರೆಗಳಲ್ಲಿರುವ ದೊಡ್ಡ ಗಾತ್ರದ ಗ್ರಾನೈಟ್ ಕಲ್ಲು ತೊಲೆಗಳನ್ನು, ಚಪ್ಪಡಿಗಳನ್ನು ಬಳಸಿ ಮಾಡಲಾಗಿರುವ ಕಲಾತ್ಮಕವಾದ ತೂಬಿನ ಮಂಟಪಗಳೇ ಸಾಕ್ಷಿ. ಈ ಕೆರೆಗಳಲ್ಲಿ ಈಗ ಹೆಚ್ಚಿನ ಪ್ರಮಾಣದ ಜಲಸಂಗ್ರಹವಿಲ್ಲದೆ ಕೃಷಿಗೆ ಈ ನೀರನ್ನು ಬಳಸುವುದು ಬಹುಮಟ್ಟಿಗೆ ತಪ್ಪಿ ಹೋಗಿದೆ. ಸದ್ಯಕ್ಕೆ ಇವುಗಳಲ್ಲಿ ಸಂಗ್ರಹಗೊಳ್ಳುವ ಅಷ್ಟಿಷ್ಟು ನೀರು ಕೂಡ ಈಗ ಕೃಷಿ ಉದ್ದೇಶಗಳಿಗೆ ಬಳಕೆಯಾಗುತ್ತಿದೆ. ಇವುಗಳ ಕೆಳ ಪ್ರದೇಶದಲ್ಲಿ ಮಠದ ಕುರುಬರ ಹಟ್ಟಿ ಎಂಬ ಗ್ರಾಮ ನೆಲೆಗೊಂಡಿದ್ದು, ಅದರ ಬದಿಯಲ್ಲಿ ತೆಂಗಿನ ಕೃಷಿ ಇತ್ತೆಂಬುದಕ್ಕೆ ಈಗ ಉಳಿದಿರುವ ಎತ್ತರದ ತೆಂಗಿನ ಮರಗಳು ಮತ್ತು ಬೆಳೆ ಭೂಮಿಗಳೂ ಸಾಕ್ಷಿಯಾಗಿವೆ. ಇವು ಚಿತ್ರದುರ್ಗ ಪಾಳೆಯಗಾರರ ಕಾಲದ ಪ್ರಜಾಹಿತ ಕಾರ್ಯಗಳ ಕುರುಹುಗಳಾಗಿ ಇಂದು ಉಳಿದಿವೆ.

### ೫.೩. ಆಧುನಿಕ(ಸಮಕಾಲೀನ) ಪ್ರಮುಖ ಕೆರೆಗಳು

ಬ್ರಿಟಿಷರು ಭಾರತಕ್ಕೆ ಬಂದ ತರುವಾಯ ತಮ್ಮ ಚಾಣಕ್ಷ ನೀತಿಯಿಂದ ಇಡೀ ದೇಶವನ್ನು ತಮ್ಮ ಅಧೀನಕ್ಕೆ ತೆಗದುಕೊಂಡರು. ಅದರಂತೆ ನಮ್ಮ ರಾಜ್ಯದಲ್ಲಿ ಅಧಿಕಾರ ನಡೆಸುತ್ತಿದ್ದ ಮೈಸೂರಿನ ಒಡೆಯರು ಮತ್ತು ಇತರೆ ಸಣ್ಣಪುಟ್ಟ ಅರಸರನ್ನು ಹಾಗೂ ಟಿಪ್ಪು ಸುಲ್ತಾನ್‌ರನ್ನು ತಮ್ಮ ತಂತ್ರದಿಂದ ಸೋಲಿಸಿದವರನ್ನು ಮೂಲೆಗೊತ್ತಿ ತಮ್ಮ ಸಾಮ್ರಾಜ್ಯಶಾಹಿ ನೀತಿಯನ್ನು ಮುಂದುವರಿಸಿದರು. ಕ್ರಿ.ಶ.೧೮ನೇ ಶತಮಾನದಿಂದ ಕ್ರಿ.ಶ.೨೦ನೇ ಶತಮಾನದವರೆಗಿನ ಕಾಲಘಟ್ಟವನ್ನು ಕರ್ನಾಟಕದಲ್ಲಿ ಆಧುನಿಕ ಕಾಲಘಟ್ಟವೆಂದು ಹಾಗೂ ಆ ನಂತರದ ೨೧ನೇ ಶತಮಾನದ ಈ ಪ್ರಸಕ್ತ ಕಾಲವನ್ನು ಸಮಕಾಲೀನ ಕಾಲವೆಂದು ಕರೆಯಬಹುದಾಗಿದೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯಲ್ಲಿ ಬ್ರಿಟಿಷರು ಮತ್ತು ಆನಂತರದಲ್ಲಿ ನಮ್ಮ ಸರ್ಕಾರಗಳಿಂದ ನಿರ್ಮಾಣವಾದ ಪ್ರಮುಖ ಕೆರೆಗಳನ್ನು ಇಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಶಾಸನ ಮತ್ತು ಮತ್ತಿತರ ಆಕರಗಳಲ್ಲಿ ಹೆಸರಿಸದೇ ಇರುವ ಇನ್ನೂ ಅನೇಕ ಕೆರೆಗಳು

ಹಿಂದೆ ಜಿಲ್ಲೆಯಲ್ಲಿ ಇದ್ದಿರಬಹುದು. ಅವೆಲ್ಲವುಗಳಲ್ಲಿ ಹಲವು ಈಗಲೂ ಇದ್ದು ಜನ, ಜಾನುವಾರುಗಳಿಗೆ ಮತ್ತು ಅಲ್ಲಲ್ಲಿ ಕೃಷಿಗೆ ಬಳಕೆಯಾಗುತ್ತಿರುವುದನ್ನು ನಾವು ಇಂದಿಗೂ ಕಾಣಬಹುದಾಗಿದೆ. ಆದ್ದರಿಂದ ಇಲ್ಲಿನ ಆಧುನಿಕ ಪ್ರಮುಖ ಕೆರೆಗಳನ್ನು ಈ ಮುಂದೆ ವಿಶ್ಲೇಷಿಸಲಾಗಿದೆ.

**೫೦. ಗೊರ್ಲಕಟ್ಟೆ ಕೆರೆ**

ಗೊರ್ಲಕಟ್ಟೆ ಗ್ರಾಮವು ಜಿಲ್ಲೆಯ ಚಳ್ಳಕೆರೆ ತಾಲ್ಲೂಕು ಮತ್ತು ಹೋಬಳಿಗೆ ಸೇರಿದ್ದು, ನನ್ನಿವಾಳ ಗ್ರಾಮ ಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಈ ಊರಿನಲ್ಲಿ ಆಧುನಿಕ ಕಾಲದಲ್ಲಿ ನಿರ್ಮಿತವಾದ (ಕ್ರಿ.ಶ.೧೮ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಈ ಕೆರೆಯು ಇಲ್ಲಿನ ಜಗಲೂರಜ್ಜನ ದೇವಾಲಯದ ಹಿಂಬದಿಯಲ್ಲಿದೆ. ಕೆರೆಯ ಕೋಡಿಯ ಪಕ್ಕದಲ್ಲಿ ದುಗ್ಗಮ್ಮನ ದೇವಾಲಯ ಇರುವುದರಿಂದ ಇದನ್ನು ದುಗ್ಗಮ್ಮನ ಕೆರೆ/ಅಜ್ಜನ ಕೆರೆ ಇಲ್ಲವೇ ಗೊರ್ಲಕಟ್ಟೆ ಕೆರೆ ಎಂದು ಕರೆಯುತ್ತಾರೆ. ಈ ಗ್ರಾಮವು ಚಳ್ಳಕೆರೆ ತಾಲ್ಲೂಕು ಕೇಂದ್ರದಿಂದ ಎರಡು ಮೈಲಿ ದೂರದಲ್ಲಿದೆ. ಇಲ್ಲಿ ಕುರುಬ ಜನಾಂಗದವರು ಹೆಚ್ಚಾಗಿ ವಾಸಿಸುತ್ತಿದ್ದು, ಅವರೊಂದಿಗೆ ಇತರೆ ಹಲವು ಸಮುದಾಯಗಳಿದ್ದು, ಅವರಲ್ಲಿ ಕೋಮು ಸಾಮರಸ್ಯವನ್ನು ಕಾಣಬಹುದಾಗಿದೆ. ಇಲ್ಲಿ ಮಾರಮ್ಮ, ಜಗಲೂರಜ್ಜ ಮಹಾಸ್ವಾಮಿ, ಆಂಜನೇಯ ಸ್ವಾಮಿ ದೇವಾಲಯಗಳಿವೆ. ಇಲ್ಲಿ ೫ ವರ್ಷಗಳಿಗೊಮ್ಮೆ ಗ್ರಾಮದೇವತೆಯ ಜಾತ್ರೆ ಮತ್ತು ಆಂಜನೇಯ ಸ್ವಾಮಿಯ ಕಾರ್ತಿಕೋತ್ಸವವು ಪ್ರತಿ ವರ್ಷ ವಿಜೃಂಭಣೆಯಿಂದ ನಡೆಯುತ್ತದೆ. ಇಲ್ಲಿ ಕಂಬಳಿ ನೇಯ್ಗೆಯು ಪ್ರಧಾನ ಕುಲ ಕಸುಬಾಗಿದೆ. ಇಲ್ಲಿನ ಜನರಿಗೆ ಕಂಬಳಿ ಉದ್ಯಮವು ಜೀವನಕ್ಕೆ ವರದಾನವಾಗಿದೆ ಎಂದು ಹೇಳಬಹುದು.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ವಾಯುವ್ಯ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೧೭.೨೧ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೪.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೧೨.೦೦ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೯೦.೦೮ ಹೇಕ್ಟರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೨೫.೩೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ ೧.೯೮.೩೬೩ ಎಂ.ಸಿ.ಎಂ. ಇದೆ. ಇದರ ಒಟ್ಟು ವಿನ್ಯಾಸ ಅಚ್ಚು ಕಟ್ಟು ಪ್ರದೇಶ ೫೭.೨೧ ಹೇಕ್ಟರ್ ಆಗಿದ್ದು, ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೬೫೫.೯೨ ಮಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ.

ಈ ಕೆರೆಯು ಕಪ್ಪು ಮತ್ತು ಕೆಂಪು ಮಿಶ್ರಿತ ಫಲವತ್ತತೆಯ ವಿಶಾಲವಾದ ಅಂಗಳವನ್ನು ಹೊಂದಿದ್ದು, ಸಣ್ಣ ಪುಟ್ಟ ಹಳ್ಳ ಕೊಳ್ಳಗಳು ಈ ಕೆರೆಗೆ ಜಲದಾರವಾಗಿವೆ. ಎರಡು ತೂಬುಗಳನ್ನು

ಹೊಂದಿದ್ದು, ದೊಡ್ಡ ತೂಬು ತಾಂತ್ರಿಕವಾಗಿ ನಿರ್ಮಿತವಾಗಿದ್ದು, ಅಜ್ಜನ ಗುಡಿಯ ಹಿಂಬದಿಯಲ್ಲಿ ಇದೆ. ತೂಬಿನಿಂದ ಹೊರಬಂದ ನೀರು ಕಾಲುವೆಗಳ ಮುಖಾಂತರ ಕೃಷಿಗೆ ಉಪಯೋಗವಾಗುವಂತೆ ನಿರ್ಮಿಸಲಾಗಿದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳಗಳನ್ನು ಬೆಳೆಯುತ್ತಿದ್ದರು. ಈಗ ಜೋಳ, ಶೇಂಗಾ, ಭತ್ತ ಹಾಗೂ ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೫೧. ತಳುಕಿನ ಕೆರೆ**

ತಳುಕು ಗ್ರಾಮವು ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನಲ್ಲಿದೆ. ಇದು ಹೋಬಳಿ ಕೇಂದ್ರವಾಗಿದೆ. ಸಾಣಿಕೆರೆ ಗ್ರಾಮ ಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಈ ಊರಿನಲ್ಲಿ ಆಧುನಿಕ ಕಾಲದಲ್ಲಿ ನಿರ್ಮಿತವಾದ (ಕ್ರಿ.ಶ.೧೯ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ತಳುಕಿನಕೆರೆ/ತುಳುಕಿನ ಕೆರೆ ಎನ್ನಲಾಗುತ್ತದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೧೫ ಕಿ.ಮೀ. ದೂರದಲ್ಲಿದೆ. ಇದು ತ.ಸು.ಶಾಮರಾಯರು, ತ.ರಾ.ಸು. ಅವರ ತಾತ ತಳುಕಿನ ಸುಬ್ಬಣ್ಣ ಹಾಗೂ ತಳುಕಿನ ವೆಂಕಣ್ಣಯ್ಯನವರ ಹುಟ್ಟೂರು ಇದಾಗಿದೆ. ಈ ಗ್ರಾಮದ ಮೂಲ ಸ್ಥಾನ ದೇವಾಲಯಕ್ಕೆ ದಕ್ಷಿಣದಲ್ಲಿ ಶಿಲಾಶಾಸನ ದೊರಕಿದೆ ಮತ್ತು ಗ್ರಾಮದ ಶಾನುಭೋಗರ ಕಪಿಲೆಯಲ್ಲಿ ಅಜ್ಜನ ದೇವಾಲಯವಿದೆ. ಇಲ್ಲಿಯ ಒಂದು ಶಾಸನದಿಂದ ತಿರುಮಲ ರಾಜಯ್ಯನವರು ದೊಡ್ಡೇರಿಯ ನಾಡಗೌಡ ಬವರಸೆಟ್ಟಿಯವರಿಗೆ ಹರತಿಕೆರೆಯ ಮೂಡಲ ಸ್ಥಳವನ್ನು ದಾನ ಕೊಟ್ಟ ಬಗ್ಗೆ ತಿಳಿದುಬರುತ್ತದೆ.[೪೯] ಅಲ್ಲದೇ ಇಲ್ಲಿ ಆಂಜನೇಯ, ಬಸವೇಶ್ವರ, ವೀರಭದ್ರ ಸ್ವಾಮಿ, ಗಂಗಮ್ಮನ ದೇವಾಲಯಗಳಿವೆ. ಸಾರಿಗೆ ಸೌಲಭ್ಯವಿದೆ. ವಿದ್ಯುತ್ ಇಲಾಖೆಯ ಪವರ್ ಜನರೇಷನ್ ಕೇಂದ್ರವಿದೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಹೀಗಿವೆ. ಈ ಕೆರೆಯು ಗ್ರಾಮದ ಪಶ್ಚಿಮ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೨೭.೨೧ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೮.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೨೯.೭೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೧೦೪.೦೦ ಹೇಕ್ಟರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೨೫.೩೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ (ಎಂ.ಸಿ.ಎಂ.) ೨.೩೬೩ ಇದೆ. ಇದರ ಉಪಯುಕ್ತತೆ ೨.೩೩೫ (ಎಂ.ಸಿ.ಎಂ.)ಮಾತ್ರ. ಇದರ ಒಟ್ಟು ವಿನ್ಯಾಸ ಅಚ್ಚು ಕಟ್ಟು ಪ್ರದೇಶ ೭೭.೨೧ ಹೇಕ್ಟರ್ ಆಗಿದ್ದು, ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೪೫೫.೬೩ ಮಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ.

ಈ ಕೆರೆಯು ವಿಶಾಲವಾದ ಅಂಗಳವನ್ನು ಹೊಂದಿದ್ದು, ಫಲವತ್ತತೆಯ ಮಣ್ಣಿನಿಂದ ಕೂಡಿದೆ. ಈ ಕೆರೆಗೆ ನಾಯಕನಹಟ್ಟಿ, ಹಿರೇಕೆರೆಯ ಕಾಲುವೆಯಿಂದ ಮತ್ತು ಹೂವಿನ ಹಳ್ಳ ಹಾಗೂ

ಹೊಸಹಳ್ಳಿ ಕೆರೆಯಿಂದ ನೀರು ಬರುತ್ತದೆ. ಈ ಕೆರೆಯಲ್ಲಿ ತೂಬಿನ ವ್ಯವಸ್ಥೆ ಇದೆ. ಎಡದಂಡೆಯ ಭಾಗದಲ್ಲಿ ಮತ್ತು ಬಲದಂಡೆಯ ಭಾಗದಲ್ಲಿ ನೀರು ಹೊರ ಹೋಗಲು ರಾಜಗಾಲುವೆಗಳಿವೆ. ಬಲ ಭಾಗದ ಕಾಲುವೆಯನ್ನು ಬಸವನಾಲೆಯೆಂದು ಕರೆಯಲಾಗುತ್ತಿದ್ದು, ಈ ಭಾಗದ ರೈತರ ಜಮೀನುಗಳಿಗೆ ನೀರು ಒದಗಿಸುತ್ತದೆ. ಕೆರೆಯ ಮುಂಭಾಗದಲ್ಲಿ ಗಂಗಾ ಪರಮೇಶ್ವರಿ ದೇವಾಲಯವಿದೆ. ಈ ಕೆರೆಯು ತುಂಬಿದರೆ ಕೃಷಿಗೆ ಪ್ರಮುಖ ಉತ್ತೇಜನಕಾರಿಯಾಗಿರುತ್ತದೆ. ಕೆರೆಯ ಏರಿಯು ಭದ್ರತೆಯಿಂದ ಕೂಡಿದೆ. ಇತ್ತೀಚೆಗೆ ಸೀಮೆಜಾಲಿ ಗಿಡಗಳು ಬೆಳೆದು ಹಾದಿಗೆ ಅಡ್ಡವಾಗಿದ್ದು, ಅವುಗಳನ್ನು ತೆಗೆಸಿ ದುರಸ್ತಿ ಮಾಡಬೇಕಾದ ಅವಶ್ಯಕತೆ ಇದೆ. ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಹಿಂದೆ ಬೆಳೆಯುತ್ತಿದ್ದರು. ಈಗ ಜೋಳ, ಶೇಂಗಾ, ಭತ್ತ ಹಾಗೂ ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೫.೨. ಚಳ್ಳಕೆರೆಯ ಕರೆಕಲ್ ಕೆರೆ**

ಚಳ್ಳಕೆರೆಯು ಪ್ರಸ್ತುತ ತಾಲ್ಲೂಕು ಕೇಂದ್ರವಾಗಿದ್ದು, ಜಿಲ್ಲಾ ಕೇಂದ್ರದಿಂದ ೩೫ ಕಿ.ಮೀ. ದೂರದಲ್ಲಿದೆ. ಈ ಊರಿನಲ್ಲಿ ಆಧುನಿಕ ಕಾಲದಲ್ಲಿ ಅಂದರೆ ೧೮೭೮ ನಿರ್ಮಿತವಾದ (ಕ್ರಿ.ಶ.೧೯ ಶತಮಾನ) ಐತಿಹಾಸಿಕ ಕೆರೆ ಇದೆ. ಕೆರೆಯ ಏರಿಯ ಪಕ್ಕದಲ್ಲಿ ದೊಡ್ಡದಾದ ಕಪ್ಪು ಶಿಲೆಗಳು (ಕೆರೆಕಲ್ಲು) ಇರುವುದರಿಂದ ಇದನ್ನು ಕೆರೆಕಲ್ ಕೆರೆ ಎಂದು ಕರೆಯುತ್ತಾರೆ. ಇದರ ದಂಡೆಯಲ್ಲಿ ಸೂಜಿಮಲ್ಲೇಶ್ವರ ಸ್ವಾಮಿ ದೇವಾಲಯವಿದೆ. ಇದು ಲಯನ್ಸ್ ಕ್ಲಬ್ ಆಫ್ ಆಯಿಲ್ ಸಿಟಿ, ಛೋಟಾ ಮುಂಬೈ ಎಂದೇ ಪ್ರಖ್ಯಾತಿ ಪಡೆದಿದೆ.

ಚಳ್ಳಕೆರೆಯ ಉತ್ತರದಲ್ಲಿ ಮೊಳಕಾಲ್ಮೂರು ತಾಲ್ಲೂಕು ಹಾಗೂ ಬಳ್ಳಾರಿ ಜಿಲ್ಲೆ, ದಕ್ಷಿಣದಲ್ಲಿ ಹಿರಿಯೂರು, ಪಶ್ಚಿಮದಲ್ಲಿ ಜಗಳೂರು ಮತ್ತು ಚಿತ್ರದುರ್ಗ ತಾಲ್ಲೂಕುಗಳಿವೆ. ಪೂರ್ವದಲ್ಲಿ ಆಂಧ್ರ ಮತ್ತು ಪಾವಗಡ ತಾಲ್ಲೂಕುಗಳಿಂದ ಆವೃತವಾಗಿರುವ ಚಿತ್ರದುರ್ಗ ಜಿಲ್ಲೆಯ ಉಪ ವಿಭಾಗಕ್ಕೆ ಸೇರಿದ ಒಂದು ತಾಲ್ಲೂಕು ಕೇಂದ್ರ ಇದಾಗಿದೆ. ಕ್ರಿ.ಶ.೧೮೮೨ರ ವರೆಗೆ ಈ ತಾಲ್ಲೂಕು ದೊಡ್ಡೇರಿ ತಾಲ್ಲೂಕು ಎಂದೇ ಹೆಸರಾಗಿತ್ತು ಹಾಗೂ ೧೮೭೫ ರಿಂದ ೧೮೭೬ರ ವರೆಗೆ ಮೊಳಕಾಲ್ಮೂರು ತಾಲ್ಲೂಕಿನ ಅನೇಕ ಪ್ರದೇಶಗಳು ಈ ತಾಲ್ಲೂಕಿನಲ್ಲಿ ಒಳಗೊಂಡಿದ್ದವು. ಈ ತಾಲ್ಲೂಕು ನಾಯನಕಹಟ್ಟಿ, ತಳುಕು, ಪರಶುರಾಂಪುರ ಎಂಬ ಪ್ರಮುಖ ಹೋಬಳಿಗಳನ್ನು ಹೊಂದಿದೆ. ಇಲ್ಲಿ ಐತಿಹಾಸಿಕವಾದ ೨ ದೇವಾಲಯಗಳಿವೆ. ಅವುಗಳೆಂದರೆ ಶ್ರೀ ಚಳ್ಳಕೆರೆಯಮ್ಮನ ದೇವಾಲಯ, ಶ್ರೀ ವೀರಭದ್ರ ಸ್ವಾಮಿ ದೇವಾಲಯ. ಶ್ರೀ ವೀರಭದ್ರ ಸ್ವಾಮಿಯ ಜಾತ್ರೆಯು ಪ್ರತಿ ವರ್ಷ ನಡೆಯುತ್ತದೆ. ಚಳ್ಳಕೆರೆಯಮ್ಮನ ಜಾತ್ರೆಯು ೫ ವರ್ಷಗಳಿಗೊಮ್ಮೆ ನಡೆಯುತ್ತದೆ. ಬಯಲು ಸೀಮೆಯ ಈ ಪ್ರದೇಶದಲ್ಲಿ ಎಣ್ಣೆ ಗಿರಣಿಗಳದ್ದೇ ಕಾರುಬಾರು.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ಉತ್ತರ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ.

ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೧೭.೨೧ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೨೦.೦೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೫೨.೦೦ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೮೦ ಹೆಕ್ಟೇರ್ ಇದೆ. ಇದರ ಗರಿಷ್ಠ ನೀರು ಸಂಗ್ರಹಣಾ ಮಟ್ಟ ೫೧.೪೮ ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೨೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ ೬೩ ಎಂ.ಸಿ.ಎಂ. ಇದೆ. ಇದರ ಒಟ್ಟು ವಿನ್ಯಾಸ ಅಚ್ಚು ಕಟ್ಟು ಪ್ರದೇಶ ೬೭.೧೧ ಹೇಕ್ಟರ್ ಆಗಿದ್ದು, ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೬೫೫.೯೨ ಕಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ.

ಕರೆಕಲ್ ಕೆರೆಯು ವಿಶಾಲವಾದಂತಹ ಅಂಗಳವನ್ನು ಹೊಂದಿದ್ದು, ಇಂದು ಕೆರೆಯ ತುಂಬೆಲ್ಲಾ ಜಾಲಿ ಮರಗಳು ಆವೃತಗೊಂಡಿವೆ. ಇಲ್ಲಿ ಎರಡು ತೂಬುಗಳಿದ್ದು, ಬಲದಂಡೆಯ ತೂಬು ದೊಡ್ಡದಿದ್ದು ನೀರಿನ ಸರಬರಾಜಿಗೆ ಅನುಕೂಲವಾಗಿದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಈಗ ಜೋಳ, ಶೇಂಗಾ, ಭತ್ತ ಹಾಗೂ ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೫೩. ತೆಂಗಿನ ಗೌರಸಮುದ್ರದ ಕೆರೆ**

ತೆಂಗಿನ ಗೌರಸಮುದ್ರ (ರೇಖಾಂಶ. ೭೬°೪೫'೩೪" ಅಕ್ಷಾಂಶ ೧೪°೪೯'೫೦") ಗ್ರಾಮವು ಜಿಲ್ಲೆಯ ಮೊಳಕಾಲ್ಮುರು ತಾಲ್ಲೂಕಿನಲ್ಲಿದೆ. ಇದು ದೇವಸಮುದ್ರ ಹೋಬಳಿ ಮತ್ತು ಅಶೋಕ ಸಿದ್ದಾಪುರ ಗ್ರಾಮ ಪಂಚಾಯತಿಯ ವ್ಯಾಪ್ತಿಯಲ್ಲಿದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೧೬ ಕಿ.ಮೀ. ದೂರದಲ್ಲಿದೆ (ನೋಂದಣಿ ಸಂಖ್ಯೆ. ಸಿ.ಡಿ.ಜಿ. ಎಸ್.ನಂ. ೨೧೯/೨೦೦೭-೦೮ ಮತ್ತು ಟೋಪೋ ಶೀಟ್ ಸಂಖ್ಯೆ-೫೭-ಬಿ/೧೩). ಇದನ್ನು ತೆಂಗಿನ ಗೌರಸಮುದ್ರ ಎಂದು ಕರೆಯಲಾಗುತ್ತದೆ. ಈ ಊರಿನಲ್ಲಿ ಆಧುನಿಕ ಕಾಲದಲ್ಲಿ ಅಂದರೆ ಬ್ರಿಟಿಷರ ಅಧಿಕಾರಾವಧಿಯಲ್ಲಿ ಅಂದರೆ ೧೮೯೮ ರಲ್ಲಿ ನಿರ್ಮಿತವಾದ (ಕ್ರಿ.ಶ.೧೯ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಗೌರಸಮುದ್ರ ಕೆರೆ ಎನ್ನಲಾಗುತ್ತದೆ. ಇದರ ಹತ್ತಿರದಲ್ಲಿ ಚಿನ್ನಹಗರಿ ಹಳ್ಳ ಹರಿಯುತ್ತದೆ. ಈ ಗ್ರಾಮದಲ್ಲಿ ಶ್ರೀ ಕಲ್ಯಾಣ ಬಸವೇಶ್ವರ, ಬನ್ನಿ ಮಹಾಕಾಳಿ, ಲಕ್ಷ್ಮಿನರಸಿಂಹ, ಮಾರಮ್ಮ, ದುರ್ಗಮ್ಮ ಮತ್ತು ಆಂಜನೇಯ ಸ್ವಾಮಿ ಗುಡಿಗಳಿವೆ. ವಿಶೇಷವಾಗಿ ಪ್ರತಿ ವರ್ಷಕ್ಕೊಮ್ಮೆ ಶ್ರೀ ಕಲ್ಯಾಣ ಬಸವೇಶ್ವರ, ಬನ್ನಿ ಮಹಾಕಾಳಿ ಜಾತ್ರೆಯನ್ನು ಆಚರಿಸುತ್ತಾರೆ. ಹೆಚ್ಚಿನದಾಗಿ ಯಾದವ ಸಮುದಾಯ ಇದ್ದು, ಉಳಿದಂತೆ ಎಸ್.ಸಿ, ಎಸ್.ಟಿ ಹಾಗೂ ಇತರ ಜನಾಂಗದವರು ವಾಸವಾಗಿದ್ದಾರೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ವಾಯುವ್ಯ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು

ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ಚಿನ್ನಹಗರಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೫೧೪.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೫೧೫.೧೮ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೧೪.೬೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೦೬.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೧೧.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತಪ್ರದೇಶ ೫೫.೨೬ ಹೆಕ್ಟೇರ್ ಇದೆ. ಇದರ ನೀರು ಅರಿವಿನ ಪ್ರಮಾಣ ೧೨.೨೮ ಕ್ಯೂಸೆಕ್ಸ್ ಇದ್ದು, ಕೆರೆಯ ಹಾಲಿ ನೀರು ಶೇಖರಣಾ ಸಾಮರ್ಥ್ಯ ೦.೪೮೫ ಎಂ.ಸಿ.ಎಂ ಇದೆ. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೬೯.೪೫ ಹೆಕ್ಟೇರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೩೯೩.೭೪ ಮಿ.ಮೀ. ಮಳೆಯಾಗುತ್ತದೆ.

ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೮೧೦.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೫.೬೦ ಮೀಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿಗಳಿವೆ, ಎಡ ಕೋಡಿ ೧೭.೩೪ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೧೨.೦೦ ಇದೆ. ಅದು ಇರುವ ಸ್ಥಳ (ಚೈನೇಜ್) ೦ ಮೀ ಹಾಗೂ ೧೭.೩೪.೭೭ ಮೀ ಹಾಗೂ ೩೧೦ ಮಿ.ಮೀ ಇದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಎರಡು ತೂಬುಗಳಿವೆ. ಅವುಗಳಲ್ಲಿ ಬಲದಂಡೆಯ ತೂಬು ೫೧೯.೧೭ ಮೀ ಇದ್ದು, ಇರುವ ಸ್ಥಳ (ಚೈನೇಜ್) ೩೮೦.೦೦ ಮೀ ಎತ್ತರ ಇದೆ. ಅಲ್ಲದೇ ಇದರ ಎಡದಂಡೆ ತೂಬು ೫೧೯ ಮೀ, ಇದ್ದು, ಇರುವ ಸ್ಥಳ (ಚೈನೇಜ್) ೫೧೧.೩೬೭ ಮೀ. ಮಟ್ಟವನ್ನು ಹೊಂದಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ೩೧೮.೦೦ ಮೀ, ಮತ್ತು ಎಡದಂಡೆ ಕಾಲುವೆ ೩೧೭.೦೦ ಮೀ. ಉದ್ದ ಲೈನಿಂಗ್ ಅಳವಡಿಸಲಾಗಿದೆ. ಇವುಗಳಿಗೆ ಕ್ರಮವಾಗಿ ೨೬೦.೦೦ ಮೀ, ೩೯೫೦.೦೦ ಮೀಟರ್ ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ.

ಪೂರ್ವಕ್ಕೆ ಕೆರೆಯ ಏರಿಯನ್ನು ನಿರ್ಮಿಸಿದ್ದು, ಅದರ ಹಿಂದೆ ಕೆಲವು ರೈತರ ಜಮೀನುಗಳು ಮತ್ತು ಗೌರಸಮುದ್ರ ಗ್ರಾಮವು ಇದೆ. ಪಶ್ಚಿಮಕ್ಕೆ ಬಯಲು ಪ್ರದೇಶವಾಗಿದ್ದು, ರೈತರ ಸಾಗುವಳಿ ಭೂಮಿ, ಉತ್ತರಕ್ಕೆ ಸಹ ರೈತರ ಸಾಗುವಳಿ ಭೂಮಿಯನ್ನು ಹೊಂದಿದೆ. ದಕ್ಷಿಣಕ್ಕೆ ಬೆಟ್ಟ ಗುಡ್ಡಗಳಿಂದ ಆವೃತವಾಗಿದೆ. ಪಶ್ಚಿಮ ಉತ್ತರ ಮತ್ತು ದಕ್ಷಿಣ ಭಾಗದಿಂದ ಜಲಮಾರ್ಗ ಹೊಂದಿದೆ. ಇಲ್ಲಿನ ಬೆಟ್ಟಗಳು ಮತ್ತು ಬಯಲು ಪ್ರದೇಶದ ಮುಖಾಂತರ ಮಳೆಯ ನೀರು ಬಂದು ಇಲ್ಲಿ ಸಂಗ್ರಹಣೆಯಾಗುವುದು. ಇಲ್ಲಿ ನೀರಾವರಿ ವ್ಯವಸ್ಥೆ, ಪಶುಪಾಲನೆಗೆ ಅನುಕೂಲವಾಗಿದ್ದು, ಕೆಂಪು ಮಿಶ್ರಿತ ಭೂಮಿಯಾಗಿರುವುದರಿಂದ ಕೆರೆಯ ನೀರನ್ನು ಉಪಯೋಗಿಸಿಕೊಂಡು ಭತ್ತ, ರಾಗಿ, ಶೇಂಗಾ, ಮೆಕ್ಕೆಜೋಳ, ಜೋಳ ಮತ್ತು ತರಕಾರಿ ಬೆಳೆಯನ್ನು ಬೆಳೆಯುತ್ತಾರೆ. ಈ ಕೆರೆಯು ತುಂಬಿದ ನಂತರ ಚಿನ್ನಹಗರಿ ನದಿಗೆ ಬಂದು ಸೇರುತ್ತವೆ.

## ೫೪. ಚಿಕ್ಕನಹಳ್ಳಿಯ ಕೆರೆ

ಚಿಕ್ಕನಹಳ್ಳಿ (ರೇಖಾಂಶ. ೭೬°೪೪'೨೩" ಅಕ್ಷಾಂಶ ೧೪°೫೦'೧೨") ಗ್ರಾಮವು ಜಿಲ್ಲೆಯ ಮೊಳಕಾಲ್ಮುರು ತಾಲ್ಲೂಕಿನಲ್ಲಿದೆ. ಇದು ದೇವಸಮುದ್ರ ಹೋಬಳಿ ಮತ್ತು ಸಿದ್ದಾಪುರ ಗ್ರಾಮ ಪಂಚಾಯತಿಯ ವ್ಯಾಪ್ತಿಯಲ್ಲಿ ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೨೧ ಕಿ.ಮೀ. ದೂರದಲ್ಲಿದೆ (ನೋಂದಣಿ ಸಂಖ್ಯೆ. ಸಿ.ಡಿ.ಜಿ. ಎಸ್.ನಂ. ೧೮೫/೨೦೦೭-೦೮ ದಿ:೩೧.೧೦.೨೦೦೭ ಮತ್ತು ಟೋಪೋ ಶೀಟ್ ಸಂಖ್ಯೆ-೫೭-ಬಿ/೯). ಈ ಊರಿನಲ್ಲಿ ಆಧುನಿಕ ಕಾಲದಲ್ಲಿ ಅಂದರೆ ಬ್ರಿಟಿಷರ ಅಧಿಕಾರಾವಧಿಯಲ್ಲಿ, ೧೮೯೬ರಲ್ಲಿ ನಿರ್ಮಿತವಾದ (ಕ್ರಿ.ಶ.೧೯ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಚಿಕ್ಕನಹಳ್ಳಿ ಕೆರೆ ಎನ್ನಲಾಗುತ್ತದೆ. ರಾಮಾಯಣ ಕಾಲದಲ್ಲಿ ಶ್ರೀರಾಮನು ಸೀತಾನ್ವೇಷಣೆಯಲ್ಲಿದ್ದಾಗ ಕೆಲಕಾಲ ಈ ಪ್ರದೇಶದಲ್ಲಿ ಬೀಡು ಬಿಟ್ಟಿದ್ದನಂತೆ. ಆ ಸಮಯದಲ್ಲಿ ಅವನು ೭ ಮಂಡಲಗಳನ್ನು ಬರೆದಿದ್ದನಂತೆ. ಆದ್ದರಿಂದ ಮಂಡಲಗಳಿದ್ದ ಈ ಗ್ರಾಮವನ್ನು ೭ ಮಂಡಲ ಎಂದು ಹಿಂದೆ ಕರೆಯುತ್ತಿದ್ದರಂತೆ. ಕ್ರಮೇಣವಾಗಿ ಚಿಕ್ಕನಹಳ್ಳಿ ಎಂಬ ಹೆಸರಿನಿಂದ ಕರೆಯಲಾಗುತ್ತಿದೆ. ಈ ಗ್ರಾಮದಲ್ಲಿ ಅಕ್ಕ ಮಹಾದೇವಿ, ಮಾರಮ್ಮ, ದುರ್ಗಮ್ಮ, ಆಂಜನೇಯ ಸ್ವಾಮಿ ಮತ್ತು ಬಸವಣ್ಣನ ಗುಡಿಗಳಿವೆ. ಈ ದೈವಗಳ ಜಾತ್ರೆಯನ್ನು ವಿಶೇಷವಾಗಿ ವರ್ಷಕ್ಕೊಮ್ಮೆ ಆಚರಿಸುತ್ತಾರೆ. ಇಲ್ಲಿ ಯಾದವ, ಎಸ್.ಸಿ, ಎಸ್.ಟಿ ಹಾಗೂ ಇತರ ಜನಾಂಗದವರು ವಾಸವಾಗಿದ್ದಾರೆ. ಕೆರೆಗೆ ನೀರು ತುಂಬಿದಾಗ (ಗ್ರಾಮಸ್ಥರೆಲ್ಲರೂ ಸೇರಿ ಗಂಗಾ ಪೂಜೆಯನ್ನು ಮಾಡಿ ಅಚ್ಚುಕಟ್ಟು ಪ್ರದೇಶದ ರೈತರ ಜಮೀನುಗಳಿಗೆ ನೀರನ್ನು ಹಾಯಿಸಲಾಗುತ್ತದೆ).

ಇಲ್ಲಿನ ಕೆರೆಯು ಗ್ರಾಮದ ವಾಯುವ್ಯ ದಿಕ್ಕಿಗಿದ್ದು, ಇದು ಕೃಷ್ಣ ನದಿ ಪಾತ್ರದಲ್ಲಿದೆ. ಕೆ-೯ ಸರಣಿಯನ್ನು ಹೊಂದಿರುವ ಇದು ಚಿನ್ನಹಗರಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೫೩೩.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೫೩೪.೦೮ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೩೩.೬೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೫.೬೧ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೨೫.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೩೯.೫೮ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೨೪.೭೨ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ ೦.೪೮೪ ಎಂ.ಸಿ.ಎಂ. ಇದ್ದು, ಕೆರೆಯ ಹಾಲಿ ಇರುವ ಸಾಮರ್ಥ್ಯ (ಎಂ.ಸಿ.ಎಂ). ೦.೪೧೩ ಇದೆ. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೫೧.೦೦ ಹೇಕ್ಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೩೪೩.೮೪ ಮಿ.ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೭೯೫.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೬.೦೦ ಮೀಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಓಗ್ರಿ ಮಾದರಿಯ ಎರಡು ಕೋಡಿ ಇದ್ದು, ಅದು ೨೨.೯೦ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೩೩.೦೦ ಇದ್ದು, ಅದು ಇರುವ ಸ್ಥಳ (ಚೈನೇಜ್) ೨೨೫.೬ ಹಾಗೂ ೨೪೮.೫೦

ಮಿ.ಮೀ ಇದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಎರಡು ತೂಬುಗಳಿವೆ. ಅವುಗಳಲ್ಲಿ ಬಲದಂಡೆಯ ತೂಬು ೩೮೦.೫೦ ಮೀ ಇದ್ದು, ಇರುವ ಸ್ಥಳ (ಚೈನೇಜ್) ೫೨೮.೦೦ ಮೀ ಎತ್ತರ ಇದೆ. ಅಲ್ಲದೇ ಇದರ ಎಡದಂಡೆ ತೂಬು ೧೫೨ ಮೀ, ಇದ್ದು, ಇರುವ ಸ್ಥಳ (ಚೈನೇಜ್) ೫೩೦.೩೧ ಮಿ.ಮೀ. ಮಟ್ಟವನ್ನು ಹೊಂದಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಮೂರು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ೫೫೭.೦೦ ಮೀ, ಎಡದಂಡೆ ಕಾಲುವೆ ೪೦.೦೦ ಮೀ. ಉದ್ದವನ್ನು ಹೊಂದಿವೆ. ಇವುಗಳಿಗೆ ಕ್ರಮವಾಗಿ ೫೯೦ ಮೀ. ೩೪೯೦.೦೦ ಮೀಟರ್ ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ.

ಪೂರ್ವಕ್ಕೆ ಚಿಕ್ಕನಹಳ್ಳಿ ಗ್ರಾಮ, ಪಶ್ಚಿಮಕ್ಕೆ ಬೆಟ್ಟ ಗುಡ್ಡಗಳು, ಉತ್ತರಕ್ಕೆ ರೈತರ ಜಮೀನುಗಳು ಮತ್ತು ಬಯಲು ಪ್ರದೇಶ, ದಕ್ಷಿಣಕ್ಕೆ ಕೆರೆಯ ಏರಿಯನ್ನು ನಿರ್ಮಿಸಿದ್ದು, ಇದರ ಹಿಂದೆ ಬೆಟ್ಟಗಳನ್ನು ಹೊಂದಿದೆ. ಮೂರು ದಿಕ್ಕುಗಳಿಂದ ಜಲ ಮಾರ್ಗವಿದ್ದು, ಆ ಮೂಲಕ ಇಲ್ಲಿ ನೀರು ಸಂಗ್ರಹಣೆಯಾಗುತ್ತದೆ. ಈ ಕೆರೆಯಲ್ಲಿ ಮೀನು ಸಾಕಾಣಿಕೆ, ನೀರಾವರಿ ವ್ಯವಸ್ಥೆ ಹಾಗೂ ಪಶುಪಾಲನೆಗೆ ಅನುಕೂಲವಾಗಿದೆ. ಇಲ್ಲಿ ಪ್ರಮುಖವಾಗಿ ಭತ್ತ, ರಾಗಿ, ಶೇಂಗಾ, ಮೆಕ್ಕೆಜೋಳ, ತರಕಾರಿ ಬೆಳೆಯನ್ನು ಬೆಳೆಯುತ್ತಾರೆ. ಈ ಕೆರೆಯು ತುಂಬಿದ ನಂತರ ಹೆಚ್ಚಾದ ನೀರು ಚಿನ್ನಹಗರಿ ನದಿಗೆ ಬಂದು ಸೇರುತ್ತದೆ.

**೫೫. ಬಿ.ದುರ್ಗ(ಭರಮಣ್ಣ ನಾಯಕನ ದುರ್ಗ) ಕೆರೆ**

ಬಿ.ದುರ್ಗ(ಭರಮಣ್ಣ ನಾಯಕನ ದುರ್ಗ) ಗ್ರಾಮವು ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನಲ್ಲಿದ್ದು, ಇದು ಹೋಬಳಿ ಕೇಂದ್ರವೂ ಆಗಿದ್ದು, ಸಾಸಲು-ರಂಗವ್ವನಹಳ್ಳಿಗಳ ಮಧ್ಯೆ ಇದೆ. ಈ ಊರಿನಲ್ಲಿ ಬ್ರಿಟಿಷರ ಕಾಲದಲ್ಲಿ ಅಂದರೆ ೧೮೯೮ರಲ್ಲಿ ನಿರ್ಮಿತವಾದ(ಕ್ರಿ.ಶ.೧೯ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಬಿ.ದುರ್ಗ(ಭರಮಣ್ಣ ನಾಯಕನ ದುರ್ಗ) ಕೆರೆ ಎನ್ನಲಾಗುತ್ತದೆ. ಭಿಚ್ಚುಗತ್ತಿ ಭರಮಣ್ಣ ನಾಯಕನ ನೆನಪಿನಲ್ಲಿ ಈ ಊರನ್ನು ಭರಮಣ್ಣ ನಾಯಕನ ದುರ್ಗ ಎಂದು ಕರೆಯಲಾಗುತ್ತಿದೆ. ಇಲ್ಲಿ ಅನೇಕ ಶಾಸನಗಳು, ವೀರಗಲ್ಲುಗಳು ಇವೆ. ಈ ಗ್ರಾಮದಲ್ಲಿ ಆಂಜನೇಯ, ವೀರಭದ್ರಸ್ವಾಮಿ ಮತ್ತು ಬಸವೇಶ್ವರ ದೇವಾಲಯಗಳಿವೆ. ವರ್ಷಕ್ಕೊಮ್ಮೆ ಗ್ರಾಮದೇವತೆಯ ಜಾತ್ರೆ ಅದ್ದೂರಿಯಾಗಿ ನಡೆಯುತ್ತದೆ.

ಕರ್ನಾಟಕ ಸರ್ಕಾರದ ಜಲಸಂಪನ್ಮೂಲ ಹಾಗೂ ಸಣ್ಣ ನೀರಾವರಿ ಇಲಾಖೆಯ ಅಧೀನಕ್ಕೊಳಪಟ್ಟ ಈ ಕೆರೆಯನ್ನು ೨೦೧೦-೧೧ರಲ್ಲಿ ರೂ. ೧೮.೪೮೩ ಲಕ್ಷಗಳ ವೆಚ್ಚದಲ್ಲಿ ದುರಸ್ತಿ ಮಾಡಿಸಿದ್ದಾರೆ. ಪ್ರಸಕ್ತ ಕೆರೆಯಲ್ಲಿ ಹೂಳು ತುಂಬಿದ್ದು, ಸಂಪೂರ್ಣ ಬರಿದಾಗಿದೆ. ಇಲ್ಲಿ ಸರಿಯಾದ ನಿರ್ವಹಣೆ ಇಲ್ಲದ ಕಾರಣ ಸಾಕಷ್ಟು ಗಿಡಮರಗಳು ಬೆಳದು ಅದು ಅಲ್ಲಲ್ಲಿ ಶಿಥಿಲವಾಗಿದೆ. ಕೆರೆ ಸುತ್ತಲಿನ ಬೆಟ್ಟ ಗುಡ್ಡಗಳಿಂದ ಬಿದ್ದ ಮಳೆ ನೀರು ಇಲ್ಲಿನ ತಗ್ಗು ಪ್ರದೇಶಗಳಲ್ಲಿರುವ ಹಳ್ಳಗಳ ಮೂಲಕ ಹರಿದು ಬಂದು ಇಲ್ಲಿನ ಕೆರೆಗೆ ಸೇರ್ಪಡೆಯಾಗುತ್ತದೆ. ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮಹತ್ವವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ.

ಇಲ್ಲಿನ ಕೆರೆಯು ಗ್ರಾಮದ ಪೂರ್ವ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೧೭.೬೭ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೦.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೧೬.೦೨ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೧೩೧.೪೦ ಹೇಕ್ಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಡೋಲರೈಟ್(ಕಪ್ಪು) ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೪೫೫.೬೩ ಮಿ. ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ಕಾಲುವೆ ಮತ್ತು ತೂಬುಗಳಿವೆ. ಎಡದಂಡೆ ಕಾಲುವೆ ಉದ್ದ ೨.೦೦ ಕಿ.ಮೀ. ಇದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಹಿಂದೆ ಬೆಳೆಯುತ್ತಿದ್ದರು. ಉತ್ತಮ ಮಳೆ ಬಂದು ಕೆರೆ ಭರ್ತಿಯಾದಲ್ಲಿ ಇಂದು ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೫೬. ಬೋಕಿಕೆರೆ**

ಬೋಕಿಕೆರೆ ಗ್ರಾಮವು ಹೊಸದುರ್ಗ ತಾಲ್ಲೂಕಿನಲ್ಲಿದೆ. ಇದು ತಾಲೂಕು ಕೇಂದ್ರದಿಂದ ೪ ಕಿ.ಮೀ. ದೂರದಲ್ಲಿದ್ದು, ಹೊಸದುರ್ಗ-ತರೀಕೆರೆ ಮಾರ್ಗದ ಅರಳಿಹಳ್ಳಿಗೆ ಹತ್ತಿರದಲ್ಲಿದೆ. ಚಾರಿತ್ರಿಕ ನೆಲೆಯಾದ ಇಲ್ಲಿ ಮಧ್ಯಯುಗೀನ ಕಾಲದಲ್ಲಿ ನಿರ್ಮಿಸಿದ (ಕ್ರಿ.ಶ.೧೬ನೇ ಶತಮಾನ) ಕೆರೆ ಇದೆ. ಹಿಂದೆ ನೀರ್ಗುಂದ ನಾಡು ಪ್ರಾಬಲ್ಯ ಪಡೆದಾಗ ಬೋಕಿ ಕೆರೆಯು ಅದರ ಅಧೀನವಾಗಿತ್ತು. ಅಲ್ಲದೇ ಅಂದು ಇಲ್ಲಿ ವಿಶೇಷವಾಗಿ ಬೇಗಾರ(ಹೊಲೆಯ) ಸಮುದಾಯದವರು ಮಾತ್ರ ವಾಸವಾಗಿದ್ದರು. ಈಗ ಇಲ್ಲಿ ಬೇರೆ ಸಮುದಾಯವರು ವಾಸವಾಗಿದ್ದಾರೆ. ಈ ಗ್ರಾಮದಲ್ಲಿ ಕರಿಯಮ್ಮ, ಗೋಪಾಲಸ್ವಾಮಿ, ಬೀರೇಶ್ವರ, ಮಾತಂಗಿ, ಬೀರಪ್ಪ, ಆಂಜನೇಯ, ಮೊದಲಾದ ದೇವಾಲಯಗಳಿವೆ. ಅಲ್ಲದೇ ಇಲ್ಲಿ ಕೆಲ ಶಾಸನಗಳು ಹಾಗೂ ಇತರೆ ಪ್ರಾಚ್ಯಾವಶೇಷಗಳು ದೊರೆತಿವೆ.

ಕ್ರಿ.ಶ.೧೭೮೪ರಲ್ಲಿ ಇಲ್ಲಿನ ಕೆರೆ ಒಡೆದಾಗ ಅದನ್ನು ಊರಿನ ಗೌಡರು ದುರಸ್ತಿ ಮಾಡಿಸಿದರೆಂದು ಇಲ್ಲಿನ ಶಾಸನ ದಾಖಲಿಸಿದೆ. ಊರಿನ ಪಶ್ಚಿಮಕ್ಕೆ ಹೊರ ಭಾಗದಲ್ಲಿರುವ ಇಲ್ಲಿನ ಕೆರೆಯನ್ನು ಕರ್ನಾಟಕ ಸರ್ಕಾರದ ಜಲಸಂಪನ್ಮೂಲ/ಸಣ್ಣ ನೀರಾವರಿ ಇಲಾಖೆಯವರು ಜಿಲ್ಲಾ ಪಂಚಾಯತಿಯ ಅನುದಾನದಲ್ಲಿ ಈ ಕೆರೆಯನ್ನು ೨೦೧೨-೧೩ರಲ್ಲಿ ದುರಸ್ತಿ ಮಾಡಿದ್ದಾರೆ. ಪ್ರಸಕ್ತ ಕೆರೆಯಲ್ಲಿ ಹೂಳು ತುಂಬಿದೆ. ಇಲ್ಲಿ ಸರಿಯಾದ ನಿರ್ವಹಣೆ ಇಲ್ಲದ ಕಾರಣ ಸಾಕಷ್ಟು ಗಿಡಮರಗಳು ಬೆಳದಿವೆ. ಅಲ್ಲದೇ ಕೆರೆಯ ಏರಿಯಲ್ಲಿಯೂ ಗಿಡಮರ ಬೆಳದು ಅದು ಅಲ್ಲಲ್ಲಿ ಶಿಥಿಲವಾಗಿದೆ. ಕೆರೆ ಸುತ್ತಲಿನ ಬೆಟ್ಟಗುಡ್ಡಗಳಿಂದ ಬಿದ್ದ ಮಳೆ ನೀರು ಇಲ್ಲಿನ ತಗ್ಗು ಪ್ರದೇಶಗಳಲ್ಲಿರುವ ಹಳ್ಳಗಳ ಮೂಲಕ ಹರಿದು ಇಲ್ಲಿನ ಕೆರೆಗೆ ಬಂದು ಸೇರ್ಪಡೆಯಾಗುತ್ತದೆ.

ಇಲ್ಲಿನ ಕೆರೆಯನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೆರೆಯ ಒಳಭಾಗಕ್ಕೆ ಕಗ್ಗಲ್ಲು ಮತ್ತು ಡೊಲರೈಟ್(ಕಪ್ಪು) ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಏರಿಯನ್ನು ನಿರ್ಮಿಸಲಾಗಿದೆ. ಕೆರೆ ಕೋಡಿಯು ಇಂಗ್ಲೀಷ್ ವರ್ಣಮಾಲೆಯ "ಯು"(ಕಪ್)ಆಕಾರದಲ್ಲಿದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಪ್ರತಿ ವರ್ಷ ೪೫೫.೬೩ಕಿ.ಮೀ. ಮಳೆಯಾಗುತ್ತದೆ. ಚೌಕಾಕಾರದ ತೂಬನ್ನು ಇಲ್ಲಿ ಮಾಡಲಾಗಿದ್ದು, ಅದರ ಮೇಲ್ಗಡೆ ಕೆಲ ದೇವತಾ ಶಿಲ್ಪಗಳಿವೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ಕಾಲುವೆ ಮತ್ತು ತೂಬುಗಳಿವೆ. ಎಡದಂಡೆ ಕಾಲುವೆ ಉದ್ದ ೩.೦೦ ಕೀ.ಮೀ. ಇದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ತೆಂಗು, ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಉತ್ತಮ ಮಳೆ ಬಂದು ಕೆರೆ ಭರ್ತಿಯಾದಲ್ಲಿ ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ಕೆರೆಯ ಏರಿಯ ಮೇಲೆ ಗಂಗಮ್ಮನ ಗುಡಿ, ನಾಗರಕಲ್ಲು ಮತ್ತು ತ್ರುಟಿತವಾಗಿರುವ ಲಿಂಗ ಮತ್ತು ಶಿಲ್ಪಗಳಿವೆ.

**೫೭. ರಾಣಿಕೆರೆ(ಮೀರಾಸಾಬಿಹಳ್ಳಿ)**

ರಾಣಿಕೆರೆ ಎಂದು ಸ್ಥಳೀಯರಿಂದ ಕರೆಯಲ್ಪಡುವ ಈ ಕೆರೆಯು ಚಳ್ಳಕೆರೆ ತಾಲೂಕಿನ ಪರಶುರಾಂಪುರ ಹೋಬಳಿಯ ಮೀರಾಸಾಬಿಹಳ್ಳಿ ಗ್ರಾಮಪಂಚಾಯತಿ ಮತ್ತು ಅದೇ ಗ್ರಾಮದ ವ್ಯಾಪ್ತಿಯಲ್ಲಿ ಬರುತ್ತದೆ. ಇದು ಮೀರಾಸಾಬಿಹಳ್ಳಿಯಿಂದ ೧ ಕಿ.ಮೀ. ದೂರದಲ್ಲಿರುವ ದೊಡ್ಡೇರಿಗೆ ಪೂರ್ವ ಭಾಗಕ್ಕಿರುವ ತಿರುಗು ರಸ್ತೆಯ ಬಳಿ ಇದೆ. ಈ ಗ್ರಾಮವನ್ನು ಮೀರಾಕ್ ಸಾದಿಕ್ ಎನ್ನುವ ಮುಸಲ್ಮಾನನ ಹೆಸರಿನಲ್ಲಿ ಕರೆಯಲಾಗಿದೆ. ಅಲ್ಲದೇ ರಾಣಿ ಇಲ್ಲಿ ಕೆರೆಯನ್ನು ಕಟ್ಟಿಸಿದ್ದರಿಂದ ಇದಕ್ಕೆ ರಾಣಿಕೆರೆ ಎಂದು ಹೆಸರಾಯಿತು ಎಂದು ಸ್ಥಳೀಯರು ಹೇಳುತ್ತಾರೆ.

ಈ ಕೆರೆಗೆ ಸಂಬಂಧಿಸಿದ ತಾಂತ್ರಿಕ ಮಾಹಿತಿ ಈ ಮುಂದಿನಂತಿದೆ. ಇದನ್ನು ಮೈಸೂರಿನ ಮಹಾರಾಜರಾಗಿದ್ದ ಶ್ರೀಮಾನ್ ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್‌ರವರು ತಮ್ಮ ಪತ್ನಿಯ ಸ್ಮರಣಾರ್ಥವಾಗಿ ಈ ಕೆರೆಯನ್ನು ೧೯೦೭ರಲ್ಲಿ ನಿರ್ಮಿಸಿದರಂತೆ. ಅಗ ತಗುಲಿದ ವೆಚ್ಚ ೨.೬೯ ಲಕ್ಷ ರೂಪಾಯಿಗಳು. ಈ ಕೆರೆಗೆ ೧೯೦೮ರಲ್ಲಿ ಮೇಲುಸೇತುವೆ ನಿರ್ಮಾಣವಾಯಿತೆಂದು ಗ್ರಾಮಸ್ಥರು ತಿಳಿಸುತ್ತಾರೆ. ಈ ಕೆರೆಗೆ ಗರಣಿಹಳ್ಳ, ದುರ್ಗಾವರದಹಳ್ಳ, ಬೊಮ್ಮಸಮುದ್ರ, ಭರಮಸಾಗರದ ಹಳ್ಳಗಳಿಂದ ಹೆಚ್ಚು ನೀರು ಬರುತ್ತದೆ. ಇದು ಕೃಷ್ಣ ನದಿ ಪಾತ್ರದಲ್ಲಿದ್ದು. ಇದರ ಉಪ ಸರಣಿ ವೇದಾವತಿಯಾಗಿದೆ. ಈ ಕೆರೆಯ ಏರಿಯ ಮಟ್ಟ ೧೨.೦೦ ಅಡಿ ಇದೆ. ಇದರ ಜಲಾಯನ ಪ್ರದೇಶ ಸ್ವತಂತ್ರವಾಗಿ ೧೫೭.೩೮ ಚ.ಕಿ.ಮೀ. ಇದೆ. ಹಾಗೂ ಸಂಯುಕ್ತವಾಗಿ ೭೦೨.೮ ಚ.ಕಿ.ಮೀ. ಇದೆ. ಇದರ ಜಲಾವೃತ ಪ್ರದೇಶ ೫೮೨.೭೬ ಚ.ಕಿ.ಮೀ. ಇದೆ. ಈ ಕೆರೆಯಲ್ಲಿ ಸ್ಲೋಪಿಂಗ್ ಮಾದರಿಯ ಕೋಡಿಯಿದ್ದು ನೋಡಲು ಆಕರ್ಷಣೀಯವಾಗಿದ್ದು, ಅದರ ಕಂಬಗಳ ಮೇಲ್ಗಡೆ ಮೀನು ಮತ್ತು ಆಮೆಗಳನ್ನು ಬಿಡಿಸಲಾಗಿದೆ. ಈ ಕೆರೆಯ ನೀರನ್ನು ಬಳಸಿಕೊಂಡು ಭತ್ತ, ರಾಗಿ, ಹತ್ತಿಯನ್ನು

ಹಾಗೂ ಪ್ರಸ್ತುತ ಭತ್ತ, ರಾಗಿ, ಮೆಕ್ಕೆಜೋಳ, ಹತ್ತಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ಕೆರೆಯ ಎಡದಂಡೆ ಕಾಲುವೆ ೭.೪೦ ಕಿ.ಮೀ. ಹಾಗೂ ಬಲದಂಡೆ ಕಾಲುವೆ ೮.೮೦ ಕಿ.ಮೀ. ಉದ್ದವಿದೆ. ಈ ಕೆರೆಯ ಅಂಗಳ ಅತ್ಯಂತ ವಿಶಾಲವಾಗಿದ್ದು, ಬಹಳಷ್ಟು ಜಲ ಸಂಗ್ರಹವಾಗುತ್ತದೆ. ಈ ಕೆರೆಯು ೨೦೦೨ ಎಕರೆ ಪ್ರದೇಶಕ್ಕೆ ನೀರನ್ನು ಒದಗಿಸುತ್ತದೆ. ಇದು ಅತ್ಯಂತ ದೊಡ್ಡದಾದ ಕೆರೆ ಎಂಬ ಹೆಸರಿಗೆ ಪಾತ್ರವಾಗಿದೆ. ಈ ಕೆರೆಯ ಬಳಿ ಆಂಜನೇಯ, ಗಂಗಮ್ಮ ಗುಡಿಗಳಿದ್ದು, ಈ ಕೆರೆಯ ತೂಬಿನ ಹತ್ತಿರ ಎರಡು ವೀರಗಲ್ಲುಗಳಿವೆ. ಈ ಕೆರೆಯ ಸ್ವಲ್ಪ ದೂರದಲ್ಲಿರುವ ಆನೆ ಕಟ್ಟಿ ಸರ ಎಂಬ ಸ್ಥಳವಿದೆ. ಆನೆಗಳನ್ನು ಕಟ್ಟಿ ಮೇಯಿಸುತ್ತಿದ್ದರಿಂದ ಇದಕ್ಕೆ ಆನೆಕಟ್ಟೆ ಸರ ಎಂಬ ಹೆಸರು ಬಂದಿದೆ. ಇದಕ್ಕೆ ತಾಂತ್ರಿಕತೆಯನ್ನು ಅಳವಡಿಸಿಕೊಂಡು ತಂತ್ರಜ್ಞಾನದ ಮೂಲಕ ತೂಬಿನ ವ್ಯವಸ್ಥೆ ಮಾಡಲಾಗಿದೆ. ಈ ಕೆರೆ ಕೋಡಿ ಬಿದ್ದ ನಂತರ ಇದರ ನೀರು ಆಂಧ್ರದ ಬೋರನ ತಿಪ್ಪ ಡ್ಯಾಂಗೆ ಸೇರುತ್ತದೆ. ಮಳೆಗಾಲದಲ್ಲಿ ರಾಣಿಕೆರೆಯು ಮೈದುಂಬಿ ಹರಿಯುತ್ತದೆ.

"ಊರ ಮುಂದೆ
ಹಸನಾದ ಶಿವಗಂಗೆ
ಹರಿದಾಳೇ! ನೋಡ ಬನ್ನಿ
ನೋಡಬನ್ನಿ"

ಎಂದು ಜನಪದೀಯರು ಈ ಕೆರೆಯನ್ನು ಕುರಿತು ಹಾಡಿ ಹೊಗಳಿದಿದ್ದಾರೆ.

**೫೮. ವಾಣಿವಿಲಾಸ ಜಲಾಶಯ**

ಹಿರಿಯೂರು ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ವಾಣಿ ವಿಲಾಸಪುರ ಗ್ರಾಮವು ಚಿತ್ರದುರ್ಗದಿಂದ ಸು.೫೬,ಕೀ.ಮೀ. ದೂರದಲ್ಲಿದೆ. ಇಲ್ಲಿ ಏಷ್ಯದಲ್ಲೇ ದೊಡ್ಡದಾದ ಜಲಾಶಯವನ್ನು ವೇದಾವತಿ ನದಿಗೆ ಕಟ್ಟಲಾಗಿದೆ. ಇಲ್ಲಿ ಪ್ರಾಚೀನ ಕಾಲದ ಮಾರಿ ಗುಡಿ ಮತ್ತು ಇತರೆ ಪ್ರಾಚ್ಯಾವಶೇಷಗಳಿವೆ. ಮಾರಿ ಇಲ್ಲಿ ನೆಲೆಸಿರುವುದರಿಂದ ಇಲ್ಲಿನ ಕಣಿವೆಯನ್ನು 'ಮಾರಿ ಕಣಿವೆ'ಯೆಂದು ಕರೆಯಲಾಗುತ್ತದೆ. ಇಲ್ಲಿನ ಮಾರಿ ತನ್ನೆರಡು ಕಾಲುಗಳನ್ನು ಚಾಚಿ ಆಣೆಕಟ್ಟೆ ಒಡೆಯದಂತೆ ತಡೆ ಹಿಡಿದಿರುವಳೆಂದು, ಆದ್ದರಿಂದ ಆಕೆಯ ಬೆನ್ನಿಗೆ ಪೂಜೆ ಮಾಡಲಾಗುತ್ತಿದೆ ಎಂದು ಜನ ನಂಬಿದ್ದಾರೆ. ಮೈಸೂರು ಒಡೆಯರಾದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರವರ ತಾಯಿ ಶ್ರೀಮತಿ ಕೆಂಪನಂಜಮ್ಮಣ್ಣಿ ವಾಣಿವಿಲಾಸದವರು ಇಲ್ಲಿನ ಮಾರಿಕಣಿವೆಯ ಎರಡು ಗುಡ್ಡಗಳ ನಡುವಿನ ವೇದಾವತಿ ನದಿಗೆ ಆಣೆಕಟ್ಟೆ ಕಟ್ಟಿಸಿದ್ದರಿಂದ ಇದನ್ನು ಮೊದಲು ಶ್ರೀ ಕೃಷ್ಣರಾಜ ಸಮುದ್ರವೆಂದು ಕರೆದರು. ಆದರೆ ಅದು ಹೆಚ್ಚು ಜನರಲ್ಲಿ ಬಳಕೆಯಾಗದೇ ಇದ್ದುದರಿಂದ ಅದನ್ನು ಕ್ರಮೇಣಾ ವಾಣಿವಿಲಾಸಸಾಗರ ಎಂದು ಕರೆಯಲ್ಪಟ್ಟಿತು. ೧೮೯೮-೧೯೦೭ರರೆಗೆ ಅಂದರೆ ಸತತವಾಗಿ ೯ ವರ್ಷಗಳ ಕಾಲ ಇದರ ಕಾಮಗಾರಿ ನಡೆಯಿತು. ಶ್ರೀ ಚೆನ್ನಲಾಲ್ ತಾರಾಚಂದ್ ದಲಾಲ್ ಎನ್ನುವವರು ಈ ಕೆರೆಯ ಕಟ್ಟಡ ಕಾಮಗಾರಿಯನ್ನು ಪೂರ್ಣಗೊಳಿಸಿದರು. ಇದರ ಕೆಲಸ ಮುಗಿದಾಗ ಮೈಸೂರಿನ ರಾಜರಾದ ಶ್ರೀ ಚಾಮರಾಜ ಒಡೆಯರ್ ಮತ್ತು ದಿವಾನರಾದ ಶ್ರೀ ಶೇಷಾದ್ರಿ ಅಯ್ಯರ್ ಅವರು ಬಹು ಕಷ್ಟಪಟ್ಟು ಇದರ ಲೋಕರ್ಪಣೆ ಮಾಡಿದರು.[೫೦]

ಮೈಸೂರು ಒಡೆಯರು ಮತ್ತು ಬ್ರಿಟಿಷರು ಹಾಗೂ ಕರ್ನಾಟಕ ಸರ್ಕಾರದ ಸಣ್ಣ ನೀರಾವರಿ ಇಲಾಖೆಯವರು ಇದರ ಸಣ್ಣಪುಟ್ಟ ದುರಸ್ತಿ ಮಾಡಿಸಿದ್ದಾರೆ. ಅಲ್ಲದೇ ಈಗಲೂ ಇದರ ನಿರ್ವಹಣೆಯನ್ನು ರಾಜ್ಯ ಸರ್ಕಾರದ ನೀರಾವರಿ ಇಲಾಖೆಯವರೆ ನೋಡಿಕೊಳ್ಳುತ್ತಿದ್ದಾರೆ.

ಸುತ್ತಲಿನ ಬೆಟ್ಟ ಗುಡ್ಡಗಳಿಂದ ಬಿದ್ದ ಮಳೆ ನೀರು ಇಲ್ಲಿನ ತಗ್ಗು ಪ್ರದೇಶಗಳಲ್ಲಿರುವ ಹಳ್ಳಗಳ ಮೂಲಕ ಹರಿದು ಇಲ್ಲಿನ ವೇದಾವತಿ ನದಿಯೊಂದಿಗೆ ಸೇರಿಕೊಂಡು ಇಲ್ಲಿನ ಜಲಾಶಯ(ಕೆರೆಗೆ)ಕ್ಕೆ ಬಂದು ಸೇರ್ಪಡೆಯಾಗುತ್ತದೆ. ಇದರ ಉದ್ದ ೧೩೩೦ ಅಡಿ, ತಳಪಾಯದ ಅಗಲ ೧೫೦ ಅಡಿ. ಎತ್ತರ ೧೪೨ ಅಡಿ ಇದೆ. ಈ ಕೆರೆಯ ಗರಿಷ್ಠ ನೀರಿನ ಮಟ್ಟ ೧೩೫.೦೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ೧೨೬೫.೧೨ ಚ.ಕಿ.ಮೀ. ಇದ್ದು, ಇದರ ಒಟ್ಟು ಜಲಾವೃತ ಪ್ರದೇಶ ೨೧೬೫ ಎಕರೆ ಇದೆ. ಇಲ್ಲಿ ಪ್ರತಿ ವರ್ಷ ೨೪ ಇಂಚು ಮಾತ್ರ ಮಳೆಯಾಗುತ್ತದೆ. ಇದರ ತಳಪಾಯದ ಒಳ ಭಾಗಕ್ಕೆ ಸಮಗಾತ್ರದ ಬೆಣೆಯಾಕಾರದ (WEDGE SHAFE) ಗ್ರಾನೈಟ್ ಶಿಲೆ, ಸಿಮೆಂಟ್, ಕಬ್ಬಿಣ ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ.

ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಏರಿಯ ಮಧ್ಯ ಭಾಗದಲ್ಲಿ ನಿರ್ಮಿಸಲಾಗಿದ್ದು, ಹೆಚ್ಚಾದ ನೀರನ್ನು ಅದರ ಮೂಲಕ ಹೊರ ಬಿಡಲಾಗುತ್ತದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಚೌಕಕಾರದ ಎರಡು ತೂಬು ಮತ್ತು ಎರಡು ಕಾಲುವೆಗಳಿವೆ. ಈ ಜಲಾಶಯದಿಂದ ಹೊಸದುರ್ಗ, ಹಿರಿಯೂರು, ಚಿತ್ರದುರ್ಗದ ೩೦.೦೦೦ ಎಕರೆಗೆ ನೀರಾವರಿ ಅನುಕೂಲವಿದೆ. ಇಲ್ಲಿ ಜಲವಿದ್ಯುತ್ ಸ್ಥಾಪಿಸುವ ಮತ್ತು ೧೫೭ ಹಳ್ಳಿಗಳಿಗೆ ನೀರು ವಿತರಿಸುವ ಅಂದಾಜು ಇತ್ತು. ಆದರೆ ಕಡಿಮೆ ಮಳೆಯಿಂದಾಗಿ ಅದು ಇನ್ನು ಸಕಾರಗೊಂಡಿಲ್ಲ. ಆದರೆ ಇಂದು ಕೇವಲ ೫೦-೬೦ ಹಳ್ಳಿಗಳಿಗೆ ಮಾತ್ರ ನೀರು ಪೂರೈಕೆಯಾಗುತ್ತಿದೆ. ಅಲ್ಲದೇ ಮೊದಲು ಚಿತ್ರದುರ್ಗ ನಗರಕ್ಕೆ ಇಲ್ಲಿಂದಲೇ ಕುಡಿಯುವ ನೀರಿನ ಪೂರೈಕೆಯಾಗುತ್ತಿತ್ತು.

ಮೀನು ಸಾಕಾಣಿಕೆಗೆ, ನೀರಾವರಿ ವ್ಯವಸ್ಥೆಗೆ ಹಾಗೂ ಪಶು ಪಾಲನೆಗೆ ಇದು ಅನುಕೂಲಕರ ವಾಗಿದೆ. ಈ ಕೆರೆ ತುಂಬಿದರೆ ರೈತರು ಪ್ರಸಕ್ತ ವಿಶೇಷವಾಗಿ ತೆಂಗು, ಭತ್ತ, ರಾಗಿ, ಹತ್ತಿ, ರೇಷ್ಮೆ, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ.

**೫೯. ರಂಗೇನಹಳ್ಳಿಕೆರೆ(ಭಗವತಿ ಕೆರೆ)**

ರಂಗೇನಹಳ್ಳಿ ಗ್ರಾಮವು ಹಿರಿಯೂರು ತಾಲ್ಲೂಕಿನಲ್ಲಿದೆ. ಇದು ತಾಲೂಕು ಕೇಂದ್ರದಿಂದ ೨೦ ಕಿ.ಮೀ ದೂರದಲ್ಲಿದೆ. ಇದನ್ನು ಶಿರಾದ ರಂಗನಾಯ್ಕನು ಆಳ್ವಿಕೆ ಮಾಡಿದ್ದರಿಂದ ಅವನ ನೆನಪಿನಲ್ಲಿ ರಂಗೇನಹಳ್ಳಿಯೆಂದು ಕರೆಯುತ್ತಾರೆ. ಇಲ್ಲಿ ಅನೇಕ ಪ್ರಾಚೀನ ದೇವಾಲಯ, ಶಾಸನಗಳು, ಕೋಟೆ-ಕೊತ್ತಲದ ಅವಶೇಷಗಳು, ವೀರಗಲ್ಲುಗಳು ಇವೆ. ಈ ಊರಿನಲ್ಲಿ ಆಧುನಿಕ ಕಾಲದಲ್ಲಿ ಅಂದರೆ ೧೯೫೬ರಲ್ಲಿ ನಿರ್ಮಿತವಾದ (ಕ್ರಿ.ಶ.೨೦ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಭಗವತಿಕೆರೆ ಇಲ್ಲವೇ ಭಗವತಿ ಅಚ್ಚುಕಟ್ಟು ಪ್ರದೇಶ ಎನ್ನಲಾಗುತ್ತದೆ. ಪ್ರಾಯಶಃ ಈ ಹೆಸರಿನ ಊರು ಹಿಂದೆ ಇದ್ದರಿಬೇಕು, ಆದರೆ ಆ ಊರು ಈಗ ಉಳಿದಿಲ್ಲ. ಆದರೆ ಆ ಊರಿನ ಪ್ರತೀಕವಾಗಿರುವ

ಕೆರೆ ಇಂದು ಉಳಿದಿದೆ. ಇದನ್ನು ೨೦೧೫-೧೬ರಲ್ಲಿ ಸರ್ಕಾರ ಜೀರ್ಣೋದ್ಧಾರ ಮಾಡಿಸಿದ್ದಾರೆ. ಅಲ್ಲದೇ ಇತ್ತೀಚಿಗೆ "ಕೆರೆ ಸಂಜೀವಿನಿ" ಯೋಜನೆಯ ಭಾಗವಾಗಿ ಪುನಃ ಕೆಲ ದುರಸ್ತಿಕಾರ್ಯಗಳನ್ನು ಮಾಡಿದ್ದಾರೆ. ಲಕ್ಷ್ಮಿದೇವಿ ಈ ಊರಿನ ಗ್ರಾಮ ದೇವತೆಯಾಗಿದ್ದು, ಆಕೆಯನ್ನು ಶ್ರದ್ಧಾಭಕ್ತಿಯಿಂದ ಆರಾಧಿಸುತ್ತಾರೆ.

ಇಲ್ಲಿನ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ಪೂರ್ವ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ವೇದಾವತಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಕೆರೆಯ ಏರಿಯ ಮಟ್ಟ ೧೩ ಅಡಿಯಾಗಿದ್ದು, ಹಾಗೂ ಗರಿಷ್ಠ ನೀರಿನ ಪ್ರಮಾಣ ೫೭೭.೦೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೦.೬೩ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೨೨.೫೪ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೮೭.೯೦ ಹೇಕ್ಟರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೩.೧೨ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ (ಎಂ.ಸಿ.ಎಂ.) ೧.೯೭೦. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೧೨೩.೦೬ ಹೇಕ್ಟರ್ ಇದೆ. ಒಳಭಾಗಕ್ಕೆ ಸಮ ಗಾತ್ರದ ಬೆಣ್ಣೆಯಾಕಾರದ (WEDGE SHAFE) ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರಭಾಗವನ್ನು ಗಟ್ಟಿ ಕಲಸು ಮಣ್ಣನ್ನು(ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿನ ಕೆರೆಯ ಏರಿಯ ಉದ್ದ(ಕೋಡಿಯ ಉದ್ದ ಸೇರಿ) ೬೩೬.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೧೪.೦೦ ಮೀಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಪ್ರತಿ ವರ್ಷ ೫೧೫.೦೦ ಕಿ.ಮೀ. ಮಳೆಯಾಗುತ್ತದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿ ಮತ್ತು ಎರಡು ಕಾಲುವೆಗಳನ್ನು ಹೊಂದಿದೆ. ಅದು ೧೨೩.೩೦ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೪೭೮.೦೦ ಇದ್ದು, ಅದು ಇರುವ ಸ್ಥಳ (ಚೈನೇಜ್) ೧೮.೭೪ ಮೀ ಹಾಗೂ ೧೨.೯೩ ಮೀಟರ್ ಇದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಚೌಕಕಾರದ ಎರಡು ತೂಬುಗಳಿವೆ. ಈ ಕೆರೆಯಲ್ಲಿ ಎಸ್.ಎಸ್.ಎಂ. ಮಾದರಿಯ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ೮೯೬.೦೦ ಮೀ, ಎಡದಂಡೆ ಕಾಲುವೆ ೭೮೦ ಮೀ. ಉದ್ದಗಳನ್ನು ಹೊಂದಿವೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ಹೊಗೆಸೊಪ್ಪು, ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

**೬೦. ಭಟ್ರಹಳ್ಳಿ ಕೆರೆ**

ಭಟ್ರಹಳ್ಳಿ (ರೇಖಾಂಶ ೭೬°೪೨'೦೧" ಅಕ್ಷಾಂಶ ೧೪°೪೭'೩೪") ಗ್ರಾಮವು ಜಿಲ್ಲೆಯ ಮೊಳಕಾಲ್ಮುರು ತಾಲ್ಲೂಕಿನಲ್ಲಿದ್ದು, ಅದೇ ಹೋಬಳಿಯ ವ್ಯಾಪ್ತಿಯಲ್ಲಿರುವ ಇದು ಚಿಕ್ಕೇರಹಳ್ಳಿ ಗ್ರಾಮ ಪಂಚಾಯತಿಗೆ ಸೇರಿದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೨೦ ಕಿ.ಮೀ. ದೂರದಲ್ಲಿದೆ (ಟೋಪೋ ಶೀಟ್ ಸಂಖ್ಯೆ. ೫೭-ಬಿ/೯). ಈ ಊರಿನಲ್ಲಿ ಆಧುನಿಕ ಕಾಲದಲ್ಲಿ ಅಂದರೆ

೧೮೮೯ರಲ್ಲಿ ನಿರ್ಮಿತವಾದ (ಕ್ರಿ.ಶ.೧೯ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಭಟ್ರಹಳ್ಳಿ ಕೆರೆ ಎನ್ನಲಾಗುತ್ತಿದೆ. ಇದನ್ನು ಪುನಃ ೧೯೦೫ರಲ್ಲಿ ಗ್ರಾಮಸ್ಥರ ಮತ್ತು ಸರ್ಕಾರದ ಸಹಭಾಗಿತ್ವದೊಂದಿಗೆ ದುರಸ್ತಿ ಮಾಡಿಸಲಾಗಿದೆ. ಹಿಂದೆ ಈ ಗ್ರಾಮದಲ್ಲಿ ಬ್ರಾಹ್ಮಣ (ಭಟ್ಟರು) ಜನಾಂಗದವರು ಹೆಚ್ಚಾಗಿ ವಾಸ ಮಾಡುತ್ತಿದ್ದರಂತೆ, ಆ ಕಾರಣಕ್ಕೆ ಈ ಊರನ್ನು ಭಟ್ರಹಳ್ಳಿ ಎಂದು ಕರೆಯಲಾಯಿತಂತೆ. ಈ ಗ್ರಾಮದಲ್ಲಿ ಈಶ್ವರ, ಆಂಜನೇಯಸ್ವಾಮಿ, ಗಣೇಶ, ಮಾರಮ್ಮ ಮತ್ತು ದುರ್ಗಾದೇವಿಯರ ಗುಡಿಗಳಿವೆ. ಇಲ್ಲಿ ಪ್ರತಿ ಯುಗಾದಿ ಮತ್ತು ದಸರಾ ಹಬ್ಬದಲ್ಲಿ ವರ್ಷಕ್ಕೆ ೨ ಬಾರಿ ದುರ್ಗಾದೇವಿ ಜಾತ್ರೆಯನ್ನು ಅದ್ದೂರಿಯಾಗಿ ಆಚರಿಸುತ್ತಾರೆ. ಕೆರೆ ತುಂಬಿದಾಗ ಗ್ರಾಮಸ್ಥರೆಲ್ಲರೂ ಸೇರಿ ಗಂಗಾಪೂಜೆಯನ್ನು ಮಾಡಿ ಅಚ್ಚುಕಟ್ಟು ಪ್ರದೇಶದ ರೈತರ ಜಮೀನುಗಳಿಗೆ ನೀರನ್ನು ಹಾಯಿಸಲಾಗುತ್ತದೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ವಾಯುವ್ಯ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ಕೆ-೯ ಸರಣಿಯನ್ನು ಹೊಂದಿದ್ದು, ಚಿನ್ನಹಗರಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೫೨೫.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೫೨೬.೫೫ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೨೫.೬೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೮.೬೨ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೧೨.೦೦ ಚ.ಕಿ.ಮೀ. ಇದೆ. ಇದರ ಒಟ್ಟಾರೆ ಜಲಾವೃತ ಪ್ರದೇಶ ೩೨.೩೫ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೨.೨೮ ಕ್ಯೂಸೆಕ್ಸ್ ಇದ್ದು, ಕೆರೆಯ ಹಾಲಿ ನೀರು ಶೇಖರಣಾ ಸಾಮರ್ಥ್ಯ ೦.೩೪೦ ಎಂ.ಸಿ.ಎಂ. ಇದೆ. ಇದರ ಒಟ್ಟು ವಿನ್ಯಾಸ ಅಚ್ಚು ಕಟ್ಟು ಪ್ರದೇಶ ೯೦.೦೦ ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೯೦.೦೦ ಹೇಕ್ಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೫೫೬.೨೪ ಕಿ.ಮೀ. ಮಳೆಯಾಗುತ್ತಿದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೧೩೫೦.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೬.೦೦ ಮೀಟರ್ ಇದೆ. ಈ ಕೆರೆಯಲ್ಲಿ ಎರಡು ಕೋಡಿಗಳಿದ್ದು, ಅವುಗಳಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಒಂದು ಕೋಡಿ ಇದ್ದು, ಅದು ೨೭.೮೦ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೨೫.೦೦ ಇದ್ದು, ಅದು ಇರುವ ಸ್ಥಳ (ಚೈನೇಜ್) ೦.೨೭.೮೦ ಮೀಟರ್ ಇದೆ. ಇದರ ಮತ್ತೊಂದು ಕೋಡಿಯು ಓಗ್ರಿ ಮಾದರಿಯಲ್ಲಿದ್ದು, ಅದು ೨೩.೯೦ ಮೀಟರ್ ಉದ್ದವಿದೆ. ಅದರ ಮೇಲ್ಮಟ್ಟ ೫೨೫.೦೩೮ ಇದ್ದು, ಅದು ಇರುವ ಸ್ಥಳ (ಚೈನೇಜ್) ೧೨೨೪ ಮತ್ತು ೧೨೪೭.೯೦ ಮೀಟರ್ ಇದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಮೂರು ತೂಬುಗಳಿವೆ. ಅವುಗಳಲ್ಲಿ ಬಲದಂಡೆಯ ತೂಬು ೮೫೬ ಮೀ ಇದ್ದು, ಇರುವ ಸ್ಥಳ (ಚೈನೇಜ್) ೫೨೦.೫೫೨ ಮೀ. ಎತ್ತರ ಇದೆ. ಮಧ್ಯ ದಂಡೆಯ ತೂಬು ೩೦೯ ಮೀ.ಇದ್ದು, ಇರುವ ಸ್ಥಳ (ಚೈನೇಜ್) ೫೨೦.೦೧೯ ಮೀ. ಎತ್ತರ ಇದೆ. ಅಲ್ಲದೇ ಇದರ ಎಡದಂಡೆ ತೂಬು

೫೬ ಮೀ, ಇದ್ದು, ಇರುವ ಸ್ಥಳ (ಚೈನೇಜ್) ೫೨೩.೦೧೯ ಮೀ. ಮಟ್ಟವನ್ನು ಹೊಂದಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಮೂರು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ೮೦.೦೦ ಮೀ, ಮಧ್ಯದಂಡೆ ಕಾಲುವೆ ೨೬೦ ಮೀ, ಎಡದಂಡೆ ಕಾಲುವೆ ೨೨೦ ಮೀ. ಉದ್ದಗಳನ್ನು ಹೊಂದಿವೆ. ಇವುಗಳಿಗೆ ಕ್ರಮವಾಗಿ ೧೪೫೬.೦೦ ಮೀ ೩೨೮೦.೦೦ ಮೀ ೩೦೧೪.೦೦ ಮೀ ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ.

ಇಲ್ಲಿ ಪೂರ್ವ, ಪಶ್ಚಿಮ ಮತ್ತು ಉತ್ತರ ಮೂರು ದಿಕ್ಕುಗಳ ತ್ರಿಕೋನಕಾರದಲ್ಲಿ ಕೆರೆ ಏರಿ ನಿರ್ಮಾಣ ಮಾಡಲಾಗಿದೆ. ಉತ್ತರಾಭಿಮುಖವಾಗಿ ನೀರು ಸಂಗ್ರಹಣೆಯಾಗುತ್ತದೆ. ಪೂರ್ವಕ್ಕೆ ಭಟ್ರಹಳ್ಳಿ ಗ್ರಾಮ, ಪಶ್ಚಿಮಕ್ಕೆ ಬೆಟ್ಟಗುಡ್ಡಗಳು, ಉತ್ತರ ಮತ್ತು ದಕ್ಷಿಣಕ್ಕೆ ಬೆಟ್ಟಗುಡ್ಡಗಳನ್ನು ಹೊಂದಿದೆ. ಉತ್ತರ ಭಾಗದಿಂದ ಜಲಮಾರ್ಗ ಹೊಂದಿದೆ. ಇಲ್ಲಿ ಬಹುತೇಕ ಜಲಮಾರ್ಗ ಈ ಬೆಟ್ಟಗಳ ಮೇಲಿಂದ ಜಾರಿ ಬಂದು ನೀರು ಇಲ್ಲಿ ಸಂಗ್ರಹಣೆಯಾಗುತ್ತದೆ. ಇಲ್ಲಿ ಮೀನುಗಾರಿಕೆ ಹಾಗೂ ನೀರಾವರಿ ವ್ಯವಸ್ಥೆಗೆ ಹಾಗೂ ಪಶುಪಾಲನೆಗೆ ಅನುಕೂಲವಾಗಿದೆ. ಈ ಕೆರೆಯ ನೀರು ತುಂಬಿದ ನಂತರ 'ಚಿನ್ನಹಗರಿ' ನದಿಗೆ ನೀರು ಹರಿದು ಹೋಗುತ್ತದೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ಈಗ ಜೋಳ, ಶೇಂಗಾ, ಭತ್ತ ಹಾಗೂ ಇತರೆ ವಾಣಿಜ್ಯ ಮತ್ತು ತರಕಾರಿ ಬೆಳೆಗಳನ್ನು ಬೆಳೆಯುತ್ತಾರೆ.

**೬೧. ನಾಗಸಮುದ್ರದ ಕೆರೆ**

ನಾಗಸಮುದ್ರ (ರೇಖಾಂಶ. ೭೬°೪೪'೪೧.೩" ಅಕ್ಷಾಂಶ. ೧೪°೪೭'೫೧.೫") ಗ್ರಾಮವು ಜಿಲ್ಲೆಯ ಮೊಳಕಾಲ್ಮುರು ತಾಲ್ಲೂಕಿನಲ್ಲಿದೆ. ಇದು ಹೋಬಳಿ ಮತ್ತು ಗ್ರಾಮ ಪಂಚಾಯತಿಯ ಕೇಂದ್ರವಾಗಿದ್ದು, ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೧೭ ಕಿ.ಮೀ. ದೂರದಲ್ಲಿದೆ. (ನೋಂದಣಿ ಸಂಖ್ಯೆ. ಎಸ್.ಓ.ಆರ್ ಸಂಖ್ಯೆ: ೧೩೩/೨೦೧೦/೧೧ ದಿ: ೨೧.೦೭.೨೦೧೦ ಮತ್ತು ಟೋಪೋ ಶೀಟ್ ಸಂಖ್ಯೆ-೫೭-ಬಿ/೯/, ೫೭-ಬಿ/೧೩). ಈ ಊರಿನಲ್ಲಿ ಆಧುನಿಕ ಕಾಲದಲ್ಲಿ ಅಂದರೆ ಬ್ರಿಟಿಷರ ಅಧಿಕಾರಾವಧಿಯಲ್ಲಿ ಅಂದರೆ ೧೯೦೬-೦೭ರಲ್ಲಿ ನಿರ್ಮಿತವಾದ (ಕ್ರಿ.ಶ.೧೯ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ನಾಗಸಮುದ್ರ ಕೆರೆ ಎನ್ನಲಾಗುತ್ತದೆ. ಮೊದಲು ಈ ಊರನ್ನು ಚಿತ್ರಹಾಲ್ ಎಂದು ಕರೆಯಲಾಗುತ್ತಿತ್ತು. ಇಲ್ಲಿ ಈಗಲೂ ಶ್ರೀ ಆಂಜನೇಯಸ್ವಾಮಿ ದೇವಾಲಯ ಮತ್ತು ಬಸವೇಶ್ವರ ದೇವಸ್ಥಾನಗಳಿವೆ. ಅವುಗಳ ಅಕ್ಕಪಕ್ಕದಲ್ಲಿ ಹಳೆಯ ಮನೆಗಳಿದ್ದು ಸದರಿ ಮನೆಗಳಲ್ಲಿ ಹಿಂದೆ ಜನರು ವಾಸವಾಗಿದ್ದರು. ಇಲ್ಲಿನ ಜನರು ಜಾನುವಾರುಗಳನ್ನು ಅಂದರೆ ದನ-ಕರುಗಳನ್ನು ಮೇಯಿಸಲು ಇಂದಿನ ಕೆರೆಯಿರುವ ಚಿತ್ರಹಾಲ್ ಎಂದು ಕರೆಯುತ್ತಿದ್ದ ಜಾಗಕ್ಕೆ ಹೋಗುತ್ತಿದ್ದರು. ಅಲ್ಲಿಗೆ ಪ್ರತಿ ದಿನ ಒಂದು ಹಸು ಬಂದು ಅಲ್ಲಿನ ಪೊದೆಯಲ್ಲಿದ್ದ ಶ್ರೀ ನಾಗಲಿಂಗೇಶ್ವರ ವಿಗ್ರಹಕ್ಕೆ ಹಾಲು ಕೊಡುತ್ತಿತ್ತು. ಅದಕ್ಕಾಗಿ ಆ ಪ್ರದೇಶವನ್ನು ಅಂದಿನಿಂದ ನಾಗಸಮುದ್ರ ಎಂದು ಕರೆಯುತ್ತಿದ್ದರು. ಅಲ್ಲದೇ ಈಗಿನ ಕೆರೆಯ ಆಕಾರವು ಕೂಡ ನಾಗರಹಾವಿನಂತೆ ಇರುವ ಕಾರಣಕ್ಕೆ ನಾಗಸಮುದ್ರ ಎಂದು ಕರೆಯುವ ರೂಢಿ ಇದೆ.

ಈ ಗ್ರಾಮದಲ್ಲಿ ಶ್ರೀ ಆಂಜನೇಯ ಸ್ವಾಮಿ, ಊರು ಮಾರಮ್ಮ, ಶ್ರೀ ವೀರಭದ್ರಸ್ವಾಮಿ, ಶ್ರೀ ಹೊನ್ನೂರಸ್ವಾಮಿ, ಶ್ರೀ ಈಶ್ವರ, ಶ್ರೀಕಂದರಮ್ಮ, ಶ್ರೀ ದಿನ್ನೇಮೇಗಳಮ್ಮ, ಶ್ರೀ ಅಡವಿ ಮಾರಮ್ಮ, ಶ್ರೀ ಯಲ್ಲಮ್ಮ, ಪೆನ್ನೋಬಳಸ್ವಾಮಿ, ಶ್ರೀ ಓಬಳದೇವರು, ಶ್ರೀ ಚನ್ನಬಸಮ್ಮ ಗುಡಿ, ಶ್ರೀ ಕುಂಟೆ ಗುಡ್ಡದಮಾರಮ್ಮ, ಶ್ರೀ ಉಜ್ಜಯಿನಿ, ಶ್ರೀ ತಿರುಪತಿ ತಿಮ್ಮಪ್ಪ, ಶ್ರೀ ಕರಿಯಮ್ಮನಹಳ್ಳಿ ಕೊಲ್ಲಾರಮ್ಮ, ಗಾದ್ರಿಪಾಲನಾಯಕ, ಗೌರಸಮುದ್ರದ ಮಾರಮ್ಮ ದೇವಸ್ಥಾನಗಳಿವೆ ಹಾಗೂ ಮಸೀದಿಗಳಿವೆ. ಪ್ರತಿ ವರ್ಷಕ್ಕೊಮ್ಮೆ ಗ್ರಾಮದೇವತೆ ಊರು ಮಾರಮ್ಮ ಜಾತ್ರೆಯನ್ನು ಆಗಸ್ಟ್ ಇಲ್ಲವೇ ಸೆಪ್ಟಂಬರ್ ತಿಂಗಳಲ್ಲಿ ಅದ್ದೂರಿಯಾಗಿ ಆಚರಿಸುತ್ತಾರೆ. ಅದೇ ರೀತಿಯಾಗಿ ವಿಶೇಷವಾಗಿ ವರ್ಷಕ್ಕೊಮ್ಮೆ ಗ್ರಾಮಸ್ಥರೆಲ್ಲರೂ ಸೇರಿ ಮೊಹರಂ ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಾರೆ.

ಇಲ್ಲಿನ ಕೆರೆಯು ಗ್ರಾಮದ ವಾಯುವ್ಯ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ಚಿನ್ನಹಗರಿ ನದಿಯ ಉಪಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೫೧೨.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೫೧೩.೮೦ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೧೩.೮೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೨೦.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೪೫.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೧೧೯.೦೮ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೨.೨೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ ಎಂ.ಸಿ.ಎಂ. ಕೆರೆಯ ಹಾಲಿ ಇರುವ ಸಾಮರ್ಥ್ಯ (ಎಂ.ಸಿ.ಎಂ). ೨.೨೪೦ ಇದೆ. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೧೭೪.೬೦ ಹೇಕ್ಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೫೪೩.೮೪ ಮಿ.ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೧೮೮೭.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೯.೦೦ ಮೀಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ.

ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಒಂದು ಕೋಡಿ ಇದ್ದು, ಅದು ೭೦ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೧೨.೦೦ ಇದ್ದು, ಅದು ಇರುವ ಸ್ಥಳ (ಚೈನೇಜ್) ೨೪೦ ಮೀ ಹಾಗೂ ೩೧೦ ಮಿ.ಮೀಟರ್ ಇದೆ. ಇಲ್ಲಿ ಫ್ಲಗ್ ಮತ್ತು ರಾಡ್ ಮಾದರಿಯ ಮೂರು ತೂಬುಗಳಿವೆ. ಅವುಗಳಲ್ಲಿ ಬಲದಂಡೆಯ ತೂಬು ೬೯೦ ಮೀ ಇದ್ದು, ಇರುವ ಸ್ಥಳ (ಚೈನೇಜ್) ೫೦೭.೨೨೭ ಮಿ.ಮೀ. ಎತ್ತರಇದೆ. ಮಧ್ಯ ದಂಡೆಯ ತೂಬು ೧೨೨೨ ಮೀ. ಇದ್ದು, ಇರುವ ಸ್ಥಳ (ಚೈನೇಜ್) ೫೦೪.೦೧೨ ಮೀ. ಎತ್ತರ ಇದೆ. ಅಲ್ಲದೇ ಇದರ ಎಡದಂಡೆ ತೂಬು ೧೫೫೨ ಮೀ. ಇದ್ದು, ಇರುವ ಸ್ಥಳ (ಚೈನೇಜ್) ೫೦೮.೫೧೨ ಮಿ.ಮೀ. ಮಟ್ಟವನ್ನು ಹೊಂದಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಮೂರು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ

ಕಾಲುವೆ ೩೮೫.೦೦ ಮೀ, ಮಧ್ಯ ದಂಡೆ ಕಾಲುವೆ ೨೬೫ ಮೀ, ಎಡದಂಡೆ ಕಾಲುವೆ ೧೨೦ ಮೀ. ಉದ್ದಗಳನ್ನು ಹೊಂದಿವೆ. ಇವುಗಳಿಗೆ ಕ್ರಮವಾಗಿ ೩೦೨೮.೦೦ ಮೀ, ೯೦೦೮.೦೦ ಮೀ, ೧೪೬೮.೦೦ ಮೀಟರ್ ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ.

ಪೂರ್ವಕ್ಕೆ ನಾಗಸಮುದ್ರ ಗ್ರಾಮ, ಪಶ್ಚಿಮಕ್ಕೆ ಬೆಟ್ಟ ಗುಡ್ಡಗಳು, ಉತ್ತರಕ್ಕೆ ಕೆರೆ ಏರಿಯನ್ನು ನಿರ್ಮಿಸಿದ್ದು ಕೆರೆಯ ಹಿಂದೆ ನೀರಾವರಿ ಪ್ರದೇಶ ಮತ್ತು ಚಿನ್ನಹಗರಿ ನದಿ ಇದೆ. ದಕ್ಷಿಣಕ್ಕೆ ಬೆಟ್ಟಗುಡ್ಡಗಳಿಂದ ಆವೃತಗೊಂಡಿದ್ದು, ದಕ್ಷಿಣ ಮತ್ತು ಪಶ್ಚಿಮ ಭಾಗದಲ್ಲಿ ಜಲಮಾರ್ಗಗಳಿದ್ದು, ಇಲ್ಲಿನ ಬೆಟ್ಟಗಳ ಮೇಲಿಂದ ಜಾರಿ ಬಂದು ನೀರು ಸಂಗ್ರಹಣೆಯಾಗುವುದನ್ನು ನಾವು ಕಾಣಬಹುದು. ಇಲ್ಲಿ ಕೆಂಪು ಮಿಶ್ರಿತ ಭೂಮಿ ಇದೆ. ಇದು ಮೀನು ಸಾಕಣಿಕೆ ಹಾಗೂ ನೀರಾವರಿ ವ್ಯವಸ್ಥೆಗೆ ಹಾಗೂ ಪಶುಪಾಲನೆಗೆ ಅನುಕೂಲವಾಗಿದೆ. ಈ ಕೆರೆಯ ನೀರು ನಾಗಸಮುದ್ರ ಗ್ರಾಮಕ್ಕೆ ಮಾತ್ರ ಸೀಮಿತವಾಗಿದ್ದು, ಹೆಚ್ಚಿನದಾಗಿ ಇಲ್ಲಿನ ರೈತರು ಈ ಕೆರೆಯ ನೀರನ್ನು ಬಳಸಿ ಭತ್ತ, ರಾಗಿ, ಹತ್ತಿ, ಮೆಕ್ಕೆಜೋಳ, ಜೋಳ, ತರಕಾರಿ ಮುಂತಾದ ಬೆಳೆಯನ್ನು ಬೆಳೆಯುತ್ತಾರೆ. ಈ ಕೆರೆಯ ನೀರು ತುಂಬಿದ ನಂತರ ಚಿನ್ನಹಗರಿ ನದಿಗೆ ಬಂದು ಸೇರುತ್ತದೆ.

**೬.೨. ಕೋನಸಾಗರ ಕೆರೆ**

ಕೋನಸಾಗರ ಗ್ರಾಮದ ಉತ್ತರಕ್ಕೆ ಇರುವ ತಿಮ್ಮಪ್ಪನ ಗುಡಿ ಇದೆ. ಪಕ್ಕದ ಪರಿಸರದಲ್ಲಿ ಮೌರ್ಯರ ನೆಲೆಯಿದೆ. ಕೋನಸಾಗರ (ರೇಖಾಂಶ. ೭೬°೪೪'೩೩" ಅಕ್ಷಾಂಶ ೧೪°೩೮'೪೯") ಗ್ರಾಮವು ಜಿಲ್ಲೆಯ ಮೊಳಕಾಲ್ಮುರು ತಾಲ್ಲೂಕಿನಲ್ಲಿದೆ. ಇದು ಹೋಬಳಿ ಮತ್ತು ಗ್ರಾಮ ಪಂಚಾಯತಿಯ ಕೇಂದ್ರವಾಗಿದ್ದು, ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೨೧ ಕಿ.ಮೀ. ದೂರದಲ್ಲಿದೆ (ನೋಂದಣಿ ಸಂಖ್ಯೆ. ಎಸ್.ಓ.ಆರ್ ಸಿ.ಡಿ.ಜಿ. ಎಸ್.ನಂ. ೨೧೮/೨೦೦೭-೦೮ ದಿ: ೪.೧೨.೨೦೦೭. ಮತ್ತು ಟೋಪೋ ಶೀಟ್ ಸಂಖ್ಯೆ-೫೭-ಬಿ/೧೦). ಈ ಊರಿನಲ್ಲಿ ಆಧುನಿಕ ಕಾಲದಲ್ಲಿ ಅಂದರೆ ಬ್ರಿಟಿಷರ ಅಧಿಕಾರಾವಧಿಯಲ್ಲಿ ಅಂದರೆ ೧೯೦೬-೦೭ರಲ್ಲಿ ನಿರ್ಮಿತವಾದ (ಕ್ರಿ.ಶ.೧೯ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಕೋನಸಾಗರ ಕೆರೆ ಎನ್ನಲಾಗುತ್ತದೆ. ಈ ಹಿಂದೆ ಗ್ರಾಮವನ್ನು ನಾಯಿಹಳ್ಳಿ (ಕುಕ್ಕನಪಲ್ಲಿ) ಎಂದು ಕರೆಯಲ್ಪಟ್ಟಿತ್ತು. ಈ ಗ್ರಾಮವು ಕರ್ನಾಟಕ ರಾಜ್ಯದ ಕೊನೆಯ ಭಾಗವಾಗಿದ್ದು, ಗಡಿ ಕೇಂದ್ರವಾಗಿ ಗಡಿನಾಡಿನ ಒಂದು ಭಾಗವಾಗಿರುವ ಗ್ರಾಮವು ತ್ರಿಕೋನಾಕಾರವಾಗಿದ್ದು, ಕರ್ನಾಟಕದ ಕೋನವಾಗಿತ್ತೆಂದು ಕೋನಸಾಗರ ಎಂದು ಕರೆಯಲ್ಪಟ್ಟಿದೆ.

ಹಿಂದೆ ಗೌಡರು ಹಾಗೂ ಪಟೇಲ್ ಪಾಪನಾಯಕ ಎಂಬುವವರು ಸುಮಾರು ೩೦೦ ವರ್ಷಗಳ ಹಿಂದೆ ಈ ಗ್ರಾಮದ ಕೆರೆಯನ್ನು ಕಟ್ಟಿಸಿದ್ದರಂತೆ. ಆದರೆ ಪುನಃ ೧೯೦೭ರಲ್ಲಿ ನವೀಕರಿಣಗೊಂಡು ಸರ್ಕಾರಕ್ಕೆ ಸೇರ್ಪಡೆಯಾಯಿತು. ಈ ಗ್ರಾಮದಲ್ಲಿ ನಾಯಕ, ಕುರುಬ, ಲಿಂಗಾಯತ, ಎಸ್.ಸಿ ಇತರೆ ಜನಾಂಗದವರು ಇದ್ದಾರೆ. ಗ್ರಾಮದಲ್ಲಿ ತಿಪ್ಪೇರುದ್ರಸ್ವಾಮಿ, ಆಂಜನೇಯ ಸ್ವಾಮಿ, ಈಶ್ವರ, ತಿಮ್ಮಪ್ಪ, ಕೊಲ್ಲಾರಮ್ಮ, ಮಾರಮ್ಮ, ಹಿರಿಯಮ್ಮ, ಚೌಡಪ್ಪ, ಬೊಮ್ಮಲಿಂಗೇಶ್ವರ ಸ್ವಾಮಿ, ಹೊನ್ನೂರು ಸ್ವಾಮಿ ದೇವರುಗಳನ್ನು ಪೂಜಿಸುತ್ತಾರೆ. ಪ್ರತಿವರ್ಷ ಎಲ್ಲಾ ದೇವರ ಜಾತ್ರೆಗಳನ್ನು

ಮಾಡುತ್ತಾರೆ. ಪ್ರತಿ ವರ್ಷ ತಿಪ್ಪೇರುದ್ರಸ್ವಾಮಿ ದೇವರ ಜಾತ್ರೆಯನ್ನು ವಿಶೇಷವಾಗಿ ಎಲ್ಲಾ ಜನಾಂಗದವರೂ ಒಂದಾಗಿ ಆಚರಿಸುತ್ತಾರೆ. ಇಲ್ಲಿ ವಿವಿಧ ಸಮುದಾಯಗಳಿಗೆ ಸೇರಿದ ಪ್ರತ್ಯೇಕ ಕಟ್ಟೆಮನೆ (ಚಾವಡಿ)ಗಳಿವೆ.

ಇಲ್ಲಿನ ಕೆರೆಯು ಗ್ರಾಮದ ಉತ್ತರ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ಚಿನ್ನಹಗರಿ ನದಿಯ ಉಪಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೫೫೫.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೫೧೩.೮೦ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೫೫.೯೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೨೫.೯ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೩೦.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತಪ್ರದೇಶ ೫೮.೫೮ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಹರಿವಿನ ಪ್ರಮಾಣ ೨೯.೮೪ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ (ಎಂ.ಸಿ.ಎಂ.) ಮತ್ತು ಕೆರೆಯ ಖಾಲಿ ಇರುವ ಸಾಮರ್ಥ್ಯ (ಎಂ.ಸಿ.ಎಂ). ೧.೦೨೫ ಇದೆ. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೧೬೯.೦೦ ಹೆಕ್ಟೇರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೫೧೬.೦೭ ಕಿ.ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೯೩೪.೭೧ ಮೀಟರ್ ಇದ್ದು, ಗರಿಷ್ಠ ಎತ್ತರ ೭.೫೦ ಮೀಟರ್ ಇದೆ. ಒಳಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರಭಾಗವನ್ನು ಗಟ್ಟಿ ಕಲಸು ಮಣ್ಣನ್ನು(ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ.

ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿಗಳಿವೆ. ಇದರ ಬಲ ಕೋಡಿ ೪೪.೨೨ ಮಿ.ಮೀ ಉದ್ದವಿದ್ದು, ಅದರ ಮೇಲ್ಮಟ್ಟ ೫೫೫.೦೧೯ ಇದ್ದು, ಅದು ಇರುವ ಸ್ಥಳ (ಚೈನೇಜ್) ೮೦೫.೫೫ ಹಾಗೂ ೮೪೯.೭೭ ಮಿ.ಮೀಟರ್ ಇದೆ. ಅದೇ ರೀತಿ ಇದರ ಎಡ ಕೋಡಿ ೪೪.೨೨ ಮಿ.ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೫೫.೦೧೯ ಇದ್ದು, ಅದು ಇರುವ ಸ್ಥಳ (ಚೈನೇಜ್) ೮೦೫.೫೫ ಹಾಗೂ ೮೪೯.೭೭ ಮಿ.ಮೀ ಇದೆ. ಇಲ್ಲಿ ಕೊಂತ ಮತ್ತು ಸರಳು ಮಾದರಿಯ ಎರಡು ತೂಬುಗಳಿವೆ. ಅವುಗಳಲ್ಲಿ ಎಡ ದಂಡೆಯ ತೂಬು ೫೦೮.೫೧೨ ಮೀ ಇದ್ದು, ಇರುವ ಸ್ಥಳ (ಚೈನೇಜ್) ೮೦೬.೫೨ ಮೀ. ಎತ್ತರ ಇದೆ. ಅಲ್ಲದೇ ಇದರ ಬಲ ದಂಡೆ ತೂಬು ೫೫೧.೨೨೭ ಮೀ, ಇದ್ದು, ಇರುವ ಸ್ಥಳ (ಚೈನೇಜ್) ೨೨೮.೭೫ ಮೀ, ಮಟ್ಟವನ್ನು ಹೊಂದಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಬಲ, ಮಧ್ಯ, ಎಡದಂಡೆಯ ಮೇಲೆ ಮೂರು ಕಾಲುವೆಗಳನ್ನು ಅಳವಡಿಸಲಾಗಿದ್ದು, ಇವುಗಳಿಗೆ ಕ್ರಮವಾಗಿ ೧೪೬೮.೦೦ ಮೀ, ೯೦೦೮.೦೦ ಮೀ, ೩೦೨೮.೦೦ ಮೀಟರ್ ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ. ಪೂರ್ವಕ್ಕೆ ಬಿ.ಜಿ. ಕೆರೆಯಿಂದ ಮೊಳಕಾಲ್ಮೂರು ಮಾರ್ಗದ ರಸ್ತೆ, ಪಶ್ಚಿಮಕ್ಕೆ ರೈತರ ಸಾಗುವಳಿ ಭೂಮಿ, ಉತ್ತರಕ್ಕೆ ರೈತರ ಸಾಗುವಳಿ ಭೂಮಿ, ದಕ್ಷಿಣಕ್ಕೆ ಕೆರೆಯ ಏರಿ ಮತ್ತು ಕೋನಸಾಗರ ಗ್ರಾಮ, ಪಶ್ಚಿಮ ಮತ್ತು ಉತ್ತರ ದಿಕ್ಕಿನಿಂದ ಮಳೆಯ ನೀರು ಹರಿದು ಕೆರೆಗೆ ಸೇರುತ್ತವೆ. ಇಲ್ಲಿ ಕೆಂಪು ಮಿಶ್ರಿತ

ಭೂಮಿ ಇದ್ದು, ಹೆಚ್ಚಿನದಾಗಿ ಇಲ್ಲಿನ ರೈತರು ಈ ಕೆರೆಯ ನೀರನ್ನು ಬಳಸಿ ಭತ್ತ, ರಾಗಿ, ಹತ್ತಿ, ಮೆಕ್ಕೆಜೋಳ, ಜೋಳ, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಇಲ್ಲಿ ಬಹುತೇಕ ಬಯಲು ಪ್ರದೇಶದ ಮುಖಾಂತರ ಬಂದು ನೀರು ಸಂಗ್ರಹಣೆಯಾಗುತ್ತವೆ. ಇಲ್ಲಿ ಮೀನು ಸಾಕಾಣಿಕೆ ಹಾಗೂ ನೀರಾವರಿ ವ್ಯವಸ್ಥೆ ಹಾಗೂ ಪಶುಪಾಲನೆಗೆ ಅನುಕೂಲವಾಗಿದೆ. ಈ ಕೆರೆ ತುಂಬಿದ ನಂತರ ಅದರ ಹೆಚ್ಚುವರಿ ನೀರು ಆಂಧ್ರಪ್ರದೇಶದ ತಾಳಕೆರೆ ಡ್ಯಾಂಗೆ ಹೋಗಿ ಸೇರುತ್ತದೆ.

**೬.೩. ಉಚ್ಚಂಗಿದುರ್ಗ ಕೆರೆ**

ಮೊಳಕಾಲ್ಮೂರು ತಾಲ್ಲೂಕು ಕಸಬಾ ಹೋಬಳಿ ವ್ಯಾಪ್ತಿಯಲ್ಲಿ ಬರುವ ಉಚ್ಚಂಗಿದುರ್ಗ ಗ್ರಾಮವು ನಾಗಸಮುದ್ರ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿರುತ್ತದೆ. (ರೇಖಾಂಶ. ೭೬°೪೬'೫೩" ಅಕ್ಷಾಂಶ ೧೪°೪೫'೪೯") ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೧೬ ಕಿ.ಮೀ. ದೂರದಲ್ಲಿದೆ (ನೋಂದಣಿ ಸಂಖ್ಯೆ. ಸಿ.ಡಿ.ಜಿ. ಎಸ್.ನಂ. ೨೪೬/೨೦೦೯-೨೦೧೦ ದಿ: ೦೪.೧೨.೨೦೧೦. ಮತ್ತು ಟೋಪೋ ಶೀಟ್ ಸಂಖ್ಯೆ-೫೭-ಬಿ/೮). ಈ ಊರಿನಲ್ಲಿ ಆಧುನಿಕ ಕಾಲದಲ್ಲಿ ಸಮಕಾಲೀನ ಅವಧಿಯಲ್ಲಿ ನಿರ್ಮಿತವಾದ (ಕ್ರಿ.ಶ.೨೦ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಉಚ್ಚಂಗಿದುರ್ಗದ ಕೆರೆ ಎನ್ನಲಾಗುತ್ತದೆ. ಈ ಕೆರೆಯನ್ನು ಸುಮಾರು ೨೦೦ ವರ್ಷಗಳ ಕೆಳಗೆ ಗ್ರಾಮಸ್ಥರೆಲ್ಲರೂ ತಮ್ಮ ನೀರಿನ ಅವಶ್ಯಕತೆಗಾಗಿ ಹರಿದು ಹೋಗುವ ನೀರನ್ನು ಕುಂಟೆಯನ್ನಾಗಿ ನಿರ್ಮಿಸಿಕೊಂಡರು. ಇದನ್ನು ೧೯೬೬ರಲ್ಲಿ ಜಿಲ್ಲಾ ಪಂಚಾಯತ್ ಚಿತ್ರದುರ್ಗ ಇವರು ಲೋಕೋಪಯೋಗಿ ಇಲಾಖೆಯಡಿಯಲ್ಲಿ ಕೆರೆಯನ್ನಾಗಿ ಪರಿವರ್ತಿಸಿದರು. ಈ ಗ್ರಾಮದಲ್ಲಿ ಮಾರಮ್ಮ, ಆಂಜನೇಯ ಸ್ವಾಮಿ, ಕೊಲ್ಲಾರಮ್ಮ, ಹೊನ್ನೂರಸ್ವಾಮಿ ಮತ್ತು ಗೌರಮ್ಮನ ಗುಡಿಗಳಿದ್ದು, ವರ್ಷಕ್ಕೊಮ್ಮೆ ಮಾರಮ್ಮ ಜಾತ್ರೆಯನ್ನು ಅದ್ದೂರಿಯಾಗಿ ಆಚರಿಸುತ್ತಾರೆ. ವಿಶೇಷವಾಗಿ ವರ್ಷಕ್ಕೊಮ್ಮೆ ಗ್ರಾಮಸ್ಥರೆಲ್ಲರು ನುಂಕೆಮಲೆ ಸಿದ್ಧೇಶ್ವರ ಬೆಟ್ಟದಲ್ಲಿ ಮೂರು ದಿನಗಳ ಕಾಲ ಬೀಡು ಬಿಟ್ಟು ಜಾತ್ರೆಯನ್ನು ಆಚರಿಸುತ್ತಾರೆ. ಗ್ರಾಮದಲ್ಲಿ ಎಸ್.ಟಿ ಜನಾಂಗದವರು ಮಾತ್ರ ವಾಸವಾಗಿದ್ದಾರೆ.

ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ಚಿನ್ನಹಗರಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೭ ಮೀಟರ್ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೫೩೪.೮೧ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೩೭.೬೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧.೩೯ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೨೩.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೫೫.೨೦ ೦.೦೪೮೭ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೫೧.೩೧ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ ೦.೪೮೭ ಎಂ.ಸಿ.ಎಂ.ಇದೆ. ಮತ್ತು ಕೆರೆಯ ಹಾಲಿ ಇರುವ ಸಾಮರ್ಥ್ಯ (ಎಂ.ಸಿ.ಎಂ). ೦.೪೮೭ ಇದೆ. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೧೭೪.೬೦ ಹೆಕ್ಟೇರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೫೫೬.೨೪ ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೯೦.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೬.೦೦ ಮೀಟರ್ ಇದೆ.

ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಒಂದು ಕೋಡಿ ಇದ್ದು, ಅದು ೭೦ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೧೨.೦೦ ಇದ್ದು, ಅದು ಇರುವ ಸ್ಥಳ (ಚೈನೇಜ್) ೨೪೦ ಮೀ ಹಾಗೂ ೩೧೦ ಮಿ.ಮೀ ಇದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಎರಡು ತೂಬುಗಳಿವೆ. ಅವುಗಳಲ್ಲಿ ಬಲದಂಡೆಯ ತೂಬು ೬೯೦ ಮೀ ಇದ್ದು, ಇರುವ ಸ್ಥಳ (ಚೈನೇಜ್) ೫೦೭.೨೨೭ ಮೀ ಮೀ. ಎತ್ತರ ಇದೆ. ಅಲ್ಲದೇ ಇದರ ಎಡದಂಡೆ ತೂಬು ೧೫೫೨ ಮೀ, ಇದ್ದು, ಇರುವ ಸ್ಥಳ (ಚೈನೇಜ್) ೫೦೮.೫೧೨ ಮಿ.ಮೀ. ಮಟ್ಟವನ್ನು ಹೊಂದಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ೩೮೫.೦೦ ಮೀ, ಮಧ್ಯದಂಡೆ ಕಾಲುವೆ ೨೬೫ ಮೀ, ಎಡದಂಡೆ ಕಾಲುವೆ ೧೨೦ ಮೀ. ಉದ್ದಗಳನ್ನು ಹೊಂದಿವೆ. ಇವುಗಳಿಗೆ ಕ್ರಮವಾಗಿ ೩೦೨೮.೦೦ ಮೀ, ೧೬೦.೦೦ ಮೀಟರ್ ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ.

ಪೂರ್ವಕ್ಕೆ ಆಂಧ್ರಪ್ರದೇಶದ ಗಡಿಭಾಗ, ಪಶ್ಚಿಮಕ್ಕೆ ಕೆರೆಯ ಏರಿ ಮತ್ತು ಗುಡ್ಡದ ಹಳ್ಳಿ, ಉತ್ತರಕ್ಕೆ ನಾಗಸಮುದ್ರ ಗ್ರಾಮವು ಇದ್ದು, ದಕ್ಷಿಣಕ್ಕೆ ಕೇಸರಿ ಗುಡ್ಡ ಮತ್ತು ನುಂಕಪ್ಪನ ಗುಡ್ಡ ಇದೆ. ಪೂರ್ವ ಮತ್ತು ದಕ್ಷಿಣ ಭಾಗಗಳ ಜಲಮಾರ್ಗದಿಂದ ನೀರು ಸಂಗ್ರಹಣೆಯಾಗುತ್ತದೆ. ಈ ಕೆರೆಯು ಮೀನು ಸಾಕಾಣಿಕೆ, ನೀರಾವರಿ ವ್ಯವಸ್ಥೆ ಹಾಗೂ ಪಶುಪಾಲನೆಗೆ ಅನುಕೂಲವಾಗಿದೆ. ಕೆರೆಯ ನೀರನ್ನು ಉಪಯೋಗಿಸಿಕೊಂಡು ರಾಗಿ, ಹತ್ತಿ, ಸೂರ್ಯಕಾಂತಿ, ಭತ್ತ, ಮೆಕ್ಕೆಜೋಳ, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಈ ಕೆರೆಯು ತುಂಬಿದ ನಂತರ ಚಿನ್ನಹಗರಿ ನದಿಗೆ ಬಂದು ಸೇರುತ್ತದೆ.

**೬೪. ಹಿರೇಕೆರೆಹಳ್ಳಿ ಕೆರೆ**

ಹಿರೇಕೆರೆ ಹಳ್ಳಿ: (ರೇಖಾಂಶ. ೭೬°೪೫'೫೫" ಅಕ್ಷಾಂಶ ೧೪°೪೫'೫೫") ಗ್ರಾಮವು ಜಿಲ್ಲೆಯ ಮೊಳಕಾಲ್ಮುರು ತಾಲ್ಲೂಕಿನಲ್ಲಿದ್ದು, ಕಸಬಾ ಹೋಬಳಿ ವ್ಯಾಪ್ತಿಯಲ್ಲಿರುವ ಗ್ರಾಮ ಪಂಚಾಯತಿಯ ಕೇಂದ್ರವಾಗಿದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೧೯ ಕಿ.ಮೀ. ದೂರದಲ್ಲಿದೆ (ನೋಂದಣಿ ಸಂಖ್ಯೆ. ಸಿ.ಡಿ.ಜಿ. ಎಸ್.ನಂ. ೨೪೫/೨೦೦೯-೨೦೧೦ ದಿ: ೦೪.೧೨.೨೦೧೦. ಮತ್ತು ಟೋಪೋ ಶೀಟ್ ಸಂಖ್ಯೆ-೫೭-ಬಿ/೧೨). ಈ ಊರಿನಲ್ಲಿ ಆಧುನಿಕ ಕಾಲಾವಧಿಯಲ್ಲಿ ಅಂದರೆ ೧೯೦೬-೦೭ರಲ್ಲಿ ನಿರ್ಮಿತವಾದ (ಕ್ರಿ.ಶ.೧೯ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು **ಹಿರೇಕೆರೆಹಳ್ಳಿ** ಕೆರೆ ಎನ್ನಲಾಗುತ್ತದೆ. ಕೆರೆಯು ದೊಡ್ಡದಾಗಿರುವುದರಿಂದ ಗ್ರಾಮಕ್ಕೆ ಹಿರೇಕೆರೆಹಳ್ಳಿ ಎಂದು ಹೆಸರಾಗಿದೆ. ಈ ಗ್ರಾಮದಲ್ಲಿ ಊರು ಮಾರಮ್ಮ, ಹಿರಿಯಮ್ಮ, ಆಂಜನೇಯಸ್ವಾಮಿ, ಕೊಲ್ಲಾರಮ್ಮ, ದುರುಗಮ್ಮ, ಪೆದ್ದಮ್ಮ, ಹೊನ್ನೂರಸ್ವಾಮಿ, ಕೋಟೆ ಗುಡ್ಡದ ಮಾರಮ್ಮ, ಗಾದ್ರಿ ಪಾಲನಾಯಕ, ಹೊನ್ನಮ್ಮ, ಬೋರಯ್ಯ, ಗೌರಸಮುದ್ರ ಮಾರಮ್ಮ, ಈಶ್ವರ, ಶ್ರೀರಾಮ ಮತ್ತು ಕನ್ನೀರಮ್ಮ ಗುಡಿ ಮತ್ತು ಮಸೀದಿಗಳಿವೆ.

ಇಲ್ಲಿನ ಕೆರೆಯು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿದ್ದು, ಈ ಕೆರೆಯ ಭೌಗೋಳಿಕ ಲಕ್ಷಣಗಳು ಮತ್ತು ತಾಂತ್ರಿಕ ವಿಶೇಷತೆಗಳು ಈ ಮುಂದಿನಂತಿವೆ. ಇಲ್ಲಿನ ಕೆರೆಯು ಗ್ರಾಮದ ಈಶಾನ್ಯ ಭಾಗದಲ್ಲಿದ್ದು, ಇದನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ಚಿನ್ನಹಗರಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೯.೦೦ಮೀ. ಆಗಿದ್ದು, ಒಟ್ಟು ಕೆರೆ ಏರಿಯಮಟ್ಟ ೫೧೩.೮೦ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೩೯.೮೧ ಮೀ. ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೨.೯೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೨೪.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೧೦೦.೧೯ ಹೆಕ್ಟೇರ್ ಇದೆ.

ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೮.೫೯ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ(ಎಂ.ಸಿ.ಎಂ.) ೫.೦೬೮ ಇದ್ದು, ಕೆರೆಯ ಹಾಲಿ ಇರುವ ಸಾಮರ್ಥ್ಯ(ಎಂ.ಸಿ.ಎಂ). ೦.೮೯(೫.೦೬೮-೦.೨೫೯) ಇದೆ. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೨೮೯ ಹೆಕ್ಟೇರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೫೩೯.೬೩ ಮಿ.ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ(ಕೋಡಿಯ ಉದ್ದ ಸೇರಿ) ೫.೦೬೮ ಮೀಟರ್ ಇದ್ದು, ಗರಿಷ್ಠ ಎತ್ತರ ೬.೪೦ ಮೀಟರ್ ಇದೆ. ಒಳಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ.

ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿ ಇದ್ದು, ಅವು ೭೦.೪೮ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೩೮.೦೦ ಇದ್ದು, ಅದು ಇರುವ ಸ್ಥಳ (ಚೈನೇಜ್) ೨೪೦ ಮೀ ಹಾಗೂ ೭೦.೪೮ ಮಿ.ಮೀ ಇದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಮೂರು ತೂಬುಗಳಿವೆ. ಅವುಗಳಲ್ಲಿ ಬಲ ದಂಡೆಯ ತೂಬು ೫೩೦.೧೮೭ ಮೀ.ಇದ್ದು, ಇರುವ ಸ್ಥಳ (ಚೈನೇಜ್) ೮೧೦.೦೦ ಮೀ. ಎತ್ತರ ಇದೆ. ಮಧ್ಯ ದಂಡೆಯ ತೂಬು ೫೩೩.೧೭ ಮೀ.ಇದ್ದು, ಇರುವ ಸ್ಥಳ (ಚೈನೇಜ್) ೩೮೦.೦೦ ಮಿ. ಮೀ. ಎತ್ತರ ಇದೆ. ಅಲ್ಲದೇ ಇದರ ಎಡದಂಡೆ ತೂಬು ೫೩೩.೪೪ ಮೀ, ಇದ್ದು, ಇರುವ ಸ್ಥಳ (ಚೈನೇಜ್) ೩೧೦.೦೦ ಮಿ. ಮೀ. ಮಟ್ಟವನ್ನು ಹೊಂದಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಮೂರು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ೬೭೩.೦೦ ಮೀ, ಮಧ್ಯದಂಡೆ ಕಾಲುವೆ ೮೦ ಮೀ, ಎಡದಂಡೆ ಕಾಲುವೆ ೧೨೦ ಮೀ. ಉದ್ದಗಳನ್ನು ಹೊಂದಿವೆ. ಇವುಗಳಿಗೆ ಕ್ರಮವಾಗಿ ೭೯೭.೦೦ ಮೀ, ೧೨೩೫.೦೦ ಮೀ, ೨೧೬೮.೦೦ ಮೀಟರ್ ನೀರು ಹಂಚಿಕೆಗೆ ವ್ಯವಸ್ಥೆ ಮಾಡಲಾಗಿದೆ.

ಪೂರ್ವಕ್ಕೆ ಹಿರೇಕೆರೆ ಹಳ್ಳಿ, ಪಶ್ಚಿಮ, ಉತ್ತರ ಮತ್ತು ದಕ್ಷಿಣಕ್ಕೆ ಬೆಟ್ಟಗುಡ್ಡಗಳಿದ್ದು, ಇವುಗಳಿಂದ ನೀರು ಹರಿದು ಬಂದು ಇಲ್ಲಿ ಶೇಖರಣೆಯಾಗುತ್ತದೆ. ಈ ಕೆರೆಯನ್ನು ಮೂರು ಬೆಟ್ಟಗಳ ಮಧ್ಯೆ ಇರುವ ಕಡಿದಾದ ಬಯಲು ಪ್ರದೇಶದಲ್ಲಿ ನಿರ್ಮಿಸಲಾಗಿದೆ. ಇದು ದೊಡ್ಡದಾದ ಕೆರೆಯಾಗಿದ್ದು, ಇಲ್ಲಿ ಬಹಳಷ್ಟು ಪ್ರಮಾಣದ ನೀರು ಸಂಗ್ರಹಣೆಯಾಗುತ್ತವೆ. ಈ ಕೆರೆಯ ನೀರು ಸುತ್ತಮುತ್ತಲಿನ

ಹಿರೇಕೆರೆಹಳ್ಳಿ, ಯರಜ್ಜನಹಳ್ಳಿ, ಹೊಡೂರು ಮುಂತಾದ ಗ್ರಾಮಗಳಿಗೆ ನೀರನ್ನು ಒದಗಿಸಲಾಗುತ್ತದೆ. ಈ ಕೆರೆಯನ್ನು ಮೀನು ಸಾಕಾಣಿಕೆ, ನೀರಾವರಿ ವ್ಯವಸ್ಥೆ ಹಾಗೂ ಪಶುಪಾಲನೆಗೆ ಅನುಕೂಲವಾಗಿದೆ. ಇಲ್ಲಿ ಹೆಚ್ಚಿನದಾಗಿ ಭತ್ತ, ರಾಗಿ, ಹತ್ತಿ, ಮೆಕ್ಕೆಜೋಳ, ಜೋಳ, ತರಕಾರಿ ಮುಂತಾದ ಬೆಳೆಯನ್ನು ಬೆಳೆಯುತ್ತಾರೆ. ಈ ಕೆರೆಯು ತುಂಬಿದ ನಂತರ ನೀರು ಚಿನ್ನಹಗರಿ ನದಿಗೆ ಬಂದು ತಲುಪುತ್ತದೆ.

**೬೫. ತುಪ್ಪದಕ್ಕನಹಳ್ಳಿ ಕೆರೆ**

ಮೊಳಕಾಲ್ಮೂರು ತಾಲ್ಲೂಕು ಕಸಬಾ ಹೋಬಳಿ ವ್ಯಾಪ್ತಿಯಲ್ಲಿ ಬರುವ ಯರ್ರೇನಹಳ್ಳಿ (ರೇಖಾಂಶ. ೭೬°೪೦'೪೬" ಅಕ್ಷಾಂಶ ೧೪°೪೩'೦೦") ಬಳಿಯಲ್ಲಿದ್ದು, ಈ ಗ್ರಾಮವು ರಾಯಾಪುರ ಗ್ರಾಮ ಪಂಚಾಯತಿಯ ವ್ಯಾಪ್ತಿಗೆ ಸೇರಿದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೭ ಕಿ.ಮೀ. ದೂರದಲ್ಲಿದೆ (ನೋಂದಣಿ ಸಂಖ್ಯೆ. ಸಿ.ಡಿ.ಜಿ. ಎಸ್.ನಂ. ೧೮೬/೨೦೦೭-೨೦೦೮ ದಿ:೩೧.೧೦.೨೦೦೭ ಮತ್ತು ಟೋಪೋ ಶೀಟ್ ಸಂಖ್ಯೆ-೫೭-ಬಿ/೧೧). ಈ ಊರಿನಲ್ಲಿ ಆಧುನಿಕ ಕಾಲದಲ್ಲಿ ಅಂದರೆ ೧೯೬೩ ರಲ್ಲಿ ಕರ್ನಾಟಕ ಸರ್ಕಾರದಿಂದ ನಿರ್ಮಿತವಾದ (ಕ್ರಿ.ಶ.೨೦ನೇ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ತುಪ್ಪದಕ್ಕನಹಳ್ಳಿ ಕೆರೆ ಎನ್ನಲಾಗುತ್ತದೆ. ಸುಮಾರು ವರ್ಷಗಳ ಹಿಂದೆ ಯರ್ರಿನಾಯಕ ಎಂಬುವರು ಊರಲ್ಲಿ ವಾಸವಾಗಿದ್ದರು. ಇವರುಗಳ ಮರಣಾನಂತರ ಗ್ರಾಮಕ್ಕೆ ಯರ್ರೇನಹಳ್ಳಿ ಎಂಬ ಹೆಸರು ಬಂತು. ಮಾಜಿ ಮುಖ್ಯಮಂತ್ರಿಗಳಾದ ದಿ॥ ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ೧೯೬೩ರಲ್ಲಿ ಉದ್ಘಾಟನೆಯೊಂದಿಗೆ ತುಪ್ಪದಕ್ಕನಹಳ್ಳಿ ಕೆರೆ ಸ್ಥಾಪನೆಯಾಯಿತು. ಈ ಕೆರೆಯ ನೀರು ಸುತ್ತಲಿನ ೭ ಗ್ರಾಮಗಳ ಜನರಿಗೆ ಜೀವನೋಪಾಯಕ್ಕೆ ದಾರಿಯಾಗಿರುತ್ತದೆ. ಅಲ್ಲದೆ, ಅಂತರ್ಜಲವು ಹೇರಳವಾಗಿದ್ದು, ಕುಡಿಯುವ ನೀರು ಹಾಗೂ ವ್ಯವಸಾಯಕ್ಕೆ ಬಹು ಉಪಕಾರಿಯಾಗಿರುತ್ತದೆ. ಈ ಗ್ರಾಮದಲ್ಲಿ ಅಡವಿ ಮಾರಮ್ಮ, ದುರ್ಗಮ್ಮ, ಕೋಟೆ ಗುಡ್ಡದ ಮಾರಮ್ಮ, ಬಸವಪಟ್ಟಣದ ದುರ್ಗಮ್ಮ, ಬೋರಲಿಂಗೇಶ್ವರ, ಓಬಳದೇವರ ಗುಡಿಗಳಿವೆ. ಇಲ್ಲಿ ಪ್ರತಿ ವರ್ಷಕ್ಕೊಮ್ಮೆ ಕೋಟೆ ಗುಡ್ಡದ ಮಾರಮ್ಮ ಜಾತ್ರೆಯನ್ನು ಆಚರಿಸುತ್ತಾರೆ ಹಾಗೂ ಗುಗ್ಗರಿ ಹಬ್ಬವನ್ನು ಆಚರಿಸುತ್ತಾರೆ. ಇಲ್ಲಿ ನಾಯಕ, ಎಸ್.ಸಿ ಹಾಗೂ ಇತರೆ ಸಮುದಾಯದವರು ಇರುತ್ತಾರೆ. (ಕೆರೆ ತುಂಬಿದಾಗ ಗ್ರಾಮಸ್ಥರೆಲ್ಲರೂ ಸೇರಿ ಗಂಗಾ ಪೂಜೆಯನ್ನು ಮಾಡಿ ಅಚ್ಚುಕಟ್ಟು ಪ್ರದೇಶದ ರೈತರ ಜಮೀನುಗಳಿಗೆ ನೀರನ್ನು ಹಾಯಿಸಲಾಗುತ್ತದೆ).

ಗ್ರಾಮದ ಪಶ್ಚಿಮ ಭಾಗದಲ್ಲಿರುವ ಇದು ಕೃಷ್ಣ ನದಿ ಪಾತ್ರದಲ್ಲಿದ್ದು, ಇದು ಕೆ-೯ರ ಸರಣಿ ಮತ್ತು ಚಿನ್ನಹಗರಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೫೭೭.೦೦ ಮೀ, ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೫೭೯.೮೦ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೭೭.೩೯ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೩೮.೮೫ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೧೫.೫೪ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೪೮.೪೮ ಹೆಕ್ಟೇರ್ ಇದೆ. ಇದರ ನೀರು ಹರಿವಿನ ಪ್ರಮಾಣ ೪೫.೨೯ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ ೧.೦೨೫ ಎಂ.ಸಿ.ಎಂ. ಇದ್ದು, ಕೆರೆಯ ಹಾಲಿ ಇರುವ ಸಾಮರ್ಥ್ಯ ೦.೬೬೬ ಎಂ.ಸಿ.ಎಂ. ಇದೆ. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೧೭೪.೬೦ ಹೆಕ್ಟೇರ್ ಇದೆ.

ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೫೬೧. ೦೭ ಮಿ.ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೫೯.೪ ಮೀಟರ್ ಇದ್ದು, ಗರಿಷ್ಠ ಎತ್ತರ ೬.೦೮ ಮೀಟರ್ ಇದೆ. ಒಳ ಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಒಂದು ಕೋಡಿ ಇದ್ದು, ಅದು ೭೯.೧ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೭೯.೦೦ ಇದ್ದು, ಅದು ಇರುವ ಸ್ಥಳ (ಚೈನೇಜ್) ೦.೭೯.೧ ಹಾಗೂ ೩೧೦ ಮಿ.ಮೀ ಇದೆ. ಇಲ್ಲಿ ಕೊಂತ ಮತ್ತು ಸರಳು ಮಾದರಿಯ ಎರಡು ತೂಬುಗಳಿವೆ. ಅವುಗಳಲ್ಲಿ ಬಲದಂಡೆಯ ತೂಬು ೫೭೩.೪೭೯ ಮೀ. ಇದ್ದು, ಇರುವ ಸ್ಥಳ (ಚೈನೇಜ್) ೫೧೯.೧೨ ಮೀ. ಎತ್ತರ ಇದೆ. ಅಲ್ಲದೇ ಇದರ ಎಡದಂಡೆ ತೂಬು ೫೬೬.೬೦ಮೀ, ಇದ್ದು, ಇರುವ ಸ್ಥಳ (ಚೈನೇಜ್) ೫೩೭.೯೯ ಮೀ. ಮಟ್ಟವನ್ನು ಹೊಂದಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಮೂರು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ೩೮೫.೦೦ ಮೀ, ಮಧ್ಯದಂಡೆ ಕಾಲುವೆ ೫೧೬ ಮೀ, ಎಡದಂಡೆ ಕಾಲುವೆ ೨೧೮ ಮೀ. ಉದ್ದಗಳನ್ನು ಹೊಂದಿವೆ. ಇವುಗಳಿಗೆ ಕ್ರಮವಾಗಿ ೫೦೬೪.೧೨ ಮೀ. ೩೬೮೭.೨ ಮೀ, ೧೬೮.೦೦ ಮೀ. ನೀರು ಹಂಚಿಕೆ ವ್ಯವಸ್ಥೆ ಮಾಡಲಾಗಿದೆ.

ಕೆರೆಯ ಪೂರ್ವಕ್ಕೆ ರಾಷ್ಟ್ರೀಯ ಹೆದ್ದಾರಿ ಮತ್ತು ಮನೆಗಳು. ಪಶ್ಚಿಮಕ್ಕೆ ರೈತರ ಜಮೀನುಗಳು, ಉತ್ತರಕ್ಕೆ ಕೆರೆಯ ಏರಿ ಮತ್ತು ರೈತರ ಜಮೀನುಗಳು, ದಕ್ಷಿಣಕ್ಕೆ ಯರ್ರೇನಹಳ್ಳಿ ಗ್ರಾಮವಿದೆ. ಕೆರೆಯು ಬಯಲು ಪ್ರದೇಶದಿಂದ ಕೂಡಿದ್ದು, ಮಳೆಯಾಶ್ರಿತವಾಗಿರುವ ಈ ಕೆರೆಗೆ ದಕ್ಷಿಣ – ಉತ್ತರವಾಗಿ ಹತ್ತಿಹಳ್ಳಿ, ಪೂರ್ವ–ಪಶ್ಚಿಮವಾಗಿ ಪೇಟೆಹಳ್ಳಿ, ಗುಂಡ್ಲೂರು ಹಳ್ಳಿ, ಸೂಳೇನಹಳ್ಳಿಯಿಂದ ೩ ಹಳ್ಳಗಳು ಸೇರಿ ಬಂದು ಹತ್ತಿಹಳ್ಳ ಕೆರೆ ಸೇರುತ್ತವೆ. ಈಶಾನ್ಯ ದಿಕ್ಕಿನಿಂದ ಕಜ್ಜಿ ಬೊಮ್ಮನಸರದಿಂದಲೂ ಈ ಜಲಾಶಯಕ್ಕೆ ನೀರು ಸಂಗ್ರಹವಾಗುತ್ತದೆ. ಇಲ್ಲಿ ಕೆಂಪು ಮಿಶ್ರಿತ ಭೂಮಿಯಿದ್ದು, ಇಲ್ಲಿ ಮೀನು ಸಾಕಾಣಿಕೆ, ನೀರಾವರಿ ವ್ಯವಸ್ಥೆ ಹಾಗೂ ಪಶುಪಾಲನೆಗೆ ಹೆಚ್ಚು ಅನುಕೂಲವಾಗಿದೆ. ಈ ಕೆರೆಯ ನೀರಿನಲ್ಲಿ ಹೆಚ್ಚಿನದಾಗಿ ಭತ್ತ, ರಾಗಿ, ಹತ್ತಿ, ತರಕಾರಿ ಬೆಳೆಯನ್ನು ಬೆಳೆಯುತ್ತಾರೆ. ಈ ಕೆರೆಯು ತುಂಬಿದ ನಂತರ ಹೆಚ್ಚಾದ ನೀರು ರಂಗಯ್ಯನ ದುರ್ಗವನ್ನು ಸೇರಿಕೊಳ್ಳುತ್ತದೆ.

**೬೬. ಮುತ್ತಿಗಾರಹಳ್ಳಿ ಕೆರೆ**

ಮೊಳಕಾಲ್ಮೂರು ತಾಲ್ಲೂಕು ಕಸಬಾ ಹೋಬಳಿ ವ್ಯಾಪ್ತಿಯಲ್ಲಿ ಬರುವ ಮುತ್ತಿಗಾರಹಳ್ಳಿ ಗ್ರಾಮವು (ರೇಖಾಂಶ. ೭೬°೪೯’೧೮” ಅಕ್ಷಾಂಶ ೧೪°೩೫’೫೬”) ಬಿ.ಜಿ.ಕೆರೆ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೧೭ ಕಿ.ಮೀ. ದೂರದಲ್ಲಿದೆ (ನೋಂದಣಿ ಸಂಖ್ಯೆ. ಎಸ್.ಓ.ಆರ್.ನಂ. ೪೬/೨೦೧೦–೨೦೧೧ ದಿ:೧೨.೫.೨೦೧೦ ಮತ್ತು ಟೋಪೋ ಶೀಟ್ ಸಂಖ್ಯೆ–೫೭–ಬಿ/೧೩). ಈ ಊರಿನಲ್ಲಿ ಆಧುನಿಕ ಕಾಲದಲ್ಲಿ ಅಂದರೆ ೧೯೬೭ರಲ್ಲಿ ರಾಜ್ಯ ಸರ್ಕಾರದಿಂದ ನಿರ್ಮಿತವಾದ (ಕ್ರಿ.ಶ.೨೦ ಶತಮಾನ) ಐತಿಹಾಸಿಕ ಕೆರೆಯೊಂದಿದ್ದು, ಅದನ್ನು ಮುತ್ತಿಗಾರಹಳ್ಳಿ ಕೆರೆ

ಎನ್ನಲಾಗುತ್ತದೆ. ಕೂಡಗಲ್ಲಬೊಮ್ಮ ನೆಲೆಸಿದ ಸ್ಥಳ. ಸಮೀಪದ ತುಮಕೂರ್ಲಹಳ್ಳಿಯಿಂದ ಮುತ್ತುಗಳಿಂದ ಅಲಂಕೃತವಾದ ಎತ್ತುಗಳನ್ನು ಈ ಗ್ರಾಮದವರೆಗೆ ಓಡಿಸಿ, ಹಬ್ಬದಲ್ಲಿ ಅಂಬು ನಡೆಸುತ್ತಿದ್ದರಂತೆ. ಆದ್ದರಿಂದ ಈ ಗ್ರಾಮಕ್ಕೆ ಮುತ್ತಿಗಾರ ಹಳ್ಳಿ ಎಂದು ಹೆಸರು ಬಂದಿದೆ. ಈ ಗ್ರಾಮದಲ್ಲಿ ಶ್ರೀಶೈಲ ಮಲ್ಲಿಕಾರ್ಜುನ ಸ್ವಾಮಿ, ದುರ್ಗಾಂಬಿಕೆ, ಕರಿಬಸವೇಶ್ವರ ಗಾದ್ರಿಪಾಲನಾಯಕ, ಕೋಟೆಗುಡ್ಡದ ಮಾರಮ್ಮ, ಗೌರಸಮುದ್ರ ಮಾರಮ್ಮ, ಓಬಳದೇವರು, ಮಲಿಯಮ್ಮನ ಗುಡಿಗಳಿವೆ. ವಿಶೇಷವಾಗಿ ೫ ವರ್ಷಕ್ಕೊಮ್ಮೆ ದುರ್ಗಾಂಬಿಕೆ ಜಾತ್ರೆಯಾಗುತ್ತದೆ. ಹಾಗೆಯೇ ೧೪ ವರ್ಷಕ್ಕೊಮ್ಮೆ ಶ್ರೀಶೈಲ ಮಲ್ಲಿಕಾರ್ಜುನ ಸ್ವಾಮಿ, ಮುತ್ತಯ್ಯನ ಎತ್ತುಗಳ ಜಾತ್ರೆಯನ್ನು ಗ್ರಾಮಸ್ಥರೆಲ್ಲರೂ ಸೇರಿ ಆಚರಿಸುತ್ತಾರೆ. ಹೆಚ್ಚಿನದಾಗಿ ನಾಯಕ ಸಮುದಾಯ ಇದ್ದು, ಉಳಿದಂತೆ ಎಸ್.ಸಿ ಹಾಗೂ ಇತರೆ ಸಮುದಾಯದವರು ಇರುತ್ತಾರೆ.

ಕೃಷ್ಣ ನದಿ ಪಾತ್ರದಲ್ಲಿರುವ ಈ ಕೆರೆಯು ಚಿನ್ನಹಗರಿ ನದಿಯ ಉಪಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೫೧೨.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೫೧೩.೮೦ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೧೩.೬೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೧೩.೯೭ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೨೫.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೩೧.೬೯ ಹೆಕ್ಟೇರ್ ಇದೆ. ಜಲ ಅಧ್ಯಯನದ ಪ್ರಕಾರ ಇದರ ನೀರು ಅರಿವಿನ ಪ್ರಮಾಣ ೧೨.೨೮ ಕ್ಯೂಸೆಕ್ಸ್ ಇದ್ದು, ಕೆರೆಯ ನೀರು ಶೇಖರಣಾ ಸಾಮರ್ಥ್ಯ (ಎಂ.ಸಿ.ಎಂ.) ೨.೨೪೦ ಮತ್ತು ಕೆರೆಯ ಹಾಲಿ ಇರುವ ಸಾಮರ್ಥ್ಯ (ಎಂ.ಸಿ.ಎಂ). ೨.೨೫೦ ಇದೆ. ಇದರ ಒಟ್ಟು ವಿನ್ಯಾಸ ಮತ್ತು  ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೮೩.೦೬ ಹೇಕ್ಟರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಪ್ರತಿ ವರ್ಷ ೪೬೭.೫೫ ಮಿ. ಮೀ. ಮಳೆಯಾಗುತ್ತದೆ. ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೬೩೧.೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೫.೫೦ ಮೀಟರ್ ಇದೆ. ಒಳಭಾಗಕ್ಕೆ ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿ ಇದ್ದು, ಅದು ೬೯.೯೩೦  ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೫೭೨.೦೦ ಇದ್ದು, ಅದು ಇರುವ ಸ್ಥಳ (ಚೈನೇಜ್) ೦ ಮೀ ಹಾಗೂ ೬೩.೯೩ ಮೀಟರ್ ಇದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಎರಡು ತೂಬುಗಳಿವೆ. ಅವುಗಳಲ್ಲಿ ಬಲದಂಡೆಯ ತೂಬು ೧೮೯.೦೦ ಮೀ. ಇದ್ದು, ಇರುವ ಸ್ಥಳ (ಚೈನೇಜ್) ೫೬೮.೭೧೯ ಮೀ. ಎತ್ತರ ಇದೆ. ಅಲ್ಲದೇ ಇದರ ಎಡದಂಡೆ ತೂಬು ೧೪೮ ಮೀ, ಇದ್ದು, ಇರುವ ಸ್ಥಳ (ಚೈನೇಜ್) ೫೪೮.೫೧೨ ಮೀ. ಮಟ್ಟವನ್ನು ಹೊಂದಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ೩೮೫.೦೦ ಮೀ, ಎಡದಂಡೆ ಕಾಲುವೆ ೧೨೦ ಮೀ. ಉದ್ದವನ್ನು ಹೊಂದಿವೆ. ಇವುಗಳಿಗೆ ಕ್ರಮವಾಗಿ ೧೭೦೦.೦೦ ಮೀ, ೫೦೦.೦೦ ಮೀ. ನೀರು ಹಂಚಿಕೆಗೆ ವ್ಯವಸ್ಥೆ ಮಾಡಲಾಗಿದೆ.

ಪೂರ್ವಕ್ಕೆ ಕೆರೆಯ ಏರಿ ಮತ್ತು ಮುತ್ತಿಗಾರಹಳ್ಳಿ ಗ್ರಾಮವಿದೆ. ಪಶ್ಚಿಮಕ್ಕೆ ಕೆರೆಯ ಅಂಗಳ ಹಾಗೂ ರೈತರ ಜಮೀನುಗಳು ಮತ್ತು ಅರಣ್ಯ ಪ್ರದೇಶದಿಂದ ಕೂಡಿದೆ. ಉತ್ತರಕ್ಕೆ ಅರಣ್ಯ ಪ್ರದೇಶ

ಹಾಗೂ ದಕ್ಷಿಣಕ್ಕೆ ರೈತರ ಜಮೀನುಗಳಿವೆ. ಇದಕ್ಕೆ ಪಶ್ಚಿಮ ಮತ್ತು ಉತ್ತರ ಭಾಗದಿಂದ ಜಲ ಮಾರ್ಗಗಳಿದ್ದು, ಬಹುತೇಕ ಬಯಲು ಸೀಮೆಯ ಪ್ರದೇಶದಿಂದ ಬಂದಂತಹ ನೀರು ಇಲ್ಲಿ ಸಂಗ್ರಹಣೆಯಾಗುತ್ತದೆ. ಇಲ್ಲಿ ಮೀನು ಸಾಕಾಣಿಕೆ, ನೀರಾವರಿ ವ್ಯವಸ್ಥೆ ಹಾಗೂ ಪಶು ಪಾಲನೆಗೆ ಅನುಕೂಲವಾಗಿದೆ. ಇಲ್ಲಿನ ನೀರು ಈ ಗ್ರಾಮಕ್ಕೆ ಮತ್ತು ಮ್ಯಾಸರಹಟ್ಟಿಯ ಭೂಮಿಗಳಿಗೆ ನೀರಾವರಿ ವ್ಯವಸ್ಥೆಗೆ ಅನುಕೂಲವಾಗಿದೆ. ಇಲ್ಲಿ ಭತ್ತ, ರಾಗಿ, ಹತ್ತಿ, ರೇಷ್ಮೆ, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯಲು ಅನುಕೂಲವಾಗಿದೆ ಹಾಗೂ ಈ ಕೆರೆಯು ತುಂಬಿದ ನಂತರ ಮುತ್ತಿಗಾರಗಹಳ್ಳಿ, ಬಿ.ಜಿ.ಕೆರೆ, ರಾವಲಕುಂಟೆ, ಮೊಗಲಹಳ್ಳಿ, ಓಬಣ್ಣಹಳ್ಳಿ, ಹನುಮಂತನಹಳ್ಳಿ ಮಾರ್ಗದ ಮುಖಾಂತರ ಚಳ್ಳಕೆರೆ ತಾಲ್ಲೂಕಿನ ಗೌರಸಮುದ್ರ ಕೆರೆಗೆ ಹೋಗಿ ತಲುಪುತ್ತವೆ.

**೬೭. ರಂಗಯ್ಯನದುರ್ಗ ಜಲಾಶಯ**

ರಂಗಯ್ಯನದುರ್ಗ ಜಲಾಶಯವು (ರೇಖಾಂಶ. ೭೬°೪೪'೩೩" ಅಕ್ಷಾಂಶ ೧೪°೩೮'೪೯") ಹಾನಗಲ್ಲು ಸಮೀಪದಲ್ಲಿದ್ದು, ಮೊಳಕಾಲ್ಮೂರು ತಾಲ್ಲೂಕಿನಲ್ಲಿದೆ. ಈ ತಾಲೂಕಿನ ಅತ್ಯಂತ ದೊಡ್ಡ ಜಲಾಶಯ ಇದಾಗಿದೆ. ಇಲ್ಲಿ ಹಿಂದೆಯೂ ಯಾವುದೇ ಜನವಸತಿ ಇರಲಿಲ್ಲ ಮತ್ತು ಪ್ರಸಕ್ತವು ಯಾವುದೇ ಜನವಸತಿ ಇಲ್ಲ. ಜಿನಿಗೆ ಹಳ್ಳವು ಭೌಗೋಳಿಕವಾಗಿ ಚಿತ್ರದುರ್ಗದ ಪಶ್ಚಿಮ ಬೆಟ್ಟಗಳಲ್ಲಿ ಹುಟ್ಟಿ, ಹಳಿಯಾರು, ಹಿರೆಗುಂಟನೂರು, ಚಿತ್ರಹಳ್ಳಿಯಿಂದ ಜಗಳೂರು ತಾಲ್ಲೂಕಿನ ಸಂಗೇನಹಳ್ಳಿ ಕೆರೆಯನ್ನು ತಲುಪುತ್ತದೆ. ತರುವಾಯ ತರುವನೂರು ಹೂಡೆಂ, ಸಿದ್ದಯ್ಯನಕೋಟೆ ಮಾರ್ಗವಾಗಿ ಬರುತ್ತದೆ. ಈ ಚಿನ್ನಹಗರಿ ನದಿಗೆ ರಂಗಯ್ಯನ ದುರ್ಗದಲ್ಲಿ ಜಲಾಶಯವನ್ನು ನಿರ್ಮಿಸಲಾಗಿದೆ. ಈ ಜಲಾಶಯದ ಹತ್ತಿರದಲ್ಲೇ ಅತ್ಯಂತ ಹಳೆದಾದ ಬಸವಣ್ಣನ ಗುಡಿ ಇದೆ. ಈ ಸ್ಥಳವು ತಾಲ್ಲೂಕು ಕೇಂದ್ರದಿಂದ ೧೦ ಕಿ.ಮೀ. ದೂರದಲ್ಲಿದೆ (ನೋಂದಣಿ ಸಂಖ್ಯೆ. ಎಸ್.ಓ.ಆರ್ ಸಿ.ಡಿ.ಜಿ. ಎಸ್.ನಂ. ೨೧೮/೨೦೦೭-೦೮ ದಿ: ೦೪.೧೨.೨೦೦೭. ಮತ್ತು ಟೋಪೋ ಶೀಟ್ ಸಂಖ್ಯೆ-೫೭-ಬಿ/೧೦). ಈ ಊರಿನಲ್ಲಿ ಸಮಕಾಲೀನ ಕಾಲದಲ್ಲಿ ಅಂದರೆ ೧೯೭೬ರಲ್ಲಿ ನಿರ್ಮಿತವಾದ (ಕ್ರಿ.ಶ.೨೦ನೇ ಶತಮಾನ) ಜಲಾಶಯ/ಕೆರೆಯೊಂದಿದ್ದು, ಅದನ್ನು ರಂಗಯ್ಯನದುರ್ಗ ಜಲಾಶಯ ಎನ್ನಲಾಗುತ್ತದೆ.[೫೧]

ಕೃಷ್ಣ ನದಿ ಪಾತ್ರದಲ್ಲಿರುವ ಈ ಜಲಾಶಯ ಕೆ-೯ರ ಸರಣಿಯನ್ನು ಹೊಂದಿದ್ದು, ಚಿನ್ನಹಗರಿ ನದಿಯ ಉಪ ಸರಣಿಯ ವ್ಯಾಪ್ತಿಯಲ್ಲಿ ಬರುತ್ತದೆ. ಕೆರೆ ಏರಿಯ ಕೋಡಿಯ ಮೇಲ್ಮಟ್ಟ ೫೧೨.೦೦ ಆಗಿದ್ದು, ಒಟ್ಟು ಕೆರೆ ಏರಿಯ ಮಟ್ಟ ೫೧೩.೮೦ ಹಾಗೂ ಗರಿಷ್ಠ ನೀರಿನ ಪ್ರಮಾಣ ೫೧೩.೮೦ ಅಡಿಯಾಗಿದ್ದು, ಇದರ ಒಟ್ಟು ಜಲಾನಯನ ಪ್ರದೇಶ ಸ್ವತಂತ್ರವಾಗಿ ೨೦.೫೦ ಚ.ಕಿ.ಮೀ. ಇದ್ದು, ಸಂಯುಕ್ತವಾಗಿ ೪೫.೦೦ ಚ.ಕಿ.ಮೀ. ಇದೆ. ಇದರ ಒಟ್ಟು ಜಲಾವೃತ ಪ್ರದೇಶ ೧೯೦೧.೦೦ ಕಿ.ಮೀ ಇದೆ. ಇದರ ನೀರು ಹರಿವಿನ ಪ್ರಮಾಣ ೧೨.೨೮ ಕ್ಯೂಸೆಕ್ಸ್ ಇದ್ದು, ಇಲ್ಲಿನ ಒಟ್ಟು ನೀರು ಶೇಖರಣಾ ಸಾಮರ್ಥ್ಯ ೪೬೩.೩೮ ಎಂ.ಸಿ.ಎಫ್.ಟಿ. ಇದೆ. ಇದರ ಒಟ್ಟು ವಿನ್ಯಾಸ ಮತ್ತು ಪ್ರಸ್ತುತ ಅಚ್ಚುಕಟ್ಟು ಪ್ರದೇಶ ೬೩೫೦.೦೦ ಹೆಕ್ಟೇರ್ ಇದೆ. ಮಳೆ ಆಶ್ರಿತವಾಗಿರುವ ಈ ಕೆರೆಯ ಪರಿಸರದಲ್ಲಿ ಜಲ ಅಧ್ಯಯನದ ಪ್ರಕಾರ ಪ್ರತಿ ವರ್ಷ ೫೪೩.೮೪ ಮಿ.ಮೀ. ಮಳೆಯಾಗುತ್ತದೆ.

ಇಲ್ಲಿನ ಕೆರೆಯ ಏರಿಯ ಉದ್ದ (ಕೋಡಿಯ ಉದ್ದ ಸೇರಿ) ೯೦೦ ಮೀಟರ್ ಇದ್ದು, ಗರಿಷ್ಠ ಎತ್ತರ ೧೯.೮೮ ಮೀಟರ್ ಇದೆ. ಒಳ ಭಾಗಕ್ಕೆ ಸಿಮೆಂಟ್, ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು  ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಕೆರೆ ಏರಿಯನ್ನು ನಿರ್ಮಿಸಲಾಗಿದೆ. ಇಲ್ಲಿ ಸ್ಲೋಪಿಂಗ್ ಎಪ್ರಾನ್ ಮಾದರಿಯ ಎರಡು ಕೋಡಿ ಇದ್ದು, ಅದು ೧೭೦ ಮೀಟರ್ ಉದ್ದವಿದ್ದು, ಅದರ ಮೇಲ್ಮಟ್ಟ ೭೧೮.೦೦ ಇದ್ದು, ಅದು ಇರುವ ಸ್ಥಳ (ಚೈನೇಜ್) ೯೪೦ ಮೀ ಹಾಗೂ ೪೭೦ ಮೀ. ಇದೆ. ಇಲ್ಲಿ ಪ್ಲಗ್ ಮತ್ತು ರಾಡ್ ಮಾದರಿಯ ಎರಡು ತೂಬುಗಳಿವೆ. ಅವುಗಳಲ್ಲಿ ಬಲದಂಡೆಯ ತೂಬು ೬೮೯ ಮೀ. ಇದ್ದು, ಇರುವ ಸ್ಥಳ (ಚೈನೇಜ್) ೬೨೪.೨೨೭ ಮಿ. ಮೀ. ಎತ್ತರ ಇದೆ. ಅಲ್ಲದೇ ಇದರ ಎಡದಂಡೆ ತೂಬು ೨೫೫೨ ಮೀ, ಇದ್ದು, ಇರುವ ಸ್ಥಳ (ಚೈನೇಜ್) ೧೫೦೮.೫೧೨ ಮಿ.ಮೀ. ಮಟ್ಟವನ್ನು ಹೊಂದಿದೆ. ಈ ಕೆರೆಯಲ್ಲಿ ಎಸ್.ಎಸ್.ಎಂ ಮಾದರಿಯ ಎರಡು ಕಾಲುವೆಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಬಲದಂಡೆ ಕಾಲುವೆ ೧೪.೦೦ ಕಿ.ಮೀ, ಎಡದಂಡೆ ಕಾಲುವೆ ೧೮.೮೪೮ ಕಿ.ಮೀ. ಉದ್ದಗಳನ್ನು ಹೊಂದಿವೆ. ಇವುಗಳಿಗೆ ಕ್ರಮವಾಗಿ ೩೦೨೮.೦೦ ಮೀ. ೧೯೦೦೮.೦೦ ಮೀ, ೧೯೭೮.೦೦ ಮೀ. ನೀರು ಹಂಚಿಕೆಗೆ ವ್ಯವಸ್ಥೆ ಮಾಡಲಾಗಿದೆ. ಪೂರ್ವಕ್ಕೆ ರೈತರ ಜಮೀನುಗಳು, ಪಶ್ಚಿಮಕ್ಕೆ ನದಿಯ ಅಂಗಳ ಮತ್ತು ವಿಶಾಲವಾದಂತಹ ಪ್ರದೇಶ. ಉತ್ತರ ಮತ್ತು ದಕ್ಷಿಣಕ್ಕೆ ಬೆಟ್ಟಗುಡ್ಡಗಳು ಇದ್ದು, ಇವೆರಡರ ಮಧ್ಯೆ ಜಲಾಶಯವನ್ನು ನಿರ್ಮಿಸಲಾಗಿದೆ. ಪಶ್ಚಿಮ ಭಾಗದ ಹಳ್ಳಗಳ ಮೂಲಕ ನೀರು ಬಂದು ಇಲ್ಲಿ ಸಂಗ್ರಹಗೊಳ್ಳುತ್ತದೆ.

ಇದಕ್ಕೆ ಜಿನಿಗೆಹಳ್ಳ, ಚಿನಹಗರಿಗಳ ಮುಖಾಂತರ ನೀರು ಇಲ್ಲಿಗೆ ಬಂದು ಸೇರುತ್ತದೆ. ಮಳೆಗಾಲದಲ್ಲಿ ಮಾತ್ರ ತುಂಬಿ ಹರಿಯುವ ಇವುಗಳನ್ನು ಹಗರಿ, ಚಿಕ್ಕಹಗರಿ, ಸಣ್ಣ ಹಗರಿ ಮತ್ತು ಜನ್ನಿಗೆಹಳ್ಳವೆಂದು ಕರೆಯುವರು. ಇಲ್ಲಿ ಮೀನು ಸಾಕಾಣಿಕೆ, ನೀರಾವರಿ ವ್ಯವಸ್ಥೆ ಮತ್ತು ಪಶುಪಾಲನೆಗೆ ಬಹಳಷ್ಟು ಅನುಕೂಲವಾಗಿದೆ. ಈ ಜಲಾಶಯದಿಂದ ರೈತರ ಜಮೀನುಗಳಿಗೆ ಬಹಳಷ್ಟು ಅನುಕೂಲವಾಗಿದ್ದು, ಅದು ಹೆಚ್ಚಾಗಿ ಈ ಜಲಾಶಯ ಭರ್ತಿಯಾಗುವುದನ್ನು ಅವಲಂಬಿಸಿದೆ. ಈ



ಜಲಾಶಯದ ನೀರನ್ನು ಸುಮಾರು ೩೦.ಕಿ.ಮೀ.ಗಳ ವರೆಗೂ ಜನರಿಗೆ ಕುಡಿಯುವ ನೀರು ಪೂರೈಕೆ ಮಾಡುವ ಉದ್ದೇಶವಿದೆ. ಆದರೆ ಅದಿನ್ನು ಸಕಾರಗೊಂಡಿಲ್ಲ. ಈ ಜಲಾಶಯದ ನೀರಿನಿಂದ ಭತ್ತ, ರಾಗಿ, ಹತ್ತಿ, ರೇಷ್ಮೆ, ಮೆಕ್ಕೆಜೋಳ, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಈ ಜಲಾಶಯವು ತುಂಬಿದ ನಂತರ ಮೊಳಕಾಲ್ಮೂರು ತಾಲ್ಲೂಕಿನ ಮಾರ್ಗವಾಗಿ ಆಂಧ್ರಪ್ರದೇಶದಲ್ಲಿ ವೇದಾವತಿಯೊಂದಿಗೆ ಸೇರಿ ಹರಿದು ಅಂತಿಮವಾಗಿ ಸಿರುಗುಪ್ಪ ತಾಲ್ಲೂಕಿನಲ್ಲಿ ತುಂಗಾಭದ್ರಾ ನದಿಯನ್ನು ಸೇರುತ್ತದೆ.

**೬೮. ಐಮಂಗಳ ಕೆರೆ**

ಐಮಂಗಳ ಗ್ರಾಮವು ಹಿರಿಯೂರು ತಾಲ್ಲೂಕಿನಲ್ಲಿದೆ. ಇದು ತಾಲೂಕು ಕೇಂದ್ರದಿಂದ ವಾಯುವ್ಯಕ್ಕೆ ೧೮ ಕಿ.ಮೀ. ದೂರದಲ್ಲಿದ್ದು, ಇಲ್ಲಿ ವೀರಶೈವ ಧರ್ಮದ ಐಯ್ಯನೋರ್ವನ ಹೆಸರಿನಲ್ಲಿ ಕೋಟೆ ಕಟ್ಟಿಸಿದ್ದರಿಂದ ಈ ಊರಿಗೆ ಐಮಂಗಳ ಎಂದು ಹೆಸರಾಗಿದೆ ಎಂದು ಸ್ಥಳೀಯರು ಹೇಳುತ್ತಾರೆ. ಚಾರಿತ್ರಿಕ ನೆಲೆಯಾದ ಇಲ್ಲಿ ಆಧುನಿಕ ಕಾಲದಲ್ಲಿ ನಿರ್ಮಿಸಿದ (ಕ್ರಿ.ಶ.೨೦ನೇ ಶತಮಾನ) ಕೆರೆ ಇದೆ. ಈ ಗ್ರಾಮದಲ್ಲಿ ಕಲ್ಲುಂಟಮ್ಮ, ಆಂಜನೇಯ, ಗಣೇಶ ಮೊದಲಾದ ದೇವಾಲಯಗಳಿವೆ. ಅಲ್ಲದೇ ಇಲ್ಲಿ ಕೆಲ ವೀರಗಲ್ಲು, ಶಾಸನಗಳು ಹಾಗೂ ಕೋಟೆ ಮತ್ತು ಇತರೆ ಪ್ರಾಚ್ಯಾವಶೇಷಗಳಿವೆ.

ಇಲ್ಲಿನ ಕೆರೆಯನ್ನು ಕರ್ನಾಟಕ ಸರ್ಕಾರದ ಜಲಸಂಪನ್ಮೂಲ ಹಾಗೂ ಸಣ್ಣ ನೀರಾವರಿ ಇಲಾಖೆಯವರು ಸರ್ಕಾರಿ ಅನುದಾನದಲ್ಲಿ ಈ ಕೆರೆಯನ್ನು ಇತ್ತೀಚಿಗೆ ದುರಸ್ತಿ ಮಾಡಿಸಿದ್ದಾರೆ. ಪ್ರಸಕ್ತ ಕೆರೆ ಬರಿದಾಗಿದ್ದು, ಇದರಲ್ಲಿ ಹೂಳು ತುಂಬಿದೆ. ಸರಿಯಾದ ನಿರ್ವಹಣೆ ಇಲ್ಲದ ಕಾರಣ ಸಾಕಷ್ಟು ಗಿಡಮರಗಳು ಬೆಳದು ಅದು ಅಲ್ಲಲ್ಲಿ ಶಿಥಿಲವಾಗಿದೆ. ಕೆರೆಯ ಒಳ ಭಾಗಕ್ಕೆ ಸಮಗಾತ್ರದ ಬೆಣೆಯಾಕಾರದ (WEDGE SHAFE) ಕಗ್ಗಲ್ಲು ಮತ್ತು ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸು ಮಣ್ಣನ್ನು (ಗ್ರಾವೆಲ್) ಬಳಸಿ ಇಲ್ಲಿನ ಏರಿಯನ್ನು ನಿರ್ಮಿಸಲಾಗಿದೆ. ಕೆರೆ ಏರಿಯು ಅಂಕು-ಡೊಂಕಿನ ಆಕಾರದಲ್ಲಿದೆ. ಇಲ್ಲಿ ಪ್ರತಿ ವರ್ಷ ೪೩೮.೦೦ ಮಿ.ಮೀ. ಮಳೆಯಾಗುತ್ತದೆ. ಚೌಕಕಾರದ ತೂಬನ್ನು ಇಲ್ಲಿ ಮಾಡಲಾಗಿದೆ. ಈ ಕೆರೆ ಸ್ಲೋಪಿಂಗ್ ಎಪ್ರಾನ್ ಮಾದರಿಯ ಕೋಡಿಯನ್ನು ಹೊಂದಿದೆ. ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ಕಾಲುವೆ ಮತ್ತು ತೂಬುಗಳಿವೆ. ಎಡದಂಡೆ ಕಾಲುವೆ ಉದ್ದ ೯.೦೦ ಕೀ.ಮೀ. ಇದೆ. ಕೆರೆಯ ಕೋಡಿಯ ಬಳಿ ಕಲ್ಲುಂಟಮ್ಮ ಗುಡಿಯಿದ್ದು, ಅದರ ಬಳಿ ನಾಗ ಪ್ರತಿಮೆಗಳಿವೆ. ಹಿಂದೆ ಈ ಕೆರೆಯ ನೀರನ್ನು ಬಳಸಿಕೊಂಡು ರೈತರು ತೆಂಗು, ರಾಗಿ, ಹತ್ತಿ, ಭತ್ತದ ಬೆಳೆಗಳನ್ನು ಬೆಳೆಯುತ್ತಿದ್ದರು. ಉತ್ತಮ ಮಳೆ ಬಂದು ಕೆರೆ ಭರ್ತಿಯಾದಲ್ಲಿ ತೆಂಗು, ಜೋಳ, ಶೇಂಗಾ, ಭತ್ತ ಹಾಗೂ ತರಕಾರಿ ಮತ್ತು ಇತರೆ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

ಚಿತ್ರದುರ್ಗ ಪಾಳೆಯಗಾರರು ತಮ್ಮ ಶೌರ್ಯ, ಸಾಹಸ, ಔದಾರ್ಯಗಳಿಗೆ ಪ್ರಸಿದ್ಧರಾಗಿದ್ದಂತೆ ಪ್ರಜಾಹಿತ ಕಾರ್ಯಗಳಿಗೂ ಹೆಸರಾಗಿದ್ದಾರೆ. ಅವರ ಪ್ರಜಾಹಿತ ಕಾರ್ಯಗಳಲ್ಲಿ ಕೆರೆಗಳ ನಿರ್ಮಾಣ ಮತ್ತು ದುರಸ್ತಿ ಕಾರ್ಯಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿರುವುದನ್ನು ನಾವು ಗುರುತಿಸಬಹುದು. ಅವರಲ್ಲಿ ಮೊದಲನೆಯ ಪಾಳೆಯಗಾರ ತಿಮ್ಮಣ್ಣ ನಾಯಕನಿಂದ ಹಿಡಿದು, ಕೊನೆಯ ಪಾಳೆಯಗಾರ

ಮದಕರಿ ನಾಯಕನವರೆಗೆ ಅನೇಕ ನಾಯಕರು, ಹಲವಾರು ಕೆರೆಗಳ ನಿರ್ಮಾಣ, ವಿಸ್ತರಣೆ ಹಾಗೂ ಜೀರ್ಣೋದ್ಧಾರಗಳನ್ನು ಮಾಡಿ ಪ್ರಜಾತತ್ವರರೆನಿಸಿರುತ್ತಾರೆ. ತಿಮ್ಮಣ್ಣ ನಾಯಕನಿಂದ ನಿರ್ಮಿತವಾದ ತಿಮ್ಮಣ್ಣನಾಯಕ ಕೆರೆ[೫೨] ಮತ್ತು ಅವನ ಮಗ ಓಬಣ್ಣ ನಾಯಕ ಅರ್ಥಾತ್ ೧ನೇ ಮದಕೇರಿ ನಾಯಕನಿಂದ ನಿರ್ಮಾಣವಾದ ಹೊರಕೆರೆ ದೇವರಪುರದ ಬಳಿಯ ಗುಂಡಿಕೆರೆ ಮತ್ತು ಹುಲ್ಲೂರು ಗ್ರಾಮದ ಕೆರೆ ಅದೇ ರೀತಿ ೨ನೇ ಮದಕೇರಿ ನಾಯಕನು ತನ್ನ ತಾಯಿಯ ಹೆಸರಿನಲ್ಲಿ ನಿರ್ಮಿಸಿದ ಓದೋತಿಮ್ಮವ್ವನ ಕೆರೆ ಮತ್ತು ತನ್ನ ಮಗಳು ಕೆಂಚವ್ವನ ಹೆಸರಿನಲ್ಲಿ ನಿರ್ಮಿಸಿದ ಕೆಂಚವ್ವನ ಕೆರೆ ಮತ್ತು ಜನಿಗೆ ಹಳ್ಳಕ್ಕೆ ಹಾಕಿಸಿದ ಜನಿಗೆ ಕೆರೆಗಳು ಪ್ರಮುಖವಾಗಿವೆ.[೫೩]

ಅದೇರೀತಿ ಬಿಚ್ಚುಗತ್ತಿ ಭರಮಣ್ಣ ನಾಯಕ (ಕ್ರಿ.ಶ.೧೬೮೯-೧೭೨೧). ತನ್ನ ಕಾಲದಲ್ಲೇ ಸುಮಾರು ಇಪ್ಪತ್ತು ಕೆರೆಗಳನ್ನು ನಿರ್ಮಿಸಿ ಕೆರೆ ನಿರ್ಮಾತೃ ಎಂದು ಖ್ಯಾತನಾಗಿದ್ದಾನೆ. ಈತ ಚಿತ್ರದುರ್ಗದ ಮುರುಗಿಮಠದ ಎರಡು ಕೆರೆಗಳ ನಿರ್ಮಾಣ ಮತ್ತು ಭೀಮಸಮುದ್ರದ ಕೆರೆಯ ಜೀರ್ಣೋದ್ಧಾರ ಮಾಡಿದ. ಇವುಗಳ ಜೊತೆಗೆ ಇಟ್ಟಿಗಹಳ್ಳಿ ಬಳಿ ಲಿಂಗವ್ವನಾಗತಿಹಳ್ಳಿ ಕೆರೆ, ಚಿತ್ರಹಳ್ಳಿ ಸೀಮೆಯ ಹಂಗನಾರದ ಕೆರೆ[೫೪], ಕೆಸರಹಳ್ಳಿ ಬಳಿ ಕಣಿವೆಗೆ ಹಾಕಿಸಿದ ಮದಕೇರಿ ನಾಯಕನ ಕೆರೆ, ಕಸ್ತೂರಿ ರಂಗಪ್ಪ ನಾಯಕನ ಕೆರೆ[೫೫], ಅಣಜಿ ಕೆರೆ[೫೬], ಜಂಪಾಳ ನಾಯಕನಕೋಟಿ ಕೆರೆ, ಮದಕೇರಿ ನಾಯಕನ ಕೋಟಿ ಕೆರೆ, ಚಿಕ್ಕಸಿದ್ದವ್ವನಾಗತಿಹಳ್ಳಿ ಕೆರೆ[೫೭], ಹಂಣೆಹಾಳು(ಅನ್ನೆಹಾಳು) ಗ್ರಾಮದ ಚಿಕ್ಕಸಿದ್ದವ್ವನ ನಾಗತಿ ಕೆರೆ, ಅಲಗಟ್ಟದ ಬಳಿ ಹುಚ್ಚವ್ವನಾಗತಿ ಕೆರೆ, ಹುಚ್ಚವ್ವನಹಳ್ಳಿ ಕೆರೆ, ಜಗಲೂರು ಸೀಮೆಯ ಭರಸಮುದ್ರದ ಕೆರೆ, ಮಾಯಿಕೊಂಡದ ಸೀಮೆಯ ಭರಮಸಾಗರದ ಕೆರೆ, ಕುರುಬರ ಮರಡಿ ಕೆರೆ, ಕುರುಬರ ಹಳ್ಳಿ ಗ್ರಾಮದ ಬಳಿ ಚಿಕ್ಕಪಾಲವ್ವನ ಕೆರೆ[೫೮], ದ್ಯಾಮವ್ವನ ಕೆರೆ ಇವುಗಳ ಜೊತೆಗೆ ಈತ ಅನೇಕ ಹೊಂಡಗಳ ನಿರ್ಮಾಣವನ್ನು ಸಹ ಮಾಡಿದ.



ಕೊನೆಯ ಮದಕೇರಿ ನಾಯಕ (ಕ್ರಿ.ಶ.೧೭೫೪-೭೯) ಸಿದ್ಧಾಪುರದ ಕೆರೆ ಮತ್ತು ಲಿಂಗದಹಳ್ಳಿ ಕೆರೆ, ಇವುಗಳ ಕಾಮಗಾರಿಯನ್ನು ಮಾಡಿಸಿದಂತೆ, ಈ ನಾಯಕರಷ್ಟೇ ಅಲ್ಲದೆ, ಅವರ ದಳವಾಯಿಗಳು, ಅಧಿಕಾರಿ ವರ್ಗದವರು ಕೂಡಾ ಕೆಲವು ಕೆರೆಗಳನ್ನು ಮಾಡಿಸಿದ್ದಂತೆ ದಾಖಲೆಗಳು ಹೇಳುತ್ತವೆ. ಉದಾಹರಣೆಗೆ, ಸಂತೆ ಮುದ್ದಾಪುರ ಗ್ರಾಮದ ಕೆರೆಯನ್ನು ಮಾಡಿಸಿದವನು ದಳವಾಯಿ ಮುದ್ದಣ್ಣ ಎಂಬುದನ್ನು ಇಲ್ಲಿ ಹೆಸರಿಸಬಹುದು. ಚಿತ್ರದುರ್ಗ ಪಾಳೆಯಗಾರರ ಇತಿಹಾಸದಲ್ಲಿ ಒಂದು ಭಯಾನಕ ಅವಧಿಯಲ್ಲಿ ಸೃಷ್ಟಿಸಿದವನೆಂದು ಕುಖ್ಯಾತನಾಗಿರುವ ಈ ದಳವಾಯಿ ಮುದ್ದಣ್ಣ ಕೂಡಾ ಕೆಲವು ಪ್ರಜಾಹಿತ ಕಾರ್ಯಗಳನ್ನು ಮಾಡಿದ್ದನೆಂಬುದನ್ನು ಅವುಗಳಿಗೆ ಈ ಕೆರೆಯ ನಿರ್ಮಾಣವು ಸೇರಿತ್ತೆಂಬುದನ್ನು ಇಲ್ಲಿ ನೆನೆಯಬಹುದು. ಈ ಮೇಲಿನ ಎಲ್ಲಾ ವಿವರದಿಂದ ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಿ ಕೈಗೊಳ್ಳಲಾದ ಹೊಸ ಕೆರೆಗಳ ನಿರ್ಮಾಣ ಮತ್ತು ಹಳೆ ಕೆರೆಗಳ ಪುನರುಜ್ಜೀವನ ಕಾರ್ಯ ಎಷ್ಟು ವ್ಯಾಪಕವಾಗಿತ್ತು, ಕೆರೆಗಳ ಕಾಮಗಾರಿ ಕೂಡಾ ಎಷ್ಟು ಕೌಶಲ ಪೂರ್ಣವಾಗಿತ್ತು ಎಂದು ಸ್ಪಷ್ಟವಾಗಬಹುದು.[೫೯] ಕೆರೆಯಿಂದ ತೂಬಿನ ಮೂಲಕ ಕಾಲುವೆಗೆ ನೀರು ಹಾಯಿಸುವುದು, ಗದ್ದೆ ಭೂಮಿಗಳಿಗೆ ಆ ನೀರು ಸರಿಯಾಗಿ ವಿತರಣೆಯಾಗುವಂತೆ ನೋಡಿಕೊಳ್ಳುವುದು, ಈ ಕೆಲಸಕ್ಕಾಗಿಯೇ ನೀರಗಂಟಿ ಎಂಬ ಸ್ಥಾನವೊಂದನ್ನು ಕಲ್ಪಿಸಿದ್ದರು. ಅಲ್ಲದೆ ಅವರನ್ನು ಗ್ರಾಮಾಡಳಿತದ ವ್ಯವಸ್ಥೆಯಲ್ಲಿ ೧೨ ಜನ ಕೈವಾಡದವರು ಎಂದು ಅಂದು ಕರೆಯಲಾಗುತ್ತಿದ್ದ, ಪ್ರಮುಖರಲ್ಲಿ ನೀರಗಂಟಿಯೂ ಒಬ್ಬನಾಗಿರುತ್ತಿದ್ದ ಎಂದರೆ, ಕೆರೆ ಕಾಲುವೆಗಳ ನಿರ್ವಹಣೆಯನ್ನು ನೋಡಿಕೊಳ್ಳುತ್ತಿದ್ದ ವ್ಯಕ್ತಿಗೆ ಪಾಳೆಯಗಾರ ಪ್ರಭುತ್ವ ಎಂತಹ ಪ್ರಾಶಸ್ತ್ಯವನ್ನೂ ನೀಡಿತ್ತು ಎಂಬುದು ಸ್ಪಷ್ಟವಾಗುತ್ತದೆ. ಇದು ಚಿತ್ರದುರ್ಗ ಸಂಸ್ಥಾನದ ಉದ್ಯೋಗ ಸೃಷ್ಟಿಯ ಹಾಗೂ ಆರ್ಥಿಕ ಸುಧಾರಣೆಯ ಮತ್ತು ಸರ್ಕಾರದ ಬೊಕ್ಕಸಕ್ಕೆ ಗಣನೀಯ ಆದಾಯದ ಮೂಲವು ಮತ್ತು ಆಡಳಿತ ನೀತಿಯಾಗಿತ್ತು.[೬೦]

ಚಿತ್ರದುರ್ಗ ಪಾಳೆಯಗಾರರಂತೆಯೇ ಹಟ್ಟಿ ಪಾಳೆಯಗಾರರು ಕೆರೆ ನೀರಾವರಿಗೆ ವಿಶೇಷ ಆಧ್ಯತೆ ಕೊಟ್ಟಿದ್ದರು. ಇವರು ಕ್ರಿ.ಶ.೧೫ನೇ ಶತಮಾನದಿಂದ ಹಟ್ಟಿಯನ್ನು ಕೇಂದ್ರವಾಗಿಸಿಕೊಂಡು ಆಳ್ವಿಕೆ ನಡೆಸಿ ಹಟ್ಟಿ ಪಾಳೆಯಗಾರರೆಂದೇ ಹೆಸರಾದವರು ಇವರನ್ನು ಚರಿತ್ರೆಯಲ್ಲಿ ನಾಯಕನಹಟ್ಟಿ ಪಾಳೆಯಗಾರರು ಎಂದು ಗುರುತಿಸಲಾಗುತ್ತದೆ. ಇವರಲ್ಲಿ ಪ್ರಸಿದ್ಧನಾದವನೆಂದರೆ, ಬೋಡಿ ಮಲ್ಲಪ್ಪನಾಯಕ. ವಿಜಯನಗರ ಸಾಮ್ರಾಟರು ಆಳುತ್ತಿದ್ದ ಕಾಲದಲ್ಲಿದ್ದ ಈತ ಕೆಲವು ಕೆರೆಗಳನ್ನು ನಿರ್ಮಿಸಿದ. ಅವುಗಳಲ್ಲಿ ಆನೆಗುಂದಿಯಲ್ಲಿ ಭೀಮ ಎಂಬ ಹೆಸರಿನ ಜಟ್ಟಿಯೊಬ್ಬನನ್ನು ಸೋಲಿಸಿದ್ದರ ನೆನಪಿಗೆ, ತಾನು ಕಟ್ಟಿಸಿದ ಒಂದು ಕೆರೆ 'ಭೀಮನ ಕೆರೆ' ಎಂತಲೂ, ಆ ಜಟ್ಟಿಯನ್ನು ಗೆದ್ದದ್ದಕ್ಕೆ ತನ್ನನ್ನು ಸನ್ಮಾನಿಸಿದ ಆನೆಗುಂದಿ (ವಿಜಯನಗರ) ರಾಯರ ನೆನಪಿಗೆ ಇನ್ನೊಂದು ಕೆರೆಗೆ 'ರಾಮಸಾಗರ' ಎಂತಲೂ ಹೆಸರಿಟ್ಟನು. ಇವಲ್ಲದೆ, ಹಿರೇಕೆರೆ, ಚಿಕ್ಕಕೆರೆ, ಹೊಸಕೆರೆ, ವರನಿನಕೆರೆ, ನಾಯ್ಕನಕೆರೆ ಇವು ಸೇರಿ ಒಟ್ಟು ಏಳು ಕೆರೆಗಳನ್ನು ಕಟ್ಟಿಸಿದ ಎನ್ನುವ ವಿವರ ಅವರ ವಂಶಾವಳಿಯಲ್ಲಿ ದಾಖಲಾಗಿದೆ.[೬೧] ಬೋಡಿ ಮಲ್ಲಪ್ಪನಾಯಕ ಕಟ್ಟಿಸಿದ್ದೆಂದು ಸ್ಪಷ್ಟವಾಗಿ ಉಲ್ಲೇಖಿತವಾಗಿರುವ ಕೆರೆಯನ್ನು ಗುರು ತಿಪ್ಪೇರುದ್ರ ಸ್ವಾಮಿಗಳು ಕಟ್ಟಿಸಿದ್ದೆಂದು ಹೇಳುವ ಐತಿಹ್ಯಗಳು ಇಲ್ಲಿ ದೊರೆಯುತ್ತವೆ.[೬೨] ಇದೇ ಪಾಳೆಯಗಾರ ಮನೆತನಕ್ಕೆ ಸೇರಿದ ಕಸ್ತೂರಿ ಮಲ್ಲಪ್ಪ ನಾಯಕನು ತನ್ನ ತಾಯಿ ಲಕ್ಷ್ಮಮ್ಮ ನಾಗತಿಯ

ಹೆಸರಲ್ಲಿ ಮೊಳಕಾಲ್ಮೂರು ಬೆಟ್ಟದ ಮೇಲೆ ಒಂದು ಕೆರೆಯನ್ನು ಕಟ್ಟಿಸಿದ್ದಾಗಿ ತಿಳಿದು ಬರುತ್ತದೆ. ಇದರ ಬಗ್ಗೆ ಹೆಚ್ಚಿನ ಸಂಗತಿ ಲಭ್ಯವಿಲ್ಲ.

ಚಿತ್ರದುರ್ಗದ ಪೂರ್ವದಲ್ಲಿದ್ದ ಹರತಿಯನ್ನು ಕೇಂದ್ರವಾಗಿಸಿಕೊಂಡು ಆಳಿದವರೇ ಹರತಿ ಪಾಳೆಯಗಾರರು.[೬೩] ಇವರು ಸಹ ಕೆಲವು ಕೆರೆ ಕಾಲುವೆಗಳ ನಿರ್ಮಿಸಿ ಪ್ರಜೆಗಳಿಗೆ ಅನುಕೂಲ ಕಲ್ಪಿಸಿದ್ದರು. ಈ ವಂಶದ ಹರತಿ ಚಿಕ್ಕಪ್ಪನಾಯಕ[೬೪], ಬೇವಿನಹಳ್ಳಿ ಎಂಬ ಗ್ರಾಮದ ತಿರುವಂಗಳನಾಥ ದೇವರ ಪುರ ವರ್ಗವಾದ ಮೈಲೇನಹಳ್ಳಿ ಎಂಬ ಗ್ರಾಮದಲ್ಲಿ ಹಗರೆ ತೊರೆಯ ಕಾಲುವೆಯನ್ನು ತರಲಿಕ್ಕಾಗಿ ಪ್ರಾಯಶಃ ಆ ದೇವರ ಸ್ಥಾನಿಕರಿಗೆ (ಎಲ್ಲಪ್ಪನಾಯಕನಿಗೆ) ಗದ್ದೆಯೊಂದನ್ನು ಮಾನ್ಯವಾಗಿ ನೀಡಿದ್ದ ಪ್ರಸ್ತಾಪ ಮೈಲೇನಹಳ್ಳಿ ಗ್ರಾಮದ ಬಳಿಯ ಕಾಲುವೆಯ ದಡದ ಹುಟ್ಟು ಬಂಡೆಯ ಮೇಲಿರುವ ಶಾಸನದಲ್ಲಿದೆ.[೬೫] ಈ ಹಗರೆ ತೊರೆ ಎನ್ನುವುದು ವೇದಾವತಿ ನದಿ ಎಂದು ಸ್ಪಷ್ಟ. ಈ ನದಿಯಿಂದ ಕಾಲುವೆಯನ್ನು ತರಲಿಕ್ಕಾಗಿ ನಡೆದ ಪ್ರಯತ್ನ ಊರ್ಜಿತವಾದದ್ದನ್ನು ಈಗಲೂ ಇರುವ ಆ ಕಾಲುವೆ ಸಾದರಪಡಿಸುತ್ತದೆ. ಇಲ್ಲಿನ ಮತ್ತೊಂದು ಶಾಸನದಿಂದ ಬೇವಿನಹಳ್ಳಿ ಗ್ರಾಮದ ಸ್ಥಾನಿಕರೊಬ್ಬರಿಗೆ ಹನುಮಂತ ದೇವರಿಗೆ ನೀಡಲಾದ ಭೂಮಿ ಹರತಿಯ ಕೆರೆ ಹಾಗೂ ಕಾಲುವೆಯ ವ್ಯಾಪ್ತಿಯಲ್ಲಿ ಸೇರಿದ್ದಂತೆ ಕಂಡುಬರುವುದರಿಂದ ಇನ್ನೂ ಬೇರೆ ಬೇರೆಯ ಕೆರೆಗಳು, ಕಾಲುವೆಗಳು ಹರತಿ ಪ್ರಾಂತ್ಯದಲ್ಲಿದ್ದವೆಂದು ವ್ಯಕ್ತವಾಗುತ್ತದೆ.[೬೬]

ಚಿತ್ರದುರ್ಗಕ್ಕೆ ದಕ್ಷಿಣದಲ್ಲಿ ಹಿಂದೆ ಆಗಿಹೋದ ಚಿಕ್ಕ ಪಾಳೆಯಪಟ್ಟುಗಳಲ್ಲಿ ಮತ್ತೋಡನ್ನು ಕೇಂದ್ರವಾಗಿಸಿಕೊಂಡು ಆಳ್ವಿಕೆ ಮಾಡಿದ ಮತ್ತೂಡು ಪಾಳೆಗಾರರು ಸಹ ಮುಖ್ಯರಾಗಿದ್ದಾರೆ. ಕ್ರಿ.ಶ.೧೭ನೇ ಶತಮಾನದ ಆರಂಭದಿಂದ ೧೮ನೇ ಶತಮಾನದ ಉತ್ತರಾರ್ಧದವರೆಗೆ ಆಳಿದ "ಮತ್ತೋಡು ನಾಯಕರು ಕೃಷಿಗೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದರು. ಕೃಷಿಗಾಗಿ ಕೆರೆ ಕಾಲುವೆಗಳನ್ನು ಕಟ್ಟಿಸಿದ್ದಲ್ಲದೆ, ಹಳೆಯದಾದ ಮತ್ತು ಹೂಳು ತುಂಬಿದ ಕೆರೆಗಳನ್ನು ಜೀರ್ಣೋದ್ಧಾರ ಮಾಡಿದರು ಎನ್ನುವ ಸಂಗತಿಗಳು ಸಮಕಾಲೀನ ದಾಖಲೆಗಳಿಂದ ಸ್ಪಷ್ಟವಾಗುತ್ತದೆ.[೬೭]

ಮತ್ತೋಡಿನಲ್ಲಿ ನಿರ್ಮಾಣವಾಗಿದ್ದ ಮುಖ್ಯವಾದ ಎರಡು ಕೆರೆಗಳಿದ್ದು, ಅದರಲ್ಲಿ ಹಳಿಕೆರೆ (ಹಳೇಕೆರೆ?) ಬಹುದೊಡ್ಡದಾಗಿದೆ.[೬೮] ಕೆರೆಯ ನೀರನ್ನು ಕೃಷಿಗೆ ಬಳಕೆ ಮಾಡಿಕೊಳ್ಳುವುದು ಸಾಧಾರಣ ಸಂಗತಿಯಾದರೂ, ಮತ್ತೋಡಿನಲ್ಲಿ ಕೋಟೆಯನ್ನು ಸುತ್ತುವರಿದಿದ್ದ ಕಂದಕಗಳನ್ನು ತುಂಬಲೂ ಅಲ್ಲಿನ ಕೆರೆ ನೀರನ್ನು ಬಳಸಲಾಗುತ್ತಿತ್ತೆಂದು ಹೇಳಲಾಗಿರುವುದು ಒಂದು ವಿಶೇಷ ಸಂಗತಿ ಎನ್ನಬಹುದು. ಮತ್ತೋಡಿನ ಕೆರೆಯ ಬಗ್ಗೆ ಈಗ್ಗೆ ಎರಡು ಶತಮಾನಗಳಷ್ಟು ಹಿಂದೆ ಬ್ರಟಿಷ್ ಸರ್ವೇಕ್ಷಣಾಧಿಕಾರಿಯೊಬ್ಬ ಹೇಳಿರುವ ಮಾತು ಇಲ್ಲಿ ಉಲ್ಲೇಖನೀಯವೆನಿಸುತ್ತದೆ. "ಮತ್ತೋಡು ಕಣಿವೆಯಲ್ಲಿ ನೆಲೆಸಿದೆ. ಅದರ ನೆರೆಯಲ್ಲೇ ಅಲ್ಪ ಖರ್ಚಿನಲ್ಲಿ ಚೆನ್ನಾಗಿ ಅಭಿವೃದ್ಧಿ ಪಡಿಸಬಹುದಾದ ಒಂದು ಒಳ್ಳೆಯ ಜಲಾಶಯವಿದೆ. ಮಳೆಗಾಲ ಬೇಗನೇ ಪ್ರಾರಂಭವಾದರೆ, ಈ ಕೆರೆ ವರ್ಷದಲ್ಲಿ ಎರಡು ಬೆಳೆಗಳಿಗೆ ನೀರುಣಿಸಬಲ್ಲದು. ಒಂದು ಬೆಳೆಗಂತೂ ಎಂದಿಗೂ ಮೋಸವಿಲ್ಲ. ರೈತರು ಕೆರೆ ಭರ್ತಿಯಾಗುವವರೆಗೂ ವ್ಯವಸಾಯವನ್ನು ಪ್ರಾರಂಭಿಸುವುದಿಲ್ಲ.[೬೯]

ಕ್ರಿ.ಶ.೧೫ನೇ ಶತಮಾನದ ಮಧ್ಯದಲ್ಲಿ ಕೆಲವೇ ದಶಕಗಳ ಕಾಲ ಪ್ರಭುತ್ವ ನಡೆಸಿ, ಮರೆಯಾಗಿ ಹೋದವರು "ಬೂದಿಹಾಳು ಪಾಳೆಯಗಾರರು". ಚಿತ್ರದುರ್ಗಕ್ಕೆ ದಕ್ಷಿಣದಲ್ಲಿ (ಹಿಂದೆ ಹೇಳಿದ ಮತ್ತೋಡಿಗೆ ಸಮೀಪದಲ್ಲೇ) ಬೂದಿಹಾಳು(ಈಗಿನ ಹೆಸರು ರಾಂಪುರ) ಪಟ್ಟಣವನ್ನು ಕೇಂದ್ರವಾಗಿಸಿ ಕೊಂಡು ಆಳಿದ ಈ ಪಾಳೆಯಗಾರರಲ್ಲಿ ಅತ್ಯಂತ ಪ್ರಸಿದ್ಧನಾದವನು ಸಿರುಮ. ಇವನನ್ನು ಸಿರುಮಯ್ಯ ಸಿರುಮಣನಾಯಕ, ಸಿರುಮಯ್ಯ ನಾಯಕ ಎಂದೂ ಕರೆಯಲಾಗಿದೆ.[೬೦]

ಚಿಕ್ಕ ಪಾಳೆಯಪಟ್ಟಾಗಿದ್ದರೂ, "ಬೂದಿಹಾಳು ಸಮೃದ್ಧ ಕೃಷಿಯ ರಾಜ್ಯವಿದ್ದಿರಬೇಕು. ತೆಂಗು, ಅಡಕೆ, ಬಾಳೆ, ಕಿತ್ತಳೆ, ಹಲಸು ಮುಂತಾದ ತೋಟಗಳಿಂದ ಸಮೃದ್ಧವಾಗಿತ್ತೆಂದು ಕವಿಗಳು ಹೇಳಿರುವುದು ಅತಿಶಯೋಕ್ತಿಯಂತೆ ತೋರುವುದಿಲ್ಲ. ಸಮೃದ್ಧ ಕೃಷಿಯಿಂದ ರಾಜ್ಯದ ಬೊಕ್ಕಸಕ್ಕೆ ಸಾಕಷ್ಟು ಕರದ ಆದಾಯವೂ ಇದ್ದಿರಬೇಕು.[೬೧] ಚಿಕ್ಕಂಗಳ, ಹಿರಿಯಂಗಳ ಎಂಬುವುಗಳಿಂದ ಲಕ್ಷ ತೆರಿಗೆ ಸಲ್ಲುತ್ತಿತ್ತೆಂದು ಹೇಳಲಾಗಿದೆ. ಆ ಗ್ರಾಮಗಳು ಅಂಥ ಬೃಹತ್ ಮೊತ್ತದ ಆದಾಯವನ್ನು ನೀಡುವಂತಾಗಿದ್ದುದಕ್ಕೆ ಅದರ ಕೃಷಿಯ ಬೃಹತ್ ಪ್ರಮಾಣವೇ ಕಾರಣ ಎಂದೂ, ಅಂಥ ದೊಡ್ಡ ಪ್ರಮಾಣದ ಉತ್ಪನ್ನಕ್ಕೆ ಪ್ರಾಯಶಃ ಅವುಗಳ ನೆರೆಯ ಕೆರೆಗಳೇ ಕಾರಣವೆಂದೂ ಭಾವಿಸಿದಲ್ಲಿ ತಪ್ಪಾಗಲಾರದು. "ಹೊಸದುರ್ಗ ಪ್ರಾಂತದಲ್ಲಿ ಅನೇಕ ಉತ್ತಮ ಕೆರೆಗಳಿವೆ. ಅವುಗಳಲ್ಲಿ ಬಹುತೇಕ ಕೆರೆಗಳು ಸಿರುಮಯ್ಯನ ವಂಶದ ಆಳ್ವಿಕೆಯ ಕಾಲದಲ್ಲಿ ರಚನೆಗೊಂಡವು" ಎಂದು ಹಿಂದೆ ಹೇಳಿದ ಅದೇ ಬ್ರಿಟಿಷ್ ಸರ್ವೇಕ್ಷಣಾಧಿಕಾರಿ ಬರೆದಿರುವುದು ಬಹುಶಃ ಅವನ ಕಾಲದಲ್ಲಿ ಜನ ಹಾಗೆ ಹೇಳುತ್ತಿದ್ದಿರಬೇಕು. ಚಿಕ್ಕ ಪಾಳೆಯಟ್ಟುಗಳ ಪಾಳೆಯಗಾರರು ಕೂಡಾ ತಮ್ಮ ಪ್ರಾಂತದ ಕೃಷಿ ಅಭಿವೃದ್ಧಿಗೊಳ್ಳಬೇಕೆಂದು, ಕೆರೆ ನೀರಾವರಿ ವ್ಯವಸ್ಥೆಗೆ ಎಷ್ಟೊಂದು ಗಮನಕೊಟ್ಟಿದ್ದರೆಂದು ವ್ಯಕ್ತವಾಗುತ್ತದೆ. "ಹಿಂದುಸ್ಥಾನದ ಇತರ ದೇಶಗಳನ್ನು ಬಿಟ್ಟು ಈ ಮೈಸೂರು ಸೀಮೆ ಮಟ್ಟಿಗೆ ವಿಚಾರ ಮಾಡಿ ನೋಡಿದರೆ, ಲೋಕೋಪಕಾರಾರ್ಥವಾಗಿಯೂ, ಪ್ರಜಾಸಂರಕ್ಷಣೆಯ ಸೌಭಾಗ್ಯಕ್ಕಾಗಿಯೂ, ಪಾಳೆಯಗಾರರು ಹಿಂದಿನ ಕಾಲದಲ್ಲಿ ಮಾಡಿರತಕ್ಕ ಮಹತ್ಕಾರ್ಯಗಳನ್ನು ಚಕ್ರವರ್ತಿಗಳೆನ್ನಿಸಿಕೊಂಡು ಆಳುತ್ತಿದ್ದ ಅನೇಕರು ಮಾಡಿಲ್ಲವೆಂಬುದಾಗಿ ಹಿಂದುಸ್ಥಾನದ ಸ್ಥಿತಿಯನ್ನು ಕಂಡವರೆಲ್ಲ ಧೈರ್ಯವಾಗಿ ಹೇಳಬಹುದೆಂದು ತೋರುತ್ತಿದೆ" ಎಂಬ ಮಾತಿನಲ್ಲಿ ಉತ್ಪ್ರೇಕ್ಷೆ ಇರುವಂತೆ ಕಾಣುವುದಿಲ್ಲ.[೬೨]

ಚಿತ್ರದುರ್ಗ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ವಿವಿಧ ರಾಜ ಮನೆತನಗಳು ಹಾಗೂ ಪಾಳೆಯಗಾರರು ಮತ್ತು ಅಧಿಕಾರಿಗಳು, ಶ್ರೀಮಂತರು ಕೆರೆ ನೀರಾವರಿಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ಹಲವು ಕೆರೆಗಳನ್ನು ನಿರ್ಮಿಸಿದ್ದು, ಅವುಗಳ ಸಹಾಯದಿಂದ ಜಿಲ್ಲೆಯ ಚಾರಿತ್ರಿಕ ಕೆರೆಗಳ ನಿರ್ಮಾಣದ ಕಾಲಾನುಕ್ರಮ ಮತ್ತು ಅವುಗಳ ಬೆಳವಣಿಗೆಯನ್ನು ಗುರುತಿಸಲು ಸಾಧ್ಯವಿದೆ. ಈ ಬೆಳವಣಿಗೆಯನ್ನು ಸ್ಪಷ್ಟವಾಗಿ ಗುರುತಿಸಲು ಮೇಲಿನ ವಿವರಗಳು ನಮಗೆ ಸಹಾಯಕವಾಗುತ್ತವೆ. ಚಂದ್ರವಳ್ಳಿ, ಸಂಗೇನಹಳ್ಳಿ, ಅಶೋಕ ಸಿದ್ಧಾಪುರ, ದೊಡ್ಡ ಉಳ್ಳಾರ್ತಿ, ದೊಡ್ಡೇರಿ, ನುಂಕಪ್ಪನಗುಡ್ಡದ ಹಳೆಕೆರೆ, ಧರ್ಮಪುರ ಮೊದಲಾದಡೆ ಪ್ರಾಚೀನ ಕಾಲಘಟ್ಟಕ್ಕೆ ಸೇರಿದ ಅಂದರೆ ಶಾತವಾಹನ, ಮೌರ್ಯ, ಗಂಗ, ಕದಂಬ, ನೊಳಂಬ, ಚಾಲುಕ್ಯರ ಕಾಲಾವಧಿಯ ಕೆಲವು ಕೆರೆಗಳಿವೆ. ಅದೇ ರೀತಿ ತಾಳ್ಯ, ಜಾನಕಲ್,

ಶಿವಗಂಗೆ, ಬಾಗೂರು, ನಾಯಕನಹಟ್ಟಿ, ಚಿತ್ರದುರ್ಗ, ಸಾಣಿಕೆರೆ, ಚಳ್ಳಕೆರೆ, ಭರಮಸಾಗರ, ಭೀಮಸಮುದ್ರ, ಐಮಂಗಳ, ಕಸ್ತೂರಿ ರಂಗಪ್ಪನಹಳ್ಳಿ, ಬಬ್ಬೂರು, ವಾಣಿ ವಿಲಾಸಪುರ, ಮೆಟಿಕುರ್ಕೆ ಮೊದಲಾದಡೆ ಮಧ್ಯಯುಗೀನ ಕಾಲಕ್ಕೆ ಸೇರಿದ ಅಂದರೆ ಕಲ್ಯಾಣಿ ಚಾಲುಕ್ಯ, ಹೊಯ್ಸಳ, ಸೇವುಣ, ವಿಜಯನಗರ ಮತ್ತು ಪಾಳೆಯಗಾರರು ನಿರ್ಮಿಸಿದ ಕೆರೆಗಳಿವೆ. ಅದರಂತೆ ತಮ್ಮೇನಹಳ್ಳಿ, ನಾಗಸಮುದ್ರ, ರಾಣಿಕೆರೆ, ಚಳ್ಳಕೆರೆ, ಪರಶುರಾಂಪುರ, ಮೈಲನಹಳ್ಳಿ, ಸೊರವ್ವನಹಳ್ಳಿ, ಪಗಡಲಬಂಡೆ, ಬಬ್ಬೂರು ಮತ್ತು ಇತರೆಡೆ ಆಧುನಿಕ ಮತ್ತು ಸಮಕಾಲೀನ ಕೆರೆಗಳಿವೆ.

ಇತರೆ ರಾಜರಂತೆ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ಚಿತ್ರದುರ್ಗ, ಹಟ್ಟಿ (ನಾಯಕನ ಹಟ್ಟಿ), ಹರತಿ (ಹರ್ತಿಕೋಟೆ), ಬೂದಿಹಾಳು(ಶ್ರೀರಾಂಪುರ), ಮತ್ತೋಡು ಸ್ಥಳಗಳಿಂದ ಆಳ್ವಿಕೆ ಮಾಡಿದ ಪಾಳೆಯಗಾರರು ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಹಲವು ಕೆರೆಗಳನ್ನು ಕಟ್ಟಿಸಿದ್ದಾರೆ. ಅವರ ಕಾಲದಲ್ಲಾದ ಕೆರೆಗಳಲ್ಲಿ ಕೆಲವು ಈಗಲೂ ಇದ್ದು, ಜನೋಪಯುಕ್ತವಾಗಿವೆ. ಈ ಮೇಲಿನ ವಿಶ್ಲೇಷಣೆಯಿಂದ ಚಿತ್ರದುರ್ಗ ಮತ್ತು ಅದರ ಸುತ್ತಲಿನ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ಇದ್ದ ಕೆರೆ ನೀರಾವರಿ ವ್ಯವಸ್ಥೆಯ ಒಂದು ಸ್ಥೂಲ ಚಿತ್ರಣ ನಮಗೆ ಲಭ್ಯವಾಗುತ್ತದೆ. ಇದರಿಂದ ನಮ್ಮ ಹಿರಿಯರು ನೀರಾವರಿಗೆ ಕೊಟ್ಟ ಪ್ರಾಶಸ್ತ್ಯ ಸ್ಪಷ್ಟವಾಗುತ್ತದೆ. ಜಿಲ್ಲೆಯಲ್ಲಿ ಈಗಲೂ ಸಹ ಕೆಲವು ತಾಲ್ಲೂಕುಗಳು ಮಳೆಯ ಅಭಾವದಿಂದ ಆಗಾಗ ಬರಕ್ಕೆ ಸಿಲುಕುತ್ತಿವೆ. ಈ ಪ್ರಮಾಣವನ್ನು ಇಲ್ಲಿರುವ ಕೆರೆಗಳು ಸ್ವಲ್ಪಮಟ್ಟಿಗೆ ತಗ್ಗಿಸಿವೆ ಎಂದರೆ ಅತಿಶಯೋಕ್ತಿಯಾಗಲಾರದು. ಜಿಲ್ಲೆಯ ವಾಣಿವಿಲಾಸ ಸಾಗರ, ಗಾಯತ್ರಿ ಜಲಾಶಯ, ರಾಣಿಕೆರೆ, ರಂಗಯ್ಯನದುರ್ಗ ಜಲಾಶಯ, ಸಂಗೇನಹಳ್ಳಿ ಜಲಾಶಯ, ಇವೇ ಮೊದಲಾದ ಜಲಾಶಯಗಳು ಇಲ್ಲಿನ ನೀರಿನ ಸಮಸ್ಯೆಯನ್ನು ಆದಷ್ಟು ಕಡಿಮೆ ಮಾಡಿವೆ. ಆದ್ದರಿಂದ ಇಲ್ಲಿರುವ ಕೆರೆ ನೀರಾವರಿ ವ್ಯವಸ್ಥೆಯನ್ನು ಇನ್ನಷ್ಟು ಅಭಿವೃದ್ಧಿಪಡಿಸಿ ಚಿತ್ರದುರ್ಗ ಜಿಲ್ಲೆಯ ಕೃಷಿ ಕ್ಷೇತ್ರವನ್ನು ಮತ್ತಷ್ಟು ವಿಸ್ತರಿಸುವ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಭದ್ರ ಮೇಲ್ದಂಡೆ ಯೋಜನೆ ಜಿಲ್ಲೆಗೆ ಒಂದು ವರದಾನವಾಗಬಲ್ಲದು.

**ಕೊನೆ ಟಿಪ್ಪಣಿಗಳು**

೧. ಸತ್ಯನ್, ಬಿ.ಎನ್. (ಸಂ), ೧೯೬೭, ಚಿತ್ರದುರ್ಗ ಜಿಲ್ಲೆಯ ಗ್ಯಾಸೆಟಿಯರ್, ಪು. ೧೧೭.

೨. ಅದೇ, ಪು.೧೨೧.

೩. ಅದೇ, ಪು.೧೩೭. ಮತ್ತು ಸಣ್ಣ ನೀರಾವರಿ ಇಲಾಖೆ, ಚಿತ್ರದುರ್ಗ ಇವರು ನೀಡಿದ ಮಾಹಿತಿ

೪. ನಾಗರಾಜ, ಟಿ.ವಿ., ೨೦೧೧, 'ಚಿತ್ರದುರ್ಗ ಜಿಲ್ಲೆಯ ಶಾಸನೋಕ್ತ ಕೆರೆ ನೀರಾವರಿ', ಇತಿಹಾಸ ದರ್ಶನ, ಸಂ.೧೭, ಪು.೨೬೯–೨೭೨.

೫. ಎಂ.ಎ.ಆರ್. ೧೯೨೯, ಸಂಖ್ಯೆ ೧. ಮತ್ತು Vatsala Iyengar, ೨೦೧೦, Tanks of Karnataka *A historical perspective* ಪು.೧–೮

೬. ರೈಸ್, ಬಿ.ಎಲ್. (ಸಂ), *ಎಪಿಗ್ರಾಫಿಯಾ ಕರ್ನಾಟಿಕ,* ಸಂ.XI, ಚಿತ್ರದುರ್ಗ ಜಿಲ್ಲೆ, ಹಿರಿಯೂರು ೩೩.

೭. ಅದೇ, *ಎಪಿಗ್ರಾಫಿಯಾ ಕರ್ನಾಟಿಕ,* ಸಂ.XI, ಚಿತ್ರದುರ್ಗ ೫೦.

೮. ಅದೇ, *ಎಪಿಗ್ರಾಫಿಯಾ ಕರ್ನಾಟಿಕ,* ಸಂ.XI, ಹೊಳಲ್ಕೆರೆ ೬೫.

೯. ಅದೇ, *ಎಪಿಗ್ರಾಫಿಯಾ ಕರ್ನಾಟಿಕ,* ಸಂ.XI, ಚಳ್ಳಕೆರೆ ೪೦.

೧೦. ಅದೇ, *ಎಪಿಗ್ರಾಫಿಯಾ ಕರ್ನಾಟಿಕ,* ಸಂ.XI, ಚಳ್ಳಕೆರೆ ೧೨.

೧೧. ಅದೇ, *ಎಪಿಗ್ರಾಫಿಯಾ ಕರ್ನಾಟಿಕ,* ಸಂ.XI, ಹರಿಹರ ೫೨.

೧೨. ಅದೇ, *ಎಪಿಗ್ರಾಫಿಯಾ ಕರ್ನಾಟಿಕ,* ಸಂ.XI, ಮೊಳಕಾಲ್ಮೂರು ೩೨.

೧೩. ಅದೇ, *ಎಪಿಗ್ರಾಫಿಯಾ ಕರ್ನಾಟಿಕ,* ಸಂ.XI, ಮೊಳಕಾಲ್ಮೂರು ೧೫.

೧೪. ಅದೇ, *ಎಪಿಗ್ರಾಫಿಯಾ ಕರ್ನಾಟಿಕ,* ಸಂ.XI, ಚಿತ್ರದುರ್ಗ ೭೩.

೧೫. ರೈಸ್, ಬಿ.ಎಲ್., (ಸಂ), *ಪೂರ್ವೋಕ್ತ, ದಾವಣಗೆರೆ, ಸಂ.೪೪* ಮತ್ತು ಹೊಳಲ್ಕೆರೆ. ೭೨.

೧೬. ಬಿ.ರಾಜಶೇಖರಪ್ಪ, 'ಚಂದ್ರವಳ್ಳಿ ಶಾಸನದ ಮೇಲೆ ಹೊಸಬೆಳಕು', ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪು. ೪೯-ಸಂಚಿಕೆ ೨, ಡಿಸೆಂಬರ್ ೧೯೮೪, ಪು. ೮೯-೧೦೦.

೧೭. ರೈಸ್, ಬಿ.ಎಲ್.(ಸಂ), *ಪೂರ್ವೋಕ್ತ,* ಮೊಳಕಾಲ್ಮೂರು ೪.

೧೮. ಅದೇ, *ಪೂರ್ವೋಕ್ತ,* ಮೊಳಕಾಲ್ಮೂರು ೫.

೧೯. ಗಿರಿಜಾ ಟಿ., ೧೯೮೭, ಚಿತ್ರದುರ್ಗ ಜಿಲ್ಲೆ ದರ್ಶನಿ, ಪು.೧೩೨

೨೦. ರೈಸ್, ಬಿ.ಎಲ್.(ಸಂ), *ಪೂರ್ವೋಕ್ತ,* ಚಳ್ಳಕೆರೆ, ೩.

೨೧. ರೈಸ್, ಬಿ.ಎಲ್.(ಸಂ), *ಪೂರ್ವೋಕ್ತ,* ಚಳ್ಳಕೆರೆ, ೪೯

೨೨. ಅದೇ, ಚಳ್ಳಕೆರೆ, ೮೮

೨೩. ಅದೇ, ಚಳ್ಳಕೆರೆ, ೩೮

೨೪. ನಾಯಕ ಹಾ.ಮ., ೧೯೭೯, ಕನ್ನಡ ವಿಷಯ ವಿಶ್ವಕೋಶ, ಪು.೮೪೭.

೨೫. ಎಕ ೧೧, ಚಿತ್ರದುರ್ಗ ೧೨.

೨೬. ರೈಸ್, ಬಿ.ಎಲ್.(ಸಂ), ಪೂರ್ವೋಕ್ತ, ಚಳ್ಳಕೆರೆ, ೧೨

೨೭. ಗಿರಿಜಾ ಟಿ., ಹೊನ್ನೆಕೆರೆ, ೨೭

೨೮. ಎ.ಕ. ೧೧, ಚಿತ್ರದುರ್ಗ ೨೮

೨೯. ಹುಲ್ಲೂರು ಶ್ರೀನಿವಾಸ ಜೋಯಿಸರು(ಸಂ), ೧೯೬೮, ಚಿತ್ರದುರ್ಗದ ಬಖೈರು ಪು.೮೩.- ಬರಗೆರೆಯ ವ್ಯಾಪ್ತಿಯಲ್ಲಿರುವ ಆ ಕೆರೆಯ ದೇವತೆ ಬರಗೇರಮ್ಮನ ಉಲ್ಲೇಖ ಅಲ್ಲಿ ಬಂದಿರುವುದುನ್ನು ಗಮನಿಸಬೇಕು. ಮತ್ತು ಈಗ ಅಲ್ಲಿ ನೆಹರೂ ನಗರ, ಕಲಾ ಕೌಸ್ತುಭ ನಗರ, ಇಂತಹ ಬಡಾವಣೆಗಳಾಗಿ ಬೆಳೆಯುತ್ತಿವೆ.

೩೦. ರಾಜಶೇಖರಪ್ಪ, ಬಿ. 'ಪೆರುಮಾಳೆದೇವ ದಣ್ಣಾಯಕನ ಕೆಲವು ಹೊಸ ಶಾಸನಗಳು ೨' ಸತ್ಯಶುದ್ಧ ಕಾಯಕ, ೩: ೧-೨, ಸೆಪ್ಟಂಬರ್ ೧೯೯೨-ಫೆಬ್ರವರಿ ೧೯೯೩. ಚಿತ್ರದುರ್ಗ ಪು.೧೩೮.

೩೧. ಬಾಗೂರು ನಾಗರಾಜಪ್ಪ, ೧೯೮೪, ಹೊಸದುರ್ಗದ ಸುತ್ತ, ಪು.೬೭

೩೨. ಅದೇ, ಪು.೫೭

೩೩. ಗಿರಿಜಾ ಟಿ., ಪೂರ್ವೋಕ್ತ, ಪು.೧೨೭

೩೪. ಎಂ.ಎ.ಆರ್., ೧೯೪೨, ಪು.೪೮

೩೫. ರೈಸ್, ಬಿ.ಎಲ್.(ಸಂ), ಎಪಿಗ್ರಾಫಿಯಾ ಕರ್ನಾಟಕ, XI, ಹೊಸದುರ್ಗ, ೩೭

೩೬. ಅದೇ, ದಾವಣಗೆರೆ ೬೬-೬೭, ಕಾಲ ಕ್ರಿ.ಶ.೧೩೫೪

೩೭. ಅದೇ, ಹೊಳಲ್ಕೆರೆ, ೧೨೧

೩೮. ಅದೇ, ಹೊಳಲ್ಕೆರೆ ೮೮ ಮತ್ತು ೧೨೨

೩೯. ಅದೇ, ಹಿರಿಯೂರು, ೨೫

೪೦. ಅದೇ, ಹಿರಿಯೂರು, ೩೭

೪೧. ಅದೇ, ಹಿರಿಯೂರು, ೩೫

೪೨. ಗಿರಿಜಾ ಟಿ., ಚಿಕ್ಕಜಾಜೂರು, ಪು.೧೪೭

೪೩. ಕಲಬುರ್ಗಿ ಎಂ.ಎಂ(ಸಂ), ಸಾರಂಗಶ್ರೀ, ೧೯೯೪, ಬಿ.ರಾಜಶೇಖರಪ್ಪ, ಬೂದಿಹಾಳು ಪಾಳೆಯಗಾರರು, ಪು.೨೩೯

೪೪. ಕಲಬುರ್ಗಿ ಎಂ.ಎಂ(ಸಂ), ಸಾರಂಗಶ್ರೀ, ಯಶೋಧ ರಾಜಶೇಖರಪ್ಪ, ಮತ್ತೋಡು ಪಾಳೆಯಗಾರರು, ಪು.೨೫೫

೪೫. ಲಕ್ಷ್ಮಣ್ ತೆಲಗಾವಿ ಇತರರು(ಸಂ), ೧೯೮೦, ಚಿತ್ರದುರ್ಗದರ್ಶನಿ, ಪು.೪೫

೪೬. ವಸು ಎಂ.ವಿ.(ಸಂ), ೨೦೦೧, ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಮೀರಾಸಾಬಿನಹಳ್ಳಿ ಶಿವಣ್ಣ, ನಾಯಕನಹಟ್ಟಿ ಪಾಳೆಯಗಾರರು, ಪು.೮೬

೪೭. ಲಕ್ಷ್ಮಣ್ ತೆಲಗಾವಿ, ಪೂರ್ವೋಕ್ತ, ಪು.೪೫

೪೮. ಸಾಣಿಕೆರೆ ರಘು, ೨೦೧೩, ನಮ್ಮೂರ ಸೊಬಗು, ಪು.೧೯

೪೯. ಲಕ್ಷ್ಮಣ್ ತೆಲಗಾವಿ, ೨೦೦೨, ದೊಡ್ಡೇರಿ ಕದನ, ಪು.೩೯

೫೦. ಸತ್ಯನ್ ಬಿ.ಎನ್, ಪೂರ್ವೋಕ್ತ, ಪು.೧೨೨

೫೧. ಸಣ್ಣ ನೀರಾವರಿ ಇಲಾಖೆ ದಾಖಲೆ ಮತ್ತು ಎ ಹ್ಯಾಂಡ್ ಬುಕ್ ಆಫ್ ಚಿತ್ರದುರ್ಗ, ಪು.೭– ೮

೫೨. ಚಿತ್ರದುರ್ಗ ಪಾಳೆಯಗಾರರ ವಂಶಾವಳಿಗಳಲ್ಲಿ ಈ ವಿವರ ಬರುತ್ತದೆ. ಆದರೆ "ಕಾಮಗೇತಿ ಕಸ್ತೂರಿ ರಂಗಪ್ಪನಾಯಕನ ಪುತ್ರ ಮದಕರಿನಾಯಕನ ಆಳ್ವಿಕೆಯಲ್ಲಿ ಆಡೂರೂ ಮಲ್ಲಪ್ಪನೆಂಬಾತ ಈ ಕೆರೆಯನ್ನು ಕಟ್ಟಿಸಿದ". ಲಕ್ಷ್ಮಣ್ ತೆಲಗಾವಿ ಮತ್ತು ಇತರರು(ಸಂ.), ೧೯೮೦, ಚಿತ್ರದುರ್ಗ ದರ್ಶಿನಿ, ಪು.೪೫.

೫೩. ಚಿತ್ರದುರ್ಗದ ಬಖೈರು, *ಪೂರ್ವೋಕ್ತ,* ಪು. ೧೦೮.

೫೪. ಎಕ ೧೧, ಹೊಳಲ್ಕೆರೆ ೧೨೧.

೫೫. ಎಕ ೧೧, ಚಳ್ಳಕೆರೆ ೧೨.

೫೬. ಅದೇ, ದಾವಣಗೆರೆ ೨೩.

೫೭. ಅದೇ, ದಾವಣಗೆರೆ ೨೩

೫೮. ಅದೇ, ಚಿತ್ರದುರ್ಗ ೪೭.

೫೯. ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಾದ ಹೊಂಡಗಳ ನಿರ್ಮಾಣದ ಆಶ್ಚರ್ಯಕರ ತಾಂತ್ರಿಕ ಕೌಶಲಕ್ಕೆ ಒಂದು ಉದಾಹರಣೆಯನ್ನು ಇಲ್ಲಿ ಉಲ್ಲೇಖಿಸಬೇಕು: ಭರಮಣ್ಣನಾಯಕನ ಕಾಲದಲ್ಲಿ ಆದ ಒಂದು ಪ್ರಖ್ಯಾತವಾದ ಹೊಂಡ 'ಸಂತೆಹೊಂಡ'. ಭಾರೀ ಪ್ರಮಾಣದ ಈ ಹೊಂಡಕ್ಕೆ, ನೈರುತ್ಯದಲ್ಲಿ ಸುಮಾರು ಅರ್ಧ ಕಿಲೋಮೀಟರಿಗೂ ಹೆಚ್ಚು ದೂರದಲ್ಲಿರುವ (ಉಚ್ಚಂಗಿ ಬಾಗಿಲ ಬಳಿಯಿರುವ) 'ಸಿಹಿನೀರು ಹೊಂಡ' ದಿಂದ ಗುಪ್ತಕಾಲುವೆ (ಅಥವಾ ಸುರಂಗ) ಮೂಲಕ ನೀರು ಹರಿದು ಬರುವಂತೆ ಮಾಡಲಾಗಿತ್ತು ಎಂದು ಪರಂಪರೆಯಿಂದ ಹೇಳಲಾಗುತ್ತಿದೆ. ಸಂತೆಹೊಂಡದಲ್ಲಿ ಪಶ್ಚಿಮ ಬದಿಯಿಂದ ಇಳಿಯುವ ಕಡೆ ಬಲಕ್ಕೆ ಸುರಂಗದ್ದೆನ್ನುವ ಬಾಗಿಲೊಂದು ಈಗಲೂ ಇದೆ. ಕಲ್ಲು ಮಣ್ಣುಗಳಿಂದ ಮುಚ್ಚಿ ಹೋಗಿರುವ ಅದನ್ನು ಸರ್ಕಾರದ ಪ್ರಾಚ್ಯವಸ್ತು ಇಲಾಖೆ ಉತ್ಖನನದ ಮೂಲಕ ಪರಿಶೋಧನೆ ಮಾಡಿಸಿದರೆ, ಅದರ ಬಗೆಗೆ ಇನ್ನೂ ಹೆಚ್ಚಿನ ಮತ್ತು ಖಚಿತ ಸಂಗತಿ ಬೆಳಕಿಗೆ ಬರಲು ಸಾಧ್ಯವಾಗುತ್ತದೆ.

೬೦. ಪುಟ್ಟಣ್ಣ, ಎಂ.ಎಸ್. ೧೯೨೩, ಪಾಳೆಯಗಾರರು, ಪು.೭೬-೭೭.

೬೧. ಪ್ರಭಾಕರ್ ಎಂ.ಎನ್. (ಸಂ), 'ನಾಯಕನಹಟ್ಟಿ ಬಖೈರು', ಮತ್ತು ಶ್ರೀನಿವಾಸ್ ಎಂ.ವಿ., ಲಕ್ಷ್ಮಣ್ ತೆಲಗಾವಿ(ಸಂ), ೧೯೭೬, ಚಂದ್ರವಳ್ಳಿ, ಭಾಗ ೪, ಪು. ೩೧. ಸಂಪಾದಕರು ಈ ಆಕರವನ್ನು 'ನಾಯಕನಕಟ್ಟಿ ಬಖೈರು' ಎಂದು ಕರೆದಿದ್ದಾರೆ. ಆದರೆ, ಇದನ್ನು 'ನಾಯಕನಹಟ್ಟಿ ದೊರೆಗಳ ವಂಶಾವಳಿ' ಅಥವಾ 'ನಾಯಕನಹಟ್ಟಿ ಪಾಳೆಯಗಾರರ ವಂಶಾವಳಿ' ಎಂದು ಕೆರೆಯುವುದು ಸೂಕ್ತ ಎಂದು ಡಾ ರಾಜಶೇಖರಪ್ಪನವರು ಅಭಿಪ್ರಾಯಪಟ್ಟಿದ್ದಾರೆ.

೬೨. ಮೀರಾಸಾಬಿಹಳ್ಳಿ ಶಿವಣ್ಣ ಅಥವಾ 'ನಾಯಕನಹಟ್ಟಿ ಪಾಳೆಯಗಾರರು', ವಸು.ಎಂ.ವಿ (ಸಂ.), ೨೦೦೧, ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು. ೮೬. ಈ ಕೆರೆ ಕಟ್ಟುವಾಗ ಕೆಲಸ ಮಾಡಿದ ಕೂಲಿಕಾರರು ಸಂಜೆ ಕೆಲಸ ಮುಗಿಸಿದಾಗ, ಸ್ವಾಮಿಗಳು ಅವರಿಗೆ ಒಂದೊಂದು ಮಣ್ಣಿನ ಗುಪ್ಪೆ ಮಾಡಿಕೊಳ್ಳಲು ಹೇಳಿ, ಆ ಗುಪ್ಪೆಗಳ ಮೇಲೆ ತಮ್ಮ ಬೆತ್ತವನ್ನು ಆಡಿಸಿ, 'ಶಿವನೆ, ಮಾಡಿದವರಿಗೆ ನೀಡು ಭಿಕ್ಷೆ' ಎನ್ನುತ್ತಿದ್ದರು. ಆಗ ಅವರುಗಳು ತಮ್ಮ ತಮ್ಮ ಗುಪ್ಪೆಯನ್ನು ಕೆದರಿದರೆ ಅವರವರ ಶ್ರಮಕ್ಕೆ ತಕ್ಕಂತೆ ಅವರಿಗೆ ಹೊನ್ನು ಅಲ್ಲಿ ಸಿಕ್ಕುತ್ತಿತ್ತು. ಏನೂ ಶ್ರಮಪಡದ ಮೈಗಳ್ಳರಿಗೆ ಏನೂ ಸಿಗುತ್ತಿರಲಿಲ್ಲ. ಬಸುರಿಯರಿಗೆ (ಹೊಟ್ಟೆಯೊಳಗಿನ ಶಿಶುವೂ ಕಾಯಕಪ್ಪದಲ್ಲಿ ಭಾಗಿಯಾದದ್ದರಿಂದ) ಇಮ್ಮಡಿ ಹೊನ್ನು ಸಿಕ್ಕುತಿತ್ತು. ಹೀಗೆಂದು ಪಾರಂಪರಿಕವಾಗಿ ಹೇಳುತ್ತಿರುವ ಐತಿಹ್ಯವೊಂದಿದೆ.

೬೩. ಪುಟ್ಟಣ್ಣ, ಎಂ.ಎಸ್. ಪೂರ್ವೋಕ್ತ, ಪು.೭೭.

೬೪. ಎ.ಕ. ೧೧, ಮೊಳಕಾಲ್ಮೂರು, ೩೭.

೬೫. ಎ.ಕ. ೧೧, ಚಳ್ಳಕೆರೆ, ೧೩.

೬೬. ಎ.ಕ. ೧೧, ಚಳ್ಳಕೆರೆ, ೧೪

೬೭. ಕಲಬುರ್ಗಿ ಎಂ.ಎಂ. (ಸಂ), ೧೯೯೪, ಸಾರಂಗ ಶ್ರೀ, ಯಶೋಧಾ ರಾಜಶೇಖರಪ್ಪ, 'ಮತ್ತೋಡು ಪಾಳೆಯಗಾರರು', ಪು. ೨೫೫.

೬೮. ಅದೇ, ಮತ್ತು ಬಾಗೂರು ಆರ್.ನಾಗರಾಜಪ್ಪ, ಹೊಸದುರ್ಗದ ಸುತ್ತ, ಹೊಸದುರ್ಗ, ೧೯೮೪, ಪು. ೬೭.

೬೯. Francies Buchanan, 1988, A Journey from Madras through Mysore, Canara and Malabar, Vol III, P-367.

೭೦. ಕಲಬುರ್ಗಿ ಎಂ.ಎಂ. (ಸಂ), ೧೯೯೪, ಪೂರ್ವೋಕ್ತ, ಬಿ.ರಾಜಶೇಖರಪ್ಪ, 'ಬೂದಿಹಾಳು ಪಾಳೆಯಗಾರರು', ಪು. ೨೩೯ ಮತ್ತು ಕಲಬುರ್ಗಿ ಎಂ.ಎಂ.(ಸಂ), ೧೯೯೧, ಸಿರುಮನ ಚರಿತೆ, ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಪದ್ಯ ೩-೧೯.

೭೧. ಅದೇ, ೩೭೯

೭೨. ಪುಟ್ಟಣ್ಣ, ಎಂ.ಎಸ್. ಪೂರ್ವೋಕ್ತ, ಪು. ೭೬.

ಅಧ್ಯಾಯ ಆರು

# ಚಿತ್ರದುರ್ಗ ಜಿಲ್ಲೆಯ ಕೆರೆಗಳ ಆಡಳಿತ ನಿರ್ವಹಣಾ ವ್ಯವಸ್ಥೆ

೬.೧. ಕೃಷಿ–ನೀರಾವರಿ ವ್ಯವಸ್ಥೆ

೬.೨. ನೀರಿನ ತೆರಿಗೆ ವ್ಯವಸ್ಥೆ ಮತ್ತು ಬಳಕೆದಾರರು

೬.೩. ಜಲ ನಿರ್ವಹಣೆ ಮತ್ತು ಆಯಗಾರ ಪದ್ಧತಿ

೬.೪. ಸ್ಥಳೀಯ ಆಡಳಿತ ವ್ಯವಸ್ಥೆ ಮತ್ತು ಕೆರೆಗಳು

೬.೫. ಕೆರೆ ಮೀನುಗಾರಿಕೆ ಮತ್ತು ಇತರೆ ವೃತ್ತಿಗಳು

ಅಧ್ಯಾಯ ಆರು

# ಚಿತ್ರದುರ್ಗ ಜಿಲ್ಲೆಯ ಕೆರೆಗಳ ಆಡಳಿತ ನಿರ್ವಹಣಾ ವ್ಯವಸ್ಥೆ

ಜನರ ಅವಶ್ಯಕತೆ, ಬೇಡಿಕೆ ಹಾಗೂ ನೀರಿನ ಉಪಯುಕ್ತತೆಯನ್ನು ಗಮನದಲ್ಲಿಟ್ಟುಕೊಂಡು ಚಿತ್ರದುರ್ಗ ಪ್ರದೇಶದಲ್ಲಿ ಆಳಿದ ಪ್ರಭುಗಳು, ಶ್ರೀಮಂತರು, ಅಧಿಕಾರಿಗಳು ಇಲ್ಲಿ ಕಾಲಕಾಲಕ್ಕೆ ಅನೇಕ ಕೆರೆ, ಬಾವಿ, ಹೊಂಡಗಳನ್ನು ನಿರ್ಮಿಸಿದ್ದಾರೆ. ಹಾಗೆಯೇ ಹಾಳಾದವುಗಳನ್ನು ಜೀರ್ಣೋದ್ಧಾರ ಮಾಡಿಸಿದ್ದಾರೆ. ಹಿಂದೆ ಅವರು ಕಲ್ಪಿಸಿದ ಈ ನೀರಾವರಿ ವ್ಯವಸ್ಥೆ ಇಂದಿಗೂ ಸಹ ಎಷ್ಟೋ ಕಡೆ ಉಳಿದು ಬಂದಿದ್ದು, ಈಗಲೂ ಪ್ರಯೋಜನಕಾರಿಯಾಗಿವೆ. ಚಿತ್ರದುರ್ಗ ಜಿಲ್ಲೆಯ ಪರಿಸರದಲ್ಲಿ ಹಿಂದಿನ ಕಾಲದಲ್ಲಿ ಕೆರೆಗಳ ಮೂಲಕ ರೂಪಿಸಲಾದ ನೀರಾವರಿ ವ್ಯವಸ್ಥೆ ಹೇಗಿತ್ತು? ಮತ್ತು ಅವುಗಳ ಆಡಳಿತ ನಿರ್ವಹಣಾ ವ್ಯವಸ್ಥೆ ಹೇಗಿತ್ತು ಎನ್ನುವುದನ್ನು ಹಾಗೂ ಈ ಪ್ರದೇಶದ ಬೆಳವಣಿಗೆಯಲ್ಲಿ ಕೆರೆಗಳ ಪಾತ್ರ ಏನು? ಎನ್ನುವುದನ್ನು ಚಾರಿತ್ರಿಕ ಆಕರಗಳಾದ ಶಾಸನಗಳು, ವಂಶಾವಳಿಗಳು, ಇತರೆ ಕಾಗದ ಪತ್ರ ದಾಖಲೆಗಳ ಸಹಾಯದಿಂದ ಈ ಮುಂದಿನಂತೆ ವಿಶ್ಲೇಷಿಸಲಾಗಿದೆ.

## ೬.೧. ಕೃಷಿ-ನೀರಾವರಿ ವ್ಯವಸ್ಥೆ

ಬೇಟೆಯ ಮೂಲಕ ಪ್ರಾಣಿ ಪಕ್ಷಿಗಳನ್ನು ಕೊಂದು ಅವುಗಳ ಮಾಂಸವನ್ನು ತಿನ್ನುತ್ತ ವನ್ಯ ಜೀವಿಯಾಗಿ, ಗುಹಾವಾಸಿಯಾಗಿ ಬದುಕುತ್ತಿದ್ದ ಆದಿ ಮಾನವ ಕಾಲಾನುಕ್ರಮದಲ್ಲಿ ನಾಗರಿಕತೆಯತ್ತ ಮುಖ ಮಾಡಿದಾಗ ಅವನ ಬದುಕಿನ ಶೈಲಿಯಲ್ಲಿ ಮಹತ್ತರ ಬದಲಾವಣೆಗಳಾದವು. ಅವುಗಳಲ್ಲಿ ಕೃಷಿ ಮತ್ತು ನೀರಾವರಿ ವ್ಯವಸ್ಥೆಯ ಆವಿಷ್ಕಾರಗಳು ಅತಿ ಮುಖ್ಯವಾಗಿವೆ. ಪ್ರಾಯಶಃ ಆಗಾಗ್ಗೆ ತಲೆದೋರುತ್ತಿದ್ದ ಅನಾವೃಷ್ಟಿಯಿಂದ ಕಂಗಾಲಾಗುತ್ತಿದ್ದ ಅವನು ನಿಧಾನವಾಗಿ ಕಂಡುಕೊಂಡ ನೀರಿನ ನಿರಂತರ ಪೂರೈಕೆಯ ವ್ಯವಸ್ಥೆ, ಬೆಳೆಗಳನ್ನು ಕಾಪಾಡಿಕೊಳ್ಳಲು ಸಾಧ್ಯ ಮಾಡಿತ್ತಲ್ಲದೆ, ಅದರ ಉತ್ಪನ್ನಗಳನ್ನು ನಿಶ್ಚಿತವಾಗಿ ಪಡೆಯಬಹುದೆಂಬ ಭರವಸೆಯನ್ನು ಅವನಲ್ಲಿ ಹುಟ್ಟಿಸಿತು. ಈ ಸುರಕ್ಷಿತತೆಯ ಭಾವನೆ ಮನುಷ್ಯನ ಆತ್ಮವಿಶ್ವಾಸವನ್ನು ಹೆಚ್ಚಿಸಿರಬೇಕು. ಇದೇ ಕಾರಣಕ್ಕಾಗಿಯೇ ಜಗತ್ತಿನಲ್ಲೆಡೆ ಜಲ ಸಂಗ್ರಹಣೆಗೆ ಆದ್ಯತೆ ನೀಡಿ ಕೆರೆ, ಕುಂಟೆ, ಕಟ್ಟೆ, ಕಾಲುವೆ, ಹೊಂಡ, ಬಾವಿ ಮುಂತಾದವುಗಳನ್ನು ಬಹು ಹಿಂದಿನಿಂದ ನಿರ್ಮಿಸಿ ಕೊಂಡಿರುವುದು ಕಾಣಬರುತ್ತದೆ. ಅದೇ ರೀತಿ ಪ್ರಾಚೀನ ಕಾಲದಿಂದಲೂ ಸಹ ಚಿತ್ರದುರ್ಗ ಪ್ರದೇಶದಲ್ಲಿಯೂ ವ್ಯವಸ್ಥಿತವಾದ ಹಾಗೂ ಗಣನೀಯವಾದ ನೀರಾವರಿ ವ್ಯವಸ್ಥೆ ಇದ್ದದ್ದನ್ನು ಗುರುತಿಸಬಹುದು.

ಚಿತ್ರದುರ್ಗ ಪ್ರದೇಶದ ನೀರಾವರಿ ವ್ಯವಸ್ಥೆಯ ಪ್ರಮುಖವೆಂದರೆ ಕೆರೆ ನೀರಾವರಿ ಎನ್ನಬಹುದು೧. ಅದಕ್ಕೆ ಕಾರಣ ಈ ಪ್ರದೇಶದ ಭೌಗೋಳಿಕತೆ ಎಂದರೆ ತಪ್ಪಾಗಲಿಕ್ಕಿಲ್ಲ. ಈ ಪ್ರದೇಶ ಅಲ್ಲಲ್ಲಿ ಗುಡ್ಡಬೆಟ್ಟಗಳಿದ್ದು, ಬಹುತೇಕ ಭಾಗ ಬಯಲುಸೀಮೆ ಎನ್ನುವಂತಿದ್ದರೂ, ಕೆರೆ ನಿರ್ಮಾಣಕ್ಕೆ ಅನುಕೂಲಕರವಾಗುವಂತೆ ಅದು ಅಲ್ಲಲ್ಲಿ ದೊಡ್ಡ ಪ್ರಮಾಣದ ತಗ್ಗು ದಿನ್ನೆಗಳನ್ನು ಹೊಂದಿದೆ. ದೈತ್ಯ ಗಾತ್ರದ ಬಂಡೆ ಗುಂಡುಗಳಿಂದ ತುಂಬಿರುವ ಚಿತ್ರದುರ್ಗದ ಬೆಟ್ಟಗಳಲ್ಲಿ ಅಲ್ಲಲ್ಲಿ ಬಂಡೆಗಳ ಇಡುಕುರುಗಳಲ್ಲಿ ನೀರು ನಿಲ್ಲುವುದಲ್ಲದೆ, ಹೆಚ್ಚು ನೀರು ನಿಲ್ಲದೆ ಹರಿದು ಹೋಗುವಂತಹ ಕೆಲವೆಡೆ ಇಡುಕುರುಗಳಿಗೆ ಅಡ್ಡಗಟ್ಟೆಯನ್ನು ಕಟ್ಟಿ ದೋಣೆಗಳನ್ನು ಅಥವಾ ಪುಟ್ಟ ಜಲಾಶಯಗಳನ್ನು ಮಾಡಿಕೊಂಡಿರುವುದು ಕಾಣುತ್ತದೆ. ಆದರೆ ಅವುಗಳ ನೀರು ಕೇವಲ ಕುಡಿಯುವುದಕ್ಕೆ ಮತ್ತಿತರ ಸಾಮಾನ್ಯ ಉಪಯೋಗಕ್ಕೆ ಹೊರತು, ದೊಡ್ಡ ಪ್ರಮಾಣದಲ್ಲಿ ನೀರು ಬೇಕಾಗುವ ಕೃಷಿಯಂತಹ ಕೆಲಸಕ್ಕೆ ಬಳಸಿರುವ ಸಂಭವ ಅಷ್ಟಾಗಿ ಇರಲಾರದು. ಅದಷ್ಟೇ ಅಲ್ಲ, ಇಲ್ಲಿಯ ಬೆಟ್ಟಗುಡ್ಡಗಳ ನಡುವಿನ ಕಣಿವೆಗಳಲ್ಲಿ ಬೆಟ್ಟದ ಮೇಲೆ ಬಿದ್ದ ಮಳೆ ನೀರು ಒಂದು ಕಾಲಕ್ಕೆ (ಯಾವುದೇ ಅಡ್ಡಗಟ್ಟೆ ಅಥವಾ ಒಡ್ಡು ಏನೂ ಇಲ್ಲದೆ) ಎಲ್ಲೂ ಸಂಗ್ರಹಗೊಳ್ಳದೆ ಸುಮ್ಮನೆ ಹರಿದು ಹೋಗುತ್ತಿದ್ದಿರಬೇಕು. ಆದರೆ ಚಿತ್ರದುರ್ಗ ಬೆಟ್ಟದ ದಕ್ಷಿಣ ಭಾಗದ ಕಣಿವೆಯಲ್ಲಿ ಎತ್ತರವಾದ ಒಡ್ಡು ಹಾಕಿ ನಿರ್ಮಿಸಿರುವ ದೊಡ್ಡಣ್ಣನ ಕೆರೆ, ತಿಮ್ಮಣ್ಣ ನಾಯಕನ ಕೆರೆ, ಕರವರ್ತಿಕೆರೆ, ಹಾಗೆಯೇ ನೈರುತ್ಯ ಪಾರ್ಶ್ವದಲ್ಲಿ ಚಂದ್ರವಳ್ಳಿ ಕೆರೆ, ವಾಯುವ್ಯ ಪಾರ್ಶ್ವದಲ್ಲಿ ಬರಗೆರೆ ಇಂತಹ ಕೆರೆಗಳೂ, ಮೇಲು ಬೆಟ್ಟದ ಮಧ್ಯದಲ್ಲಿ ಗೋಪಾಲಸ್ವಾಮಿ ಹೊಂಡ, ಅಕ್ಕತಂಗಿ ಹೊಂಡ, ಉತ್ತರದಲ್ಲಿ ಉಚ್ಚಂಗಿ ಹೊಂಡ, ಈಶಾನ್ಯದಲ್ಲಿ ನೆಲ ತೋಡಿ ನಿರ್ಮಿಸಿರುವ ಸಂತೆ ಹೊಂಡ, ಇನ್ನೂ ಉತ್ತರದಲ್ಲಿ ಹೀಗೆ ನಿರ್ಮಿಸಲಾದ ಲಿಂಗಣ್ಣವರ್ತಿ ಇವೆ. ಮುಂತಾದ ಕೆರೆಗಳೂ, ಹೊಂಡಗಳೂ ನಿರ್ಮಾಣವಾಗುತ್ತ ಬಂದಂತೆ, ಕಣಿವೆಗಳ ಮಧ್ಯದಿಂದ ವ್ಯರ್ಥವಾಗಿ ಹರಿದು ಹೋಗುತ್ತಿದ್ದ ನೀರು ಅಲ್ಲಲ್ಲಿ ನೆಲೆಗೊಳ್ಳುವಂತಾಗಿರುವುದು ಸ್ಪಷ್ಟವಾಗುತ್ತದೆ. ಮಳೆ ನೀರು ವ್ಯರ್ಥವಾಗಿ ಹರಿದು ಹೋಗದಂತೆಯೂ ಅದು ಉಪಯೋಗಕ್ಕೆ ಸಿಕ್ಕುವಂತೆಯೂ ಮಾಡಿರುವ ಹಿಂದಿನವರ ಯೋಜನಾತ್ಮಕ ದೃಷ್ಟಿ ಹಾಗೂ ಪ್ರಯತ್ನಗಳು ಪ್ರಶಂಸನೀಯವೆನಿಸುತ್ತವೆ.[೨]

ಕೃಷಿಯ ಉಗಮ ಮತ್ತು ವಿಕಾಸ ಅತ್ಯಂತ ಪ್ರಾಚೀನವಾದದ್ದು. ಸರಿಸುಮಾರು ಇಂದಿನಿಂದ ೭೦೦೦ ವರ್ಷಗಳ ಹಿಂದೆ ಮಾನವನು ತನ್ನ ಅಲೆಮಾರಿ ಜೀವನವನ್ನು ಬಿಟ್ಟು ಒಂದು ಸ್ಥಳದಲ್ಲಿ ಸ್ಥಿರವಾಗಿ ನೆಲೆ ನಿಲ್ಲಲು ಪ್ರಾರಂಭಿಸಿದನು. ಈ ಕಾಲಘಟ್ಟವನ್ನು ನವ ಶಿಲಾಯುಗವೆಂದು ಗುರುತಿಸಲ್ಪಟ್ಟಿದೆ. ಇದನ್ನು ಕ್ರಾಂತಿಕಾರಕ ಕಾಲಘಟ್ಟ ಎಂದೂ ಸಹ ಕರೆಯಲಾಗಿದೆ. ಈ ಅವಧಿಯಲ್ಲಿ ಮಾನವ ತನ್ನ ಆಯುಧಗಳಲ್ಲಿ ಬಹಳಷ್ಟು ಸುಧಾರಣೆಗಳನ್ನು ಮಾಡಿಕೊಂಡು ಕೃಷಿಕ ಜೀವನವನ್ನು ಆರಂಭಿಸಿದ. ಮಾನವ ಒಂದೆಡೆ ಸ್ಥಿರವಾಗಿ ನೆಲೆ ನಿಲ್ಲುವ ಅವಶ್ಯಕತೆ ಅವನ ಜೀವನದಲ್ಲಿ ಬಂದದ್ದು ವ್ಯವಸಾಯದಿಂದಲೇ, ಅವರ ಸರ್ವತೋಮುಖ ಅಭಿವೃದ್ಧಿ ಮತ್ತು ವಾಣಿಜ್ಯ ವ್ಯವಹಾರಗಳೆಲ್ಲವೂ ವ್ಯವಸಾಯದ ಆವಿಷ್ಕಾರದಿಂದಲೇ ಪ್ರಾರಂಭಗೊಂಡು ಒಂದು ನಿರ್ದಿಷ್ಟ ಸಂಸ್ಕೃತಿ ಮತ್ತು ವಿಕಾಸಕ್ಕೆ ತಳಹದಿಯಾಯಿತು.

ಮಾನವ ವ್ಯವಸಾಯವನ್ನು ಪ್ರಾರಂಭಿಸಿದಾಗ ಅದಕ್ಕಾಗಿ ಅವನು ಮಳೆ ಮತ್ತು ನದಿಯನ್ನು ಆಶ್ರಯಿಸಿದ್ದನು. ಆದರೆ ಪರಿಸರದಲ್ಲಿ ಆಗುತ್ತಿದ್ದ ಬದಲಾವಣೆಗಳು ಮತ್ತು ಸಕಾಲದ ಮಳೆಯ ವೈಫಲ್ಯತೆ, ಜನಸಂಖ್ಯೆಯ ಹೆಚ್ಚಳದ ಪರಿಣಾಮವಾಗಿ ಹೆಚ್ಚಿನ ಅಹಾರವನ್ನು ಉತ್ಪಾದಿಸಬೇಕಾಯಿತು. ಅದರ ಸಲುವಾಗಿ ಹೆಚ್ಚುವರಿ ಪ್ರದೇಶವನ್ನು ವ್ಯವಸಾಯಕ್ಕೆ ಒಳಪಡಿಸಬೇಕಾಯಿತು. ಆಗ ನದಿ ಪ್ರದೇಶಗಳಿಂದ ಬಯಲು ಪ್ರದೇಶಕ್ಕೆ ಕೃಷಿ ಭೂಮಿಯನ್ನು ವಿಸ್ತಾರಗೊಳಿಸಬೇಕಾಯಿತು. ಇದರಿಂದ ಅವನು ನೀರನ್ನು ಕೃತಕವಾಗಿ ಸಂಗ್ರಹಿಸಿ ತನ್ನ ಹತೋಟಿಯಲ್ಲಿಟ್ಟುಕೊಂಡು ತನಗೆ ಬೇಕಾದಾಗ ಬಳಸಿಕೊಳ್ಳಲು ಪ್ರಾರಂಭಿಸಿದ. ಇದರ ಫಲವಾಗಿ ಕೃತಕ ಜಲ ಸಂಗ್ರಹಣೆಗಳು ರಚನೆಯಾದವು (ಕೆರೆಗಳು, ಕುಂಟೆಗಳು ಇತ್ಯಾದಿ) ಮಳೆಗಾಲವು ವರ್ಷದ ಕೆಲವೇ ತಿಂಗಳೂ ಮಾತ್ರವಿದ್ದರೂ ಸಹ ತನ್ನ ಕೃತಕ ಜಲ ಸಂಗ್ರಹಕಾರಗಳಲ್ಲಿದ್ದ ನೀರನ್ನು ಬಳಸಿ ವ್ಯವಸಾಯ ಮಾಡಲು ಯಾವುದೇ ಅಡೆ ತಡೆಗಳಿಲ್ಲದಾಯಿತು. ಇದೇ ಅಂಶ ಮುಂದೆ ಅಸಂಖ್ಯಾತ ಕೆರೆಗಳ ನಿರ್ಮಾಣಕ್ಕೆ ಪ್ರೇರಣೆಯನ್ನು ನೀಡಿತು.

ಬೆಟ್ಟದಿಂದ ಹರಿದು ಬರುವ ಸಣ್ಣ ಹೊಳೆಯನ್ನು ಕಾಲುವೆಗಳ ಮೂಲಕ ಹಾಯಿಸಿಕೊಂಡು ಕಬ್ಬು, ಭತ್ತಗಳನ್ನು ಬೆಳೆಯುತ್ತಿದ್ದರು ಎನ್ನುತ್ತದೆ ಒಂದು ಶಾಸನ. ದ್ರೋಣಾಮುಖವೆಂಬ (ಇಂದಿನ ಗುತ್ತಿಕಲು ಎನ್ನುವ ಗ್ರಾಮ) ಗಿರಿ, ನಿರ್ಜರದಿಂದ ಬಂದ ನೀರನ್ನು (ಸಿಂಧು ನದಿ) ಪರಿಕಾಲಿಂ (ಚಿಕ್ಕ ಕಾಲುವೆಯನ್ನಾಗಿ ತಿರುಗಿಸಿ) ಅದರಿಂದ ಬೆಳೆದ 'ಗಂಧಶಾಲಿ' ಭತ್ತವನ್ನು ಬೆಳೆಯುತ್ತಿರುವ ಹೊಲಗದ್ದೆಗಳಿಂದ ಕೂಡಿದ ಈ ಊರು ಸುವಾಸನೆಯಿಂದ ಕೂಡಿ ಕಣ್ಣುಗಳಿಗೆ ಸೊಗಸಾಗಿ ಕಾಣುತ್ತಿದ್ದವು. ತೋಟಗಳಲ್ಲಿ ಬಾವಿಗಳಿರುತ್ತಿದ್ದವು. 'ಎರೆಗ' ಎಂಬಾತನು ಸಿರುಗುಪ್ಪೆಯಲ್ಲಿ "ಮರ ಕಟ್ಟಿನ ದೊಡ್ಡ ಬಾವಿಯನ್ನು ಕಟ್ಟಿಸಿದಂತೆ ಒಂದು ಶಾಸನ ಹೇಳುತ್ತದೆ". ಕೆರೆಗಳಿಗೆ ನೀರನ್ನು ಒದಗಿಸುವ ಮೂಲಗಳ ಆಧಾರದ ಮೇಲೆ ಕೆರೆಗಳನ್ನು ನದಿ ಆಶ್ರಿತ ಕೆರೆಗಳು ಮತ್ತು ಮಳೆ ಆಶ್ರಿತ ಕೆರೆಗಳು ಎನ್ನುವ ಎರಡು ಭಾಗಗಳಾಗಿ ವಿಭಾಗಿಸಬಹುದು.[೩]

**ಅ) ನದಿ ಆಶ್ರಿತ ಕೆರೆಗಳು (ನದಿ ಮಾತೃಕೆ)**

ಜೀವಂತ ಅಥವಾ ಸರ್ವಋತು ನದಿಗಳಿಂದ ನೀರು ಪಡೆಯುವ ಕೆರೆಗಳನ್ನು ನದಿ ಆಶ್ರಿತ ಕೆರೆಗಳು ಅಥವಾ ನದಿ ಮಾತೃಕೆ ಕೆರೆಗಳೆಂದು ಕರೆಯಲಾಗುತ್ತದೆ. ನದಿಗೆ ಅಡ್ಡಲಾಗಿ ಕಟ್ಟಿದ ಅಣೆಕಟ್ಟೆಯಿಂದ ನೀರನ್ನು ಪಡೆದುಕೊಂಡು ಇನ್ನಿತರ ಸಾಲು ಕೆರೆಗಳಿಗೂ, ಕಾಲುವೆಗಳಿಗೂ ನೀರನ್ನು ಒದಗಿಸುತ್ತವೆ. ನದಿಯಿಂದ ತುಂಬುವ ಕೆರೆಗೆ ಉತ್ತಮ ಉದಾಹರಣೆಯೆಂದರೆ, ಹಿರಿಯೂರು ತಾಲ್ಲೂಕಿನಲ್ಲಿ ವೇದಾವತಿ ನದಿಗೆ ಅಡ್ಡಲಾಗಿ ಕಟ್ಟಿರುವ ವಾಣಿವಿಲಾಸ ಸಾಗರ. ಇಂತಹ ಕೆರೆಗಳು ಮಳೆಯ ಅಭಾವ ಇದ್ದರೂ ಸಹ ಸರ್ವಋತುಗಳಲ್ಲಿಯೂ ಬತ್ತದೆ ನೀರಿನಿಂದ ತುಂಬಿರುತ್ತವೆ.

**ಆ) ಮಳೆ ಆಶ್ರಿತ ಕೆರೆಗಳು (ದೇವ ಮಾತೃಕೆ)**

ಕೇವಲ ಭೂಮಿಯ ಮೇಲೆ ಬಿದ್ದ ಮಳೆ ನೀರನ್ನು ವ್ಯರ್ಥವಾಗದಂತೆ ಸಂಗ್ರಹಿಸಲಾಗುವುದು. ಮಳೆ ಬಂದಾಗ ದೊಡ್ಡ ಬೆಟ್ಟ-ಗುಡ್ಡಗಳು ಹೆಬ್ಬಂಡೆಗಳ ಮೇಲೆ ಬಿದ್ದ ನೀರು ಇಳಿಜಾರಿನೆಡೆಗೆ ಹರಿದು ಬರುತ್ತದೆ. ಇದರಿಂದ ಝರಿ, ಹಳ್ಳ, ಕೊಳ್ಳಗಳು ಉಂಟಾಗುತ್ತದೆ. ಇಂತಹ ಚಿಕ್ಕ ಪುಟ್ಟ

ಹಳ್ಳಿಗಳಿಗೆ ಅಡ್ಡಲಾಗಿ ಒಡ್ಡನ್ನು ಕಟ್ಟಿ ಈ ಕೆರೆಯನ್ನು ನಿರ್ಮಿಸಲಾಗಿರುತ್ತದೆ. ಹೀಗಾಗಿ ಈ ಕೆರೆಗಳು ಮಳೆಗಾಲದಲ್ಲಿ ಮಾತ್ರ ಭರ್ತಿಯಾಗುತ್ತವೆ. ಇಂತಹ ಕೆರೆಗಳನ್ನು ಮಳೆ ಆಶ್ರಿತ ಕೆರೆಗಳು ಇಲ್ಲವೇ ದೇವ ಮಾತೃಕೆಗಳೆಂದು ಕರೆಯಲಾಗುತ್ತದೆ. ಇದೇ ವರ್ಗಕ್ಕೆ ಸೇರಿಸಬಹುದಾದ ಅಸಂಖ್ಯಾತ ಕೆರೆಗಳು ಜಿಲ್ಲೆಯಲ್ಲಿವೆ. ಅದರಂತೆಯೇ ಕರ್ನಾಟಕದಲ್ಲಿಯೂ ಸಾಕಷ್ಟು ಕೆರೆಗಳು ಇದೇ ವರ್ಗಕ್ಕೆ ಸೇರಿದವುಗಳಾಗಿವೆ.

ಕೃಷಿ ಮತ್ತು ನೀರಾವರಿ ವ್ಯವಸ್ಥೆಗಳು ಪರಸ್ಪರ ಅವಲಂಬಿಸಿವೆ. ಅವೆರಡರ ನಡುವೆ ಅವಿನಾಭಾವ ಸಂಬಂಧವಿದೆ. ಕೃಷಿಯ ಬೆಳವಣಿಗೆ ಯಾವಾಗಲೂ ಮುಖ್ಯವಾಗಿ ನೀರನ್ನು ಅವಲಂಬಿಸಿರುತ್ತದೆ. ಅದಕ್ಕಾಗಿಯೇ ಜಿಲ್ಲೆಯಲ್ಲಿ ನಿರ್ಮಿಸಲಾದ ಹೊಸದುರ್ಗ ತಾಲೂಕಿನ ಕುಡಿನೀರಕಟ್ಟೆ ಮೊಳಕಾಲ್ಮರು ತಾಲೂಕಿನ ನುಂಕೆ ಕೆರೆ ಮತ್ತು ಚಿತ್ರದುರ್ಗದ ಬೆಟ್ಟದಲ್ಲಿನ ಕೆರೆ ಮತ್ತು ದೊಣೆಗಳನ್ನು ಬಿಟ್ಟರೆ ಉಳಿದ ಬಹುತೇಕ ಕೆರೆಗಳನ್ನು ಜಿಲ್ಲೆಯಲ್ಲಿ ವ್ಯವಸಾಯಕ್ಕೆ ನೀರನ್ನು ಒದಗಿಸುವ ಉದ್ದೇಶದಿಂದಲೇ ನಿರ್ಮಿಸಲಾಗಿರುವುದನ್ನು ಗುರುತಿಸಬಹುದು. ಸಾಮಾನ್ಯವಾಗಿ ಜಿಲ್ಲೆಯಲ್ಲಿನ ಮಳೆಯ ನೀರನ್ನು ಆಶ್ರಯಿಸಿರುವಂತಹ ಕೆರೆಗಳನ್ನು ನಿರ್ಮಿಸುವಾಗ ಅಲ್ಲಿನ ಪರಿಸರಕ್ಕನುಗುಣವಾಗಿ ಆಯಕಟ್ಟಿನ ಜಾಗಗಳಲ್ಲಿ ಕೆಲವು ಮುನ್ನೆಚ್ಚರಿಕೆ ಕ್ರಮಗಳನ್ನು ತೆಗೆದುಕೊಂಡು ನಿರ್ಮಿಸಲಾಗಿದೆ. ಹೀಗಾಗಿ ಕೆರೆಗಳ ಗಾತ್ರವು ದೊರೆಯಬಹುದಾದ ನೀರನ್ನೇ ಅವಲಂಬಿಸಿರುತ್ತವೆ. ಇಲ್ಲಿನ ಪ್ರಾಚೀನ ಕೆರೆಗಳ ನಿರ್ಮಾಣದಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಮೂರು ನಾಲ್ಕು ಕೆರೆಗಳನ್ನು ಸಮೀಪದಲ್ಲಿಯೇ ಒಂದಕ್ಕೊಂದು ಹೊಂದಿಕೊಂಡಿರುವಂತೆ ಕಟ್ಟಲಾಗಿದೆ. ಅಲ್ಲದೇ ಒಂದು ಕೆರೆ ತುಂಬಿ ಭರ್ತಿಯಾದಾಗ ಅದರ ಕೋಡಿಯ ನೀರು ವ್ಯರ್ಥವಾಗದಿರುವಂತೆ ಮತ್ತೊಂದು ಕೆರೆಯನ್ನು ಭರ್ತಿ ಮಾಡುವಂತೆ ಸರಣಿ ಕೆರೆಗಳನ್ನು ಇಲ್ಲಿ ನಿರ್ಮಿಸಿರುವುದು ನಮ್ಮ ಹಿರಿಯರ ಜಾಣ್ಮೆ ಮತ್ತು ಅವರ ಕೆರೆ ನಿರ್ಮಾಣದ ಕೌಶಲ್ಯಕ್ಕೆ ಸಾಕ್ಷಿಯಾಗಿದೆ. ಉದಾ: ವಾಣಿವಿಲಾಸ ಸಾಗರ, ರಾಣಿಕೆರೆ, ಹಿರೇಕೆರೆಹಳ್ಳಿ ಕೆರೆ, ಮತ್ತೂಡು ಕೆರೆ ಹಾಗೂ ಚಿತ್ರದುರ್ಗದ ಬೆಟ್ಟದ ಮೇಲಿನ ಕೆರೆಗಳು ತುಂಬಿ ಹರಿಯುವ ಕೋಡಿ ನೀರು ಅದರ ಕೆಳಭಾಗದಲ್ಲಿರುವ ಕೆರೆಗಳನ್ನು ವ್ಯವಸ್ಥಿತವಾಗಿ ಸೇರಿ ಅವು ಭರ್ತಿಯಾಗುವುದನ್ನು ಇಲ್ಲಿ ಗುರುತಿಸಬಹುದು. ಅದೇ ರೀತಿ ಅಯ್ಯರಸನ ಹಳ್ಳಿಕೆರೆ, ಆಡನ ಹಳ್ಳಿಯ ಕೆರೆಗಳಿಗೆ ಮೇಲ್ಕಟ್ಟೆಗಳನ್ನು ಹಾಕಿದಾಗ ಅದರ ನೀರೊತ್ತಿನಿಂದ ಬರುವಂತಹ ಜಲವು ಅರಳಿಯ ಕೆರೆಯ ಗದ್ದೆಗಳಿಗೆ ನೀರುಣಿಸುತ್ತದೆ. ಅಲ್ಲಿಯ ಪ್ರತಿ ಕ್ಷೇತ್ರವೂ ನೀರುಂಡ ತರುವಾಯ ಆಡನ ಹಳ್ಳಿಯ ಮೊದಲ ತೋಟಗಳಿಗೆ ಹಾಯ್ದು ಬರುತ್ತದೆ. ಈ ತೋಟದ ತುದಿಯಲ್ಲಿ ಒಂದು ಬಯಲಿದ್ದು ಅಲ್ಲಿ ರಾಜಕಟ್ಟೆ ಎಂದರೆ ದೊಡ್ಡದಾದ ಕೆರೆಯೊಂದನ್ನು ಈ ಶಾಸನದಲ್ಲಿ ಹೇಳಿರುವ ಊರು ಪ್ರಮುಖರು (ಮಹಾಜನಗಳು) ನಿರ್ಮಾಣ ಮಾಡಬೇಕು. ಈ ದೊಡ್ಡ ಕೆರೆಯ ಎರಡೂ ಕೋಡಿಯಲ್ಲಿ ನೀರು ಹರಿದು ಗದ್ದೆಗಳು ಹಾಳಾದಂಥ ಸಂದರ್ಭದಲ್ಲಿ (ಎಂದರೆ ನೀರು ಹೆಚ್ಚಾಗಿ ಹರಿಯುವುದರಿಂದ ಭೂಮಿ ಚೌಳಾದರೆ) ಆ ಭೂಮಿಯ ಮಾಲೀಕರಿಗೆ ತಾಳಕೆರೆಯಲ್ಲಿ ಭೂಮಿಯನ್ನು ಕೊಡಲಾಗುತ್ತದೆ. ಕೆಂಚನ ಕಟ್ಟೆಯ ಕೆರೆಯನ್ನು ಆ ಹಳ್ಳಿಯ ಜನರೇ ಕಟ್ಟಿಸಿಕೊಳ್ಳುವರು. ಹೀಗೆ ಮಾಡದೇ ರಾಜಕಟ್ಟೆಯ ನೀರನ್ನೇ ಉಪಯೋಗಿಸಿಕೊಂಡ ಪಕ್ಷದಲ್ಲಿ ಕೆಂಚನ ಕಟ್ಟೆಯವರು ತಮ್ಮ ಪಾಲಿಗೆ ಐವತ್ತು ಸಲಗೆ ಗದ್ದೆಗೆ (ಅಂದಿನ ಪ್ರಮಾಣ)

ಬೇಕಾಗುವಷ್ಟು ನೀರನ್ನು ಮಾತ್ರ ಉಪಯೋಗಿಸಿಕೊಂಡು, ಮಿಕ್ಕದ್ದನ್ನು ರಾಜಕಟ್ಟೆಯನ್ನು ಕಟ್ಟಿಸಿದ ಮಹಾಜನಗಳಿಗೆ ಬಿಟ್ಟುಕೊಡಬೇಕು. ಒಂದುಪಕ್ಷ ಕೆಂಚನ ಕಟ್ಟೆಯವರು ಕೆರೆಯನ್ನು (ಕಟ್ಟೆಯನ್ನು) ಕಟ್ಟಿಸದೇ ರಾಜಗಟ್ಟದ ಕೋಡಿಯ ನೀರನ್ನು ಮಾತ್ರ ಹರಿಸಿಕೊಂಡರೆ ಒಂದು ಖಂಡುಗೆ ಒಕ್ಕಲಿಗೆ ಐವತ್ತು ಗದ್ಯಾಣವನ್ನು ಹಿರಿಯ ಮಹಾಜನರಿಗೆ (ರಾಜ ಕಟ್ಟೆ ಕಟ್ಟಿಸಿ) ಕೊಡಬೇಕು ಎಂದು ಶಾಸನ ವಿವರಿಸುತ್ತದೆ.[೪]

ಸೋಮನಾಥ ಸಮುದ್ರದ ಎರಡು ಕೋಡಿ ಕಾಲುವೆ ಮಾರ್ಗಗಳಿಂದ ಹರಿವ ನೀರು ಕೋಡಿಯನ್ನು ಬಿಟ್ಟ ನಂತರ ಬೆದ್ದಲು ಭೂಮಿಗೆ ಬರುತ್ತದೆ. ಅಲ್ಲಿಯ ಯಾವ ಹೊಲದಲ್ಲಿ ಯಾರಾದರೂ ಗಿಡ, ಗಂಟಿಗಳನ್ನು ಕಡಿದು (ಹಳಿವಡಿದು), ಮತ್ತು ಆ ನೀರನ್ನು ಉಪಯೋಗಿಸಬಹುದು. ಈ ಹೊಲದಲ್ಲಿ ಬೆಳೆಯುವ ಮಾವು, ಹುಣಸೆ ಮರಗಳು ಆಯಾ ಹಳ್ಳಿಗಳಿಗೇ ಸೇರುತ್ತವೆ. ಇಂತಹ ಬೇಸಾಯದಲ್ಲಿ ಒಂದು ಹಳ್ಳಿಯ ಹೊಲಗಳು ಇನ್ನೊಂದು ಹಳ್ಳಿಗೆ ಹೋದರೆ ಅವುಗಳಿಂದ ಉಂಟಾಗುವ ತಂಟೆ ತಕರಾರುಗಳನ್ನು ನಿವಾರಿಸಲಾಗುವುದು ಎಂಬುದನ್ನು ಶಾಸನವು ಉಲ್ಲೇಖಿಸಿದ್ದು ಅಂದಿನ ನೀರಾವರಿ ಮತ್ತು ಕೃಷಿ ವ್ಯವಸ್ಥೆಯ ಕೈಗನ್ನಡಿಯಾಗಿದೆ.[೫]

ಮೊಳಕಾಲ್ಮೂರು ತಾಲೂಕು ಮರಡಿ[೬] ಮತ್ತು ಕರಡಿಹಳ್ಳಿ[೭] ಗಳಲ್ಲಿರುವ ಶಾಸನಗಳು ಸ್ಥಳೀಯ ಜನ ತಮ್ಮ ಅಧಿಕಾರಿಗಳು ಮಾಡುತ್ತಿದ್ದ ಅನ್ಯಾಯದ ಹಣ ವಸೂಲು ಬಗ್ಗೆ ಮಾಡಿಕೊಂಡ ಮನವಿಯನ್ನು ಒಳಗೊಂಡಿದೆ. ಆ ಗ್ರಾಮಗಳ ನಿವಾಸಿಗಳಿಗೆ ಅನ್ಯಾಯದ ತೆರಿಗೆಗಳಿಂದ ವಿನಾಯಿತಿ ನೀಡುವಂತೆಯೂ, ಆ ಮೊದಲೇ ವಸೂಲಿ ಮಾಡಿದ್ದ ಅನ್ಯಾಯದ ತೆರಿಗೆ ಹಣವನ್ನು ಕೆರೆ, ದೇವಾಲಯ ಮುಂತಾದ ಸಾರ್ವಜನಿಕ ಕಾರ್ಯಗಳ ದುರಸ್ತಿಗಾಗಿ ಬಳಸಿಕೊಳ್ಳುವಂತೆಯೂ ರಾಜ ಆದೇಶ ಹೊರಡಿಸಿರುವುದರಲ್ಲಿ ಗಮನಿಸಬೇಕಾದ ಅಂಶವೆಂದರೆ, ಆ ವ್ಯವಹಾರಗಳನ್ನು ಸರಿಪಡಿಸಿ, ಅಕ್ರಮಗಳಿಂದ ಬಂದ ಆದಾಯದಿಂದ ರಚನಾತ್ಮಕ ಸಾರ್ವಜನಿಕ ಕಾರ್ಯಗಳು ಅನುಷ್ಠಾನ ಮಾಡಲಾಗುತ್ತಿತ್ತು ಎನ್ನುವ ಸಂಗತಿ ವಿಶೇಷವಾಗಿದೆ.

ಜಿಲ್ಲೆಯ ಹೊಸದುರ್ಗ ತಾಲೂಕಿನ ನೀರಗುಂದದ ಗ್ರಾಮದಲ್ಲಿ ದೊರೆತ ಒಂದು ಶಾಸನ ಪ್ರಾಚೀನ ಕಾಲದ ನೀರಾವರಿ ವ್ಯವಸ್ಥೆಗೆ ಸಂಬಂಧಿಸಿದ ಅನೇಕ ಅಮೂಲ್ಯ ಸಂಗತಿಗಳನ್ನು ನೀಡುತ್ತದೆ[೮]. ಕ್ರಿ.ಶ.೧೧೪೨ರ ಈ ಶಿಲಾ ಶಾಸನ ಹೊಯ್ಸಳ ಚಕ್ರವರ್ತಿ ೧ನೇ ನರಸಿಂಹನ ಕಾಲದಲ್ಲಿ 'ಉದ್ಭವ ನರಸಿಂಹಪುರ' ಎಂಬ ಹೆಸರಿನ ಅಗ್ರಹಾರವಾಗಿದ್ದ ನೀರಗುಂದದ ಮಹಾಜನಗಳು ಸಭೆ ಸೇರಿ ರೂಪಿಸಿದ ಒಂದು 'ಸಮಯ ಪತ್ರದ ಶಾಸನ'ವಾಗಿದೆ. ಅಗ್ರಹಾರದ ಬ್ರಾಹ್ಮಣರಿಗೆ ಬೇರೆ ಬೇರೆಡೆ ಇದ್ದ ಭೂಮಿಗಳನ್ನು, ಅವುಗಳ ಆದಾಯವನ್ನು ಅನುಸರಿಸಿ ಸಮಾನ ಆದಾಯವಿರುವಂತೆ ಮಾಡಿದ ನಾಲ್ಕು ತತ್ತು (ಭಾಗ)ಗಳ ವಿಂಗಡಣೆ, ಅವುಗಳಿಗೆ ಸೇರಿದ ಭೂಮಿಗಳ ಸಾಗುವಳಿ, ಅವುಗಳಿಗೆ ನೀರಾವರಿ ವ್ಯವಸ್ಥೆ, ಅವುಗಳಿಗೆ ಸಲ್ಲಿಸಬೇಕಾದ ತೆರಿಗೆ ಪ್ರಮಾಣ ಇತ್ಯಾದಿಗಳ ಬಗ್ಗೆ ವಿಶೇಷ ಅಂಶಗಳು ಮೊತ್ತಮೊದಲ ಬಾರಿಗೆ ಇದರಲ್ಲಿ ಕಾಣಸಿಗುತ್ತದೆ. ನೀರಾವರಿಗೆ ಸಂಬಂಧಿಸಿದ ಅಂಶಗಳನ್ನು ಇಲ್ಲಿ ಗಮನಿಸಬಹುದು. ನೀರಾವರಿ ಇಲ್ಲದ ತತ್ತಿನವರು ನೀರಾವರಿ ಇರುವ ತತ್ತಿನಿಂದ ನೀರಿನ

ಅನುಕೂಲ ಪಡೆಯಬಹುದಿತ್ತು. ಅದಕ್ಕೆ ಯಾರೂ ಅಡ್ಡಿಪಡಿಸುವಂತಿರಲಿಲ್ಲ. ನೀರಾವರಿಗಾಗಿ ಕಾಲುವೆ ತೆಗೆಸಲು ಯಾರೂ ಅಡ್ಡಿ ಮಾಡದೆ ಸಹಕರಿಸಿ, ಆ ಕಾಲುವೆ ತೆಗೆಯುವುದರಿಂದ ನಷ್ಟವಾಗುವ ಭೂಮಿಗೆ ಪ್ರತಿಯಾಗಿ ಕಾಲುವೆ ತೆಗೆದವರಿಂದ ಸೂಕ್ತ ಪರಿಹಾರ ಪಡೆಯಬಹುದಿತ್ತು. ಇದಲ್ಲದೆ ಎಲ್ಲಿಯಾದರೂ ಕೆರೆಯನ್ನು ನಿರ್ಮಾಣ ಮಾಡುವುದಾದರೆ, ಮೊದಲು ಅದರ ನೀರಿನ ನ್ಯಾಯಯುತ ಹಂಚಿಕೆಯ ಒಡಂಬಡಿಕೆಯಾಗಬೇಕಾಗಿತ್ತು. ಹಾಗಿಲ್ಲದೆ ಹೋದರೆ, ಕೆರೆಯ ನಿರ್ಮಾಣಕ್ಕೆ ಅನುಮತಿ ದೊರೆಯುವಂತಿರಲಿಲ್ಲ. ಇದರಿಂದ ಅಗ್ರಹಾರದ ಭೂಮಿ ಸಾಗುವಳಿಗಾಗಿ ಕೆರೆಯ ನೀರಾವರಿ ವ್ಯವಸ್ಥೆಯನ್ನು ಮಾಡಿಕೊಳ್ಳಲು ಆಗಿನ ಅಗ್ರಹಾರಗಳ ಸ್ವಯಂಮಾಡಳಿತ ಕೂಡ ಹೇಗೆ ಪ್ರೋತ್ಸಾಹಕರ ನೀತಿಯನ್ನು ಇರಿಸಿಕೊಂಡಿತ್ತು ಎಂಬುದು ಇದರಿಂದ ವ್ಯಕ್ತವಾಗುತ್ತದೆ.

ನಾಡಿನ ವಿವಿಧೆಡೆ ಇದ್ದ ಜಲಸೂತ್ರಧಾರರು(Hydrologisit) ಹಲವಾರು ಕೆರೆ-ಕಾಲುವೆಗಳನ್ನು ನಿರ್ಮಿಸಿ ಕೃಷಿ ನೀರಾವರಿ ವ್ಯವಸ್ಥೆಗೆ ಸಹಕಾರಿಯಾಗಿದ್ದರು ಎಂದು ನಾಡಿನ ಮತ್ತು ಜಿಲ್ಲೆಯ ಶಾಸನಗಳು ಉಲ್ಲೇಖಿಸುತ್ತವೆ. ಅವರಲ್ಲಿ ಹಂಚಿ ಧರ್ಮಸೆಟ್ಟಿ (ಕ್ರಿ.ಶ ೧೦೦೦), ಸಿಂಗಾಯಭಟ್ಟ (ಕ್ರಿ.ಶ. ೧೩೮೮), ಬುಳ್ಳಪ್ಪ (ಕ್ರಿ.ಶ. ೧೪೧೦) ಮತ್ತು ಇತರರು ಮುಖ್ಯರಾಗಿದ್ದಾರೆ.[೯] ಹಂಚಿ ಧರ್ಮಸೆಟ್ಟಿ ಎಂಬಾತನು ಎಲ್ಲೋ ಹರಿಯುತ್ತಿದ್ದ ಕಾಲುವೆಯನ್ನು ತಿದ್ದಿ, ತನ್ನ ಊರಿನ ಬಳಿ ಹರಿಯುವಂತೆ ಮಾಡುತ್ತಾನೆ. ವಿಜಯನಗರ ಸಂಸ್ಥಾಪಕನಾದ ಹರಿಹರರಾಯ (ಹಕ್ಕ)ನ ಕುಮಾರನಾದ ಶ್ರೀ ಪ್ರತಾಪ ಬುಕ್ಕರಾಯನು, ಪೆನುಗೊಂಡೆ (ಆಂಧ್ರಪ್ರದೇಶ) ಪಟ್ಟಣದಲ್ಲಿ ರಾಜ್ಯವಾಳುತ್ತಿರುವಾಗ ದಶವಿದ್ಯಾ ಚಕ್ರವರ್ತಿ ಜಲಸೂತ್ರಧಾರ ಸಿಂಗಾಯಭಟ್ಟನನ್ನು(ಕ್ರಿ.ಶ. ೧೩೮೮) ಕರೆಯಿಸಿ ಆತನಿಗೆ ಪೆನ್ನಾರ್ ನದಿಯ ನೀರನ್ನು ಪೆನುಗೊಂಡೆಗೆ ಕಾಲುವೆಯ ಮೂಲಕ ಸಿರುವೆರದ ಕೆರೆಗೆ ತಂದು ಆ ಕಾಲುವೆ ಹೆಸರನ್ನು ಪ್ರತಾಪಬುಕ್ಕರಾಯ ಮಂಡಲದ ಕಾಲುವೆಯಾಗಿ ಮಾಡಿಸಿ ಬರೆಸಿದ ಶಾಸನವಿದು ಎನ್ನುತ್ತದೆ ಗೌರಿಬಿದನೂರು ಆಚಾರ್ಯ ಜೂನಿಯರ್ ಕಾಲೇಜಿನಲ್ಲಿ ರಕ್ಷಿಸಲಾಗಿರುವ ಶಾಸನ. ಈ ಕಾಲುವೆ ಇಂದಿಗೂ ಪೆನುಗೊಂಡೆಯ ಕೆರೆಗೆ ನೀರುಣಿಸುತ್ತದೆ.

ಗೌತಮ ಗೋತ್ರದ ಶ್ರೀ ಜಗಂನಾಥನ ಪುತ್ರನಾದ ಬುಳ್ಳಪ್ಪ ಅಮಾತ್ಯ. ಹರಿದ್ರಾ ನದಿಯ ಬಲದ ಕೆರೆಯನ್ನು ವಿಜಯನಗರದ ಅರಸು ಒಂದನೇ ದೇವರಾಯ(ಕ್ರಿ.ಶ. ೧೪೦೬)ನು ಆಜ್ಞೆ ಮಾಡಿದ ಪ್ರಕಾರ ಹರಿಹರ ದೇವರಿಗೆ, ಬ್ರಾಹ್ಮಣರಿಗೆ, ಅಖಿಲ ಜನಕ್ಕೆ ಸಂಜೀವಿನಿಯಂತೆ ಕಟ್ಟಿಸಿದ. ಈತನ ಬುದ್ಧಿವಂತಿಕೆಯನ್ನು ಶಾಸನ ಸಾಲುಗಳು ಕವಿತೆಯಂತೆ ಹೀಗೆ ಬಣ್ಣಿಸುತ್ತವೆ. 'ವೀರಭಗೀರಥಂ ಗಂಗೆಯನುರ್ವ್ವಿಗೆ (ಭೂಮಿಗೆ) ತಂದದ್ದು ಏನು ಮಹಾ ಪೌರುಷವಲ್ಲ, ಆಕಾಶದಿಂದ ಧರೆಗೆ ಬಂದ ಗಂಗೆ ಹರಿದ್ರಾ ನದಿಗೆ ಬರದಿದ್ದುರಿಂದ ಆಕೆಯನ್ನು ಕಟ್ಟಿ ಹಿಡಿದು ಹರೀಶಪುರಿಗೆ (ಹರಿಹರಕ್ಕೆ) ಕೊಂಡು ತಂದ ಬುಳ್ಳ ಚಮೂಪನೇ ಸೌಭಾಗ್ಯವಂತನು. ಹೀಗೆ ತುಂಗಭದ್ರೆಗೆ ಹರಿದ್ರೆ ಸೇರಿದುದಕ್ಕೆ ಆ ನದಿಯ ತೇಜಸ್ಸು ಇನ್ನೂ ಹೆಚ್ಚಿದೆ. ಈ ನದಿಯ ಕಾಲುವೆಯ ಕೆಳಗೆ ಬೆಳೆವ ಹೂವು, ಬಾಳೆ, ವೀಳ್ಯೆ ಎಲೆ, ಲತಾ ಮಂಟಪಗಳಿಂದ ತುಂಬಿದ್ದರಿಂದ ಉಂಟಾದ ದುಂಬಿಗಳು ಹರಿಹರೇಶ್ವರನ ಪಾದದಲ್ಲಿ ರಾರಾಜಿಸುತ್ತಿವೆ. ಈ ಕಾಲುವೆಯಲ್ಲಿ ವಿಸ್ತಾರವಾಗಿ ಹರಿವ ಕೆನ್ನೀರು ಭೂದೇವಿಯು ಶ್ರೀಮಂತವಾಗಿ ತನ್ನ ತಲೆಯಲ್ಲಿ ಧರಿಸಿದ ಅಗ್ರ ಸಿಂಧರದಂತೆ ಶೋಭಿಸುತ್ತಿದೆ. ಇಲ್ಲಿ ಬಂದಿರುವ

ಕೆನ್ನೀರಿನ ವರ್ಣನೆ ಮಳೆಗಾಲದಲ್ಲಿಯ ಕೆಂಪು ನೀರನ್ನು ಸೂಚಿಸುತ್ತದೆ.[೧೫] ನೀವು ನೋಡುವಂತೆ ಈ ಕಾಲುವೆ ಈಗ ಅಲ್ಲಲ್ಲಿ ಕುರುಹಿಗೆ ಮಾತ್ರ ಕಂಡುಬರುತ್ತದೆ. ಆದರೆ ಇಂದಿಗೂ ಹರಿದ್ರಾ ನದಿಯ ದಡದಲ್ಲಿ ಬೆಳೆವ ವೀಳ್ಯದೆಲೆ ಉತ್ತಮ ಮಟ್ಟದಾಗಿದ್ದು ಕೊಲ್ಲಿ ರಾಷ್ಟ್ರಗಳಿಂದ ಹಿಡಿದು ನಮ್ಮ ದೇಶದ ಕಾಶ್ಮೀರದವರೆಗೆ ರಫ್ತಾಗುತ್ತಿವೆ. ಈ ಶಾಸನಗಳು ಹೀಗೆ ಬುಳ್ಳಪ್ಪ ಅಮಾತ್ಯನು ನಿರ್ಮಿಸಿದ ಕಾಲುವೆಯ ಕಾಲ ಕ್ರಿ.ಶ. ೧೪೧೦. (ಶಾಸನ ಸಂಖ್ಯೆ, ದಾ. ೨೩ರಲ್ಲಿ) ಮುಂದೆ ಈ ಕಾಲುವೆ ಒಡೆದು ಹೋಗುತ್ತದೆ. ಅದನ್ನು ತನ್ನ ಖರ್ಚಿನಿಂದಲೇ ಪುನರುಜ್ಜೀವನಗೊಳಿಸುತ್ತಾನೆ. ಈ ಬುಳ್ಳಪ್ಪ. (ಈ ಶಾಸನದ ಸಂಖ್ಯೆ: ದಾವಣಗೆರೆ ೨೯,) ಕಾಲ ಕ್ರಿ.ಶ. ೧೪೨೫ ಅಂದರೆ, ಕಾಲುವೆ ೧೫ ವರ್ಷ ತನ್ನ ಕೆಲಸವನ್ನು ನಿರ್ವಹಿಸಿದೆ ಎಂದಾಯಿತು.

ಚಾಮನೃಪಾಲನು ಬೊಪ್ಪ ದೇವನ ಮಗ. ಆತ ಹಲವಾರು ಕೆರೆ ಕಟ್ಟೆಗಳನ್ನು ನಿರ್ಮಿಸಿದಾತ. ವಿಜಯನಗರದ ಅರಸ ವೀರ ಪ್ರತಾಪ ದೇವರಾಯನ ಕಾಲದಲ್ಲಿ, ಆತನ ಪ್ರಧಾನ ದಂಡನಾಯಕನಾದ ಸಾಂಗಣನ ಕೋರಿಕೆಯಂತೆ ಬುಳ್ಳಪನು ಹರಿದ್ರಾ ನದಿಗೆ ಕಾಲುವೆ ನಿರ್ಮಿಸಿದ್ದು. ಅದು ಒಡೆದು ಹೋದಾಗ ನೊಂದು ಅದರ ಪುನಃ ಪ್ರತಿಷ್ಠಾಪನೆ ಮಾಡುವ ಪುಣ್ಯ ಪುರುಷರಾರೆಂದು ವಿಚಾರಿಸಿ ನೋಡಿದಾಗ ತನಗಿಂತ ಬುದ್ಧಿವಂತನೂ ಧರೆಯಲ್ಲಿ ಬಹುತಟಾಕನು (ಕೆರೆ ನಿರ್ಮಿಸಿದವನು) ಆದ ಚಾಮರಾಜನನ್ನು ಹುಡುಕಿ ಕರೆಯಿಸಿ, ಜೀರ್ಣೋದ್ಧಾರ ಮಾಡಬೇಕೆಂದು ಹೇಳಿದ್ದಕ್ಕೆ, ಆತನು ಶಕವರುಷ ೧೩೪೭, ಕ್ರೋಧಿ ಸಂವತ್ಸರ ಕಾರ್ತೀಕ ಶುದ್ಧ ೧೨ನೇ ಸೋಮವಾರ (ಕ್ರಿ.ಶ. ೧೪೨೫)ದಂದು ಆ ಕಾರ್ಯವನ್ನು ಕೈಗೆತ್ತಿಕೊಂಡು ಆ ಕಾಮಗಾರಿಯನ್ನು ಸಂಪೂರ್ಣಗೊಳಿಸಿ ಜನರಿಗೆ ನೀರಾವರಿ ಅನುಕೂಲ ಮಾಡಿಕೊಟ್ಟನು[೧೯].

ಜಿಲ್ಲೆಯಲ್ಲಿನ ಕೆರೆಗಳು ಕೃಷಿಗೆ ಅವಶ್ಯಕವಾದ ನೀರನ್ನು ಒದಗಿಸುವ ಉದ್ದೇಶದಿಂದಲೇ ನಿರ್ಮಾಣವಾಗಿದ್ದವು. ಅಂದು ಕೃಷಿಯ ಉತ್ಪನ್ನವನ್ನು ಪೂರ್ಣ ಪ್ರಮಾಣದಲ್ಲಿ ಪಡೆಯಲು ನೀರಾವರಿ ವ್ಯವಸ್ಥೆ ಅತ್ಯಗತ್ಯವೆನಿಸಿತ್ತು ಮತ್ತು ಅದಕ್ಕೆ ಹೇಗೆ ಒತ್ತು ಕೊಡಲಾಗಿತ್ತು ಹಾಗೂ ಕೃಷಿ ಮತ್ತು ನೀರಾವರಿ ವ್ಯವಸ್ಥೆಗಳು ಯಾವ ರೀತಿ ರೂಪಿತವಾಗಿದ್ದವು ಎಂಬುದು ಈ ಮೇಲಿನ ಕೆಲ ಅಂಶಗಳಿಂದ ನಮಗೆ ಸ್ಪಷ್ಟವಾಗುತ್ತದೆ. ಆದ್ದರಿಂದ ಹೀಗೆ ಸಂಗ್ರಹಿಸಿದ ನೀರನ್ನು ಬಹಳ ಎಚ್ಚರಿಕೆ ವಹಿಸಿ ಉಪಯೋಗಿಸುವುದು ಉತ್ತಮ ಮಾರ್ಗವಾಗಿದ್ದು, ಇಂದಿನ ನೀರಿನ ಅಭಾವವನ್ನು ಪರಿಹರಿಸಬಲ್ಲ ಏಕ ಮಾತ್ರ ಪರಿಹಾರೋಪಾಯವಾಗಿದೆ.

**೬.೨. ನೀರಿನ ತೆರಿಗೆ ವ್ಯವಸ್ಥೆ ಮತ್ತು ಬಳಕೆದಾರರು**

ಭಾರತ ಕೃಷಿ ಪ್ರಧಾನವಾದ ದೇಶ. ಇಲ್ಲಿ ಬರ, ಕ್ಷಾಮ, ನೆರೆಹಾವಳಿಗಳು ಅಧಿಕ. ಇದರಿಂದ ನಮ್ಮ ಕೃಷಿ ಕ್ಷೇತ್ರ ಹಿಂದಿನಿಂದಲೂ ಸೊರಗುತ್ತಾ ಬಂದಿದೆ. ಇದಕ್ಕೆ ಸೂಕ್ತ ಪರಿಹಾರಗಳೆಂದರೆ ಇರುವ ನೀರಿನ ಸಮರ್ಥ ನಿರ್ವಹಣೆ, ಅದರ ಜಾಗೃತ ಬಳಕೆ ಮುಖ್ಯವಾಗುತ್ತದೆ. ಚಿತ್ರದುರ್ಗ ಜಿಲ್ಲೆಯೂ ಸೇರಿದಂತೆ ನಮ್ಮ ರಾಜ್ಯದ ವಿವಿದೆಡೆ ಇರುವ ಕೆರೆಗಳ ನೀರಿನ ಸಮರ್ಥ ನಿರ್ವಹಣೆಗೆ ಕೆಲ ನಿಯಮಗಳನ್ನು ಸ್ಪಷ್ಟವಾಗಿ ರೂಪಿಸಿಕೊಂಡಿರುವಂತೆ ಅದರ ಬಳಕೆಗಾಗಿಯೂ ಹಲವು

ನಿಯಮಗಳನ್ನು ನಮ್ಮ ಹಿಂದಿನವರು ರೂಪಿಸಿರುವುದು ವ್ಯಕ್ತವಾಗುತ್ತದೆ. ಜಲ ತೆರಿಗೆಗೆ ಸಂಬಂಧಿಸಿದ ವಿಧಿ ವಿಧಾನಗಳು ಹಾಗೂ ಬಳಕೆದಾರರು ಪಾವತಿಸಬೇಕಾದ ತೆರಿಗೆ ಪ್ರಮಾಣ ಇತ್ಯಾದಿ ಅಂಶಗಳನ್ನು ರಾಜ್ಯದ ನಾಗಾವಿ, ಹಲ್ಮಿಡಿ, (ಕ್ರಿ.ಶ. ಸು.೪೫೦) ದಂಡಾಪುರ (ಕ್ರಿ.ಶ. ೯೧೮), ತುರುವೇಕೆರೆ(ಕ್ರಿ.ಶ. ೧೩-೧೪ ಶತಮಾನ), ಹರಿಹರ (೧೪-೧೫ನೇ ಶತಮಾನ) ಇತ್ಯಾದಿ ಶಾಸನಗಳ ಹಿನ್ನೆಲೆಯಲ್ಲಿ ನಾವು ಪ್ರಧಾನವಾಗಿ ಗುರುತಿಸಬಹುದಾಗಿದೆ.

ನರಗುಂದದ ದಂಡಾಪುರದ ಕ್ರಿ.ಶ. ೯೧೮ರ ಶಾಸನವು ರಾಷ್ಟ್ರಕೂಟ ರಾಜ ನಾಲ್ಕನೇ ಗೋವಿಂದನ ಕಾಲಕ್ಕೆ ಸಂಬಂಧಿಸಿದೆ. ಅದು ಅಲ್ಲಿಯ ಕೆರೆಯ ನಿರ್ವಹಣೆಗೆ ಅಂದಿನ ಸಮಾಜದ ಪ್ರತಿಷ್ಠಿತರಿಂದ ಮೊದಲಾಗಿ ಸಮಾಜದ ಬೇರೆ ಬೇರೆ ವರ್ಗದ ಜನರು ತಮ್ಮಲ್ಲಿ ನಡೆದ ಮದುವೆಯಷ್ಟೇ ಅಲ್ಲ ತಪ್ಪು ಒಪ್ಪಿಗಾಗಿ ಪ್ರಾಯಶ್ಚಿತ ರೂಪವಾಗಿ ಎಷ್ಟೆಷ್ಟು ಹಣವನ್ನು ಕೊಡಬೇಕೆಂಬುದನ್ನು ಈ ಮುಂದಿನಂತೆ ಉಲ್ಲೇಖಿಸಿದೆ. ಪ್ರಮಾಥಿ ಸಂವತ್ಸರ ಮಕರ ಸಂಕ್ರಮಣ ದಿನದಂದು ಈ ಶಾಸನವನ್ನು ರಚಿಸಲಾಗಿದ್ದು, ಅದರಲ್ಲಿ **"ಪರ್ಗ್ಗೆಳೆಗಾಯ ದೆನ್ಗೊಡಸದರು ಕೊಟ್ಟೊರೀ ದ್ವಿಜ ಮುಖ್ಯರ್"** ಎಂದಿದೆ. ಅಂದರೆ ವಿಪ್ರರ (ಬ್ರಾಹ್ಮಣ) ವಿವಾಹ ಸಂದರ್ಭದಲ್ಲಿ ೨ ದ್ರಮ್ಮಗಳನ್ನೂ, ಮುಂಜಿಯ ಸಂದರ್ಭದಲ್ಲಿ ಎರಡು ದ್ರಮ್ಮಗಳನ್ನು, ಶೂದ್ರಗಣದ ಮದುವೆಯಲ್ಲಿ ಒಂದು ದ್ರಮ್ಮವನ್ನು ಅಲ್ಲಿರುವ ದೊಡ್ಡ ಕೆರೆಗೆ ಕಂದಾಯವಾಗಿ ಕೊಟ್ಟರು ಎಂದು ಅರ್ಥವಾಗುತ್ತದೆ. ಈ ದಾನವನ್ನು ಕೆಡಿಸಿದವರು (ಪಾಲಿಸದವರು) ಪಂಚಮಹಾ ಪಾತಕಕ್ಕೆ ಹೋಗುತ್ತಾರೆ ಎಂಬುದನ್ನು ಶಾಸನದ ಕೊನೆಯಲ್ಲಿ ದಾಖಲಿಸಿದೆ.[೨]

ನೀರಾವರಿಯು ಮುಖ್ಯವಾಗಿ ನದಿ, ಬಾವಿ, ಕೆರೆ, ಕುಂಟೆ, ಕಟ್ಟೆಗಳನ್ನು ಅವಲಂಬಿಸಿದ್ದಿತು. ರಾಜರು, ಶ್ರೀಮಂತರು ಮತ್ತು ಗ್ರಾಮ ಸಂಸ್ಥೆಗಳು, ಕೆಲವೊಮ್ಮೆ ಸಾಮಾನ್ಯರು, ಕೆರೆ, ಬಾವಿಗಳನ್ನು ಕಟ್ಟಿಸುವುದು ಶ್ರೇಯಸ್ಕರವೆಂದು ನಂಬಿದ್ದರು. ಕಟ್ಟಿಸಿದ ಕೆರೆ, ಬಾವಿಗಳನ್ನು ಯಾರೇ ಆಗಲೀ ನಾಶಪಡಿಸುವುದು ಅತ್ಯಂತ ಪಾಪಕರವೆಂಬ ಭಾವನೆ ಇದ್ದಿತು. ವರದಾ ನದಿಗೆ ಒಂದು ಮಹಾ ಸೇತುವೆ ಇದ್ದಿತು. ನದಿಗಳನ್ನು ತೆಪ್ಪಗಳಲ್ಲಿ ದಾಟುವ ಸ್ಥಳವನ್ನು 'ಕಡಹು' ಈಗಿನ (ಕಡ) ಎಂದು ಕರೆಯುತ್ತಿದ್ದರು. ಇರಾಳಿ ಎಂಬ ಹೊಳೆಯನ್ನು ದಾಟುವ ಕಡಹಿನ ಹೆಸರು ಒಂದು ಶಾಸನದಲ್ಲಿದೆ[೩]. ಕಡಹುಗಳಲ್ಲಿ ನಜರನ್ನು ತೆಪ್ಪಗಳ ಮೂಲಕ ಸಾಗಿಸುವ ಅಂಬಿಗನಿಗೆ ಹೊಲಗಳನ್ನು ಬಿಟ್ಟು ಕೊಡುತ್ತಿದ್ದ ಸಂಗತಿಯನ್ನು ಅಲ್ಲಿನ ಶಾಸನ ದಾಖಲಿಸಿದೆ. ಅದೇ ರೀತಿ ಈ ಗದ್ದೆಯಲ್ಲಿ ಬೆಳೆವ ಫಸಲಿನ ಹತ್ತನೇ ಒಂದು ಭಾಗದ ಕರ(ತೆರಿಗೆ)ವನ್ನು ಮನ್ನಾ ಮಾಡಿದ್ದೇವೆ ಎನ್ನುತ್ತದೆ ಕನ್ನಡದ ಮೊದಲ ಶಾಸನವಾದ ಹಲ್ಮಿಡಿ ಶಾಸನ (ಕ್ರಿ.ಶ. ಸು. ೪೫೦).[೪] ಕೆರೆಗಳು ಪ್ರಾಚೀನ ಕರ್ನಾಟಕದ ನೀರಾವರಿ ಸಾಧನಗಳಲಿ ಅತ್ಯಂತ ಪ್ರಮುಖವಾದವುಗಳು. ರಾಜರು, ಪೆರ್ಗ್ಗಡೆ (ಹೆಗ್ಗಡೆ ಎಂದರೆ ಊರ ಪ್ರಮುಖರು) ಮುಂತಾದ ಅಧಿಕಾರಿಗಳು, ಸನ್ಯಾಸಿಗಳು, ಹೆಣ್ಣು ಮಕ್ಕಳು ಕೆರೆಗಳನ್ನು ಕಟ್ಟಿಸಿದ ನಿದರ್ಶನಗಳಿವೆ. ಶಿವಖಡನಾಗಸಿರಿ ಎಂಬ ಹೆಣ್ಣು ಮಗಳು ತಟಾಕ ನಿರ್ಮಿಸಿದ್ದನ್ನು ಬನವಾಸಿ ತಾರಕೇಶ್ವರ ದೇವಸ್ಥಾನದಲ್ಲಿಯ ಕ್ರಿ.ಶ. ೨-೩ನೇ ಶತಮಾನದ ಪ್ರಾಕೃತ ಶಾಸನ ಉಲ್ಲೇಖಿಸುತ್ತದೆ[೫]. ನಾಗಪ್ರತಿಷ್ಠೆಯ ಸಂದರ್ಭದಲ್ಲಿ ನಿರ್ಮಿಸಲಾದ ಕೆರೆಯ ಉದಾಹರಣೆಯು ಹೆಣ್ಣು ಮಗಳೊಬ್ಬಳು ಕಟ್ಟಿಸಿದ್ದೆನ್ನುವ

ದಾಖಲೆಯಲ್ಲದೆ ಕರ್ನಾಟಕದಲ್ಲೇ ತಟಾಕವನ್ನು ನಿರ್ಮಿಸಿದ್ದಕ್ಕೆ ಇದು ಮೊದಲ ಉದಾಹರಣೆಯಾಗಿದೆ. ಸೂಳೆಯೊಬ್ಬಳು ತನ್ನ ಔದಾರ್ಯವನ್ನು ತೋರಿ ಜನೋಪಕಾರಿಯಾದುದಕ್ಕೆ ಅತ್ಯುತ್ತಮ ಉದಾಹರಣೆಯಲ್ಲವೆ. ಇಂದಿಗು ಜೀವಂತವಿರುವ ಸೂಳೆಯಕೆರೆ? ಕೆರೆಗೋಸ್ಕರ ತನ್ನ ಪ್ರಾಣವನ್ನೇ ನೀಡಿ ಇನ್ನೂ ಜನಮನದ ನಾಲಿಗೆಯ ಮೇಲೆ ನಿಂತು ಕೆರೆಗೆ–ಹಾರವಾಗಿರುವುದು ಮದಗಮ್ಮ ಮೊದಲಾದ ಸ್ತ್ರೀಯರು ಕೆರೆಗಳ ನಿರ್ಮಾಣಕ್ಕೆ ನೀಡಿದ ಕೊಡುಗೆಗಳಾಗಿವೆ.

ಕೆರೆ ನಿರ್ಮಾಣದ ಮೂಲ ಉದ್ದೇಶವೇ ಕೃಷಿ, ನೀರಾವರಿಯ ವ್ಯವಸಾಯಕ್ಕೆ ಅತ್ಯಧಿಕ ನೀರಿನ ಅವಶ್ಯಕತೆಯಿರುವುದರಿಂದಲೇ ದೊಡ್ಡ ಪ್ರಮಾಣದ ಜಲ ಸಂಗ್ರಾಹಕದ ಅವಶ್ಯಕತೆಯಿತ್ತು. ಇದರಿಂದ ಕೆರೆಗಳನ್ನು ನಿರ್ಮಿಸಲಾಯಿತು. ಜಿಲ್ಲೆಯಲ್ಲಿ ಸಹ ಪುರಾತನ ಕಾಲದಿಂದಲೂ ಕೆರೆ ನೀರನ್ನು ಕೃಷಿ ಕಾರ್ಯಕ್ಕೆ ಬಳಸಿರುವುದು ಕಂಡುಬಂದಿದೆ. ಕೆರೆ ಏರಿಯ ಬದಿಯಲ್ಲಿರುವ ಅಚ್ಚುಕಟ್ಟು ಪ್ರದೇಶವೇ ಇದಕ್ಕೆ ಸಾಕ್ಷಿ. ಅಲ್ಲದೇ ಕೆಲವು ಶಾಸನಗಳು ಇದನ್ನು ಪುಷ್ಟೀಕರಿಸುತ್ತವೆ. ಪ್ರಾಚೀನ ಕಾಲದಲ್ಲಿ ರಾಗಿ, ಜೋಳ, ನವಣೆ, ಹತ್ತಿ, ಎಣ್ಣೆಕಾಳು, ಹುರುಳಿ, ಹರಕ ಮುಂತಾದವುಗಳನ್ನು ಒಣ ಭೂಮಿಯಲ್ಲೂ, ನೆಲ್ಲು, ವೀಳೆದೆಲೆ, ಅಡಿಕೆ, ಬಾಳೆ, ಆಲೇಕಬ್ಬು, ಮೆಣಸು, ಶುಂಠಿ ಮತ್ತು ಅರಿಶಿಣ ಮುಂತಾದ ಬೆಳೆಗಳನ್ನು ನೀರಾವರಿ ಭೂಮಿಯಲ್ಲೂ ಬೆಳೆಯುತ್ತಿದ್ದರು. ಆಗಿನ ಪದ್ಧತಿಯಲ್ಲಿ ಕೃಷಿ ಉತ್ಪನ್ನಗಳಿಗೆ ಸುಂಕ ನಿಗದಿ ಮಾಡುವಾಗ ಎಲೆ, ಸೇರು, ಎಣ್ಣೆ, ಮಾನ ಬೀಜದ ವರ ಇವನ್ನು ಪರಿಗಣಿಸಿ ಸುಂಕ ನಿರ್ಧಾರ ಮಾಡಲಾಗುತ್ತಿತ್ತು. ಈ ಪದ್ಧತಿ ಹೆಚ್ಚುಕಡಿಮೆ ಕಲ್ಯಾಣದ ಚಾಲುಕ್ಯರ ಕಾಲದಿಂದ ವಿಜಯನಗರದ ಅರಸರ ಕಾಲದವರೆಗೂ ಜಾರಿಯಲ್ಲಿದ್ದು, ನೀರಾವರಿಗೊಳಪಟ್ಟ ಭೂಮಿಯ ಮೇಲೆ ಹೆಚ್ಚು ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಹರಿಹರ, ದೊಡ್ಡೇರಿ ಮೊದಲಾದ ಸ್ಥಳಗಳಲ್ಲಿ ದೊರೆತ ಶಾಸನಗಳು ಪೆರ್ಗ್ಗೆರೆ, ಹಸಿರುವಾಣ, ಕಾಲುವೆ ಪಣ ಎನ್ನುವ ಪದಗಳನ್ನು ದಾಖಲಿಸಿದ್ದು, ಅವು ಅಂದು ಕೆರೆ ಮತ್ತು ನೀರಾವರಿ ಭೂಮಿಗಳಿಗೆ ವಿಧಿಸುತ್ತಿದ್ದ ತೆರಿಗೆಯ ಹೆಸರುಗಳಾಗಿದ್ದು, ಅವುಗಳನ್ನು ಕೆರೆಯ ನೀರಿನ ಬಳಕೆದಾರರು ಪಾವತಿಸಬೇಕಾಗಿತ್ತು.

**೬.೩. ಜಲ ನಿರ್ವಹಣೆ ಮತ್ತು ಆಯಗಾರ ಪದ್ಧತಿ**

ಪ್ರಾಚೀನ ಭಾರತದಲ್ಲಿ ಗ್ರಾಮಗಳು ಸ್ವಾವಲಂಬನೆ ಸಾಧಿಸಿದ್ದವು. ಅದರಂತೆ ಅವುಗಳು ತಮ್ಮ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಮತ್ತು ಗ್ರಾಮಾಡಳಿತದ ಅನುಕೂಲಕ್ಕಾಗಿ ಕೆಲ ಸ್ಥಳೀಯ ಆಡಳಿತ ಸಂಸ್ಥೆಗಳನ್ನು ಇಲ್ಲವೇ ಸಂಘ ಸಂಸ್ಥೆಗಳನ್ನು ರೂಪಿಸಿಕೊಂಡಿದ್ದವು. ಅವುಗಳಲ್ಲಿ 'ಮಣಿಗ್ರಾಮಂ' ಮತ್ತು ವರ್ತಕ ಸಂಘಗಳು, ಜಾಜಮನಿ ವ್ಯವಸ್ಥೆ ಮುಂತಾದವುಗಳನ್ನು ಉಲ್ಲೇಖಿಸಬಹುದು. ಕೆರೆ ಸಂಬಂಧಿ ಜಲ ನಿರ್ವಹಣೆಗಾಗಿ ಇದೇ ರೀತಿಯ ಪದ್ಧತಿ ಕರ್ನಾಟಕದಲ್ಲಿ ಇರುವುದನ್ನು ನಾವು ಗುರುತಿಸಬಹುದು. ಆ ಕುರಿತ ವಿವರ ಈ ಮುಂದಿನಂತಿದೆ.

ಪ್ರಾಚೀನ ಕಾಲದಲ್ಲಿ ಉತ್ತರ ಭಾರತದಲ್ಲಿ ಅದರಲ್ಲೂ ವಿಶೇಷವಾಗಿ ಗುಜರಾತ್ ಮತ್ತು ಮಹಾರಾಷ್ಟ್ರದಲ್ಲಿನ ಗ್ರಾಮಗಳು ಜಾಜಮನಿ ಪದ್ಧತಿಯನ್ನು ಅನುಸರಿಸುತ್ತಿದ್ದವು. ಆ ಪ್ರಕಾರ ಗ್ರಾಮವೊಂದರಲ್ಲಿದ್ದ ಭೂರಹಿತ ಕೃಷಿ ಕಾರ್ಮಿಕರು ತಾವು ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ಭೂ

ಒಡೆಯರಿಂದ ಪಡೆಯುತ್ತಿದ್ದ ದವಸಧಾನ್ಯ ಇಲ್ಲವೇ ವಸ್ತುಗಳನ್ನು ಪಡೆಯುವುದಕ್ಕೆ ಜಾಜಮನಿ ಪದ್ಧತಿಯೆಂದು ಕರೆಯುತ್ತಿದ್ದರು. ಇದರೊಂದಿಗೆ ವಿವಿಧ ಕುಶಲಕರ್ಮಿಗಳು ತಮ್ಮ ಉತ್ಪಾದಿತ ವಸ್ತುಗಳನ್ನು ಆ ಗ್ರಾಮದಲ್ಲಿ ಉತ್ಪಾದಿತವಾಗುತ್ತಿದ್ದ ಕೃಷಿ ವಸ್ತುಗಳಿಗೆ ಕೊಟ್ಟು ವಸ್ತು ವಿನಿಮಯ ಮಾಡಿಕೊಳ್ಳುತ್ತಿದ್ದ ಪದ್ಧತಿಯಾಗಿದೆ. ಅಲ್ಲದೇ ಆ ಮೂಲಕ ಬಂದ ಆದಾಯದಿಂದ ಆ ಗ್ರಾಮದ ಆಡಳಿತ ಮತ್ತು ಇತರೆ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲಾಗುತ್ತಿತ್ತು. ಈ ಪದ್ಧತಿಯನ್ನೇ ಜಾಜಮನಿ ಪದ್ಧತಿಯೆಂದು ಗುರುತಿಸಲಾಗಿದೆ. ಇದೇ ಪದ್ಧತಿಯೇ ಮುಂದೆ ದಕ್ಷಿಣ ಭಾರತದಲ್ಲಿ ಮಧ್ಯಯುಗದಲ್ಲಿ ಬಾರಾಬಲೂತಿ ಅಥವಾ ಆಯಗಾರ ಪದ್ಧತಿಯೆಂದು ಹೆಸರಾಯಿತು.[೧೬]

ಗ್ರಾಮಾಡಳಿತದ ಅನುಕೂಲಕ್ಕಾಗಿ ಕರ್ನಾಟಕದಲ್ಲಿಯೂ ಹಿಂದಿನಿಂದಲೂ ಆಯಗಾರ ಪದ್ಧತಿ ಅಲಿಖಿತವಾಗಿ ಉಳಿದುಕೊಂಡು ಬಂದಿದ್ದು, ಅದು ಇಂದಿಗೂ ಗ್ರಾಮೀಣ ಪರಿಸರದಲ್ಲಿ ಉಳಿದುಕೊಂಡು ಬಂದಿದೆ. ಇದನ್ನು ಆ ಗ್ರಾಮದ ಶ್ರೇಣೀಕರಣ ವ್ಯವಸ್ಥೆ ಮತ್ತು ಸಾಮಾಜಿಕ ಚೌಕಟ್ಟಿನ ಹಿನ್ನೆಲೆಯಲ್ಲಿ ಗುರುತಿಸಬಹುದಾಗಿದೆ. ಆಯಗಾರರು ಎಂದರೆ ಆ ಗ್ರಾಮದ ಗ್ರಾಮಾಧಿಕಾರಿಗಳು ಎಂದು ಸರಳವಾಗಿ ಅರ್ಥೈಸಬಹುದು. ಇವರನ್ನು ಕೈವಾಡದವರು ಎಂದೂ ಸಹ ಗುರುತಿಸಲಾಗಿದೆ. ಅವರು ಹನ್ನೆರಡು ಜನರಿದ್ದು, ಅಂದು ಗ್ರಾಮದ ಆಡಳಿತಕ್ಕೆ ಮತ್ತು ಅಭಿವೃದ್ಧಿಗೆ ಕಾರಣರಾಗಿದ್ದರು. ಅವರೇ ಗೌಡ, ಶ್ಯಾನುಭೋಗ, ಪಂಚಾಂಗಿ, ತಳವಾರ, ತೋಟಿ, ನೀರುಗಂಟಿ, ಅಗಸ, ನಾಯಿಂದ, ಕುಂಬಾರ, ಲೋಹಗಾರ, ಬಡಗಿ ಮತ್ತು ಅಕ್ಕಸಾಲಿ. ಇವರಲ್ಲಿ ಅಧಿಕಾರಿ ವರ್ಗದವರು ಮತ್ತು ಸೇವಾ ವರ್ಗದವರೆಂದು ಎರಡು ಭಾಗ ಮಾಡಬಹುದಾಗಿದೆ. ಅಧಿಕಾರಿ ವರ್ಗಕ್ಕೆ ಸೇರಿದ ಗೌಡ, ಶ್ಯಾನುಬೋಗ ಸ್ಥಳೀಯರ ರಕ್ಷಣೆ, ಶಾಂತಿ, ನ್ಯಾಯಪಾಲನೆ ಮೊದಲಾದ ಆಡಳಿತಾತ್ಮಕ ಕಾರ್ಯಗಳನ್ನು ನೋಡಿಕೊಂಡರೆ ಉಳಿದವರು ಗ್ರಾಮದಲ್ಲಿನ ಶ್ರೀಮಂತರಿಗೆ ಇಲ್ಲವೇ ಜಮೀನುದಾರರಿಗೆ ತಮ್ಮ ಶ್ರಮದ ಸೇವೆಯನ್ನು ಒದಗಿಸಿ ಆ ಮೂಲಕ ಜನರ ವಿವಿಧ ಸೇವಾ ಕಾರ್ಯಗಳನ್ನು ಮಾಡಿ ಅದಕ್ಕಾಗಿ ನಿರ್ದಿಷ್ಟ ಪ್ರತಿಫಲವನ್ನು ದವಸ ಧಾನ್ಯಗಳ ರೂಪದಲ್ಲಿ ವರ್ಷಕ್ಕೊಮ್ಮೆ ಇಲ್ಲವೇ ನಿಗದಿತ ಅವಧಿಗಾಗಿ ಜನರಿಂದ ಪಡೆಯುತ್ತಿದ್ದರು. ಉದಾಹರಣೆಗೆ ಒಬ್ಬ ಜಮೀನ್ದಾರನಿಗೆ ಬೇಕಾದ ಕುಂಬಗಳನ್ನು ಕುಂಬಾರರು, ಅವನಿಗೆ ಬೇಕಾದ ವ್ಯವಸಾಯದ ಸಾಧನಗಳನ್ನು ಬಡಿಗಿ ಮತ್ತು ಅವನಿಗೆ ಬೇಕಾದ ಬಾನಿ, ಪಾದರಕ್ಷೆ, ಹಗ್ಗ, ಮೊದಲಾದವುಗಳನ್ನು ತೋಟಿ(ಮಣೆಗಾರ) ಉಚಿತವಾಗಿ ಮಾಡಿಕೊಟ್ಟು ಅದಕ್ಕೆ ಪ್ರತಿಫಲವಾಗಿ ಸುಗ್ಗಿಯ ವೇಳೆ ಆ ಜಮೀನುದಾರರಿಂದ ದವಸ ಧಾನ್ಯಗಳನ್ನು ಪಡೆಯುವ ವ್ಯವಸ್ಥೆಯನ್ನು ಆಯಗಾರ ಪದ್ಧತಿಯೆಂದು ಕರೆಯಲಾಗಿದೆ. ಕೆರೆಗಳ ಆಡಳಿತ ನಿರ್ವಹಣೆಯಲ್ಲಿ ಈ ಆಯಗಾರರು ಸ್ಥಳೀಯ ಮಟ್ಟದಲ್ಲಿ ಪ್ರಮುಖ ಪಾತ್ರವಹಿಸಿರುವುದನ್ನು ನಾವು ಗುರುತಿಬಹುದಾಗಿದೆ.[೧೭]

ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಿ ಕೈಗೊಳ್ಳಲಾದ ಹೊಸ ಕೆರೆಗಳ ನಿರ್ಮಾಣ ಮತ್ತು ಹಳೆ ಕೆರೆಗಳ ಪುನರುಜ್ಜೀವನ ಕಾರ್ಯ ಎಷ್ಟು ವ್ಯಾಪಕವಾಗಿತ್ತು. ಕೆರೆಗಳ ಕಾಮಗಾರಿ ಕೂಡ ಎಷ್ಟು ಕೌಶಲ ಪೂರ್ಣವಾಗಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಕೆರೆಯಿಂದ ತೂಬಿನ ಮೂಲಕ ಕಾಲುವೆಗೆ ನೀರು ಹಾಯಿಸುವುದು, ಗದ್ದೆ ಭೂಮಿಗಳಿಗೆ ಆ ನೀರು ಸರಿಯಾಗಿ ವಿತರಣೆಯಾಗುವಂತೆ ನೋಡಿಕೊಳ್ಳುವುದು, ಈ ಕೆಲಸಕ್ಕಾಗಿಯೇ ನೀರಗಂಟಿ ಎಂಬ ಸ್ಥಾನವೊಂದನ್ನು ಅವರ ಕಾಲದಲ್ಲಿ

ಕಲ್ಪಿಸಲಾಗಿತ್ತು. ಗ್ರಾಮಾಡಳಿತದ ವ್ಯವಸ್ಥೆಯಲ್ಲಿ ೧೨ ಜನ ಕೈವಾಡದವರು ಎಂದು ಕರೆಯಲಾಗುತ್ತಿದ್ದು, ಅವರಲ್ಲಿ ನೀರಗಂಟಿಯೂ ಒಬ್ಬನಾಗಿರುತ್ತಿದ್ದ ಎಂದರೆ, ಕೆರೆ ಕಾಲುವೆಗಳ ನಿರ್ವಹಣೆಯನ್ನು ನೋಡಿಕೊಳ್ಳುತ್ತಿದ್ದ ವ್ಯಕ್ತಿಗೆ ಪಾಳೆಯಗಾರ ಪ್ರಭುತ್ವ ಎಂತಹ ಪ್ರಾಶಸ್ತ್ಯವನ್ನು ನೀಡಿತ್ತು ಮತ್ತು ಅವರು ಕೆರೆ ನೀರಾವರಿಗೆ ಎಷ್ಟು ಆದ್ಯತೆ ಕೊಟ್ಟಿದ್ದರು ಎಂಬುದು ಸ್ಪಷ್ಟವಾಗುತ್ತದೆ.[೧೮]

ಜಿಲ್ಲೆಯ ಕೆಲವು ಶಾಸನಗಳು ಕೆರೆ ನಿರ್ಮಾಣ ಇಲ್ಲವೇ ಕೆರೆ ದುರಸ್ತಿ ಕಾರ್ಯವನ್ನು ಆಯಗಾರರೆನಿಸಿದ ಕೆಲವರು ಮಾಡಿದ ಉಲ್ಲೇಖಗಳು ಮತ್ತು ಇದಕ್ಕೆ ಪ್ರತಿಯಾಗಿ ಅವರು ದಾನದತ್ತಿಗಳನ್ನು ಸ್ವೀಕರಿಸಿದ ವಿವರಗಳು ಜಿಲ್ಲೆಯ ಶಾಸನಗಳಲ್ಲಿವೆ. ಕ್ರಿ.ಶ. ೧೫೭೩ರ ಶಾಸನ[೧೯] ಸಿದ್ಧಯ್ಯನ ಕೋಟೆ ಪಶ್ಚಿಮಕ್ಕೆ ಇರುವ ಕೆರೆಯು ಬಹಳ ಕಾಲದಿಂದಲೂ ಒಡೆದು ಹೋಗಿದ್ದು, ದುರಸ್ತಿಯಾಗದಿರುವ ಕಾರಣ, ಆ ಗ್ರಾಮದ ಗೌಡ, ಶಾನುಭೋಗ, ಮತ್ತು ಇತರೆ ಗ್ರಾಮಸ್ಥರು ಮಹಾನಾಯಕಾಚಾರ್ಯ ಪದ್ದಣ್ಣನಾಯಕನಿಗೆ ಆ ಕೆರೆಯ ತೂಬಿನ ಕೆಳಗಿನ ಜಮೀನುಗಳನ್ನು ನೀಡುವುದಾದಲ್ಲಿ, ನಾವು ಕೆರೆಯನ್ನು ದುರಸ್ತಿಗೊಳಿಸುತ್ತೇವೆಂದು ಹೇಳಿ ಆ ಕಾಮಗಾರಿಯನ್ನು ಅವರೇ ಪೂರ್ಣಗೊಳಿಸುತ್ತಾರೆ. ೧೫೮೮ರ ವೇಣುಕಾಲಗುಡ್ಡದ ಶಾಸನ[೨೦] ಗುಡ್ಡದ ಸೀಮೆಯ ಗೊಳೇಯಕೆರೆ ಒಡೆದು ಹೋಗಿದ್ದು ಅದರ ದುರಸ್ತಿಗಾಗಿ, ಗುಡ್ಡದ ಕಾರಿಯಗೌಂಡನಿಗೆ ಕಟ್ಟುಕೊಡುಗೆ ಮಾನ್ಯ ನೀಡಿರುವುದನ್ನು ದಾಖಲಿಸಿದೆ. ಹೆಮ್ಮಿಗನೂರಿನ ಶಾಸನ ಆ ಗ್ರಾಮದ ದೇವಾಲಯ ಮತ್ತು ಕೆರೆಯನ್ನು ಪುನಶ್ಚೇತನಗೊಳಿಸಿದ್ದನ್ನು ದಾಖಲಿಸಿದೆ. ೧೬೯೨ರ ಬಲ್ಲಾಳು ಸಮುದ್ರದ ಶಾಸನ[೨೧] ಕೆರೆಯ ಕೋಡಿಯ ದುರಸ್ತಿಗಾಗಿ ಕೊಡುಗೆಯನ್ನು ವೀರಣ್ಣಗೌಡ, ರಾಮಯ್ಯ ಮತ್ತು ಮಹಾಂತಯ್ಯನಿಗೆ ಬಜೆ ವಾರಿ–೪, ಖಾ–೪೧/೨ ಮತ್ತು ತರಿ –೧/೨ ಭಾಗದ ಕೂಡುಗೆಯನ್ನು, ಜಹಾಗೀರ್‌ದಾರ್ ಅಬ್ದುಲ್ ಸಾಹೇಬ್, ಮುಜುಂದಾರ್ ವೆಂಕಟರಾಯ, ಹಮಲ್ದಾರ್ ಮಿರ್ಜಾಖಾನ್ ಹಾಗು ಬಡವ ಮಾದಿಗ ವೆಂಕಟಗಿರಿಯಪ್ಪನವರ ಪರವಾಗಿ ಕೆರೆಯ ಕೋಡಿಯನ್ನು ದುರಸ್ತಿಪಡಿಸಿದುದಕ್ಕಾಗಿ ನೀಡಿರುವುದನ್ನು ಉಲ್ಲೇಖಿಸಿದೆ.

ಅದೇ ರೀತಿ ಕ್ರಿ.ಶ. ೯೫ರ ಅಡನೂರು ಶಾಸನದ[೨೨] ಪ್ರಕಾರ ಮಹಾಸಾಮಂತ ಪೆರುಮಾಡಿಯ ಬಂಕ–ಉಜ್ಜನಿ ಬುಜಂಗೇಯ ಗೊಗ್ಗಿಮಯ್ಯ ಕದಂಬಳಿಗೆ ನಾಡನ್ನು ರಕ್ಷಿಸುತ್ತಿರುವಾಗ ಅವನ ಭಾವ ಮೈದ ಗಣ್ಣಯ್ಯ ಕೆರೆ ಅಚ್ಚುಕಟ್ಟಿನ ಭಾಗವನ್ನು ಶಾಂತಿ ಬಾವಲಿಗೆ ದತ್ತಿ ನೀಡಿರುವುದನ್ನು ದಾಖಲಿಸಿದೆ. ನುಳೆನೂರುವಿನ ೧೫೨೨ರ ಶಾಸನ[೨೩] ಮಾಚಗೊಂಡ ಮತ್ತು ಇತರ ಗೌಂಡರಾದಿಯಾಗಿ, ಮುಖ್ಯ ನಾಡದೇಶಿಶೆಟ್ಟಿ ಹಳೆಯ ಕೆರೆಯ ಅಚ್ಚುಕಟ್ಟಿನ ಅಡಿಕೆ ತೋಟಗಳನ್ನು ಮಾನ್ಯ–ಉಂಬಳಿಯಾಗಿ ನೀಡಿರುವುದನ್ನು ಪ್ರಸ್ತಾಪಿಸಿದೆ. ಅಲ್ಲದೇ ಕ್ರಿ.ಶ.೧೫೬೦ರ ತಳಕು ಶಾಸನ[೨೪] ಮಹಾ ನಾಯಕಾಚಾರ್ಯ, ಹರಟಿ ವಿಟ್ಟಣ್ಣ ನಾಯಕ, ತಳುಕಿನ ರೈತರು ಮತ್ತು ಶಾನುಬೋವ ಹಾಗು ದೊಡ್ಡೇರಿ ಸೀಮೆಯ ನಾಲ್ಕು ಸ್ಥಳಗಳ ರೈತರು ಮತ್ತು ಶಾನುಭೋಗರುಗಳಿಗೆ 'ಕೆರೆ ಮಾನ್ಯ' ನೀಡಿದುದನ್ನು ಉಲ್ಲೇಖಿಸಿದೆ. ದೊಡ್ಡ–ಉಳ್ಳಾರ್ತಿಯ ಕ್ರಿ.ಶ.೧೫೫೩ರ ಶಾಸನ[೨೫] ದೊಡ್ಡೇರಿ ನಾಡಗೌಡ ಬಾವಾರಶೆಟ್ಟಿಗೆ ಮಹಾಮಂಡಲೇಶ್ವರ ತಿರುಮಲರಾಯ ಉಳ್ಳಾವರ್ತಿ ಕೆರೆಯ ಅಚ್ಚುಕಟ್ಟಿನ ಭೂಮಿಯನ್ನು

ಕರಭಾರರಹಿತವಾಗಿ ನೀಡಿರುವುದನ್ನು ದಾಖಲಿಸಿದೆ. ಅದೇ ರೀತಿ ಕ್ರಿ.ಶ. ೧೫೪೮ರ ಶಾಸನ[೨೬] ವೀರಯ್ಯ ಸಲ್ಲಿಸಿದ ಸೇವೆಗಳಿಗಾಗಿ ಹಿರಿಯೂರ ಸ್ಥಳದ ಒಟ್ಟು ಹನ್ನೊಂದು ಸ್ಥಳಗಳ ೧೮೫ ಗ್ರಾಮಗಳ ವ್ಯಾಪ್ತಿಯ ಕಟ್ಟೆಗಳ ಅಚ್ಚುಕಟ್ಟುಗಳಲ್ಲಿ ಮಾನ್ಯಗಳನ್ನು ನೀಡಿರುವುದನ್ನು ದಾಖಲಿಸಿದೆ[೨೭]. ಕಾಮ-ಸಮುದ್ರದ ಶಾಸನ ಕಣಚಿ ಕೆರೆಯ ಅಚ್ಚುಕಟ್ಟಿನ ಹಲವು ಭೂಮಿಗಳನ್ನು ದೇವಾಲಯಕ್ಕೆ ದತ್ತಿ ಬಿಟ್ಟಿರುವುದನ್ನು ಸೂಚಿಸುತ್ತದೆ. ಕ್ರಿ.ಶ.೧೭೩೯ರ ಶಾಸನ[೨೮] ಮಂಗಳವಾಡ ಹೋಬಳಿಯ ಬುಡಸುಗೊಂಡನ ಹಳ್ಳಿಯನ್ನು ಅಲ್ಲಿನ ಬಾವಿ, ಕೊಳ ಮತ್ತು ಕೆರೆಗಳನ್ನು ಸೇರಿದಂತೆ ಭೂಮಿಯನ್ನು ಕರಬಾರರಹಿತವಾಗಿ ನೀಡಿ, ಅಗ್ರಹಾರವನ್ನಾಗಿಸಿದ್ದನ್ನು ದಾಖಲಿಸಿದೆ.

ಆಯಗಾರಪದ್ಧತಿಯ ನೀರುಗಂಟಿ ವ್ಯವಸ್ಥೆ ಇಂದಿಗೂ ಜಿಲ್ಲೆಯ ಕೆಲವು ಕಡೆ ಅಸ್ತಿತ್ವದಲ್ಲಿದೆ. ಚಳ್ಳಕೆರೆ ತಾಲೂಕಿನ ದೊಡ್ಡೇರಿ ಕೆರೆಗೆ ಸಂಬಂಧಿಸಿದ ನೀರಗಂಟಿಗಳು ಇಂದಿಗೂ ಕಾರ್ಯ ನಿರ್ವಹಿಸುತ್ತಿದ್ದಾರೆ. ಅವರಲ್ಲಿ ಆ ಕೆರೆಯ ದೊಡ್ಡ ತೂಬಿಗೆ ಸಂಬಂಧಿಸಿದವರೆಂದರೆ ನೀರಗಂಟಿ ಪಾಪಣ್ಣ, ದೊಡ್ಡೇರಿ ಸಿರಿಯಪ್ಪ, ದಾಸನಾಯಕನಹಟ್ಟಿ ಸಣ್ಣಬೋರಪ್ಪ, ಸರ್ಕಾರ ನೇಮಿಸಿದ ಚಿತ್ರದುರ್ಗದ ಹನುಮಂತಪ್ಪ ಪ್ರಮುಖರಾಗಿದ್ದಾರೆ. ಅದೇ ರೀತಿ ಚಿಕ್ಕ ತೂಬಿಗೆ ಸಂಬಂಧಿಸಿದ ನೀರುಗಂಟಿಗಳೆಂದರೆ ಕೆಂಚವೀರನಹಳ್ಳಿ ಪಾಲಯ್ಯ, ಗಿಡ್ಡ ಓಬಯ್ಯ, ಬಿ.ಡಿ.ಓಬಯ್ಯನವರು ಮುಖ್ಯರಾಗಿದ್ದು, ಅವರು ಇಂದಿಗೂ ಸೇವಾನಿರತರಾಗಿದ್ದಾರೆ.

**೬.೪. ಸ್ಥಳೀಯ ಆಡಳಿತ ವ್ಯವಸ್ಥೆ ಮತ್ತು ಕೆರೆಗಳು**

ಚಿತ್ರದುರ್ಗ ಜಿಲ್ಲೆ ಪ್ರಾಗೈತಿಹಾಸಿಕ ಕಾಲದಿಂದಲೂ ಮಾನವನ ನೆಲೆಯಾಗಿದ್ದು, ಇದು ಅನೇಕ ರಾಜಮನೆತನಗಳ ವ್ಯಾಪ್ತಿಗೊಳಪಟ್ಟಿದ್ದರೂ, ಈ ಪ್ರದೇಶವು ಪಾಳೆಯಗಾರರ ಕಾಲವನ್ನು ಬಿಟ್ಟರೆ ಯಾರ ಕಾಲದಲ್ಲಿಯೂ ಇದು ಕೇಂದ್ರ ಪ್ರಮುಖ ಪ್ರದೇಶ(Core region)ವಾಗಿರದೆ, ಅಧೀನ ಪ್ರದೇಶವಾಗಿದ್ದಿತ್ತು. ಆದ್ದರಿಂದ ಇಲ್ಲಿ ರಾಜ್ಯಾಡಳಿತ ಪ್ರಾಯೋಜಿತ ಮುಖ್ಯ ನೀರಾವರಿ ಕಾಮಗಾರಿಗಳು ಅನುಷ್ಠಾನವಾಗಿರುವುದಿಲ್ಲ. ಆದುದರಿಂದ ಇಲ್ಲಿನ ಬಹುತೇಕ ಕೆರೆಗಳನ್ನು ಸ್ಥಳೀಯ ಸಮುದಾಯಗಳು ನಿರ್ಮಿಸಿದ ಹಾಗು ನಿರ್ವಹಿಸಿದ ಉದಾಹರಣೆಗಳಿವೆ. ಇತರೆಡೆಯಂತೆ ಜಿಲ್ಲೆಯಲ್ಲಿನ ಅನೇಕ ಕೃಷಿ ಗುಂಪುಗಳು, ತಮ್ಮ ಬದುಕಿನ ಚಟುವಟಿಕೆಗಳಿಗೆ ಅಗತ್ಯವಾದ ಕೆರೆಗಳನ್ನು ನಿರ್ಮಿಸಿಕೊಂಡು, ಅದರ ನಿರ್ವಹಣೆಗಾಗಿ ಹತ್ತಾರು ನಿಯಮಗಳನ್ನು ರೂಪಿಸಿಕೊಂಡಿರುವುದನ್ನು ನಾವು ಗುರುತಿಸಬಹುದು. ಈ ಸಾಮಾಜಿಕ ಕಾರ್ಯಕ್ಕಾಗಿ ಅವರು ಜನರ ಮೆಚ್ಚುಗೆ ಮತ್ತು ಸಾಮಾಜಿಕ ಪ್ರತಿಷ್ಠೆಯನ್ನು ಗಳಿಸಿಕೊಂಡರು. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಕೆರೆಗಳು ಸ್ಥಳೀಯ ಆಡಳಿತ ವ್ಯವಸ್ಥೆಯಿಂದ ಯಾವ ರೀತಿ ನಿಯಂತ್ರಿಸಲ್ಪಡುತ್ತಿದ್ದವು ಎಂಬುದನ್ನು ಇಲ್ಲಿ ಅವಲೋಕಿಸಲಾಗಿದೆ.

ಬೃಹತ್ ನೀರಾವರಿ ಯೋಜನೆಗಳ ನಿರ್ಮಾಣ ವೆಚ್ಚದಾಯಕ ಮತ್ತು ಶ್ರಮದಾಯಕ. ಆದ್ದರಿಂದ ಕಡಿಮೆ ವೆಚ್ಚದಲ್ಲಿ ಸಾಮಾನ್ಯರು ಇಲ್ಲವೇ ಸ್ಥಳೀಯರಿಂದ ನಿರ್ವಹಿಸಬಹುದಾದವುಗಳೆಂದರೆ ಕೆರೆಗಳು ಮಾತ್ರ, ಇವುಗಳ ನಿರ್ಮಾಣ ಮತ್ತು ನಿರ್ವಹಣೆಯಲ್ಲಿ ಸ್ಥಳೀಯರು ಭಾಗವಹಿಸಿರುವುದನ್ನು ಮತ್ತು ಜನರ ಸಹಭಾಗಿತ್ವದಲ್ಲಿ ಅವುಗಳನ್ನು ನಿರ್ವಹಿಸಿರುವುದನ್ನು ನಾಡಿನ ಶಾಸನಗಳು ಉಲ್ಲೇಖಿಸಿವೆ.[೨೯]

ಅದೇರೀತಿ ಹೊಸ ಕೆರೆ ನಿರ್ಮಾಣ ಮತ್ತು ಕೆರೆಗಳಲ್ಲಿ ಸಂಗ್ರಹಿಸಲಾದ ನೀರಿನ ಬಳಕೆಗೆ ರೂಪಿಸಲಾದ ನಿರ್ದಿಷ್ಟ, ಸ್ಪಷ್ಟ ನಿಯಮಗಳನ್ನು ಮತ್ತು ಅದರಲ್ಲಿ ಅಲ್ಲಿನ ಸ್ಥಳೀಯರ/ಮಹಾಜನರ ಪಾತ್ರವನ್ನು ಸಹ ಶಾಸನಗಳು ದಾಖಲಿಸಿವೆ. ಸ್ವಾತಂತ್ರ್ಯ ಪೂರ್ವದಲ್ಲಿಯ ಆಡಳಿತದಲ್ಲಿ ರಾಜನೇ ಶ್ರೇಷ್ಠ ಅಧಿಕಾರಿಯಾಗಿದ್ದ. ಎಲ್ಲಾ ವ್ಯವಸ್ಥೆಯಂತೆ ನೀರಾವರಿ ವ್ಯವಸ್ಥೆಯೂ ಆತನ ಕೈಯಲ್ಲೇ ಇರುತ್ತಿದ್ದಿತಾದರೂ ಮಂತ್ರಿಗಳು, ಸಂಧಿವಿಗ್ರಹಿಗಳೂ, ಊರ ಗೌಡರು, ಜಲ ಸೂತ್ರಧಾರರು, ಶ್ಯಾನುಭೋಗರು, ನೀರ್ಗಂಟಿಗಳು, ತಳವಾರರು, ಮಹಾಜನರು, ಗ್ರಾಮ ಪಂಚಾಯತಿಯ ಪಂಚರು ನೀರಿನ ನಿರ್ವಹಣೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದರು. ರಾಜನು ದತ್ತಿ ಬಿಡಲು ಅಥವಾ ಕೆರೆ ಕಟ್ಟೆ ಇತ್ಯಾದಿಗಳನ್ನು ಕಟ್ಟಿಸಲು ಅನುಮತಿ ನೀಡುತ್ತಿದ್ದನು. ಕೆಲವೊಮ್ಮೆ ಭೂಮಿಯನ್ನು ತಾವೇ ಸ್ವತಃ ಕೊಂಡುಕೊಂಡದ್ದನ್ನು ದಾನ ಮಾಡುತ್ತಿದ್ದ. ಈ ವ್ಯವಸ್ಥೇ 'ಚಾಣಕ್ಯ'ನ ಕಾಲದಿಂದಲೂ ಇದ್ದಿತ್ತೆಂಬುದು (ಕ್ರಿ.ಶ. ೨) ವಿದ್ವಾಂಸರ ಅಭಿಪ್ರಾಯ. ಪೆರ್ಗ್ಗಡೆ, ಗಾವುಂಡ (ಗೌಡ), ಮಹಾಜನರು ಇತ್ಯಾದಿ ಶಬ್ದಗಳು ಊರಿನ ಹಿರಿಯರನ್ನು ಪಂಚಾಯಿತಿ ಪ್ರಮುಖರನ್ನು ಸೂಚಿಸುವ ಶಬ್ದಗಳಾಗಿದ್ದೂ, ಅವು ಸ್ಥಳೀಯ ಆಡಳಿತದಲ್ಲಿ ಮತ್ತು ಕೆರೆಗಳ ಆಡಳಿತ ನಿರ್ವಹಣೆಯಲ್ಲಿ ಅವರ ಪಾತ್ರವನ್ನು ಸೂಚಿಸುತ್ತವೆ.

ಒಂದು ಪ್ರದೇಶದಲ್ಲಿ ಕೆರೆಗಳನ್ನು ಕಟ್ಟುವ ಮೊದಲೇ ನೀರಿನ ಹರಿವನ್ನು ಗಮನಿಸಬೇಕು. ಅದರಿಂದ ಕೆಲವರಿಗೆ ಯಾವ ರೀತಿಯ ಹಾನಿಯುಂಟಾಗುತ್ತದೆ? ಅದಕ್ಕೆ ಪರಿಹಾರವೇನು? ನೀರಿನ ನಿರ್ವಹಣೆಯಲ್ಲಿ ಜನರ ಪಾತ್ರವೇನು? ನೀರು ಹೆಚ್ಚಾಗಿ ಹರಿದಾಗ ಉಂಟಾಗುವ ಕ್ಷಾರೀಯ/ ಆಮ್ಲೀಯತೆಯಿಂದಾಗಿ ಭೂ ಸತ್ವವು ಕಡಿಮೆಯಾದಾಗ ಅದಕ್ಕೆ ತಕ್ಕ ಪರಿಹಾರವೇನು? ಇತ್ಯಾದಿಗಳನ್ನು ನಾಡಿನ ಶಾಸನಗಳು ನೇರವಾಗಿ ದಾಖಲಿಸಿವೆ. ಈ ಕುರಿತಂತೆ ತುರುವೇಕೆರೆಯ ಶಾಸನವೊಂದು ಈ ಮುಂದಿನ ಅಂಶಗಳನ್ನು ಸ್ಪಷ್ಟಪಡಿಸುತ್ತದೆ.[೨೦]

೧. ಹೊಸದಾಗಿ ಕೆರೆ ಕಟ್ಟುವಂತಹವರು ತಮ್ಮ ಊರ/ಹಳ್ಳಿಯ ಹಳ್ಳದ ಬಳಿ ಇರುವ ತಮ್ಮ ಭೂಮಿಗಳನ್ನೆ ಉಪಯೋಗಿಸಿಕೊಳ್ಳಬೇಕು.

೨. ಕಟ್ಟೆ, ಕಿರು ಕಟ್ಟೆಗಳನ್ನು ಕಟ್ಟುವಲ್ಲಿ ಮತ್ತೊಬ್ಬರ ಕ್ಷೇತ್ರಕ್ಕೆ ಹಾನಿಯಾಗದಂತೆ ಮೊದಲೇ ಒಡಂಬಡಿಕೆಯನ್ನು ಮಾಡಿಕೊಂಡು ಕಟ್ಟಬೇಕು.

೩. ಕೆರೆಯ (ಮೇಲಂಕಣ) ಎತ್ತರವನ್ನು ಹೆಚ್ಚಿಸುವಾಗ ಅದರ ಹಿನ್ನೀರಿನಿಂದ ಮುಳುಗುವ ಭೂಮಿಯವರು ಹಾಗೆ ಮಾಡಬಾರದೆಂದು ತಡೆಯಲಾಗದು. ಇಂಥ ಸಮಸ್ಯೆ ಬಂದಲ್ಲಿ ಅದನ್ನು ಹೇಗೆ ಬಗೆಹರಿಸಿಕೊಳ್ಳಬೇಕೆಂದು ಉದಾಹರಣೆ ಸಹಿತ ಈ ಶಾಸನದಲ್ಲಿ ಹೇಳಲಾಗಿದೆ. "ಅಯ್ಯರಸನ ಕೆರೆಯ ಎತ್ತರವನ್ನು ಹೆಚ್ಚಿಸಿದರೆ ಅದರ ನೀರೊತ್ತಿನಿಂದ ಅರಳಿಯ ಕೆರೆಯ ನೀರು ಹೆಚ್ಚಾಗಿ, ಈ ಕೆರೆಯ ಹಿಂದಿನ ಗದ್ದೆಗಳು ಮುಳುಗಡೆಯಾಗುತ್ತದೆ. ಆಡನ ಹಳ್ಳಿಯಲ್ಲಿರುವ ಮೊದಲ ತೋಟದ ತುದಿಯ ಬಯಲಲ್ಲಿ ಇರುವಂಥ ಜಾಗದಲ್ಲಿ ಮಹಾಜನಗಳು ರಾಜಗಟ್ಟೆ ಕಟ್ಟಿಸಬೇಕು ಅದರ ಎರಡೂ ಕೋಡಿಗಳಿಂದ ಹರಿದು ಬರುವ ನೀರು ಈಗಾಗಲೇ ಇರುವ ಗದ್ದೆಯ ಸ್ಥಳಕ್ಕೆ ಬಂದು ಅವರು ತಮ್ಮ ತಮ್ಮ ಬೆದ್ದಲಿಗೆ ಬದಲಾಗಿ ತಾಳಕೆರೆಯ ಹೊಲಗಳನ್ನು ತೆಗೆದುಕೊಳ್ಳುವರು. ಕೆಂಚನಕಟ್ಟೆಯ ಜನರು ಅವರ ಕೆರೆಯನ್ನು ತಾವೇ ಕಟ್ಟಿಸಿಕೊಳ್ಳಬೇಕು".

೪. ಕೆರೆ ಕಟ್ಟುವ ಮುನ್ನವೇ ಇದ್ದ ಬಂಡಿ ದಾರಿಗಳನ್ನು ಹಾಗೆಯೇ ಬಿಡಬೇಕು. ಆ ಜಾಗವನ್ನು ನಮ್ಮದು ಅಥವಾ ನಿಮ್ಮದು ಎಂದು ಜಗಳವಾಡಬಾರದು.

೫. ಸೋಮನಾಥ ಸಮುದ್ರದ ಎರಡು ಕೋಡಿಗಳ ಕಾಲುವೆಯ ಮಾರ್ಗದ ಮೂಲಕ ನೀರು ಹರಿವ ಸ್ಥಳದಲ್ಲಿ, ಕೋಡಿಯನ್ನು ಬಿಟ್ಟು ಉಳಿದ ಒಣ ಭೂಮಿಗೆ ಹಾನಿಯುಂಟಾದರೆ ಅಥವಾ ಜೌಗಿನಿಂದ ಕೂಡಿ ವ್ಯವಸಾಯಕ್ಕೆ ಯೋಗ್ಯವಾಗಿರದಿದ್ದರೆ ಮಹಾಜನರು ಅವರಿಗೆ ಆದ್ಯತೆಯ ಮೇಲೆ ಅವರವರ ಭೂಮಿಗೆ ತಕ್ಕ ಪರಿಹಾರವಾಗಿ ಬೇರೆ ಭೂಮಿಯನ್ನು ಸೋಮನಾಥ ಸಮುದ್ರದ ಜನರಿಗೆ ಕೊಡಬೇಕು.

೬. ಪ್ರಜೆಗಳಿಗೆ ಯಾವ ತೊಡಕು ಬಂದರೂ ತುರುವೇಕೆರೆಯ ಅಗ್ರಹಾರದ ಮಹಾಜನಗಳು ನ್ಯಾಯಸಮ್ಮತವಾದ ತೀರ್ಮಾನವನ್ನು ಕೊಡುತ್ತಾರೆ.

೭. ಪ್ರತಿ ಗೃಹಸ್ಥರು ಮಾಳಿಗೆಯ ಮನೆಯನ್ನು ಕಟ್ಟುವಾಗ ಬಾವಿ, ಬಚ್ಚಲುಗಳನ್ನು ಕಟ್ಟುವಾಗ, ಕೆರೆ ಕಟ್ಟೆಗಳ ದುರಸ್ತಿಗೆ ಬೇಕಾಗುವ ಕಲ್ಲುಗಳನ್ನು ಒದಗಿಸಬೇಕು. ಅಲ್ಲದೆ ಕೆರೆಗೆ ಹೆಚ್ಚು ನೀರು ಬಂದಾಗ ಅದರಿಂದ ಉಂಟಾಗುವ ಹಾನಿ ಎಂದರೆ ಕೆರೆ ಏರಿ ಒಡೆಯುವುದಾಗಲೀ, ನೀರೊತ್ತಿನಿಂದ ಕೆರೆಯ ಮೇಲಿನ ಹೊಲ ಗದ್ದೆಗಳ ಬೆಳೆಗೆ ಹಾನಿಯುಂಟಾದರೆ, ಕಾಲುವೆ, ತೂಬುಗಳ ದುರಸ್ತಿ, ಕೊರಕಲು ಇತ್ಯಾದಿ ಉಂಟಾದಾಗ ಅವುಗಳ ಖರ್ಚಿಗೆ ಸಹಾಯ ಮಾಡುವುದಿಲ್ಲ ಎಂದು ಜನರು ಹೇಳಬಾರದು. ಈ ಶಾಸನವನ್ನು ಮೀರಿದರೆ ಚಕ್ರವರ್ತಿ ವೀರನಾರಸಿಂಹದೇವರ ಆಣೆ, ಸೋಮಣ್ಣ ದಂಡನಾಯಕನ ಆಣೆ, ಅಶೇಷ ಮಹಾಜನಗಳ ಸಾಕ್ಷಿಯಾಗಿ ತಮ್ಮ, ತಮ್ಮ ಮಾತಾಪಿತೃಗಳ ಆಣೆಯಾಗಿ ತಮ್ಮ ಇಷ್ಟದೇವತೆಯ ಆಣೆಯಾಗಿ ಪಾಲಿಸತಕ್ಕದ್ದು. ಇದನ್ನು ತಪ್ಪದಂತೆ ನಡೆಸಿಕೊಡುತ್ತೇವೆ ಎನ್ನಲು ತುರುವೇಕೆರೆ 'ಮಹಾಜನರು' ಶ್ರೀಪ್ರಸನ್ನ ದೇವರ ಹೆಸರಿನಲ್ಲಿ ಸಾಕ್ಷಿ (ವೊಪ್ಪ) ನೀಡುತ್ತಿದ್ದೇವೆ. "ಸ್ವಹಸ್ತ ದೊಪ್ಪ ಶ್ರೀರಾಮನಾಥ".

ಈ ನಿಯಮಗಳನ್ನು ಈಗಿನ ಪರಿಸ್ಥಿತಿಗೆ ತಕ್ಕಂತೆ ಪರಿಷ್ಕರಿಸಿ ಬಳಸಿಕೊಳ್ಳುವತ್ತ ಚಿಂತನೆ ನಡೆಸಿದರೆ ನಮ್ಮ ಗ್ರಾಮಗಳ, ರಾಜ್ಯಗಳ ನಡುವೆ ಇರುವ ಜಲ ವಿವಾದಗಳನ್ನು ಬಗೆಹರಿಸುವಲ್ಲಿ ಸಹಾಯವಾಗುತ್ತದಲ್ಲವೆ? ಇದೇ ಮಾದರಿಯಲ್ಲಿ ಕೆರೆಗಳ ನಿರ್ವಹಣೆಯಲ್ಲಿ ಸ್ಥಳೀಯ ಆಡಳಿತ ಪಾತ್ರ ಮತ್ತು ಸ್ವರೂಪವನ್ನು ಜಿಲ್ಲೆಯ ಹೊಸದುರ್ಗ ತಾಲೂಕಿನ ನೀರಗುಂದದ ಶಾಸನವು ದಾಖಲಿಸಿದೆ. ಇದು ಪ್ರಾಚೀನ ಕಾಲದ ನೀರಾವರಿ ವ್ಯವಸ್ಥೆಗೆ ಸಂಬಂಧಿಸಿದ ಅನೇಕ ಅಮೂಲ್ಯ ಸಂಗತಿಗಳನ್ನು ನಮಗೆ ನೀಡುತ್ತದೆ.[೫೦] ಕ್ರಿ.ಶ. ೧೧೪೨ರ ಈ ಶಿಲಾ ಶಾಸನ ಹೊಯ್ಸಳ ಚಕ್ರವರ್ತಿ ೧ನೇ ನರಸಿಂಹನ ಕಾಲದಲ್ಲಿ 'ಉದ್ಭವನರಸಿಂಹಪುರ' ಎಂಬ ಹೆಸರಿನ ಅಗ್ರಹಾರವಾಗಿದ್ದ ನೀರಗುಂದದ ಮಹಾಜನಗಳು ಸಭೆ ಸೇರಿ ರೂಪಿಸಿದ ಸ್ಥಳೀಯ ಆಡಳಿತ ನೀತಿಯನ್ನು ಸ್ಪಷ್ಟಪಡಿಸುತ್ತದೆ. ಅದರಲ್ಲಿ ಅಗ್ರಹಾರದ ಬ್ರಾಹ್ಮಣರಿಗೆ ಬೇರೆ ಬೇರೆಡೆ ಇದ್ದ ಭೂಮಿಗಳನ್ನು, ಅವುಗಳ ಆದಾಯವನ್ನು ಅನುಸರಿಸಿ ಸಮಾನ ಆದಾಯವಿರುವಂತೆ ಮಾಡಿದ ನಾಲ್ಕು ತತ್ತು (ಭಾಗ)ಗಳ ವಿಂಗಡಣೆ, ಅವುಗಳಿಗೆ ಸೇರಿದ ಭೂಮಿಗಳ ಸಾಗುವಳಿ, ಅವುಗಳಿಗೆ ನೀರಾವರಿ ವ್ಯವಸ್ಥೆ, ಅವುಗಳಿಗೆ ಸಲ್ಲಿಸಬೇಕಾದ ತೆರಿಗೆ ಪ್ರಮಾಣ

ಇತ್ಯಾದಿ ವಿವರಗಳನ್ನು ಶಾಸನ ದಾಖಲಿಸಿದೆ. ಇದರಲ್ಲಿಯೇ ನೀರಾವರಿಗೆ ಸಂಬಂಧಿಸಿದ ಅಂಶಗಳಿರುವುದನ್ನು ಗಮನಿಸಬಹುದು. ನೀರಾವರಿ ಇಲ್ಲದ ತತ್ತಿನವರು ನೀರಾವರಿ ಇರುವ ತತ್ತಿನಿಂದ ನೀರಿನ ಅನುಕೂಲ ಪಡೆಯಬಹುದಿತ್ತು. ಅದಕ್ಕೆ ಯಾರೂ ಅಡ್ಡಿಪಡಿಸುವಂತಿರಲಿಲ್ಲ. ನೀರಾವರಿಗಾಗಿ ಕಾಲುವೆ ತೆಗೆಸಲು ಯಾರೂ ಅಡ್ಡಿ ಮಾಡದೆ ಸಹಕರಿಸಿ, ಆ ಕಾಲುವೆ ತೆಗೆಯುವುದರಿಂದ ನಷ್ಟವಾಗುವ ಭೂಮಿಗೆ ಪ್ರತಿಯಾಗಿ ಕಾಲುವೆ ತೆಗೆದವರಿಂದ ಸೂಕ್ತ ಪರಿಹಾರ ಪಡೆಯಬಹುದಿತ್ತು. ಇದಲ್ಲದೆ ಎಲ್ಲಿಯಾದರೂ ಕೆರೆಯನ್ನು ನಿರ್ಮಾಣ ಮಾಡುವುದಾದರೆ, ಮೊದಲು ಅದರ ನೀರಿನ ನ್ಯಾಯಯುತ ಹಂಚಿಕೆಯ ಒಡಂಬಡಿಕೆಯಾಗಬೇಕಾಗಿತ್ತು. ಹಾಗಿಲ್ಲದೆ ಹೋದರೆ, ಕೆರೆಯ ನಿರ್ಮಾಣಕ್ಕೆ ಅನುಮತಿ ದೊರೆಯುತ್ತಿರಲಿಲ್ಲ. ಇದರಿಂದ ಅಗ್ರಹಾರದ ಭೂಮಿ ಸಾಗುವಳಿಗಾಗಿ ಕೆರೆಯ ನೀರಾವರಿ ವ್ಯವಸ್ಥೆಯನ್ನು ಮಾಡಿಕೊಳ್ಳಲು ಆಗಿನ ಅಗ್ರಹಾರಗಳ ಸ್ವಯಂಡಳಿತ ಕೂಡ ಹೇಗೆ ಪ್ರೋತ್ಸಾಹಕರ ನೀತಿಯನ್ನು ಇರಿಸಿಕೊಂಡಿತ್ತು ಎಂಬುದು ಇದರಿಂದ ವ್ಯಕ್ತವಾಗುತ್ತದೆ.

ಜನರೂ, ಜನಸಾಮಾನ್ಯರೂ ಸೇರಿ ಯಾವ ರೀತಿ ಕೆರೆ, ಕಟ್ಟೆ, ಕಾಲುವೆಗಳನ್ನು ನಿರ್ಮಿಸಿ, ನದಿಯ ಪ್ರವಾಹದ ನೀರನ್ನು ಹೇಗೆ ನೀರಾವರಿಗೆ ಬಳಸಿಕೊಳ್ಳುತ್ತಿದ್ದರು ಎನ್ನುವುದಕ್ಕೆ ಅತ್ಯುತ್ತಮ ಉದಾಹರಣೆ ಹರಿಹರದ ಶಾಸನಗಳು. ವಿಜಯನಗರದ ಮೊದಲ ಅರಸ ಹರಿಹರರಾಯನ ಮಗನಾದ ಪ್ರತಾಪ ಬುಕ್ಕರಾಯನು ಹರಿಹರದೇವರಿಗೆ ಮತ್ತು ಅಲ್ಲಿಯ ನಿವಾಸಿಗಳಿಗೆ ಮಾಡಿಕೊಟ್ಟ "ವ್ಯವಹಾರ"ವನ್ನು ಅದು ಬಣ್ಣಿಸುತ್ತದೆ[೪೪]. ಕ್ರಿ.ಶ. ೧೪೧೦ ಹರಿದ್ರೆಯೆಂಬ ನದಿಗೆ ಅಡ್ಡಕಟ್ಟಿ ಹರಿಹರಕ್ಕೆ ಕಾಲುವೆಯನ್ನು ತಂದು ಆ ಕಾಲುವೆ ಕೆಳಗೆ ನೀರಾವರಿಯಾದಷ್ಟು ಭೂಮಿಯೊಳಗೆ ಶ್ರೀ ಹರಿಹರ ದೇವರಿಗೆ ೨ ಭಾಗ, ಕೆರೆಯನ್ನು ಕಟ್ಟಿಸಿ ತಮ್ಮ ಸ್ವಂತ ಖರ್ಚಿನೊಂದಿಗೆ ಕಾಲುವೆಯನ್ನು ಕಟ್ಟಿಸಿದವರಿಗೆ ಒಂದು ಭಾಗ ಭೂಮಿಯನ್ನು ನಿರ್ಣಯವಾಗಿ ಕೊಟ್ಟ ತಾಮ್ರಶಾಸನವೊಂದಿದೆ. ಹರಿದ್ರಾ ನದಿಯನ್ನು ಕಟ್ಟಿ ಹರಿಹರೇಶ್ವನಿಗೆ ಬನ್ನಿಕೋಡ ಸೀಮೆಯಲ್ಲಿ ಎಂದರೆ ಬನ್ನಿಕೋಡು, ಬೆಳುವಡಿ, ಹನಗವಾಡಿ, ಹರಿಹರ, ಗುತ್ತೂರು, ಗಂಗನರಸಿ ಕೆರೆಗೆ ಹರಿಸಿ ಅದರ ಕೆಳಗೆ ನೀರಾವರಿಯಾದಷ್ಟು ಭೂಮಿಯನ್ನು ೫ ಭಾಗ ಮಾಡಿ ಅದರಲ್ಲಿ ೨ ಪಾಲು ಭೂಮಿಯನ್ನು ದೇವರು, ೧ ಭಾಗವನ್ನು ಮಹಾಜನಗಳು ಅನುಭವಿಸತಕ್ಕದ್ದು.

"ಕಾಲುವೆ ಮುಗಿದ ನಂತರ ಪ್ರತಿವರುಷ ಕಾಲುವೆಯ ಆರೈಕೆ ವೆಚ್ಚವನ್ನು ದೇವರು ಎರಡು ಭಾಗ ಭರಿಸಬೇಕು. ಬ್ರಾಹ್ಮಣರು ಒಂದು ಪಾಲು ಭರಿಸಬೇಕು. ಈ ಕಾಲುವೆಯ ಕೆಳಗೆ ಹುಟ್ಟುವಂಥ ಕಟ್ಟೆ, ಕುಂಟೆಗಳನ್ನು ಕಟ್ಟಿಕೊಳ್ಳುವ ಕೆಲಸವನ್ನು ದೇವರು ೨ ಪಾಲು ತೆತ್ತು ಭಾಗಕ್ರಮದಿಂದ ಭೋಗಿಸಬೇಕೆಂದು ಕೊಟ್ಟ ತಾಮ್ರಶಾಸನದ ಪ್ರತಿ ಶಿಲಾಶಾಸನವಿದು". ಈ ಶಿಲಾಶಾಸನದಲ್ಲಿ ೮೪ ವೃತ್ತಿಗಳಿದ್ದು ಕರ್ನಾಟಕದ ಅತೀ ದೊಡ್ಡ ಶಿಲಾಶಾಸನಗಳಲ್ಲಿ ಇದು ಒಂದಾಗಿದೆ.

ಹೀಗೆ ಜಲಕಾರ್ಯಗಳ ನಿರ್ಮಾಣಕ್ಕೆ ಬೇಕಾಗುವ ಆಯ್ಕೆ, ಕೆರೆ, ಕಟ್ಟೆ, ಕೋಡಿಗಳ ನಿರ್ಮಾಣದ ವ್ಯವಸ್ಥೆ, ಅದಕ್ಕೆ ಬೇಕಾಗುವ ಪರಿಕರ ಸಾಮಗ್ರಿಗಳನ್ನು ಪ್ರಾದೇಶಿಕವಾಗಿಯೇ ದೊರಕಿಸಿಕೊಳ್ಳುವ ಬಗ್ಗೆ, ಅವುಗಳ ಸಮರ್ಥ ನಿರ್ವಹಣೆ ಮತ್ತು ನೀರಿನ ಬಳಕೆಗೆ ಬೇಕಾಗುವ ಸರ್ವಸಮ್ಮತ ನಿರ್ಣಯಗಳು, ರಾಜರು, ದಂಡನಾಯಕರು ಮೊದಲ್ಗೊಂಡು ಫಲಾನುಭವಿಗಳಾದ ಜನಸಾಮಾನ್ಯರು

ಪಾಳ್ಗೊಂಡು ಕೆರೆಗಳ ಆಡಳಿತ ವ್ಯವಸ್ಥೆಯನ್ನು ನಿರ್ವಹಿಸಿರುವುದನ್ನು ಜಿಲ್ಲೆಯಲ್ಲಿ ಗುರುತಿಸಬಹುದಾಗಿದೆ. ಅದೇ ರೀತಿ ಮಧ್ಯಯುಗ ಮತ್ತು ಅನಂತರದ ಕಾಲಗಳಲ್ಲಿ ಗ್ರಾಮದ ಮುಖಂಡರಾದ ಗೌಡ, ಶಾನುಭೋಗ ಮೊದಲಾದ ಅಧಿಕಾರಿಗಳು ಮತ್ತು ಇತರೆ ಕೈವಾಡದವರು ಇತ್ತೀಚಿನವರೆಗೂ ಗ್ರಾಮೀಣ ಮಟ್ಟದಲ್ಲಿ ಕೆರೆಗಳ ಆಡಳಿತ ನಿರ್ವಹಿಸಿರುವುದನ್ನು ನಾವು ಗುರುತಿಸಬಹುದಾಗಿದೆ.

**೬.೫. ಕೆರೆ ಮೀನುಗಾರಿಕೆ ಮತ್ತು ಇತರೆ ವೃತ್ತಿಗಳು**

ಪ್ರಾಚೀನ ಕಾಲದಿಂದಲೂ ಮನುಷ್ಯ ನೆಮ್ಮದಿಯಿಂದ ಬದುಕಿರುವುದು ನದಿ, ಕೊಳ್ಳ, ಕೆರೆ, ಇನ್ನಿತರೆ ಜಲಮೂಲಗಳಿರುವೆಡೆಯಲ್ಲಿ ಮಾತ್ರ. ಮಾನವ ಸಂಸ್ಕೃತಿಯ ನಿರ್ಮಾಣದಲ್ಲಿ ಕೆರೆಗಳ ಪಾತ್ರವನ್ನು ಸಹ ನಾವು ಅಲ್ಲಗಳೆಯುವಂತಿಲ್ಲ. ಏಕೆಂದರೆ ಅವು ಹಿಂದಿನಿಂದಲೂ ಜನರಿಗೆ ಕುಡಿಯಲು ಬೇಕಾದ ನೀರು, ಕೃಷಿಗೆ ಅವಶ್ಯಕವಾದ ನೀರನ್ನು ಪ್ರತ್ಯೇಕ್ಷವಾಗಿ ಒದಗಿಸಿವೆ. ಅಲ್ಲದೇ ಅವು ಪರೋಕ್ಷವಾಗಿ ಹೈನುಗಾರಿಕೆ, ಮೀನುಗಾರಿಕೆ ಮುಂತಾದ ವೃತ್ತಿಗಳನ್ನು ಜನ ಕೈಗೊಳ್ಳಲು ಆಸರೆಯಾಗಿವೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಕೆರೆಗಳು ಮೀನುಗಾರಿಕೆ ಸೇರಿದಂತೆ ಇತರೆ ವೃತ್ತಿಗಳಿಗೆ ಹೇಗೆ ಉಪಯುಕ್ತವಾಗಿವೆ ಹಾಗೂ ಜಿಲ್ಲೆಯ ಕೆರೆಗಳು ಯಾವ ರೀತಿ ಉಪಯುಕ್ತ ಎನ್ನುವುದನ್ನು ಈ ಮುಂದೆ ವಿಶ್ಲೇಷಿಸಲಾಗಿದೆ.

**ಅ) ಕೆರೆಗಳಲ್ಲಿ ಮೀನುಗಾರಿಕೆ**

ಬಯಲುಸೀಮೆ ಎಂದು ಖ್ಯಾತವಾಗಿರುವ ಚಿತ್ರದುರ್ಗ ಜಿಲ್ಲೆಯಲ್ಲಿನ ಕೆರೆಗಳು ಮೀನುಗಾರಿಕೆಗೆ ಆಸರೆಯಾಗಿವೆ. ಕೆರೆಗಳಲ್ಲಿ ಮೀನು ಸಾಕುವುದಕ್ಕೆ ಮತ್ತು ಆ ಮೂಲಕ ಮೀನುಗಾರಿಕೆಯನ್ನು ಒಂದು ವೃತ್ತಿಯನ್ನಾಗಿ ಮಾಡಿಕೊಂಡು ಆ ಮೂಲಕ ಹೆಚ್ಚಿನ ಆದಾಯ ಗಳಿಸಲು ಅವಕಾಶವಿದೆ. ಸಾಂಪ್ರದಾಯಿಕ ವಿಧಾನಗಳನ್ನು ಅನುಸರಿಸಿ ಕೆರೆಗಳಲ್ಲಿ ಹಿಂದಿನಿಂದಲೂ ಜಿಲ್ಲೆಯಲ್ಲಿ ಮೀನು ಸಾಕಾಣಿಕೆಯನ್ನು ಮಾಡುತ್ತಾ ಬರಲಾಗಿದೆ. ಜಿಲ್ಲೆಯಲ್ಲಿ ದೊರೆತ ಹರಿಹರ ಮತ್ತು ಇತರೆ ಕೆಲವು ಶಾಸನಗಳಲ್ಲಿ ದೊರೆಯುವ **ಬೆಸ್ತ** ಎನ್ನುವ ಪದ ಮತ್ತು **ಕೆರೆ ಉತ್ಪನ್ನ** ಪದಗಳು ಇದಕ್ಕೆ ಪುಷ್ಠಿ ನೀಡುತ್ತವೆ.[೨೨] ಮೀನು ಸಾಕಾಣಿಕೆ ಇತ್ತೀಚಿಗೆ ಒಂದು ಲಾಭದಾಯಕ ಉದ್ದಿಮೆಯಾಗಿ ರೂಪುಗೊಳ್ಳುತ್ತಿದೆ. ಮೀನು ಸಾಕಾಣಿಕೆ ಕಡಿಮೆ ಖರ್ಚಿನಲ್ಲಿ ಹೆಚ್ಚು ಲಾಭ ಗಳಿಸುವ ಪೂರಕ ಕೆರೆ ಅವಲಂಬಿ ವೃತ್ತಿಯಾಗಿದೆ. ಬೆಳೆಯುತ್ತಿರುವ ಜನಸಂಖ್ಯೆಗೆ ಉದ್ಯೋಗಾವಕಾಶವನ್ನು ಇದು ಒದಗಿಸುತ್ತದೆ. ಮೀನು ಪೌಷ್ಟಿಕಾಂಶಗಳ ಆಧಾರ. ಇದರಲ್ಲಿ ಎ ಮತ್ತು ಡಿ, ಇ ಜೀವಸತ್ವಗಳು ಹೇರಳವಾಗಿವೆ. ಮೀನು ಸೇವನೆಯಿಂದ ಜ್ಞಾಪಕ ಶಕ್ತಿ ಹೆಚ್ಚುತ್ತದೆ. ಬುದ್ಧಿ ಚುರುಕಾಗುತ್ತದೆ ಎಂಬುದು ವೈದ್ಯಾಧಿಕಾರಿಗಳ ಅಭಿಪ್ರಾಯ. ಮೀನು ಎಣ್ಣೆ ಮತ್ತು ಮೀನು ಗೊಬ್ಬರಕ್ಕೆ ಅಪಾರ ಬೇಡಿಕೆ ಇದೆ. ವಿವಿಧ ಮೀನಿನ ಖಾದ್ಯಗಳು ಮಾಂಸಹಾರಿಗಳಿಗೆ ಅತ್ಯಂತ ಪ್ರಿಯವಾಗಿದ್ದು, ಇದು ಮೀನು ಸಾಕಾಣಿಕೆ ಹೆಚ್ಚಾಗಿ ಮಾಡಲು ಪ್ರೇರಕವಾಗಿದೆ. ಸಾಕುವ ಮೀನುಗಳ ಬೆಳವಣಿಗೆಯ ಮೇಲೆ ನೀರಿನ ಭೌತಿಕ ಮತ್ತು ರಾಸಾಯನಿಕ ಗುಣ ಪ್ರಭಾವ ಬೀರುತ್ತದೆ. ಹೀಗಾಗಿ ಮೀನುಗಳನ್ನು ಕೆರೆಯಲ್ಲಿ ಸಾಕುವ ವೇಳೆ ರೈತರು ಕೆಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡರೆ ಅಕ್ಷಯ ಪಾತ್ರೆಯಾಗಿ ಪರಿವರ್ತನೆಯಾಗುವುದರಲ್ಲಿ ಸಂಶಯವಿಲ್ಲ. ಮೀನು ಚಲಿಸುವ ಬಂಗಾರ ಎಂದೇ ಹೆಸರಾಗಿದೆ. ಇದು ನಿಜವಾಗಿಯೂ ಬೆಸ್ತ

ಸಮುದಾಯದ ಬದುಕಿಗೆ ಮುಖ್ಯ ಆದಾಯದ ಮೂಲವಾಗಿದ್ದು, ಇದು ಅವರ ಬದುಕಿಗೆ ಬಂಗಾರವೇ ಸರಿ. ವ್ಯವಸಾಯವನ್ನೇ ಅವಲಂಬಿಸಿದ್ದ ರೈತರೂ ಸಹ ಇಂದು ಮೀನು ಸಾಕಾಣಿಕೆಯತ್ತ ಮುಖ ಮಾಡಿ, ಅದನ್ನು ಉಪಕಸುಬನ್ನಾಗಿ ಆರಿಸಿಕೊಂಡು ಸಾಕಷ್ಟು ಆದಾಯ ಗಳಿಸುತ್ತಿದ್ದಾರೆ. ಇದು ಸಾಕಷ್ಟು ಜನರಿಗೆ ಉದ್ಯೋಗ ಕಲ್ಪಿಸುವುದರೊಂದಿಗೆ ಅವರ ಆರ್ಥಿಕ ಪರಿಸ್ಥಿತಿಯು ಉತ್ತಮಗೊಳ್ಳಲು ನೆರವಾಗಿದೆ. ಇದಕ್ಕೆ ಪೂರಕವೆಂಬಂತೆ ಸರ್ಕಾರವು ಸಹ ಕೆರೆಗಳಲ್ಲಿ ಮೀನು ಸಾಕಾಣಿಕೆ ಮೊದಲು ಸಬ್ಸಿಡಿ ಮೂಲಕ ಹಣಕಾಸು ನೆರವನ್ನು ನೀಡುತ್ತಿದೆ. ಅದರ ಮೇಲುಸ್ತುವಾರಿಯನ್ನು ನೋಡಿಕೊಳ್ಳಲು ಕೆರೆ ಬಳಕೆದಾರರ ಸಂಘಗಳನ್ನು ಸ್ಥಾಪಿಸಿಕೊಳ್ಳಲು ಅನುವು ಮಾಡಿಕೊಡುತ್ತದೆ ಇದಕ್ಕೆ ಚಿತ್ರದುರ್ಗ ಜಿಲ್ಲೆಯೂ ಸಹ ಇದಕ್ಕೆ ಹೊರತಾಗಿಲ್ಲ.

ಮೀನು ಸಾಕುವ ಕೆರೆಗಳು ಆಯಾ ಪ್ರದೇಶದ ಮಣ್ಣಿಗೆ ಅನುಗುಣವಾಗಿ ಆಮ್ಲೀಯವಾಗಿ ಇಲ್ಲವೆ ಪ್ರತ್ಯಾಮ್ಲೀಯವಾಗಿ ಪರಿವರ್ತಿತವಾಗಿರುತ್ತದೆ. ನೀರು ಆಮ್ಲೀಯ ಗುಣ ಹೊಂದಿದ್ದರೆ ಒಂದು ಕೆರೆ ಸುಮಾರು ೬೦೦ ಕಿ. ಗ್ರಾಂನಷ್ಟು ಸುಣ್ಣವನ್ನು ಹಾಕಿ ಸರಿಪಡಿಸಿಕೊಳ್ಳಬೇಕು. ನಂತರ ಕೆರೆಗೆ ನೀರನ್ನು ಹಾಯಿಸಿ ಸಗಣಿ ಗೊಬ್ಬರವನ್ನು ಬಗ್ಗಡದ ರೂಪದಲ್ಲಿ ಕೆರೆಗೆ ಹಾಕಬೇಕು. ಮೀನುಗಳ ನೈಸರ್ಗಿಕ ಆಹಾರ ವರ್ಧನೆಗೆ ಹಾಗೂ ನೀರಿನ ಫಲವತ್ತತೆಗೆ, ಮೀನು ಮರಿಗಳನ್ನು ಕೆರೆಗೆ ಬಿಡುವ ಏಳು ದಿನಗಳ ಮುಂಚಿತವಾಗಿ ೩೦೦೦ ಕಿ. ಗ್ರಾಂ. ಸಗಣಿ ಗೊಬ್ಬರ, ೫೦೦ ಕಿ. ಗ್ರಾಂ. ಕೋಳಿ ಗೊಬ್ಬರ, ೨೦ ಕಿ. ಗ್ರಾಂ. ಸೂಪರ್ ಪಾಸ್ಪೇಟ್ ಮತ್ತು ೧೦ ಕಿ. ಗ್ರಾಂ. ಯೂರಿಯಾ ಹಾಕಬೇಕು. ನಂತರ ಕೆರೆಗಳಿಗೆ ಮೀನು ಮರಿಗಳನ್ನು ಬಿಡಬೇಕು.

ವಿವಿಧ ಜಾತಿಯ ಬಿತ್ತನೆ ಮೀನು ಮರಿಗಳು ಜೂನ್ ತಿಂಗಳಿನಿಂದ ಸಪ್ಟೆಂಬರ್‌ವರೆಗೆ ಮೀನು ಉತ್ಪಾದನಾ ಕೇಂದ್ರಗಳಲ್ಲಿ ದೊರೆಯುತ್ತವೆ. ಬಿತ್ತುವಾಗ ೪-೫ ಸೆಂ.ಮೀ ಉದ್ದನೆಯ ಮೀನು ಮರಿಗಳಿಗೆ ಕೃತಕ ಆಹಾರವನ್ನು ಒದಗಿಸುವುದಾದರೆ ಕೆರೆಗೆ ೩೦೦೦-೪೦೦೦ ಮೀನು ಮರಿಗಳನ್ನು ಬಿತ್ತನೆ ಮಾಡಬಹುದು. ಕೇವಲ ನೈಸರ್ಗಿಕ ಆಹಾರದಲ್ಲಿ ಸಾಕಣೆ ಮಾಡುವುದಾದರೆ ಎಕರೆಗೆ ೨೦೦೦ ಮರಿಗಳನ್ನು ಬಿತ್ತಿ ಬೆಳೆಯಬಹುದು.

ಕಾಟ್ಲಾ ರೋಹು ಮೃಗಾಲ್ ಮೀನು ಮರಿಗಳನ್ನು ೪:೩:೩ರ ಅನುಪಾತದಲ್ಲಿ ಬಿತ್ತಬೇಕು. ಕಾಟ್ಲಾ, ರೋಹು, ಮೃಗಾಲ್ ಹಾಗೂ ಬೆಳ್ಳಿ ಗೆಂಡೆ, ಹುಲ್ಲು ಗೆಂಡೆ, ಸಾಮಾನ್ಯ ಗೆಂಡೆ ಮೀನು ಮರಿಗಳನ್ನು ಒಟ್ಟಾಗಿ ಬಿತ್ತುವುದಾದರೆ ೨೧:೫:೧:೫:೦:೨:೦:೨:೦ರ ಅನುಪಾತದಲ್ಲಿ ಬಿತ್ತಬಹುದು. ಕೆರೆಯಲ್ಲಿ ಸುಮಾರು ೮-೧೦ ತಿಂಗಳು ಪಾಲನೆ ಮಾಡಿದ ಮೀನುಗಳು ಈ ಅವಧಿಯಲ್ಲಿ ೬೭೫ ರಿಂದ ೧.೨೫ ಕಿ.ಗ್ರಾಂ ಬೆಳೆಯಬಲ್ಲವು. ಮಾರುಕಟ್ಟೆಯಲ್ಲಿ ಬೇಡಿಕೆಗೆ ಅನುಗುಣವಾಗಿ ಮೀನುಗಳನ್ನು ಹಿಡಿದು ಮಾರಾಟ ಮಾಡುವುದು ಸೂಕ್ತ.

ಎಳೆಯುವ ಬಲೆ, ಬಿಡು ಬಲೆ ಹಾಗೂ ಬೀಸು ಬಲೆಗಳನ್ನು ಉಪಯೋಗಿಸಿ, ಮೀನು ಹಿಡಿಯಬಹುದು. ಮೀನುಗಳ ಗುಣಮಟ್ಟ ವಿವಿಧ ಸಂಸ್ಕರಣ ವಿಧಾನಗಳಲ್ಲಿ ಸಂರಕ್ಷಿಸಿ ತಾಜಾತನದೊಂದಿಗೆ ಮಾರುಕಟ್ಟೆಗಳಿಗೆ ರವಾನಿಸುವುದು. ಹೀಗೆ ಮಾಡಿದರೆ ಉತ್ತಮ ಬೆಲೆ ಸಿಗುತ್ತದೆ. ಕೆರೆಗಳಲ್ಲಿ ಉತ್ತಮ ರೀತಿಯಲ್ಲಿ ವ್ಯವಸ್ಥಿತವಾಗಿ ಮೀನುಸಾಕಣೆ ಮಾಡಿದರೆ ಒಂದು ಎಕರೆಯಲ್ಲಿ

ವಾರ್ಷಿಕ ಸರಾಸರಿ ೨೦೦೦ ಕಿ. ಗ್ರಾಂ. ಮೀನು ಉತ್ಪಾದನೆ ಮಾಡಬಹುದು. ಕ್ರಿಗ್ರಾಂ.ಗೆ ರೂ. ೬೦ರಂತೆ ಮಾರಾಟ ಮಾಡಿದರೂ ರೂ. ೧೨,೨೦,೦೦೦ ಆದಾಯವಿದೆ. ಆದ್ದರಿಂದ ಜಿಲ್ಲೆಯ ಕೆರೆಗಳು ಉತ್ತಮ ಆದಾಯ ತಂದುಕೊಟ್ಟು ಜನರ ಮತ್ತು ರೈತರ ಆರ್ಥಿಕ ಸ್ಥಿತಿಗತಿಯನ್ನು ಸುಧಾರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

**ಆ) ತೋಟಗಾರಿಕೆ**

ಜಿಲ್ಲೆಯಲ್ಲಿನ ಕೆರೆಗಳು ತೋಟಗಾರಿಕೆಯನ್ನು ಸಹ ಕೈಗೊಳ್ಳಲು ಹಿಂದಿನಿಂದ ಆಸರೆಯಾಗಿವೆ. ಇಲ್ಲಿ ಹಿಂದಿನಿಂದಲೂ ಕೆರೆಯ ನೀರನ್ನು ಬಳಸಿಕೊಂಡು ತೋಟಗಾರಿಕಾ ಬೆಳೆಗಳಾದ ತೆಂಗು, ಅಡಿಕೆ, ಬಾಳೆ, ಮಾವು, ಸಪೋಟ, ದಾಳಿಂಬೆ, ಪಪ್ಪಾಯ ಮತ್ತು ಅಂಜೂರವನ್ನು ಹಾಗೂ ತರಕಾರಿ, ಭತ್ತ, ಕಬ್ಬು, ಅಡಿಕೆ, ವೀಳ್ಯದೆಲೆ, ಎಣ್ಣೆ ಬೀಜಗಳು ಮುಂತಾದ ವಾಣಿಜ್ಯ ಬೆಳೆಗಳನ್ನು ಸಹ ಹೆಚ್ಚಾಗಿ ಬೆಳೆದಿರುವುದನ್ನು ಹರಿಹರ ಮತ್ತು ಇಲ್ಲಿ ದೊರೆತ ಇತರೆ ಶಾಸನಗಳು ದಾಖಲಿಸಿವೆ[೩೩]. ಇತ್ತೀಚಿನ ದಿನಗಳಲ್ಲಿ ರೈತರು ಕಡಿಮೆ ವೆಚ್ಚದಲ್ಲಿ ಬೆಳೆಯಬಹುದಾದ ಹಾಗೂ ಆದಾಯ ಬರುವ ತೋಟಗಾರಿಕೆ ಬೆಳೆಗಳಿಗೆ ಆಕರ್ಷಿತರಾಗುತ್ತಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಸರಾಸರಿ ವಾಡಿಕೆ ಮಳೆ ೪೮೬.೫೦ ಮೀ.ಮೀ. ಇದ್ದು, ಈ ಅಲ್ಪ ಪ್ರಮಾಣದ ಮಳೆಯನ್ನೇ ಉಪಯೋಗಿಸಿಕೊಂಡು ಖುಷ್ಕಿ ತೋಟಗಾರಿಕೆ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ. ಹಾಲಿ ಇರುವ ಮಣ್ಣಿನ ವೈಶಿಷ್ಟ್ಯತೆ ಹಾಗೂ ಹವಾಗುಣ ತೋಟಗಾರಿಕೆ ಬೆಳೆಗಳನ್ನು ಬೆಳೆಯುವುದಕ್ಕೆ ಅತ್ಯಂತ ಸೂಕ್ತವಾಗಿದೆ. ಇತ್ತೀಚಿನ ವರ್ಷಗಳಲ್ಲಿ ಚಿತ್ರದುರ್ಗವು ಕೆರೆ ನೀರನ್ನು ಬಳಸಿಕೊಂಡು ತೋಟಗಾರಿಕೆ ಬೆಳೆಗಳನ್ನು ಬೆಳೆಯಲಾಗುತ್ತದೆ. ಒಟ್ಟಾರೆ ಇಲ್ಲಿನ ತೋಟಗಾರಿಕೆಯ ಅಭಿವೃದ್ಧಿಯಲ್ಲಿ ಕೆರೆಗಳು ಪ್ರಮುಖ ಸ್ಥಾನವನ್ನು ಪಡೆದಿರುವುದನ್ನು ನಾವ್ಯಾರು ಅಲ್ಲಗಳೆಯುವಂತಿಲ್ಲ.

**ಇ) ಪಶುಪಾಲನೆ**

ಜಿಲ್ಲೆಯಲ್ಲಿನ ಕೆರೆಗಳು ಪಶುಪಾಲನೆಯನ್ನು ಸಹ ಕೈಗೊಳ್ಳಲು ಹಿಂದಿನಿಂದ ಆಸರೆಯಾಗಿವೆ. ಇಲ್ಲಿ ಹಿಂದಿನಿಂದಲೂ ಕೆರೆಯ ನೀರನ್ನು ಬಳಸಿಕೊಂಡು ಪಶುಸಂಗೋಪನೆಗೆ ಪೂರಕವಾದ ಚಟುವಟಿಕೆಗಳನ್ನು ಜನರು ಕೈಗೊಂಡಿರುವುದನ್ನು ಕೆಲ ಶಾಸನಗಳು ಉಲ್ಲೇಖಿಸಿವೆ. ಹಸುಗಳನ್ನು ಬರೀ ವ್ಯವಸಾಯ ಕಾರ್ಯಗಳಿಗೆ ಮಾತ್ರ ಸಾಕದೇ ಹೈನು ಉತ್ಪನ್ನಗಳಾದ ಹಾಲು, ಮೊಸರು, ತುಪ್ಪ, ಸಗಣಿ ಹಾಗೂ ಚರ್ಮದ ವಸ್ತುಗಳಿಗಾಗಿಯೂ ಸಾಕುತ್ತಿದ್ದರು. ಪಶುಪಾಲನೆ ಮಾಡಲು ಭೂಮಿಯ ಅಗತ್ಯವಿತ್ತು. ಎಲ್ಲರಿಗೂ ಭೂಮಿ ಇರುತ್ತಿರಲಿಲ್ಲ. ಇಂತಹ ಸನ್ನಿವೇಶದಲ್ಲಿ ಉಳ್ಳವರು ಅಧಿಕಾರಿಗಳು, ರಾಜರು ಗೋಮಾಳಗಳನ್ನು ಸೃಷ್ಟಿಸಿದ್ದರು. ಇವುಗಳಲ್ಲಿ ಹಸು, ಎಮ್ಮೆ, ಕುರಿ ಮುಂತಾದ ಜಾನುವಾರುಗಳನ್ನು ಈ ಪ್ರದೇಶದಲ್ಲಿ ಮೇಯಿಸಬಹುದಿತ್ತು. ಹಾಗೂ ಇವುಗಳ ಸಮೀಪದಲ್ಲಿ ನೀರಿನ ಆಸರೆಗಾಗಿ ಕೆರೆಗಳನ್ನು ಕಟ್ಟಿಸುತ್ತಿದ್ದರು. ಇವುಗಳನ್ನು ಸಹ ಪಶುಪಾಲಕರು ತಮ್ಮ ಜಾನುವಾರುಗಳ ಅವಶ್ಯಕತೆಗಾಗಿ ಬಳಸುತ್ತಿದ್ದರು. ಇದೇ ರೀತಿ ಇಂದಿನ ಯುಗದಲ್ಲಿಯೂ ಪಶುಪಾಲನೆಯ ಅಭಿವೃದ್ಧಿಯಲ್ಲಿ ಮತ್ತು ಅದನ್ನು ಒಂದು ವೃತ್ತಿಯನ್ನಾಗಿ ಅಳವಡಿಸಿಕೊಳ್ಳಲು ಹೇರಳವಾದ ಅವಕಾಶಗಳಿದ್ದು, ಅವುಗಳಲ್ಲಿ ಕೆರೆಗಳು ಅತಿಮುಖ್ಯ ಪಾತ್ರವಹಿಸುತ್ತವೆ.

ಅ) ಕುಡಿಯುವ ನೀರಿನ ವ್ಯವಸ್ಥೆ

ಹಿಂದಿನವರಿಂದ ನಿರ್ಮಿಸಿದ ಕೆರೆಗಳು ಇಂದಿಗೂ ಜನತೆಗೆ ಕುಡಿಯುವ ನೀರಿನ ಮೂಲ ಆಸರೆಗಳಾಗಿವೆ. ಪ್ರಕೃತಿಯ ಹಲವು ವಿಸ್ಮಯಗಳಲ್ಲಿ ಒಂದಾಗಿರುವ ನೀರು ಮಾನವನ ಅಸ್ತಿತ್ವಕ್ಕೆ ಮೂಲ ವಸ್ತುವಾಗಿದೆ. ಆರೋಗ್ಯವಂತ ವ್ಯಕ್ತಿಯೊಬ್ಬನಿಗೆ ಪ್ರತಿದಿನ ಕುಡಿಯಲು ೩-೪ ಲೀಟರ್ ನೀರು ಅಗತ್ಯವಿದೆ ಹಾಗೂ ದಿನನಿತ್ಯದ ಬಳಕೆಗೆ ಕೊನೆ ಪಕ್ಷ ೪೦ ಲೀಟರ್ ನೀರು ಬೇಕಾಗುತ್ತದೆ. ಇಂತಹ ಬೇಡಿಕೆಯ ನೀರನ್ನು ಕೆರೆ, ಕಟ್ಟೆ, ಬಾವಿ, ಹೊಂಡ ಮುಂತಾದ ಪ್ರಕೃತಿಯ ವಿವಿಧ ಮೂಲಗಳಿಂದ ಖಚಿತವಾಗಿ ಪಡೆಯಲಾಗುತ್ತಿತ್ತು. ಆದರೆ ಶತಮಾನಗಳು, ಉರುಳಿದಂತೆ ಏರುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಎಲ್ಲರಿಗೂ ಕುಡಿಯುವ ನೀರನ್ನು ಒದಗಿಸುವುದು ಕಷ್ಟದಾಯಕ ಸಂಗತಿಯಾಗಿದೆ. ಆದರೆ ಇಂದು ಇವು ಕುಡಿಯಲು ಯೋಗ್ಯವಲ್ಲದಷ್ಟು ಹದಗೆಟ್ಟಿವೆ. ಒಂದು ಕಾಲದಲ್ಲಿ ಕುಡಿಯುವ ನೀರಿನ ಸೆಲೆಯಾಗಿದ್ದ ಕೆಂಚಮಲ್ಲಪ್ಪನ ಕಲ್ಯಾಣಿ ಮುಂತಾದ ಕೆರೆಗಳು ಇಂದು ಅತ್ಯಂತ ಕಲುಷಿತವಾಗಿದ್ದು, ಈ ಕಲ್ಯಾಣಿಯ ಬಳಿ ನಿಲ್ಲಲೂ ಆಗದಷ್ಟು ದುರ್ವಾಸನೆ ಬೀರುತ್ತಿವೆ. ಬರಗೆರೆ, ಮಲ್ಲಾಪುರ ಇನ್ನು ಮೊದಲಾದ ಕೆರೆಗಳು ಕೊಳಚೆ ಪ್ರದೇಶಗಳಾಗಿ ಪರಿವರ್ತನೆಯಾಗಿವೆ. ಅಲ್ಲದೇ ಜಿಲ್ಲೆಯ ಬಹುತೇಕ ಕೆರೆಗಳು ಇಂದು ಹೂಳು ತುಂಬಿದ್ದು, ಕೆಲವು ಕೆರೆಗಳ ಕಲ್ಲಿನ ಕಟ್ಟಡವು ಭಗ್ನವಾಗಿ ಹೋಗಿವೆ. ಆದ್ದರಿಂದ ಇದರ ಬಗ್ಗೆ ಸರ್ಕಾರವು ಸೂಕ್ತ ಕ್ರಮ ಕೈಗೊಂಡು ಜೀರ್ಣೋದ್ಧಾರ ಮಾಡಿದ್ದಲ್ಲಿ ಇಂದಿಗೂ ಇವು ದಕ್ಷವಾಗಿ ಕಾರ್ಯನಿರ್ವಹಿಸುವಲ್ಲಿ ಎರಡು ಮಾತಿಲ್ಲ.

ಕೃಷಿಯ ಉಗಮ ಮತ್ತು ವಿಕಾಸ ಅತ್ಯಂತ ಪ್ರಾಚೀನವಾದದ್ದು. ಮಾನವನ ಸರ್ವತೋಮುಖ ಅಭಿವೃದ್ಧಿ ಮತ್ತು ವಾಣಿಜ್ಯ ವ್ಯವಹಾರಗಳೆಲ್ಲವೂ ವ್ಯವಸಾಯದ ಆವಿಷ್ಕಾರದಿಂದಲೇ ಪ್ರಾರಂಭಗೊಂಡು ಒಂದು ನಿರ್ದಿಷ್ಟ ಸಂಸ್ಕೃತಿ ಮತ್ತು ವಿಕಾಸಕ್ಕೆ ತಳಹದಿಯಾಯಿತು. ಈ ಸಾಂಸ್ಕೃತಿಕ ವಿಕಾಸದಲ್ಲಿ ಕೆರೆಗಳ ಪಾತ್ರವನ್ನು ನಾವು ಅಲ್ಲಗಳೆಯುವಂತಿಲ್ಲ. ಒಟ್ಟಾರೆ ಮಾನವನ ಸುಸ್ಥಿರ ಬದುಕಿಗೆ ಅಗತ್ಯವಾದ ವಿವಿಧ ವೃತ್ತಿಗಳನ್ನು ಕೈಗೊಳ್ಳಲು ಕೆರೆಗಳು ಸಹಾಯಕವಾಗಿವೆ.

ಜಲಶಾಸ್ತ್ರಜ್ಞರು ಈ ವಿಶ್ವದ ಭೂ, ವಾಯು ಮತ್ತು ಜಲಮಂಡಲಗಳಲ್ಲಿ ಅಡಕವಾಗಿರುವ ನೀರಿನ ಪ್ರಮಾಣವನ್ನಷ್ಟೇ ಅಲ್ಲದೆ, ಅಂತರ್ಜಲದ ಶೇಕಡವಾರು ಪ್ರಮಾಣವನ್ನೇ ಗುರುತಿಸಿದ್ದಾರೆ. ಇಷ್ಟೆಲ್ಲ ನೀರಿದ್ದರೂ ಇಂದು ನಮ್ಮ ರಾಜ್ಯದ ೧೭,೦೦೦ ಹಳ್ಳಿಗಳಲ್ಲಿ ಕುಡಿಯುವ ಹಾಗೂ ಮನುಷ್ಯನ ಬಳಕೆಗೆ ಯೋಗ್ಯವಾದ ನೀರಿನ ಅಭಾವವಿದ್ದು, ಪ್ರತಿವರ್ಷ ೨,೦೦೦ ಕೋಟಿ ರೂಪಾಯಿಗಳನ್ನು ಇದೇ ಉದ್ದೇಶಕ್ಕಾಗಿ ಉಪಯೋಗಿಸಲಾಗುತ್ತಿದೆ. ಇದಕ್ಕೆ ಕಾರಣವೆಂದರೆ, ಭೂಮಂಡಲದಲ್ಲಿ ಮನುಷ್ಯನಿಗೆ ಬಳಸಲು ಬರುವ ನೀರಿನ ಪ್ರಮಾಣ ಕೇವಲ ೨,೭೫೪೧ ಶೇಕಡವಾರು ಮಾತ್ರ.[೫೩] ಪ್ರಸ್ತುತ ನಮ್ಮನ್ನು ಕಾಡುತ್ತಿರುವ ಬರ, ನೆರೆ ಹಾವಳಿ, ನದಿ ವಿವಾದಗಳಿಗೆ ನಮ್ಮ ಹಿರಿಯರ ಜಲ ಕೌಶಲ್ಯ ಮತ್ತು ತಂತ್ರಜ್ಞಾನದ ವಿಧಿ ವಿಧಾನಗಳ ಮೂಲಕ ಪರಿಹಾರ ಕಂಡುಕೊಳ್ಳಬಹುದಾಗಿದೆ. ಈ ಹಿನ್ನೆಲೆಯಲ್ಲಿ ನಮ್ಮ ಹಿರಿಯರ ಜ್ಞಾನದ ಪ್ರತೀಕಗಳಾದ ಕೆರೆಗಳನ್ನು ಮುಂದಿನ ಪೀಳಿಗೆಗೆ ಉಳಿಸಿಕೊಡಬೇಕಾದ ಅವಶ್ಯಕತೆ ಮತ್ತು ಬಹು ದೊಡ್ಡ ಜವಾಬ್ದಾರಿ ನಮ್ಮ ಮೇಲೆ ಇದೆ.

**ಕೊನೆ ಟಿಪ್ಪಣಿಗಳು:**

೧. ಹರಿಹರ ಶ್ರೀನಿವಾಸರಾವ್, ಪ್ರಾಚೀನ ಕರ್ನಾಟಕದ ಜಲ ನಿರ್ವಹಣೆಯಲ್ಲಿ ಜನ(ಸಾ)ಮಾನ್ಯರ ಪಾತ್ರ (ಶಾಸನಗಳ ಹಿನ್ನೆಲೆಯಲ್ಲಿ) ಇತಿಹಾಸ ದರ್ಶನ, ಸಂ. ೧೮, ಪು. ೧೨-೧೭.

೨. ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಾದ ಹೊಂಡಗಳ ನಿರ್ಮಾಣದ ಆಶ್ಚರ್ಯಕರ ತಾಂತ್ರಿಕ ಕೌಶಲಕ್ಕೆ ಒಂದು ಉದಾಹರಣೆಯನ್ನು ಇಲ್ಲಿ ಉಲ್ಲೇಖಿಸಬೇಕು: ಭರಮಣ್ಣನಾಯಕನ ಕಾಲದಲ್ಲಿ ಆದ ಒಂದು ಪ್ರಖ್ಯಾತವಾದ ಹೊಂಡ 'ಸಂತೆಹೊಂಡ'. ಭಾರೀ ಪ್ರಮಾಣದ ಈ ಹೊಂಡಕ್ಕೆ, ನೈರುತ್ಯದಲ್ಲಿ ಸುಮಾರು ಅರ್ಧ ಕಿಲೋಮೀಟರಿಗೂ ಹೆಚ್ಚು ದೂರದಲ್ಲಿರುವ (ಉಚ್ಚಂಗಿ ಬಾಗಿಲ ಬಳಿಯಿರುವ) 'ಸಿಹಿನೀರು ಹೊಂಡ' ದಿಂದ ಗುಪ್ತಕಾಲುವೆ (ಅಥವಾ ಸುರಂಗ) ಮೂಲಕ ನೀರು ಹರಿದು ಬರುವಂತೆ ಮಾಡಲಾಗಿತ್ತು ಎಂದು ಪರಂಪರೆಯಿಂದ ಹೇಳಲಾಗುತ್ತಿದೆ. ಸಂತೆ ಹೊಂಡದಲ್ಲಿ ಪಶ್ಚಿಮ ಬದಿಯಿಂದ ಇಳಿಯುವ ಕಡೆ ಬಲಕ್ಕೆ ಸುರಂಗದ್ದೆನ್ನುವ ಬಾಗಿಲೊಂದು ಈಗಲೂ ಇದೆ. ಕಲ್ಲು ಮಣ್ಣುಗಳಿಂದ ಮುಚ್ಚಿ ಹೋಗಿರುವ ಅದನ್ನು ಸರ್ಕಾರದ ಪ್ರಾಚ್ಯವಸ್ತು ಇಲಾಖೆ ಉತ್ಖನನದ ಮೂಲಕ ಪರಿಶೋಧನೆ ಮಾಡಿಸಿದರೆ, ಅದರ ಬಗೆಗೆ ಇನ್ನೂ ಹೆಚ್ಚಿನ ಮತ್ತು ಖಚಿತ ಸಂಗತಿ ಬೆಳಕಿಗೆ ಬರಲು ಸಾಧ್ಯವಾಗುತ್ತದೆ.

೩. ದೀಕ್ಷಿತ್.ಜಿ.ಎಸ್., ಕುಪ್ಪುಸ್ವಾಮಿ ಜಿ.ಆರ್., ಮೋಹನ್ ಎಸ್.ಕೆ., 'ಕರ್ನಾಟಕದಲ್ಲಿ ಕೆರೆ ನೀರಾವರಿ' ಪು.೧೨.

೪. ಮೇಲಿನದೇ, ಮತ್ತು "ಕಾಮಗೇತಿ ಕಸ್ತೂರಿ ರಂಗಪ್ಪನಾಯಕನ ಪುತ್ರ ಮದಕರಿನಾಯಕನ ಆಳ್ವಿಕೆಯಲ್ಲಿ ಆಡೂರು ಮಲ್ಲಪ್ಪನೆಂಬಾತ ಆಡೂರು ಕೆರೆಯನ್ನು ಕಟ್ಟಿಸಿದ" ಎಂಬೊಂದು ಹೇಳಿಕೆಯೂ ಇದೆ. ಇದಕ್ಕೆ ಆಧಾರವೇನೆಂಬುದನ್ನು ಬರೆದವರು ತಿಳಿಸಿರುವುದಿಲ್ಲ. ನೋಡಿ: ಚಿತ್ರದುರ್ಗ ದರ್ಶಿನಿ, (ಲಕ್ಷ್ಮಣ್ ತೆಲಗಾವಿ ಮತ್ತು ಇತರರು), ೧೯೮೦, ಪು. ೪೫.

೫. Vatsala Iyengar,೨೦೧೦, Tanks of Karnataka *A Historical perspective* ಪು.೧-೮

೬. ಎ.ಕ. ೧೧, ಮೊಳಕಾಲ್ಮೂರು. ಎಪಿಗ್ರಫಿ ೪

೭. ಎ.ಕ. ೧೧, ಮೊಳಕಾಲ್ಮರು. ೫

೮. ಈ ಶಾಸನವನ್ನು ಡಾ. ರಾಜಶೇಖರಪ್ಪನವರು ಸಂಶೋಧಿಸಿ ಪ್ರಕಟಿಸಿದ್ದಾರೆ.

೯. ದೀಕ್ಷಿತ್.ಜಿ.ಎಸ್., ಕುಪ್ಪುಸ್ವಾಮಿ ಜಿ.ಆರ್., ಮೋಹನ್ ಎಸ್.ಕೆ., ಪೂರ್ವೋಕ್ತ, ಮತ್ತು Kamath, Suryanath.U., ೧೯೯೦, "Historical Role of Tanks in Karnataka", March of Karnataka, Vol. 28 pp. ೧೨-೧೮.

೧೦. ಎ.ಕ.XII si ಕ್ರಿ.ಶ. ೧೦೭೨, ಹರಿಹರ ಮತ್ತು ಕೊಟ್ರಯ್ಯ ಸಿ.ಟಿ.ಎಂ. 'ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ', ಪು. ೨೧.

೧೧. ಕೊಟ್ರಯ್ಯ ಸಿ.ಟಿ.ಎಂ. ಪೂರ್ವೋಕ್ತ, ಮತ್ತು Kuppuswamy G.R. "Irregation in Karnataka Inscriptions as a Source". P.145, QJMSLXXII, 3&4, 1991.

೧೨. ದೀಕ್ಷಿತ್.ಜಿ.ಎಸ್., ಕುಪ್ಪುಸ್ವಾಮಿ ಜಿ.ಆರ್., ಮೋಹನ್ ಎಸ್.ಕೆ., ಪೂರ್ವೋಕ್ತ, ಪು. ೧೪೫

೧೩. Karnataka Inscriptions, ೪೦-೪೧, ೧೧೪೧A.D. & (South Indian Inscriptions), XI, ii, 124.

೧೪. Kuppuswamy G.R. "Some Aspector of Irrigation System in Karnataka". P.404, QJMSLXXIV, 4, Dec, 1983.

೧೫. ಚಿದಾನಂದಮೂರ್ತಿ ಎಂ. 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಪು. ೪೪೬.

೧೬. ತಿಪ್ಪೇಸ್ವಾಮಿ.ಎಚ್., "ಕರ್ನಾಟಕದಲ್ಲಿ ಬಿಟ್ಟಿ ಸೇವೆಯ ವಿವಿಧ ಆಯಾಮಗಳು", ೨೦೧೬, ಶ್ಯಾಂಮೂರ್ತಿ.ಜಿ.(ಸಂ), ಸಂಶೋಧನೆ, ಪು.೧೮-೨೦

೧೭. ಶ್ರೀನಿವಾಸ ಶರ್ಮ ಹೆಚ್.ಪಿ., ೨೦೧೩, ಚಿತ್ರದುರ್ಗ ಪಾಳೆಗಾರರ ಕಾಲದಲ್ಲಿ ನೀರು ಸರಬರಾಜು ವ್ಯವಸ್ಥೆ, ಪು. ೧೨೩

೧೮. ಎಪಿಗ್ರಫಿ ಕರ್ನಾಟಕ, ಪೂರ್ವೋಕ್ತ, ಮೊಳಕಾಲ್ಮೂರು. ೫.

೧೯. ಅದೇ, ಹರಿಹರ ೨೫.

೨೦. ಅದೇ, ಹರಿಹರ ೩೫.

೨೧. ಅದೇ, ಹೊಳಲ್ಕೆರೆ ೧೨೬.

೨೨. ಅದೇ, ಹೊಳಲ್ಕೆರೆ ೩೩. ಮತ್ತು ಇತಿಹಾಸ ದರ್ಶನ ಪು. ೨೭೧

೨೩. ಅದೇ, ಹೊಳಲ್ಕೆರೆ ೩೪.

೨೪. ಅದೇ, ಚಳ್ಳಕೆರೆ ೩.

೨೫. ಅದೇ, ಚಳ್ಳಕೆರೆ ೪೯.

೨೬. ಅದೇ, ಚಳ್ಳಕೆರೆ ೮೮.

೨೭. ಅದೇ, ಚಳ್ಳಕೆರೆ ೩೮.

೨೮. ಇತಿಹಾಸ ದರ್ಶನ., ಸಂ.೨೧, ಪು. ೨೭೨

೨೯. ತುರುವೇಕೆರೆ ಶಾಸನ ಸಂ.೧೬೫

೩೦. ಚಂದ್ರವಳ್ಳಿ ಶಾಸನವನ್ನು ಡಾ. ರಾಜಶೇಖರಪ್ಪನವರು ಸಂಶೋಧಿಸಿ ಮರು ವಿಶ್ಲೇಷಿಸಿದ್ದಾರೆ

೩೧. ಎಪಿಗ್ರಫಿ ಕರ್ನಾಟಕ, ಪೂರ್ವೋಕ್ತ, ದಾವಣಗೆರೆ, ಸಂ. ೨೩

೩೨. ಎಪಿಗ್ರಫಿ ಕರ್ನಾಟಕ, ಪೂರ್ವೋಕ್ತ, ಹರಿಹರ ಶಾಸನ. ೫೪

೩೩. ಅದೇ, ಹೊಳಲ್ಕೆರೆ ೭೨.

ಅಧ್ಯಾಯ ಏಳು

# ಚಿತ್ರದುರ್ಗ ಜಿಲ್ಲೆಯ ಕೆರೆಗಳ ಸಂರಕ್ಷಣಾ ಕ್ರಮಗಳು

೭.೧. ಕೆರೆಗಳ ಸಂರಕ್ಷಣೆಯ ವಿವಿಧ ಆಯಾಮಗಳು

೭.೨. ಕೆರೆಗಳ ಜೀರ್ಣೋದ್ಧಾರ ಮತ್ತು ದುರಸ್ತಿ ಕಾರ್ಯಗಳು

೭.೩. ಕೆರೆಗಳ ಪುನರಾಭಿವೃದ್ಧಿ ಮತ್ತು ಪರಿಹಾರ ಕ್ರಮಗಳು

ಅಧ್ಯಾಯ ಏಳು

# ಚಿತ್ರದುರ್ಗ ಜಿಲ್ಲೆಯ ಕೆರೆಗಳ ಸಂರಕ್ಷಣಾ ಕ್ರಮಗಳು

ಪರಂಪರೆ ಮತ್ತು ಸಂಸ್ಕೃತಿ ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಅವು ಎರಡು ಸಹ ದೇಶವೊಂದರ ಸಂಸ್ಕೃತಿ ಮತ್ತು ನಾಗರಿಕತೆಯನ್ನು ರೂಪಿಸುವ ಮಾತೃಕೆಗಳು. ಪ್ರತಿಯೊಂದು ದೇಶವು ತನ್ನದೇ ಆದ ಪರಂಪರೆ ಮತ್ತು ಸಂಸ್ಕೃತಿಯನ್ನು ಹೊಂದಿರುವಂತೆ ಭಾರತವು ಸಹ ಉನ್ನತವಾದ ಸಂಸ್ಕೃತಿ ಮತ್ತು ಪರಂಪರೆಯನ್ನು ಹೊಂದಿದೆ[೧]. ಅವುಗಳನ್ನು ಪ್ರಧಾನವಾಗಿ ಸ್ಥಿರ ಪರಂಪರೆ (Tengable Heritage) ಮತ್ತು ಅಸ್ಥಿರ ಪರಂಪರೆ (Intengable Heritage) ಎನ್ನುವ ಎರಡು ಪ್ರಕಾರಗಳಾಗಿ ವಿಭಾಗಿಸಬಹುದು. ಆದರೆ ಇತ್ತೀಚೆಗೆ ಇವುಗಳೊಂದಿಗೆ ನೈಸರ್ಗಿಕ ಪರಂಪರೆ ಎನ್ನುವ ಮತ್ತೊಂದು ಉಪ ವಿಭಾಗವನ್ನು ಗುರುತಿಸಲಾಗಿದೆ. ಸ್ಥಿರ ಪರಂಪರೆಯಲ್ಲಿ ಸ್ಥಿರವಾದ ಕಟ್ಟಡಗಳು ಅಂದರೆ ದೇವಾಲಯಗಳು, ಅರಮನೆಗಳು, ಕೆರೆಗಳು, ಕೋಟೆಗಳು ಇತ್ಯಾದಿಗಳು ಬರುತ್ತವೆ. ಅದೇ ರೀತಿ ಅಸ್ಥಿರ ಪರಂಪರೆ ಎಂದರೆ ಕಲೆ, ಹಾಡುಗಾರಿಕೆ, ಸಂಪ್ರದಾಯ, ಹಬ್ಬ-ಜಾತ್ರೆ, ಲೋಹಗಾರಿಕೆ, ಕರಕುಶಲ ಕಲೆ, ವೈದ್ಯ ಪದ್ಧತಿ ದಿನ ನಿತ್ಯದ ಆಚರಣೆಗಳು ಇತ್ಯಾದಿಗಳು ಇದರಲ್ಲಿ ಬರುತ್ತವೆ. ಸ್ಥಿರ ಪರಂಪರೆಯಲ್ಲಿ ಬರುವ ಕೆರೆಗಳು ಇತಿಹಾಸದ ನೈಜ ಆಕರಗಳಾಗಿದ್ದು, ಅವು ರಾಷ್ಟ್ರವೊಂದರ ಸಂಪತ್ತು ಮತ್ತು ಸಂಸ್ಕೃತಿಯ ಪ್ರತಿಬಿಂಬಕಗಳಾಗಿವೆ. ಅಷ್ಟೇ ಅಲ್ಲದೆ ಇವು ಆಯಾ ರಾಷ್ಟ್ರದ ಪರಂಪರೆಯ ದ್ಯೋತಕಗಳಾಗಿವೆ.

ಐತಿಹಾಸಿಕ ಮಹತ್ವ ಪಡೆದ ಯಾವುದೇ ಹಳೆಯ ಕಟ್ಟಡವನ್ನು ಇಲ್ಲವೇ ಹಿರಿಯರಿಂದ ನಿರ್ಮಿಸಲ್ಪಟ್ಟ ಸ್ಥಿರ ಕಟ್ಟಡವನ್ನು ಸ್ಮಾರಕ ಎಂದು ಸರಳವಾಗಿ ಹೇಳಬಹುದು. ಸ್ಮಾರಕಗಳ ಪ್ರಾಮುಖ್ಯತೆಯನ್ನು ಅನುಸರಿಸಿ ಅವುಗಳನ್ನು ರಾಷ್ಟ್ರೀಯ ಸಂರಕ್ಷಿತ ಸ್ಮಾರಕಗಳು (ರಾಷ್ಟ್ರಮಟ್ಟದಲ್ಲಿ ಪ್ರಾಮುಖ್ಯತೆ) ಮತ್ತು ರಾಜ್ಯ ಸಂರಕ್ಷಿತ ಸ್ಮಾರಕಗಳು (ರಾಜ್ಯಮಟ್ಟದಲ್ಲಿ ಪ್ರಾಮುಖ್ಯತೆ) ಎಂದು ವಿಭಾಗಿಸಲಾಗಿದೆ. ಸ್ಮಾರಕಗಳು ಆಯಾ ದೇಶಗಳಲ್ಲಿನ ಆಯಾ ಕಾಲದ ಧರ್ಮ, ನಂಬಿಕೆ, ಸಾಮಾಜಿಕ ಪ್ರತಿಷ್ಠೆಗಳನ್ನು ಅನುಸರಿಸಿ ಬೆಳದಿವೆ. ಅವು ಮಾನವನ ಜೀವನ ವಿಧಾನವನ್ನು, ಜೀವನದ ಬಗ್ಗೆ ಅವನಿಗಿರುವ ಧೋರಣೆಯನ್ನು ಹಾಗು ಅವನ ಕಲಾ ಪ್ರಜ್ಞೆಯನ್ನು ಎತ್ತಿ ಹಿಡಿಯುತ್ತವೆ. ಅಲ್ಲದೆ ಅವು ಅಂದಿನ ಮಾನವ ನಾಗರೀಕತೆ ಮತ್ತು ಸಂಸ್ಕೃತಿಯನ್ನು ತಿಳಿಸಿಕೊಡುವ ಪುರಾವೆಗಳು ಸಹ ಆಗಿವೆ. ಆಯಾ ಸಮಾಜದ ಸಂಸ್ಕೃತಿ, ನಂಬಿಕೆ, ಕಲ್ಪನೆ, ಪರಿಸರಗಳನ್ನು ಅವಲಂಬಿಸಿ ಸ್ಮಾರಕಗಳು

ನಿರ್ಮಾಣವಾಗಿವೆ. ಸ್ಮಾರಕಗಳನ್ನು ಅವುಗಳ ಕಾಲಘಟ್ಟದ ಆಧಾರದ ಮೇಲೆ ಪ್ರಾಗೈತಿಹಾಸಿಕ ಸ್ಮಾರಕಗಳು (Pre-historic Monument-3000 B.C.-1500 B.C.), ಆದಿ ಇತಿಹಾಸ ಕಾಲದ ಸ್ಮಾರಕಗಳು (Early historic Monument-1500 B.C.–2/3 A.D), Historic Monument (ಐತಿಹಾಸಿಕ ಕಾಲದ ಸ್ಮಾರಕಗಳು) ಎಂದು ವಿಭಾಗಿಸಲಾಗಿದೆ. ಇತಿಹಾಸ ಕಾಲಘಟ್ಟ ಆರಂಭವಾದಾಗಿನಿಂದ ಇಲ್ಲಿ ಆಳ್ವಿಕೆ ಮಾಡಿದ ಹಲವಾರು ರಾಜ ಮನೆತನಗಳ ಅರಸರು, ರಾಣಿಯರು, ಅಧಿಕಾರಿಗಳು, ಮಂತ್ರಿಗಳು ಮತ್ತು ಜನರು ಹಲವಾರು ಕಾರಣಗಳಿಗಾಗಿ ಇಲ್ಲಿ ಇವರು ನಿರ್ಮಿಸಿದ ಸ್ಮಾರಕಗಳನ್ನು ಮೂರು ಪ್ರಕಾರವಾಗಿ ಈ ಮುಂದಿನಂತೆ ವಿಂಗಡಿಸಬಹುದು.

1. ಸಿವಿಲ್ ಮಾನುಮೆಂಟ್ಸ್: ಅರಮನೆ, ವಾಸದ ಕಟ್ಟಡಗಳು, ಆಡಳಿತ ಕಟ್ಟಡಗಳು, ಕೆರೆ, ನಾಣ್ಯಶಾಲೆ, ನೃತ್ಯಗಾರ ಇತ್ಯಾದಿ
2. ರಿಲಿಜಿಯಸ್ ಮಾನುಮೆಂಟ್ಸ್: ದೇವಾಲಯಗಳು, ಮಠ, ಮಸೀದಿ, ಚರ್ಚುಗಳು ಇತ್ಯಾದಿ
3. ಮಿಲಟರಿ ಮಾನುಮೆಂಟ್ಸ್ : ಕೋಟೆ, ಕೊತ್ತಲ, ಸೈನಿಕ ಶಾಲೆಗಳು ಇತ್ಯಾದಿ

ಚಿತ್ರದುರ್ಗ ಜಿಲ್ಲೆಯಲ್ಲಿ ಸಿವಿಲ್ ಮಾನುಮೆಂಟ್ಸ್‌ನ ಭಾಗವಾದ ಕೆಲವು ಕೆರೆಗಳು ವಿವಿಧ ಕಾರಣಗಳಿಗಾಗಿ ಅವಸಾನದಂಚನ್ನು ತಲುಪಿವೆ. ಕೆಲವು ಈಗಾಗಲೇ ನಾಶವಾಗಿವೆ. ಇನ್ನು ಕೆಲವು ಭಗ್ನ ಸ್ಥಿತಿಯಲ್ಲಿದ್ದು, ಅವುಗಳನ್ನು ಮುಂದಿನ ಸಮುದಾಯಕ್ಕೆ ಉಳಿಸಿಕೊಡಬೇಕಾದ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯಲ್ಲಿನ ಕೆರೆಗಳನ್ನು ಸಂರಕ್ಷಿಸಬೇಕಾದ ತುರ್ತು ಅಗತ್ಯವಿದೆ. ಆ ಕುರಿತ ವಿವರವನ್ನು ಈ ಮುಂದೆ ವಿವರಿಸಲಾಗಿದೆ.

### ೭.೧. ಕೆರೆಗಳ ಸಂರಕ್ಷಣೆಯ ವಿವಿಧ ಆಯಾಮಗಳು

ಭಗ್ನವಾದ ಇಲ್ಲವೇ ಹಾಳಾಗಿರುವ ಸ್ಮಾರಕಗಳನ್ನು ಜೀರ್ಣೋದ್ಧಾರ ಮಾಡುವುದನ್ನು ಇಲ್ಲವೇ ಅವುಗಳನ್ನು ದುರಸ್ತಿ ಮಾಡಿ ಅವು ಮುಂದಿನ ಪೀಳಿಗೆಗೆ ಉಳಿಯುವಂತೆ ಮಾಡುವುದನ್ನೇ ಸಂರಕ್ಷಣೆ ಎನ್ನಬಹುದು. ಈ ರೀತಿ ಮಾಡುವುದರಿಂದ ಸ್ಮಾರಕಗಳು ಬಹುಕಾಲ ಉಳಿಯಬಲ್ಲವು. ಆದ್ದರಿಂದ ಅವುಗಳನ್ನು ಸಂರಕ್ಷಿಸುವ ಅಗತ್ಯವಿದೆ. ಸಿವಿಲ್ ಮಾನುಮೆಂಟ್ಸ್‌ನ ಒಂದು ಭಾಗವಾಗಿರುವ ಜಿಲ್ಲೆಯಲ್ಲಿನ ಕೆರೆಗಳಲ್ಲಿ ಕೇವಲ ಕೆಲವೇ ಕೆರೆಗಳು ಮಾತ್ರ ಸುಸ್ಥಿತಿಯಲ್ಲಿದ್ದು, ಉಳಿದ ಬಹುತೇಕ ಕೆರೆಗಳು ಅವಸಾನದಂಚಿನಲ್ಲಿವೆ. ಅವುಗಳು ಹಾಳಾಗಲು ಹಲವಾರು ಕಾರಣಗಳಿವೆ.

೧. ಮನುಷ್ಯರಂತೆ ಕೆರೆಗಳು ಸಹ ವಯಸ್ಸಾಗಿ ಹಾಳಾಗುತ್ತವೆ (Age Fact)ಇದರಿಂದ ನೀರು ಬಸಿಯುವದು ಇತ್ಯಾದಿ ಸಮಸ್ಯೆಗಳಿಗೆ ಕೆರೆಗಳು ಒಳಗಾಗುತ್ತವೆ.
೨. ಭೂಕಂಪ, ಮಳೆ, ಬಿಸಿಲು ಇತ್ಯಾದಿ ನೈಸರ್ಗಿಕ ಕಾರಣಗಳಿಂದಾಗಿ ಕೆರೆಯ ಏರಿ ಒಡೆದು ಹೋಗುವುದು ಇಲ್ಲವೇ ಕೋಡಿ ಒಡೆದು ನೀರು ನಿಲ್ಲದಂತೆ ಕೆರೆಗಳು ಹಾಳಾಗುತ್ತವೆ.
೩. ನಿಧಿ ಆಸೆಯಿಂದ ಕೆರೆಗಳಲ್ಲಿ ವಿವಿಧೆಡೆ ಗುಂಡಿ ತೋಡುವುದರಿಂದ, ಕಟ್ಟೆಯ ಕಲ್ಲು ಕೀಳುವ ಜನರ ಅವಿವೇಕ ಮತ್ತು ನಿರ್ಲಕ್ಷ್ಯದಿಂದ,
೪. ಕೆರೆಗಳನ್ನು ಒತ್ತುವರಿ ಮಾಡುವುದರಿಂದ ಮತ್ತು ಅವುಗಳನ್ನು ಬಟ್ಟೆ ತೊಳೆಯಲು, ಇಲ್ಲವೇ ಕಸದ ರಾಶಿಯನ್ನು ಕೆರೆಗಳ ಅಂಗಳದಲ್ಲಿ ಒತ್ತಾಯ ಪೂರ್ವಕವಾಗಿ ತುಂಬುವುದರಿಂದ ಅವು ಹಾಳಾಗುತ್ತವೆ.

೫. ಕೆರೆಗಳ ಚಾರಿತ್ರಿಕ ಮಹತ್ವ ಅರಿಯದೇ ಇರುವುದು, ಅವುಗಳ ಬಗ್ಗೆ ಜಾಗೃತಿ ಇಲ್ಲದೇ ಇರುವುದು.

೬. ನಮ್ಮ ಅಜ್ಞಾನ ಮತ್ತು ಅವಿವೇಕದಿಂದ ಕೆರೆಗಳು ಇಂದು ಹಾಳಾಗಿ ಹೋಗುತ್ತವೆ.

೭. ಸಕಾಲಿಕವಾಗಿ ಸೂಕ್ತ ಸಂರಕ್ಷಣೆ ಕೈಗೊಳ್ಳದಿರುವುದರಿಂದ ಸಹ ಕೆರೆಗಳು ನಾಶವಾಗುತ್ತಿವೆ.

೮. ಬೆಳದ ಗಿಡ ಗಂಟೆಗಳನ್ನು ತೆಗೆದು ಕೆರೆಗಳನ್ನು ಸ್ವಚ್ಛಮಾಡದೇ ಇರುವುದು.

೯. ಸಕಾಲಿಕವಾಗಿ ಕೆರೆಯ ಹೂಳು ತೆಗೆಯದೇ ಇರುವುದರಿಂದ

೧೦. ಕೆರೆಗಳಲ್ಲಿ ನೀರು ಸಂಗ್ರಹಣೆಯ ಮಟ್ಟ ಇಳಿಮುಖವಾಗುವಿಕೆ.

ಕೇಂದ್ರ ಸರ್ಕಾರದ ಅಧೀನದಲ್ಲಿರುವ ಕೇಂದ್ರ ಪುರಾತತ್ವ ಇಲಾಖೆ ಮತ್ತು ಅದೇ ರೀತಿ ಆಯಾ ರಾಜ್ಯಗಳಲ್ಲಿರುವ ರಾಜ್ಯ ಪುರಾತತ್ವ ಇಲಾಖೆಗಳು ರಾಜ್ಯ ಸರ್ಕಾರದ ನಿಬಂಧನೆಗೊಳಪಟ್ಟು, ಕೆರೆಗಳನ್ನು ಒಳಗೊಂಡಂತೆ ಇತರೆ ಸ್ಮಾರಕಗಳನ್ನು ಸಂರಕ್ಷಿಸುವ ಹೊಣೆ ಹೊತ್ತು ಕಾರ್ಯನಿರ್ವಹಿಸುತ್ತಿವೆ. ಅದೇ ರೀತಿ ಮುಜರಾಯಿ ಮತ್ತು ಇತರೆ ಸ್ಥಳೀಯ ಸಂಸ್ಥೆಗಳು ಕೆರೆಗಳನ್ನು ಸಂರಕ್ಷಿಸುವ ಜವಾಬ್ದಾರಿಯನ್ನು ಹೊಂದಿವೆ. ಆದರೆ ಈ ಇಲಾಖೆಗಳು ಕೆರೆಗಳ ಸಂರಕ್ಷಣೆ ಕಡೆ ವಾಸ್ತವಿಕವಾಗಿ ಗಮನಹರಿಸಿಲ್ಲ ಎಂದು ಹೇಳಬಹುದು. ಭಾರತ ಸರ್ಕಾರ ಮತ್ತು ಆಯಾ ರಾಜ್ಯ ಸರ್ಕಾರಗಳು ಸ್ಮಾರಕಗಳ ರಕ್ಷಣೆಗಾಗಿ ಹಲವಾರು ಕಾಯ್ದೆಗಳನ್ನು[೨] ಜಾರಿಗೊಳಿಸಿದ್ದು, ಆ ಕಾಯ್ದೆಗಳು ಇಂತಿವೆ.

೧. ದ ಏನ್ಸಿಯಂಟ್ ಅಂಡ್ ಹಿಸ್ಟಾರಿಕಲ್ ಮಾನುಮೆಂಟ್ ಅಂಡ್ ಆರ್ಕಿಯಾಲಾಜಿಕಲ್ ಸೈಟ್ಸ್ ಅಂಡ್ ರಿಮೇನ್ಸ್ ಆಕ್ಟ್–೧೯೫೮ ಅಂಡ್ ರೂಲ್ಸ್–೧೯೫೯ (The Ancient & Historical Monument & Archeological Sites & Remains Act - 1958 & Rules 1959)

೨. ರೆಗ್ಯುಲೇಟಿಂಗ್ ಪ್ರೋ ಬಿಟೇಡ್ ಅಂಡ್ ರೆಗ್ಯುಲೇಟಿಂಗ್ ಏರಿಯ್ಸಾ ಆಕ್ಟ್–೧೯೯೧ (Regulating Prohibited & Regulated Areas Act- 1991

೩. ದ ಆಂಟಿಕ್ವೀಟಿಸ್ ಅಂಡ್ ಆರ್ಟ್ ಟೆರ್ಸರಸ್ಸ್ ಆಕ್ಟ್–೧೯೭೨ ಆಂಡ್ ರೂಲ್ಸ್–೧೯೭೬ (The Antiquites & Art Treasurs Act -1972 & Rules- 1976)

೪. ಆರ್ಕಿಯಾಲಾಜಿಕಲ್ ಅಮೆಂಡ್‌ಮೆಂಟ್ ಆಕ್ಟ್–೨೦೧೦ (Archaeological Amendment Act-2010)

ಸ್ಮಾರಕದ ೧೦೦ ಮೀಟರ್ ಪ್ರದೇಶವನ್ನು ಸಂರಕ್ಷಿತ (Protected/Regulated Zone)ಪ್ರದೇಶವೆಂದು, ೩೦೦ ಮೀ. ವರೆಗಿನ ಪ್ರದೇಶವನ್ನು ನಿಷೇಧಿತ (Prohibited Zone) ಪ್ರದೇಶವೆಂದು ಘೋಷಣೆ ಮಾಡಲಾಗಿದೆ. ಇದನ್ನು ಉಲ್ಲಂಘಿಸಿ Enchroachment ಮಾಡಿಕೊಂಡರೆ ೧ ಲಕ್ಷ ರೂಪಾಯಿವರೆಗೆ ದಂಡ/ಇಲ್ಲವೇ ಸೆರೆಮನೆ ವಾಸ, ಇಲ್ಲವೇ ಇವೆರಡನ್ನು ಹಾಕಬಹುದು. Trausare Trove Act ಅನ್ವಯ ಯಾವುದೇ ಅನುಮಾನಾಸ್ಪದ ವ್ಯಕ್ತಿಯನ್ನು ಬಂಧಿಸುವಂತೆ ಪೊಲೀಸರಿಗೆ ಸೂಚಿಸುವ ಅಧಿಕಾರ A.S.I./D.A.M. ಅಧಿಕಾರಿಗಳಿಗೆ ಇರುತ್ತದೆ. ಆದರೆ ರಾಜ್ಯ ಮತ್ತು ಜಿಲ್ಲೆಯಲ್ಲಿನ ಬಹುತೇಕ ಕೆರೆಗಳನ್ನು ಸಂರಕ್ಷಿತ ಸ್ಮಾರಕಗಳ ಪಟ್ಟಿಗೆ ಸೇರ್ಪಡೆ ಮಾಡಿಕೊಂಡಿಲ್ಲ. ಅಧಿಕಾರಿಗಳ ಈ ಬೇಜವಾಬ್ದಾರಿತನದಿಂದಾಗಿ ಬಹುತೇಕ ಕೆರೆಗಳು ಸ್ಥಳೀಯರಿಂದ ಆಕ್ರಮಿಸಲ್ಪಟ್ಟಿವೆ. ಇಲ್ಲವೇ

ಕಾಲನ ತುಳಿತಕ್ಕೆ ಸಿಕ್ಕು ಅವನತಿಯತ್ತ ಮುಖ ಮಾಡಿರುವ ಕೆರೆಗಳನ್ನು ವ್ಯವಸ್ಥಿತವಾಗಿ ಮತ್ತು ವೈಜ್ಞಾನಿಕವಾಗಿ ಸಂರಕ್ಷಿಸಬೇಕಾದ ಅಗತ್ಯವಿದೆ.

**ಕೆರೆಗಳ ಸಂರಕ್ಷಣೆಯ ವಿಧಗಳು**

ಸರ್ಕಾರದ ಇಲಾಖೆಗಳು ವೈಜ್ಞಾನಿಕ ದೃಷ್ಟಿಕೋನದಿಂದ ವಿವಿಧ ವಿಧಾನಗಳನ್ನು ಅಳವಡಿಸಿಕೊಂಡು ಸ್ಮಾರಕಗಳನ್ನು ಸಂರಕ್ಷಣೆ ಮಾಡುತ್ತಿವೆ. ಅದರಲ್ಲಿ ಹಲವು ಬಗೆಗಳಿದ್ದು, ಅವುಗಳನ್ನು ಕೆರೆಗಳ ಸಂರಕ್ಷಣೆಯಲ್ಲಿಯೂ ನಾವು ಅಳವಡಿಸಿಕೊಳ್ಳಬಹುದಾಗಿದ್ದು, ಅವುಗಳ ಪ್ರಾಮುಖ್ಯತೆಯನ್ನು ಈ ಮುಂದೆ ವಿವರಿಸಲಾಗಿದೆ[೩].

1. Preservation : Preserve the mounuments as it is in Site. ಅಂದರೆ ಸ್ಮಾರಕ ಯಾವ ಸ್ಥಿತಿಯಲ್ಲಿ ಇದೆಯೋ ಅದೇ ಸ್ಥಿತಿಯಲ್ಲಿ ಸ್ಮಾರಕವನ್ನು ಉಳಿಸಿಕೊಳ್ಳುವುದು.
2. Consolidation: ಅಂದರೆ ಹಾಳಾಗಿರುವ ಭಾಗಗಳನ್ನು ತೆಗೆದು, ಹೊಸ ಭಾಗಗಳನ್ನು ಸೇರಿಸಿ ಸಂರಕ್ಷಿಸುವುದು.
3. Restoration : ಅಂದರೆ ಸ್ಮಾರಕದ ಉಳಿದ ಭಾಗಗಳ ಆಧಾರದಿಂದ ನಾಶವಾಗಿರುವ ಭಾಗಗಳಿಗೆ ಹೊಸ ಭಾಗಗಳನ್ನು ಸೇರಿಸಿ ಸಂರಕ್ಷಿಸುವುದು, ಕಳೆದುಹೋಗಿರುವ ವಸ್ತು ಭಾಗಗಳನ್ನು ಪುನಃ Reasemble ಮಾಡುವುದು ಇಲ್ಲಿ ಮುಖ್ಯವಾಗಿರುತ್ತದೆ.
4. Transplantation: ಅಂದರೆ ಅಳಿದುಳಿದಿರುವ ಕೆಲ ಮೂಲ ಭಾಗಗಳನ್ನು ಇಲ್ಲವೇ ಎಲ್ಲವನ್ನು ಬೇರೊಂದೆಡೆ ತೆಗೆದುಕೊಂಡು ಹೋಗಿ ಸ್ಥಾಪಿಸಿ ಸಂರಕ್ಷಿಸುವುದು.
5. Enovernment : ಯಾವುದಾದರೂ Project ಸಲುವಾಗಿ ಬೇರೊಂದೆಡೆ ಯಥಾಸ್ಥಿತಿಯಲ್ಲಿ ಸ್ಮಾರಕವನ್ನು ಸ್ಥಳಾಂತರಿಸಿ ಸಂರಕ್ಷಿಸುವುದು. ಉದಾ: ಬಾಗಲಕೋಟೆಯ ಸ್ಥಳಾಂತರವನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಈ ಮೇಲಿನ ಸಂರಕ್ಷಣಾ ವಿಧಾನಗಳಲ್ಲಿ Enovernment ವಿಧಾನವನ್ನು ಮಾತ್ರ ಬಿಟ್ಟು ಕೆರೆಗಳ ಸಂರಕ್ಷಣೆಯಲ್ಲಿ ಅಳವಡಿಸಿಕೊಳ್ಳಲಾಗಿದೆ. ರಾಜ್ಯದ ಚಾರಿತ್ರಿಕ ಕೆರೆಗಳಾದ ಬನವಾಸಿ, ಚಂದ್ರವಳ್ಳಿ, ಮದಗ, ಮಾಸೂರು, ತಾಳಗುಂದ, ಅಯ್ಯನಕೆರೆ, ಸೂಳೆಕೆರೆ ಮೊದಲಾದ ಕೆರೆಗಳ ಸಂರಕ್ಷಣಾ ಕಾರ್ಯದಲ್ಲಿ ಈ ಮೇಲಿನ ವ್ಯಜ್ಞಾನಿಕ ವಿಧಿವಿಧಾನಗಳನ್ನು ಅಳವಡಿಸಿಕೊಂಡು ಕೆರೆಗಳ ಸಂರಕ್ಷಣೆ ಮಾಡಲಾಗಿದೆ. ಆದರೆ ಚಿತ್ರದುರ್ಗ ಜಿಲ್ಲೆಯಲ್ಲಿ ಚಂದ್ರವಳ್ಳಿ ಕೆರೆಯಲ್ಲಿ ಮಾತ್ರ ಈ ವ್ಯಜ್ಞಾನಿಕ ವಿಧಾನಗಳನ್ನು ಅಳವಡಿಸಿಕೊಂಡು ಆ ಕೆರೆಯನ್ನು ಸಂರಕ್ಷಿಸಲಾಗಿದೆ. ಆದರೆ ಬಹುತೇಕ ಕೆರೆಗಳ ಸಂರಕ್ಷಣೆಯ ವಿಚಾರದಲ್ಲಿ ಸಾಂಪ್ರದಾಯಿಕ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಆದ್ದರಿಂದ ಬಹತೇಕ ಕೆರೆಗಳು ತುಂಬಾ ದಾರುಣಸ್ಥಿತಿಯನ್ನು ತಲುಪಿವೆ. ಒಂದು ಕೆರೆಯ ಹಿಂದೆ ಹಲವರ ಬದುಕು, ಹಲವರ ಸಾಹಸ, ಕಾಲಗರ್ಭದ ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಪ್ರಗತಿಯ ಕಥೆ ಇದೆ. ಇವುಗಳನ್ನು ಎಲ್.ಪಿ.ಜಿ.ಯ[೪] ಈ ಕಾಲಘಟ್ಟದಲ್ಲಿ ಉಳಿಸಬೇಕಾಗಿದೆ. ಐತಿಹಾಸಿಕ ಕಾಲಗರ್ಭದಲ್ಲಿ ನಿರ್ಮಾಣವಾಗಿ/ಅವಸಾನದಂಚಿನಲ್ಲಿರುವ ಸ್ಮಾರಕಗಳು, ಸ್ಮಾರಕ ವಸ್ತುಗಳು ನಮ್ಮ ಹಿರಿಯರ ಸಾಹಸದ,

ಜ್ಞಾನದ, ಬುದ್ಧಿಶಕ್ತಿಯ ಪ್ರತೀಕಗಳಾಗಿವೆ. ಆದ್ದರಿಂದ ಸಮಾಜ ಮತ್ತು ಸಂಸ್ಕೃತಿಯ ಬೆಳವಣಿಗೆಯನ್ನು ಅರಿಯಲು ಸ್ಮಾರಕಗಳು ನಮಗೆ ಇತಿಹಾಸದ ಪ್ರಮುಖ "ಅಳತೆಗೋಲುಗಳಾಗಿವೆ" (Measurment) ಎಂದು ಹೇಳಬಹುದಾಗಿದೆ. ಆದ್ದರಿಂದ ಕೆರೆಗಳ ಸಂರಕ್ಷಣೆಯ ಕಾರ್ಯ ಜಿಲ್ಲೆಯಲ್ಲಿ ತ್ವರಿತಗತಿಯಲ್ಲಿ ಆಗಬೇಕಾದ ಅವಶ್ಯಕತೆ ಇದೆ.

**೭.೨. ಕೆರೆಗಳ ಜೀರ್ಣೋದ್ಧಾರ ಮತ್ತು ದುರಸ್ತಿ ಕಾರ್ಯಗಳು**

ಪ್ರತಿಯೊಂದು ಕೆರೆ ಕಾಮಗಾರಿಯೂ ನಿರ್ದಿಷ್ಟ ಅವಧಿಗೆ ಮಾತ್ರ ಉಪಯುಕ್ತವಾಗಿರುತ್ತದೆ. ಸೂಕ್ತವು ಸಕಾಲಿಕವೂ ಆದ ಸಂರಕ್ಷಣೆ ಹಾಗೂ ದುರಸ್ತಿಗಳಿಂದ ಈ ಅವಧಿಯನ್ನು ಹೆಚ್ಚಿಸಲು ಸಾಧ್ಯ. ಅಂತಹ ಪ್ರಯತ್ನಗಳ ಅಭಾವದ ಪರಿಣಾಮವಾಗಿ ಕೆರೆ ಹೂಳಿನಿಂದ ತುಂಬಿ ಹೋಗುತ್ತದೆ ಅಥವಾ ಅದರ ಏರಿ ದುರ್ಬಲವಾಗಿ ಒಡೆದು ಹೋಗುತ್ತದೆ. ಇಲ್ಲವೆ ಕೆರೆಯಲ್ಲಿ ನಿಲ್ಲುವ ನೀರು ಒಡಕು ತೂಬುಗಳಲ್ಲಿ ಸೋರಿ ಹೋಗುತ್ತದೆ. ನೀರಾವರಿ ಕಾಲುವೆ ಅಸಡ್ಡೆಗೆ ಗುರಿಯಾದರೆ ಈ ಎಲ್ಲಾ ದುಷ್ಪರಿಣಾಮಗಳು ಅದಕ್ಕೂ ಅಷ್ಟೇ ಮಟ್ಟಿಗೆ ಸಂಭವಿಸುತ್ತವೆ. ನೀರಾವರಿ ಕಾರ್ಯದ ಸೂಕ್ತ ಸಂರಕ್ಷಣೆ, ಅದರ ನಿರ್ಮಾಣದಷ್ಟೆ ಮುಖ್ಯ. ಇದನ್ನು ಅರಿತ ನಮ್ಮ ಹಿರಿಯರು ಸಂರಕ್ಷಣೆಗೆ ಹೆಚ್ಚು ಮಹತ್ವವನ್ನು ಕೊಟ್ಟಿದ್ದರು. ಅವರು ತಮ್ಮದೇ ಆದ ಸಾಂಪ್ರದಾಯಿಕ ವಿಧಾನಗಳನ್ನು ಅನುಸರಿಸಿ ಕೆರೆಗಳನ್ನು ಸಂರಕ್ಷಿಸಿ ಆ ಮೂಲಕ ಕೆರೆಗಳನ್ನು ಅವುಗಳ ಜೀರ್ಣೋದ್ಧಾರಕ್ಕಾಗಿ ಶ್ರಮಿಸುತ್ತಿದ್ದರು. ನಮ್ಮ ನಾಡಿನ ಅನೇಕ ಶಾಸನಗಳು ಈ ವಿವರವನ್ನು ದಾಖಲಿಸಿವೆ.

ಕೆರೆ ಸಂರಕ್ಷಣೆಗೆ ನೀಡಲಾಗಿದ್ದ ಮಹತ್ವ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಈ ಮುಂದಿನಂತೆ ವಿವರಿಸಲಾಗಿದೆ. "ಕೆರೆ ಇತ್ಯಾದಿಗಳ ಕೆಳಗೆ ಬೇಸಾಯ ಮಾಡುವ ವ್ಯಕ್ತಿಗಳು ಅಥವಾ ಯಾವುದೇ ರೀತಿಯ ಕಂದಾಯವೂ ಇಲ್ಲದೆ ಅಂತಹ ಭೂಮಿಯನ್ನು ಅನುಭವಿಸಲು ಅನುಮತಿ ಪಡೆದ ವ್ಯಕ್ತಿಗಳು ಕೆರೆ ಇತ್ಯಾದಿಗಳನ್ನು ಒಳ್ಳೆಯ ದುರಸ್ತಿಯಲ್ಲಿ ಇಟ್ಟಿರಬೇಕು. ಇಲ್ಲವಾದರೆ, ಅವರಿಗೆ ನಷ್ಟದ ಎರಡರಷ್ಟು ಜುಲ್ಮಾನೆಯ ಶಿಕ್ಷೆ ವಿಧಿಸಬೇಕು". ಸಂರಕ್ಷಣೆಗೆ ಮಹತ್ವ ಕೊಟ್ಟದ್ದು ಮಾತ್ರವಲ್ಲ ನೀರಾವರಿ ಕೆಲಸದ ಸಂರಕ್ಷಣೆಯ ಜವಾಬ್ದಾರಿ, ಆ ಕೆಲಸದಿಂದ ಫಲಾನುಭವ ಪಡೆಯುವ ವ್ಯಕ್ತಿಗಳ ಮೇಲೆ ಮಾತ್ರವೇ ಇರತಕ್ಕದ್ದು ಎನ್ನುವುದು ಇದರಿಂದ ವ್ಯಕ್ತವಾಗುತ್ತದೆ".

**ರಾಜ್ಯದಲ್ಲಿ ಕೆರೆಗಳ ಜೀರ್ಣೋದ್ಧಾರ ಮತ್ತು ದುರಸ್ತಿ ಕಾರ್ಯಗಳು**

ರಾಜ್ಯದ ವಿವಿಧೆಡೆ ಕೆರೆಗಳ ಸಂರಕ್ಷಣೆ ಹಾಗೂ ದುರಸ್ತಿ ಕಾರ್ಯಗಳಿಗೆ ನೀಡಲಾಗಿದ್ದ ಮಹತ್ವವನ್ನು ಸೂಚಿಸುವ ಅನೇಕ ಶಾಸನಗಳಿವೆ. ಕದಲಗೆರೆಯ ಕೆರೆಯ ಹಿತಕ್ಕಾಗಿ ಜುಲ್ಮಾನಗಳಿಂದ ಬರುವ ಹಣವನ್ನು ಕುರ್ತಕೋಟಿ ಅಗ್ರಹಾರದ ಮಹಾಜನರಿಗೆ ನೀಡಿದ್ದು, ಗದಗ ತಾಲ್ಲೂಕಿನ ಆರನೇ ವಿಕ್ರಮಾದಿತ್ಯನ ಕಾಲದ ಕುರ್ತಕೋಟಿ ಶಾಸನದಲ್ಲಿ (೧೦೮೨) ದಾಖಲಾಗಿದೆ. ಗೋಣಸಮುದ್ರ ಎಂಬ ಸ್ಥಳೀಯ ಕೆರೆಯ ಅಂಗಳದಿಂದ ಹೂಳು ಎತ್ತಲು ಹಾಗೂ ತೂಬಿನ ಕಲ್ಲು ಮತ್ತು ಮರಗಳನ್ನು ದುರಸ್ತಿ ಮಾಡಲು ದೇವರಿಗೆಂದು ಕಂದಾಯವಿಲ್ಲದೆ ಬೆಟ್ಟದ ಭೂಮಿಯನ್ನು ಬಿಟ್ಟು ಉಳಿದ ಎಲ್ಲಾ ತೋಟಗಳಿಂದಲೂ ವಸೂಲಾದ ಕಂದಾಯದ ಹಣವನ್ನು ನೀಡಲಾಯಿತು ಎನ್ನುವುದನ್ನು

ಧಾರವಾಡ ಜಿಲ್ಲಾ ಮುಂಡರಗಿ ತಾಲ್ಲೂಕಿನ ಡಂಬಳ ಶಾಸನ (೧೧೮೪) ದಾಖಲು ಮಾಡುತ್ತದೆ. ೧೩ನೇ ಶತಮಾನದಲ್ಲಿ ಹೊಯ್ಸಳ ರಾಜ ನರಸಿಂಹ, ಹರವು ನಾಲೆಯ ವಾರ್ಷಿಕ ದುರಸ್ತಿಗಾಗಿ ತೊಣ್ಣೂರು ಅಗ್ರಹಾರದ ಮಹಾಜನರಿಗೆ ಹೊಳೆಯ ಸುಂಕದಿಂದ ೬೪ ಗದ್ಯಾಣಗಳನ್ನು ನೀಡಿದ ಕಾರ್ಯ ಹೊಸಹಳ್ಳಿ, ಬೆಳತೂರು, ಅರಸೀಬೀದಿ ಹಾಗೂ ಬೆಳವಂಕಿ ಶಾಸನಗಳು ಸಂರಕ್ಷಣಾ ಕಾರ್ಯಕ್ಕಾಗಿ ನಗದು ದಾನ ಇಲ್ಲವೆ ಭೂಮಿ ದಾನ ಮಾಡಿದ್ದನ್ನು ದಾಖಲು ಮಾಡಿವೆ.[೬]

ನಾಗವರ್ಮ ಕಟ್ಟಿಸಿದ ದೇವಿಕೆರೆ ಹಾಗೂ ಪೆರಿಯ ಕೆರೆಗಳ ಸಂರಕ್ಷಣೆಗಾಗಿ ನಾಲ್ಕು ಖಂಡುಗ ಭೂಮಿಯನ್ನು ಬಿತ್ತುವಟ್ಟವೆಂದು ದಾನ ಮಾಡಿದ್ದನ್ನು ಕ್ರಿ ಶ ೯೬೮ರ ಕಾರ್ಯ ಶಾಸನ (ನಂಜನಗೂಡು) ದಾಖಲಿಸುತ್ತದೆ. ಸೊಮವಾರಪೇಟೆಯ(ಕೊಡಗು) ಕ್ರಿ ಶ ೧೦೭೦ರ ಹೊಸಹಳ್ಳಿ ಶಾಸನ ಗೌರಾಳಿ ಕೆರೆಯ ಸಂರಕ್ಷಣೆಗಾಗಿ ೪೦ ಗದ್ಯಾಣಗಳನ್ನು ದಾನವಿತ್ತುದನ್ನು ದಾಖಲು ಮಾಡುತ್ತದೆ. ಬ್ರಹ್ಮಪುರಿಯ ಮಹಾಜನರಿಗೆ ಮಾರಿಯಬ್ಬೆಯ ಕೆರೆಯ ಕೆಳಗೆ ಕೆಲವು ಭೂಮಿಗಳನ್ನು ನೀಡಿದ್ದನ್ನು ಹುನಗುಂದ ತಾಲ್ಲೂಕಿನ ಅರಸೀಬೀದಿ ಶಾಸನ ವಿವರಿಸಿದೆ. ಒಂದು ಕೆರೆಯ ಸಂರಕ್ಷಣೆಗಾಗಿ ಹತ್ತು ಖಂಡುಗ ಭೂಮಿಯನ್ನು ದಾನವಿತ್ತುದು ಬೆಳತೂರು (ಹೆಗ್ಗಡೆದೇವನ ಕೋಟೆ) ಶಾಸನದಲ್ಲಿ ದಾಖಲಾಗಿದೆ. ಬೆಳವಣಿಕೆಯ (ರೋಣ) ಪಳಗೆಯ ಚಾವುಂಡಮಯ್ಯ ಹಾಗೂ ಆತನ ಹೆಂಡತಿ ಶಾಂತಿಕಬ್ಬೆ ತಾವು ಕಟ್ಟಿಸಿದ ಮುತ್ತಲಗೆರೆಯ ಸಂರಕ್ಷಣೆಗಾಗಿ ಭೂಮಿಯನ್ನು ನೀಡಿದರು[೭].

ಸಂರಕ್ಷಣಾ ಕಾರ್ಯಕ್ಕಾಗಿ ಬಂಡಿಗಳನ್ನು ನೀಡಿದ ವಿಶಿಷ್ಟ ಕ್ರಮವನ್ನು ಹೊಳೆನರಸೀಪುರ, ಹಿರೇನಲ್ಲೂರು ಹಾಗು ಬೊಳೇಕ್ಯಾತನಹಳ್ಳಿ ಶಾಸನಗಳಲ್ಲಿ ದಾಖಲು ಮಾಡಲಾಗಿದೆ. ಕೆರೆಯ ನಿರ್ಮಾಣದ ಸಲುವಾಗಿ ಬಂಡಿ ಸಾಮಗ್ರಿ, ಕೂಲಿ, ಬಂಡಿ, ಹೊಡೆಯುವವ, ಬಂಡಿಗಳಿಗಾಗಿ, ಕೆರೆ ತೋಡುವ ಕೆಲಸದ ಮೇಲುಸ್ತುವಾರಿಗಾಗಿ ಎರಡು ತೂಬುಗಳನ್ನು ಕಟ್ಟಿದ ಕಲ್ಲು ಕೆಲಸದವನಿಗಾಗಿ ಹಾಗೂ ಇತರೆ ಸಾದಿಲ್ವಾರು ವೆಚ್ಚಕ್ಕಾಗಿ ಮಹಾಪ್ರಧಾನ ಮಾದಿಗದೇವ ದಣ್ಣಾಯಕ ೨೨೦೦ ಗದ್ಯಾಣಗಳನ್ನು, ೮ ಪಣಗಳನ್ನು ಖರ್ಚು ಮಾಡಿದ ಎಂದು ಕ್ರಿ ಶ ೧೨೩೨ರ ಹೊಳೆನರಸೀಪುರ (ಹಾಸನ) ಶಾಸನ ಹೇಳುತ್ತದೆ. ಬಂಡಿಗಳ ಸಂರಕ್ಷಣೆಗಾಗಿಯೇ ೮೦೦ ಗದ್ಯಾಣಗಳನ್ನು ನಿಗದಿ ಅಮಾಡಿದ್ದು, ಕೆರೆ ನಿರ್ಮಾಣ ಕಾಲದಲ್ಲಿಯೇ ಅದರ ಸಂರಕ್ಷಣೆಯ ಬಗ್ಗೆಯೂ ಯೋಚಿಸಲಾಗಿತ್ತು ಎನ್ನುವುದನ್ನು ನಿಚ್ಚಳವಾಗಿ ತೋರಿಸುತ್ತದೆ. ಒಂದು ಕೆರೆಯ ದುರಸ್ತಿಗೆ ಮಣ್ಣು ಸಾಗಿಸಲು ಮಾದಿರಾಜನೆಂಬಾತ ಬಂಡಿಯೊಂದನ್ನು ನೀಡಿದ್ದನ್ನು ಕ್ರಿ ಶ ೧೨೦೭ರ ಹಿರೇನೆಲ್ಲೂರು (ಕಡೂರು) ಶಾಸನ ದಾಖಲು ಮಾಡಿದೆ. ಅರಕಲಗೂಡಿನ ಬೊಳೇಕ್ಯಾತನಹಳ್ಳಿ ಶಾಸನದಲ್ಲಿ (೧೩೭೧) ಕೆರೆಯ ಸಲುವಾಗಿ ಬಂಡಿಗಳನ್ನು ಇಟ್ಟುಕೊಳ್ಳಲು ಹಳ್ಳಿಯ ಕೆಲವು ಮಂದಿಗೆ ಭೂಮಿಯನ್ನು ತೆರಿಗೆಗಳನ್ನು ಇತ್ತಿದ್ದು ದಾಖಲಾಗಿದೆ. ಕೆಲವು ಸುಂಕಗಳನ್ನು ಮಾಫಿ ಮಾಡಲಾಯಿತು. ಬಂಡಿಗಳಿಗೆ ಬೇಕಾದ ಕೋಣ, ಮರ (ಕಿರುಮುಟ್ಟು), ಕಬ್ಬಿಣ ಹಾಗೂ ಕೀಲೆಣ್ಣೆಗಳ ವೆಚ್ಚವನ್ನು ದಾನ ಪಡೆದವರೇ ತಮ್ಮ ಸ್ವಂತ ಹಣದಿಂದ ನಿಭಾಯಿಸಬೇಕೆಂದು ಶಾಸನ ನಿಗದಿ ಮಾಡುತ್ತದೆ. ಕೆರೆಗಳ ಸಂರಕ್ಷಣೆಗಾಗಿ ಭೂಮಿ, ಹಣ ನೀಡುವುದನ್ನು ಈ ಶಾಸನಗಳು ತಿಳಿಸುತ್ತದೆ. ಇಷ್ಟೇ ಅಲ್ಲದೆ ೧೫ನೇ ಶತಮಾನದ

ಮಿರ್ಲೆ ಶಾಸನ ಹಂಪಾಪುರದ ಮಹಾಜನರು ತಮ್ಮ ಹಳ್ಳಿಯ ನಾಲೆ ಎಂಟು ಹತ್ತು ಕಡೆಗಳಲ್ಲಿ ಒಡೆದು ಹೋಗಿದ್ದಾಗ ಅದನ್ನು ಸರಿಪಡಿಸಲು ತಮಗೆ ಶಕ್ತಿಯಲ್ಲದೆ, ನಾಲೆಯ ಸಂರಕ್ಷಣೆಯ ಕೆಲಸವನ್ನು ಹಳ್ಳಿ ಹಿರಿಯೂರಿನ ಗೌಂಡಪ್ರಜೆಗಳಿಗೆ ವಹಿಸಲು ತೀರ್ಮಾನಿಸಿದರು ಎಂದು ತಿಳಿಸುತ್ತದೆ. ಆ ಸಲುವಾಗಿ ಅವರು ಒಂದು ಮನೆ, ೧೨ ಖಂಡುಗ ತರಿ ಭೂಮಿ ಹಾಗೂ ೧೫೦ ಕಂಬ ಖುಷ್ಕಿ ಭೂಮಿಗಳನ್ನು ಮಾರಿದರು. (ಈ ಮಾರಾಟ ನಾಲೆ ಸಂರಕ್ಷಣೆಗಷ್ಟೇ ಅಲ್ಲ. ತಮ್ಮ ಊರಿನಲ್ಲಿ ಒಂದು ಛತ್ರವನ್ನು ಕಟ್ಟಿಸಲೂ ಕೂಡ). ಈ ಶಾಸನ ನಮಗೆ ಸ್ಪಷ್ಟವಾಗಿ ಹೇಳುತ್ತದೆ. ನೀರಾವರಿ ಕೆಲಸದ ಸಂರಕ್ಷಣೆ ಹಾಗೂ ದುರಸ್ತಿ ಕಾರ್ಯ ಗ್ರಾಮ ಸಮುದಾಯದ ಸದಸ್ಯರ ಆದ್ಯ ಜವಾಬ್ದಾರಿ ಎಂದು ಪರಿಗಣಿತವಾಗಿತ್ತು ಮತ್ತು ಈ ಸಂಬಂಧವಾಗಿ ಅವರು ತಮ್ಮ ಕರ್ತವ್ಯವನ್ನು ನಿಭಾಯಿಸಲು ಅಶಕ್ತರಾಗಿದ್ದರೆ ಅದನ್ನು ಇತರರಿಗೆ ವಹಿಸಲಾಗುತ್ತಿತ್ತು.

ಒಂದು ಕೆರೆಯ ಸಂರಕ್ಷಣೆಗಾಗಿ ಇದ್ದ ಪೂರಾ ವ್ಯವಸ್ಥೆಯನ್ನು ವಿವರವಾಗಿ ತಿಳಿಸುವ ಇನ್ನೊಂದು ಸ್ವಾರಸ್ಯಕರ ಶಾಸನ ಮುಳಬಾಗಿಲು ತಾಲ್ಲೂಕಿನ ಕ್ರಿ ಶ ೧೪೯೬ರ ರಾಜಗುಂಡ್ಲಹಳ್ಳಿ ಶಾಸನ. ಆ ಶಾಸನ ನಿರ್ಮಾತೃವಿಗೂ ಕೆರೆ ಕೆಳಗಿನ ಪ್ರಧಾನ ಫಲಾನುಭವಿಗೂ (ದೇವಾಲಯ) ನಡುವೆ ಆದ ಒಪ್ಪಂದ. ಅದು ಹೀಗೆನ್ನುತ್ತದೆ.[೮]

"ಗುಂಡ್ಲನಹಳ್ಳಿ ಹಳೆಯ ಕೆರೆಯ ಪಶ್ಚಿಮಕ್ಕೆ ಮಾವಿನಹಳ್ಳದಲ್ಲಿ ನೀವು ಹಣ ವ್ಯಯಿಸಿ ಕನ್ನೆಗೆರೆ (ಹೊಸಕೆರೆ) ಕಟ್ಟಿಸಿದ್ದರ ಸಲುವಾಗಿ ಅವುಗಳ ಹುಟ್ಟುವಳಿಯಲ್ಲಿ ನಾಲ್ಕು ಭಾಗ ಅಕ್ಕಿಯನ್ನು ನೀವು ಸುಂಕವಿಲ್ಲದೆ ಅನುಭವಿಸಬಹುದು. ಈ ನಾಲ್ಕು ಭಾಗಗಳು ಮುಗಿದ ಮೇಲೆ ಈ ಕೆರೆಯ ಕೆಳಗೆ ಮಾಡಲಾಗುವ ಭತ್ತದ ಗದ್ದೆಗಳಲ್ಲಿ ಹತ್ತರಲ್ಲಿ ಮೂರರಷ್ಟನ್ನು ದಶವಂದವಾಗಿ ಕೊಟ್ಟು, ಕೊಡುಗೆಯಾಗಿ ನಿಮಗೆ ನೀಡುತ್ತೇನೆ. ಉತ್ತಮ, ಮಧ್ಯಮ ಹಾಗೂ ಅಧಮ ಭೂಮಿಯನ್ನು ಈ ಕೆರೆಯ ಕಟ್ಟು ಕೊಡಿಗೆ ಮಾನ್ಯವಾಗಿ ನೀಡುತ್ತೇವೆ. ಒಂದು ಖಂಡುಗ ಭೂಮಿಯನ್ನು ನಿಮಗೆ ಕಟ್ಟು ಕೊಡಿಗೆ ಮಾನ್ಯವಾಗಿ ಕೊಡುತ್ತೇವೆ.

"ನೀವು ಕಟ್ಟುವ ಕೆರೆಗೆ ಏನಾದರೂ ಹಾನಿ ಉಂಟಾದಲ್ಲಿ ನೀವು ನಿಮ್ಮ ಪಾಲಿನ ನಾಲ್ಕು ಭಾಗ ಮಾನ್ಯರಿಂದ ಸರಿಮಾಡಿಸಬೇಕು. ಅದೂ ಮುಗಿದ ಮೇಲೆ, ಯಾವುದೇ ಸಣ್ಣ ದೋಷವು ಉಂಟಾದರೆ ನಾವು ನಿಮ್ಮ ದಸವಂದವೂ ಸೇರಿದಂತೆ ಕೆರೆಯ ಮೇಲೆ ಹಣವನ್ನೂ, ಭತ್ತದ ಗದ್ದೆಗಳಿಂದ ಧಾನ್ಯವನ್ನೂ ವಸೂಲು ಮಾಡಿ ಅದರಿಂದ ಕೆರೆಯನ್ನು ದುರಸ್ತಿ ಮಾಡಿಸುತ್ತೇವೆ".

"ನಿಮ್ಮ ಕಟ್ಟು ಕೊಡಿಗೆಯ ಭತ್ತದ ಖುಷ್ಕಿ ಭೂಮಿ ಹಾಗೂ ಒಣ ಬಯಲುಗಳಲ್ಲಿ ನಮ್ಮ ದೇವಾಲಯದ ಸಲುವಾಗಿ ನಾನಾ ಬಾಬಿನ ಯಾವುದೇ (ನಿರ್ದಿಷ್ಟ) ಪಾವತಿಯೂ ಆಗಿಲ್ಲ".

"ನಿಮ್ಮ ಕಟ್ಟು ಕೊಡಿಗೆ ಭತ್ತದ ಗದ್ದೆ ಹಾಗೂ ಹೊಲಗಳನ್ನು ನಿಮಗೆ ವಂಶಪಾರಂಪರ್ಯವಾಗಿ ಹಾಗೂ ಮುಂದಿನವರೆಗೆ ಬಿಟ್ಟುಕೊಡುವ ಇಲ್ಲವೆ ಮಾರುವ ಹಕ್ಕು ಸಮೇತ ನೀಡಲಾಗಿದೆ".

ಕೆರೆ ನಿರ್ಮಾಣದ ಪರಿಹಾರವಾಗಿ ಮಾತ್ರವಲ್ಲ, ಅದನ್ನು ಒಳ್ಳೆಯ ದುರಸ್ತಿಯಲ್ಲಿ ಇಡುವ ಸಲುವಾಗಿ ಕೆರೆಯ ನಿರ್ಮಾತೃವಿಗೆ ಕೆರೆಯಿಂದ ನೀರಾವರಿ ಆಗುವ ಭೂಮಿಯ ಹುಟ್ಟುವಳಿಯಲ್ಲಿನ

ನಾಲ್ಕು ಭಾಗ ಅಕ್ಕಿಯನ್ನು ದಶವಂದವಾಗಿಯೂ, ತರಿ ಹಾಗೂ ಖುಷ್ಕಿ ಭೂಮಿಯ ಹತ್ತರಲ್ಲಿ ಮೂರರಷ್ಟನ್ನು ಕಟ್ಟುಕೊಡಿಗೆ ಮಾನ್ಯವಾಗಿಯೂ ಈ ಶಾಸನ ನೀಡುತ್ತದೆ. ಕೆರೆ ಸಂರಕ್ಷಣೆಯಲ್ಲಿ ತಪ್ಪಿದ್ದಲ್ಲಿ ನಿರ್ಮಾತೃ ತನಗೆ ಬಂದ ದಾನಗಳಿಂದ, ದುರಸ್ತಿ ಕಾರ್ಯಕ್ಕೆ ಹಣ ಕೊಡಲು ಬಾಧ್ಯಸ್ಥನಾಗಿರಬೇಕಾಗುತ್ತದೆ. ಫ್ರಾನ್ಸಿಸ್ ಬುಕಾನನ್ ೧೮ನೇ ಶತಮಾನದ ಕೊನೆಯಲ್ಲೂ ಇಂಥದೊಂದು ವ್ಯವಸ್ಥೆ ರೂಢಿಯಲ್ಲಿತ್ತು ಎನ್ನುವುದನ್ನು ದಾಖಲಿಸಿದ್ದಾನೆ.[೯]

**ಜಿಲ್ಲೆಯ ಶಾಸನಗಳಲ್ಲಿ ಕೆರೆಯ ಸಂರಕ್ಷಣೆಯ ಉಲ್ಲೇಖಗಳು**

ಚಿತ್ರದುರ್ಗ ಜಿಲ್ಲೆಯಲ್ಲಿ ಹಿಂದೆ ಕೆರೆ ಅಥವಾ ನಾಲೆಯ ಸಂರಕ್ಷಣೆ ಮುಖ್ಯವಾಗಿ ಗ್ರಾಮ ಸಮುದಾಯದ ಹೊಣೆ ಆಗಿತ್ತು. ಫಲಾನುಭವಿಗಳು ಆ ಸಮುದಾಯದ ಪ್ರಮುಖ ಭಾಗವಾಗಿದ್ದರು. ಅವರು ಈ ಕೆಲಸವನ್ನು ಹಳ್ಳಿಯ ಒಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳ ತಂಡಕ್ಕೆ ವಹಿಸುತ್ತಿದ್ದರು. ಆತ ಅಥವಾ ಅವರು ಸಂರಕ್ಷಣಾ ಕಾರ್ಯವನ್ನು ನಡೆಸುವ ಸಲುವಾಗಿ ಅವರಿಗೆ ಕೆಲವು ಭೂಮಿಗಳನ್ನು ಬಿತ್ತುವಟ್ಟ ಅಥವಾ ದಶವಂದವಾಗಿ ನೀಡುತ್ತಿದ್ದರು. ಇಲ್ಲವೆ ಕಂದಾಯದಲ್ಲಿ ರಿಯಾಯಿತಿ ನೀಡುತ್ತಿದ್ದರು. ಭಾರೀ ನೀರಾವರಿ ಕಾರ್ಯಗಳಲ್ಲಿ ದುರಸ್ತಿ ಕಾರ್ಯವನ್ನು ನಡೆಸುವುದಕ್ಕಾಗಿ ಕೆಲವು ಸ್ಥಳೀಯ ತೆರಿಗೆಗಳ ಬಳಕೆಯ ಸೌಲಭ್ಯವನ್ನು ಸ್ಥಳೀಯ ಸಂಸ್ಥೆಗಳಿಗೆ ದೊರೆಗಳು ನೀಡುತ್ತಿದ್ದರು. ದುರಸ್ತಿ ಕಾರ್ಯಗಳನ್ನು ನಡೆಸಲು ಸ್ಥಳೀಯ ಸಂಸ್ಥೆಗಳಿಗೆ ನಗದು ಅನುದಾನವನ್ನು ಕೊಡಲು ಆಗುತ್ತಿತ್ತು. ಇನ್ನೂ ಕೆಲವು ಕಡೆಗಳಲ್ಲಿ (ಸರ್ಕಾರಿ) ಭೂಮಿಯನ್ನು ನೀಡಲಾಗುತ್ತಿತ್ತು. ಕೆಲವು ಸಂದರ್ಭಗಳಲ್ಲಿ ಕೆರೆ ಸಂರಕ್ಷಣೆಗಾಗಿ ಬಂಡಿಗಳನ್ನು, ಭೂಮಿಯನ್ನು ನೀಡಲಾಗುತ್ತಿತ್ತು. ಬಂಡಿಗಳನ್ನು ಕೊಡುತ್ತಿದ್ದುದು ಕೆರೆಯಿಂದ ಮತ್ತು ಕೆರೆ ಮಣ್ಣನ್ನು ಸಾಗಿಸುವುದಕ್ಕೆ ಇದು ಅನುಕೂಲಕರವಾಗಿತ್ತು ಎಂಬ ಮಾಹಿತಿಗಳನ್ನು ಜಿಲ್ಲೆಯ ಇಸಾಮುದ್ರ, ಗೊಡಬನಾಳು, ದೊಡ್ಡೇರಿ, ಸಿರಿಗೇರಿ, ಭೀಮಸಮುದ್ರ, ಸೊಂಡೇಕೊಳ, ತ್ಯಾಗದಹಳ್ಳಿ, ಗಂಜಿಗಟ್ಟೆ, ಚಿತ್ರಹಳ್ಳಿ, ದುಮ್ಮಿ, ಐಮಂಗಲ, ಅದಿರಾಳು, ರಂಗಸಮುದ್ರ, ಕೊಳಾಳು, ಧರ್ಮಪುರ, ತವಂದಿ, ಸೋಮೇಶ್ವರ, ಚಿಕ್ಕ ಮದುರೆ, ತಾಳ್ಯ, ಜಾನಕಲ್, ನಾಗಸಮುದ್ರ, ಭರಮಸಮುದ್ರ, ಸಿದ್ದಾಪುರ, ರಾಮಸಾಗರ, ಹಿರೇಮದರಿ, ಗುಡೇಹಳ್ಳಿ, ಓಬಳಾಪುರ ಮೊದಲಾದೆಡೆ ದೊರೆತ ಶಾಸನಗಳು ಪುಷ್ಟಿಕರಿಸಿದ್ದು, ಪ್ರಾಚೀನ ಕಾಲದ ಕೆರೆಗಳ ಸಂರಕ್ಷಣೆಯ ಅಧ್ಯಯನಕ್ಕೆ ಏಕಮೇವ ಆಧಾರಗಳಾಗಿವೆ. ಜಿಲ್ಲೆಯ ಶಾಸನಗಳಲ್ಲಿ ಬಿತ್ತುವಟ್ಟ, ದಶವಂದ, ಕಟ್ಟು ಕೊಡಿಗೆ ಎನ್ನುವ ಶಬ್ದಗಳು ನಮಗೆ ಸಿಗುತ್ತವೆ[೧೦]. ಕೆರೆಯ ನಿರ್ಮಾಣ, ಅದರ ಸಂರಕ್ಷಣೆಯ ಕೆಲಸ ಮಾಡಿದ್ದಕ್ಕಾಗಿ, ಕಟ್ಟಿದ ವ್ಯಕ್ತಿ ಅಥವಾ ವ್ಯಕ್ತಿಗಳಿಗೆ ಭೂಮಿಯನ್ನು ದಾನವೀಯುವುದಕ್ಕೆ ಬಿತ್ತುವಟ್ಟ ಎಂದು ಅರ್ಥ ಮಾಡಲಾಗಿದೆ. ಬಿತ್ತುವಟ್ಟ ಎಂದರೆ ಕೆರೆಯ ಸಂರಕ್ಷಣೆಗಾಗಿ ಹುಟ್ಟುವಳಿಯ ಒಂದು ಭಾಗವನ್ನು ನೀಡುವುದು ಎಂದು ಅರ್ಥಮಾಡಲಾಗಿದೆ. ರೈಸ್‌ನ ಪ್ರಕಾರ ಅದು "ಬಿತ್ತು ಅಂದರೆ ಬೀಜ ಬಿತ್ತುವಿಕೆ ಅಥವಾ ಬೇಸಾಯದ ಮೇಲಿನ ವಟ್ಟ ಎಂದರೆ, ಸೋಡಿ ಅಥವಾ ರಿಯಾಯಿತಿ ಎಂದಿರಬಹುದು. ಆದ್ದರಿಂದ ಬಿತ್ತುವಟ್ಟ ಎಂದರೆ ಕೆರೆಯ ನಿರ್ಮಾಣ ಅಥವಾ ಸಂರಕ್ಷಣೆಯ ಕಾರ್ಯಕ್ಕೆ ಪ್ರತಿಫಲವಾಗಿ ಕೆರೆಯ ಕೆಳಗೆ ಕೊಂಚ ಭೂಮಿಯನ್ನು ಕಡಿಮೆ ಕಂದಾಯದ ಮೇಲೆ ನೀಡುವುದು ಎಂದು ಅರ್ಥೈಸಬಹುದು"[೧೧]. ದಾನವಿತ್ತ ಭೂಮಿ ಯಾವಾಗಲೂ ಆ ಕೆರೆಯ ನೀರಿನಿಂದಲೇ ನೀರಾವರಿ ಆಗುತ್ತಿದ್ದ ಭೂಮಿ.

ಹತ್ತನೆಯ ಒಂದು ಪಾಲು ಭೂಮಿಯೇ (ದಶ್ಯವ) "ಬಿತ್ತುವಟ್ಟ" ಎಂದು ಕ್ರಿ.ಶ. ೧೧೯೮ರ ಧರ್ಮಪುರ ಶಾಸನ ಸೂಚಿಸುತ್ತದೆ. ಅದರಂತೆ ಜಿಲ್ಲೆಯ ಇಸಾಮುದ್ರ, ಭರಮಸಾಗರ ಮತ್ತು ಇತರೆ ಕೆಲ ಶಾಸನಗಳಲ್ಲಿ ನೀಡಲಾದ ಭೂಮಿಯ ವಿಸ್ತಾರ ಸೂಚಿತವಾಗಿದೆ.

'ದಶವಂದ'ವೂ ಸಹ ಕೆರೆಯ ದುರಸ್ತಿ ಅಥವಾ ನಿರ್ಮಾಣಕ್ಕಾಗಿ ನೀಡಲಾಗುವ ಭೂಮಿಯನ್ನು ಸೂಚಿಸಲು ಸಾಮಾನ್ಯವಾಗಿ ಬಳಸುವ ಶಬ್ದ. ರೈಸ್‌ನ ಪ್ರಕಾರ ಅದರ ಅರ್ಥ "ಒಬ್ಬಾತ ಕೆರೆಯನ್ನು ನಿರ್ಮಿಸಿದ ಅಥವಾ ದುರಸ್ತಿ ಮಾಡಿದರ ಪ್ರತಿಫಲವಾಗಿ ಸಾಮಾನ್ಯ ಕಂದಾಯದ ಹತ್ತನೆಯ ಒಂದರಷ್ಟು ಕಂದಾಯಕ್ಕೆ ಭೂಮಿಯನ್ನು ಆತನಿಗೆ ನೀಡುವುದು". ಜಿಲ್ಲೆಯ ಪರಶುರಾಂಪುರ ಮತ್ತು ಭೀಮಸಮುದ್ರದ ಶಾಸನಗಳು ದಶವಂದ ಸುಂಕದ ನೀಡಿಕೆಯನ್ನು ಉಲ್ಲೇಖಿಸಿವೆ. ಹೈದರಾಬಾದ್ ಸಂಸ್ಥಾನದಲ್ಲಿ 'ದಸ್ತಬಂದ್' ಎನ್ನುವ ಪದ್ಧತಿ ಜಾರಿಯಲ್ಲಿತ್ತು. ಕೆರೆಯ ಸಂರಕ್ಷಣೆ ಮಾಡುತ್ತಿದ್ದ ವ್ಯಕ್ತಿಗೆ ಪ್ರತಿಫಲವಾಗಿ ಭೂಕಂದಾಯದ ಹತ್ತರಲ್ಲಿ ಒಂದು ಪಾಲನ್ನು ನೀಡುವುದು ಎಂದು ಅದರ ಅರ್ಥ. ಆದರೆ, ನಕ್ಕೇರುಹಾಳು ಶಾಸನ ದಶವಂದದ ಪಾವತಿಯ ನಿಷ್ಕರ್ಷೆಯನ್ನು ದಾಖಲು ಮಾಡುತ್ತದೆ. ಅದರ ಅರ್ಥ ಹಣದ ರೂಪದಲ್ಲಾಗಲು, ವಸ್ತುರೂಪದಲ್ಲಾಗಲಿ ಹುಟ್ಟುವಳಿಯ ಹತ್ತನೆಯ ಒಂದರಷ್ಟನ್ನು ಅಥವಾ ನಿರ್ದಿಷ್ಟ ಪಾಲನ್ನು ಸಲ್ಲಿಸಬೇಕೆಂಬ ಷರತ್ತಿನ ಮೇಲೆ ಭೂಮಿಯನ್ನು ನೀಡುವುದು. ಬಿತ್ತುವಟ್ಟದಂತೆಯೇ ದಶವಂದವೂ ಭೂಮಿ ದಾನ ಅಥವಾ ಕಂದಾಯದಲ್ಲಿ ರಿಯಾಯಿತಿ ಅಥವಾ ಹಳೆಯ ಹೈದರಾಬಾದ್ ಸಂಸ್ಥಾನದಲ್ಲಿದ್ದಂತೆ ಭೂಕಂದಾಯದ ಹತ್ತನೆಯ ಒಂದರಷ್ಟು ನೀಡಿಕೆಯನ್ನು ಸೂಚಿಸುತ್ತದೆ.

ಜಿಲ್ಲೆಯ ಚಿಕ್ಕ ಮಧುರೆ, ದುಮ್ಮಿ ಮೊದಲಾದ ಶಾಸನಗಳಲ್ಲಿ ಕೊಡಿಗೆ ಅಥವಾ ಕಟ್ಟುಕೊಡಿಗೆ ಪದ ಪ್ರಯೋಗಗೊಂಡಿದೆ. ಹಾಗೆಂದರೆ ಕೊಡುಗೆ ಅಥವಾ ಬಹುಮಾನ ಅಥವಾ ದಾನ ಎಂದು ಅರ್ಥ. ಕೆರೆಯ ಜೀರ್ಣೋದ್ಧಾರ ಇಲ್ಲವೆ ನಿರ್ಮಾಣ ಅಥವಾ ಅದನ್ನು ಸುಸ್ಥಿತಿಯಲ್ಲಿ ರಕ್ಷಿಸಿದ ಸೇವೆಗಾಗಿ ಪ್ರತಿಫಲವಾಗಿ ನೀಡಲಾದ ಭೂ-ದಾನವಾಗಿದೆ. ಈ ಭೂಮಿಗಳು ಮುಂದೆ ಇನಾಂ ಭೂಮಿಗಳೆಂದು ಪರಿಗಣಿತವಾದವು. ಅವು ಕಂದಾಯವಿಲ್ಲದೆ ಅಥವಾ ಅಲ್ಪ ಕಂದಾಯದ ಮೇಲೆ ನೀಡಲಾದ ದಾನ ಭೂಮಿಗಳು. ಕೆರೆ ದುರಸ್ತಿ ಕೈಗೊಂಡಿದ್ದಕ್ಕೆ 'ಕೆರೆಬಂದಿ' ಹಾಗೂ 'ಕೆರೆ ಕೂಲಿಗೆ' ಇನಾಂಗಳು ಇದ್ದುದೂ ಸಹ ಕಂಡುಬರುತ್ತದೆ. ಇವುಗಳಲ್ಲದೇ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ವಿವಿಧ ರಾಜ ಮನೆತನಗಳು ಮತ್ತು ಸ್ಥಿತಿವಂತರು ಕೆರೆಗಳ ಜೀರ್ಣೋದ್ಧಾರ ಕೈಗೊಂಡ ಉಲ್ಲೇಖಗಳು ಸಮಕಾಲೀನ ಸಾಹಿತ್ಯ ಮತ್ತು ಶಾಸನ ಆಕರಗಳಲ್ಲಿ ಲಭ್ಯವಾಗುತ್ತವೆ.

ಚಿತ್ರದುರ್ಗ ಸೀಮೆಯಲ್ಲಿ ಆನಂತರ ಆಳ್ವಿಕೆ ಮಾಡಿದ ಟಿಪ್ಪು ಸುಲ್ತಾನನು ಸಹ ಕೆರೆಗಳ ಸಂರಕ್ಷಣೆಗೆ ಸೂಕ್ತ ಏರ್ಪಾಟು ಮಾಡಿದ್ದನೆಂಬುದು ೧೭೮೮ರಲ್ಲಿ ಆತ ಹೊರಡಿಸಿದ ಕಂದಾಯ ಆದೇಶಗಳಿಂದಲೂ ಸ್ಪಷ್ಟವಾಗುತ್ತದೆ. ಇದರಿಂದ ಆತ ಕೆರೆಗಳ ಕಾಲಕಾಲದ ಸಂರಕ್ಷಣೆಗೆ ನೀಡಿದ್ದ ಮಹತ್ವವನ್ನು ಗುರುತಿಸಬಹುದು. (ರೈಸ್ ಪ್ರಕಾರ, ಈ ಆದೇಶಗಳು ಚಿಕ್ಕದೇವರಾಯ ಹೊರಡಿಸಿದವೇ – ೧೬೭೨-೧೭೦೪, ಅವೇ ಸುಲ್ತಾನ ಮರುಪ್ರಕಟಣೆ ಮಾಡಿದ್ದು). ಆ ಕಾಲದಲ್ಲಿ ಆತನ ಆದೇಶದಂತೆ ಸ್ಥಳೀಯರು ಕಟ್ಟು ಕೊಡಿಗೆಯಾಗಿ ಇಟ್ಟುಕೊಂಡಿದ್ದ ಕೆರೆಗಳನ್ನು ಇನಾಂದಾರರೇ ಸಂರಕ್ಷಿಸಬೇಕಾಗಿತ್ತು.

ಅವರೇ ಕೆರೆಯಿಂದ ಹೂಳನ್ನು ಅಗೆದು ತೆಗೆಯಬೇಕಾಗಿತ್ತು. ಹಾಳು ಬಿದ್ದ ಕೆರೆಗಳ ದುರಸ್ತಿ ಮಾಡಲು ಇನಾಂದಾರನಲ್ಲಿ ಸಾಧನ ಇಲ್ಲದಿದ್ದರೆ ಅದನ್ನು ಸರ್ಕಾರವು ಮಾಡಬೇಕಾಗಿತ್ತು ಮತ್ತು ದುರಸ್ತಿ ವೆಚ್ಚಕ್ಕೆ ಅನುಗುಣವಾಗಿ ವಾರ್ಷಿಕ ಕಂದಾಯವನ್ನು ಇನಾಂದಾರನ ಮೇಲೆ ಹಾಕಬೇಕಾಗಿತ್ತು. ಅಲ್ಲದೇ ಸರ್ಕಾರ ನಿರ್ಮಿಸಿದ ಕೆರೆಗಳ ಬಗ್ಗೆ ಅಮಲದಾರ, ಮುತ್ಸದ್ದಿ ಹಾಗೂ ಹರಕಾರ ಮುಂತಾದ ಕಂದಾಯ ಅಧಿಕಾರಿಗಳು ತಾವೇ ಹೋಗಿ ಕೆರೆಗಳನ್ನು ಪರಿಶೀಲಿಸಬೇಕು ಮತ್ತು ದುರಸ್ತಿ ಮಾಡಿಸುವುದರಲ್ಲೂ ಅವುಗಳಿಂದ ಸರ್ಕಾರಕ್ಕೆ ಸಿಗುವ ಲಾಭ ಮತ್ತು ಉತ್ಪನ್ನದ ಹೆಚ್ಚಳ ಇವುಗಳ ಬಗ್ಗೆ ವಿಶೇಷ ಗಮನ ನೀಡಬೇಕು ಮತ್ತು ಮಣ್ಣನ್ನು ಏರಿಯ ಮೇಲಕ್ಕೆ ಸಾಗಿಸಲು ಎಮ್ಮೆಗಳನ್ನು ಬಳಸಬೇಕು ಮತ್ತು ಏರಿಯ ಸುತ್ತ ಪ್ರತಿನಿತ್ಯವೂ ಹಾಕಲಾದ ಮಣ್ಣಿನ ಪ್ರಮಾಣದ ಲೆಕ್ಕವನ್ನು ಶಾನುಭೋಗ (ಗ್ರಾಮಲೆಕ್ಕಿಗ) ಇಡಬೇಕು ಎನ್ನುವ ಅಪ್ಪಣೆಯಿಂದ ಅಂತಹ ದುರಸ್ತಿ ಕಾರ್ಯ ಪ್ರತಿವರ್ಷ ನಡೆಯುತ್ತಿತ್ತು ಮತ್ತು ದುರಸ್ತಿಯ ವಿಧಿ ವಿಧಾನಗಳು ಅರ್ಥವಾಗುತ್ತವೆ.

ಕೆರೆಗಳ ಸೂಕ್ತ ಸಂರಕ್ಷಣೆಗಾಗಿ ಇಂತಹ ಪ್ರೋತ್ಸಾಹ ಕ್ರಮ ಹಾಗೂ ಆದೇಶಗಳಿದ್ದರೂ ಕಾಲ ಕ್ರಮೇಣ ಈ ಸಂರಕ್ಷಣಾ ಕಾರ್ಯ ಇಳಿಮುಖವಾಯಿತು. ಮೇಜರ್ ವಿಲ್ಕ್ಸ್ ವರದಿಯಂತೆ ೧೭೯೯ರಲ್ಲಿ "ಕೆರೆಗಳ ಪರಿಸ್ಥಿತಿ ಅತ್ಯಂತ ಶೋಚನೀಯ ದುಸ್ಥಿತಿಯಿತ್ತು. ಇನ್ನೂರು ಮುನ್ನೂರು ವರ್ಷಗಳಿಂದಲೂ ಒಡೆದು ಹೋಗಿದ್ದ ಕೆರೆಗಳು ದೇಶದ ಎಲ್ಲಾ ಕಡೆಗಳಲ್ಲೂ ಕಾಣಸಿಗುತ್ತಿದ್ದವು. ಇನ್ನೂ ಎಷ್ಟೋ ಕೆರೆಗಳಲ್ಲಿ ಕಾಡು ಬೆಳೆದು ಮರೆತೇ ಹೋಗಿದ್ದವು ಅಥವಾ ಜನಕ್ಕೆ ಗೊತ್ತೇ ಇರಲಿಲ್ಲ". ಎನ್ನುವ ಆಶ್ಚರ್ಯಕರ ಸಂಗತಿಯನ್ನು ವಿವರಿಸಿದ್ದಾನೆ[೧೧]. ಹಿಂದೆ ಸಾಮಾನ್ಯವಾಗಿ ಗ್ರಾಮದ ಕೃಷಿಕ ಸಮುದಾಯ ಬೇಸಾಯ ಮಾಡುತ್ತಿತ್ತು. ಆ ಪೈಕಿ ಬಹುಜನಕ್ಕೆ ನೀರಾವರಿ ಭೂಮಿಯಲ್ಲಿ ಪಾಲು ಇಲ್ಲವೇ ಸಾಮೂಹಿಕ ಒಡೆತನ ಇರುತ್ತಿತ್ತು. ಆದ್ದರಿಂದ ಅವರು ಕೆರೆಗಳನ್ನು ಸುಸ್ಥಿತಿಯಲ್ಲಿಡುವಲ್ಲಿ ಕಾರಣೀಭೂತರಾಗಿದ್ದರು. ದೊರೆಗಳು ತಮ್ಮ ಯುದ್ಧಗಳ ವೆಚ್ಚಕ್ಕಾಗಿ ಭಾರವಾದ ಇಲ್ಲವೆ ದಮನಕಾರಿಯಾದ ತೆರಿಗೆಗಳನ್ನು ವಿಧಿಸಿದರು. ಕಾಲ ಸರಿದಂತೆ ಪ್ರವಾಹಗಳು ಏರಿಗಳನ್ನು ಹಾಳು ಮಾಡಿದವು. ಬರ, ಯುದ್ಧಗಳು ಹಳ್ಳಿಯ ಸಮುದಾಯಗಳನ್ನು ಕರಗಿಸಿದವು. ಇದು ಕೆರೆಗಳ ಸಂರಕ್ಷಣೆಗೆ ದೊಡ್ಡ ಹೊಡೆತ ಬಿತ್ತು. ಇವು ಹಳ್ಳಿಗರು ಕೆರೆಗಳನ್ನು ನಿರ್ಲಕ್ಷಿಸಲು ಕಾರಣಗಳಾದವು.

೧೯ನೇ ಶತಮಾನದ ಅವಧಿಯಲ್ಲಿ ಟಿಪ್ಪುವಿನ ಪತನಾನಂತರ ಮೈಸೂರು ಸಂಸ್ಥಾನವನ್ನು ಬ್ರಿಟಿಷರು ಸ್ವಾಧೀನ ಮಾಡಿಕೊಂಡಾಗ ಸಂಸ್ಥಾನದ ಸರ್ಕಾರ ಬ್ರಿಟಿಷರ ಸೇನೆಯ ವೆಚ್ಚಕ್ಕೆ ವಾರ್ಷಿಕ ಪೊಗದಿ ಸಲ್ಲಿಸಬೇಕಾಯಿತು. ಯಾವಾಗಲೂ ರಾಜ್ಯದ ಮುಖ್ಯ ಆದಾಯ ಮೂಲ ಭೂಮಿಯಷ್ಟೆ. ಆಹಾರೋತ್ಪಾದನೆಯನ್ನು ಹೆಚ್ಚಿಸುವುದಕ್ಕೆ ಅಷ್ಟೇ ಅಲ್ಲ, ನೀರಾವರಿ ಬೇಸಾಯದ ಭೂಮಿಯಿಂದ ಹೆಚ್ಚಿನ ಕಂದಾಯ ಬರುವುದಕ್ಕಾಗಿ, ನೀರಾವರಿ ಕಾರ್ಯಗಳನ್ನು ಜೀರ್ಣೋದ್ಧಾರ ಮಾಡಲು ಹಾಗೂ ದುರಸ್ತಿ ಮಾಡಲು ಸರ್ಕಾರವು ಸರ್ವಪ್ರಯತ್ನ ಮಾಡಿತು. ಸಂಸ್ಥಾನ ಬ್ರಿಟಿಷ್ ಆಡಳಿತಕ್ಕೆ ನೇರವಾಗಿ ಒಳಗಾದ ಮೇಲೆ ನೀರಾವರಿ ಕೆಲಸಗಳ ದುರಸ್ತಿಗಾಗಿ ನೀರಾವರಿ ಸುಂಕವನ್ನು ವಿಧಿಸಲಾಯಿತು ಎಂದು ದಿವಾನ್ ಶೇಷಾದ್ರಿ ಅಯ್ಯರ್ (೧೮೯೪) ಹೇಳುತ್ತಾರೆ[೧೨]. ಕಾಲಕ್ರಮೇಣ ಗ್ರಾಮದ ಮುಖ್ಯಸ್ಥನಾದ

ಪಟೇಲ ಹಳ್ಳಿಯ ಮೇಲೆ ಪೂರಾ ಅಧಿಕಾರವನ್ನು ಹೊಂದಿದ್ದ ಮತ್ತು ತಕ್ಕಷ್ಟು ಸ್ಥಿತಿವಂತನೂ ಆಗಿದ್ದ. ಕೆರೆ ಕೆಳಗೆ ತನಗೂ ಜಮೀನು ಇದ್ದುದರಿಂದ ಆತ ಕೆರೆ ದುರಸ್ತಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದ. ಆದರೆ  ಪಟೇಲ ಅಥವಾ ಶ್ಯಾನುಭೋಗರ ಇನಾಂಗಳ ಖೋತಾ ಹಾಗೂ ಸರ್ಕಾರವೇ ನೇರವಾಗಿ ನಡೆಸಿದ ಕಂದಾಯ ನಿಗದಿ ಇವುಗಳಿಂದ ಹಳ್ಳಿಯಲ್ಲಿ ಪಟೇಲನ ಘನತೆಗೂ ಸ್ಥಾನಕ್ಕೂ ಚ್ಯುತಿ ಉಂಟಾಯಿತು[೧೩]. ಆತ ಕೇವಲ ಸರ್ಕಾರದ ಸಂಬಳದ ನೌಕರರ ಮಟ್ಟಕ್ಕೆ ಇಳಿದು ಬಿಟ್ಟ ಹಳ್ಳಿಗರನ್ನು ಕೆರೆ ರಿಪೇರಿ ಕೆಲಸ ಕೈಗೊಳ್ಳುವಂತೆ ಒತ್ತಾಯಿಸಲಾರದೇ ಹೋದ. ಅಂತಹ ಕೆಲಸಗಳನ್ನು ಮಾಡುವುದರಲ್ಲಿ ವೈಯಕ್ತಿಕ ಉತ್ಸಾಹವನ್ನು ಅಥವಾ ಆಸಕ್ತಿಯನ್ನು ಸಹ ಕಳೆದುಕೊಂಡ. ಬ್ರಿಟಿಷರು ಜಾರಿಗೆ ತಂದ ವ್ಯವಸ್ಥೆ ಹಳೆಯ ವ್ಯವಸ್ಥೆಯ ಸರ್ವಾಧಿಕಾರಿ ಅಥವಾ ಕೆಲವೊಮ್ಮೆ ದಮನಕಾರಿ ನಿರ್ವಹಣೆಯನ್ನು ತೊಡೆದುಹಾಕಿತು. ಆದರೂ ಅದು ಹಳ್ಳಿಯ ಸಮುದಾಯದ ಹಿತಾಸಕ್ತಿಯ ಬುಡಕ್ಕೆ ಏಟು ಹಾಕಿತು. ಹಳ್ಳಿಯ ಕೆರೆಗಳ ಸಂರಕ್ಷಣೆಯ ಜವಾಬ್ದಾರಿಯನ್ನು ಗ್ರಾಮ ಸಮುದಾಯದಿಂದ ಸರ್ಕಾರಕ್ಕೆ ವರ್ಗಾಯಿಸಿತು.

ಆನಂತರದಲ್ಲಿ ಅಂದರೆ ಬ್ರಿಟಿಷರ ಕಾಲದಲ್ಲಿ ಬೇಸಾಯ ಸಮಯದಲ್ಲಿ ಶೇಕದಾರ ತನ್ನ ವಲಯದಲ್ಲಿನ ಹಳ್ಳಿಗಳಿಗೆ ಪ್ರವಾಸ ಹೋಗಿ ಶ್ಯಾನುಭೋಗರಿಗೆ ಕಂದಾಯ ನಿಗದಿ ಬಗ್ಗೆ ತಿಳುವಳಿಕೆಯನ್ನು, ಸೂಚನೆಗಳನ್ನು ಕೊಡುತ್ತಿದ್ದ. ಕೆರೆಗಳ ಕೆಳಗಿನ ಭೂಮಿಯ ವಿಚಾರದಲ್ಲಿ, ಕಬ್ಬಿನ ಸಾಗುವಳಿ ಎಷ್ಟರಲ್ಲಿ, ಭತ್ತ ಎಷ್ಟರಲ್ಲಿ ಎನ್ನುವುದನ್ನು ಕೇಳಿ ತಿಳಿದುಕೊಳ್ಳುತ್ತಿದ್ದ. ಒಂದು ವೇಳೆ ಸರ್ಕಾರಿ ಭೂಮಿಯನ್ನೆಲ್ಲ ಪೂರಾ ತರಿ ಬೇಸಾಯಕ್ಕೆ ತರಲು ನೀರು ಸಾಲದೇ ಹೋದ ಪಕ್ಷದಲ್ಲಿ ಯಾವ ಭೂಮಿ ಪೂರಾ ಅಥವಾ ಭಾಗಶಃ ನೀರಾವರಿ ಇಲ್ಲದೆ ಇರುವುದೋ ಅಲ್ಲಿ ಅತ್ಯಂತ ಹೆಚ್ಚು ಲಾಭ ನೀಡುವ ಒಣ ಬೆಳೆಯನ್ನು ಇಡಲು ಏರ್ಪಡಿಸುತ್ತಿದ್ದ. ತನ್ನ ತಾಲ್ಲೂಕಿನಲ್ಲಿನ ಕೆರೆಗಳನ್ನು ಹೊಳೆಗಳ ದಂಡೆಗಳನ್ನು ತನಿಖೆ ಮಾಡುವುದು ಹಾಗೂ ಅವುಗಳ ಸ್ಥಿತಿಗಳನ್ನು ಅಧೀಕ್ಷಕನಿಗೆ (ಸೂಪರಿಂಟೆಂಡೆಂಟ್) ಸದಾ ತಿಳಿಸುತ್ತಿರುವುದು ಅಮಲದಾರನ ಒಂದು ಮುಖ್ಯ ಕರ್ತವ್ಯವಾಗಿತ್ತು. ಅಮಲದಾರರು ತಾಲ್ಲೂಕು ಕಂದಾಯ ನಿರ್ಣಯವನ್ನು ಮಾಡಿಯಾದ ಮೇಲೆ ಸಾಮಾನ್ಯವಾಗಿ ಅಧೀಕ್ಷಕ, ನವೆಂಬರ್ ಆದೊಡನೆ ಸಾಧ್ಯವಾದಷ್ಟು ಶೀಘ್ರದಲ್ಲಿ ತನ್ನ ಜಮಾಬಂದಿ ಪ್ರವಾಸ ಕೈಗೊಳ್ಳುತ್ತಿದ್ದ. ಪ್ರತಿಯೊಬ್ಬ ರೈತನ ಹಿಡುವಳಿ ಬಗ್ಗೆ ಆ ಮೊದಲೇ ಸಿದ್ಧಪಡಿಸಿದ್ದ ಪಟ್ಟಾಗಳನ್ನು ರೈತರಿಗೆ ಆಗ ವಿತರಿಸಲಾಗುತ್ತಿತ್ತು. ಈ ಪಟ್ಟ ವಿತರಣೆ ಪದ್ಧತಿಯಿಂದ ಪ್ರತಿಯೊಬ್ಬ ಕಂದಾಯದಾರನಿಗೂ ಅಧೀಕ್ಷಕನ ವೈಯಕ್ತಿಕ ಸಂಪರ್ಕ ಉಂಟಾಗುತ್ತಿತ್ತು ಮತ್ತು ತಮ್ಮ ತಮ್ಮ ಪಟ್ಟಾಗಳನ್ನು ಪಡೆಯಲು ಎಲ್ಲರೂ ಬರಬೇಕಾಗಿದ್ದರಿಂದ ಪ್ರತಿಯೊಬ್ಬನಿಗೂ ತನ್ನ ಕುಂದು ಕೊರತೆ ಏನಿದ್ದರೂ ಅದಕ್ಕೆ ಪರಿಹಾರವನ್ನು ಪಡೆಯಲು ಅವಕಾಶವಾಗುತ್ತಿತ್ತು[೧೪].

**ಕೆರೆಗಳ ಸಂರಕ್ಷಣೆಗಾಗಿ ಬ್ರಿಟಿಷರು ಅನುಸರಿಸಿದ ವಿಧಾನಗಳು ಮತ್ತು ಕಾಯ್ದೆಗಳು**

ಅಂದು ದೇಶದ ಎಲ್ಲಾ ಕೆರೆಗಳ ದುರಸ್ತಿ ಅಥವಾ ಜೀರ್ಣೋದ್ಧಾರವನ್ನು ನಿರ್ವಹಿಸುವುದು ಕಷ್ಟದ ಕೆಲಸವಾಗಿದ್ದರಿಂದ ೧೮೬೩ರಲ್ಲಿ ಮೈಸೂರು ಮುಖ್ಯ ಕಮೀಷನರ್ ಒಂದು ಘೋಷಣೆಯನ್ನು ಹೊರಡಿಸಿದ. ಅದರಂತೆ ಬಹುಕಾಲದಿಂದ ನಿರುಪಯುಕ್ತವಾಗಿದ್ದ ಕೆರೆಯ ದುರಸ್ತಿ ಅಥವಾ

ಜೀರ್ಣೋದ್ಧಾರವನ್ನು ಕೈಗೊಳ್ಳುವ ಖಾಸಗಿ ವ್ಯಕ್ತಿ ಕೆಳಕಾಣಿಸಿರುವ ರಿಯಾಯಿತಿ ದರದ ಮೇಲೆ ಭೂಮಿ ಇಟ್ಟುಕೊಳ್ಳಲು ಅನುಮತಿ ನೀಡಲಾಯಿತು.

ಅ) ತಾಲ್ಲೂಕಿನ ಸರಾಸರಿ ತರಿ ಕಂದಾಯದಲ್ಲಿ ಕಾಲುಭಾಗ ಕಡಿಮೆ

ಅಥವಾ

ಆ) ಆ ವ್ಯಕ್ತಿಯ ಸ್ವಂತ ಮತ್ತು ಸುತ್ತಲಿನ ಹಳ್ಳಿಗಳಲ್ಲಿ ಚಾಲ್ತಿಯಲ್ಲಿರುವ ಖುಷ್ಕಿ ಭೂಮಿಯ ಗರಿಷ್ಠ ದರ

ಇ) ಕ್ರಯ ಅಥವಾ ಕೌಲು ಪದ್ಧತಿಯಂತೆ ಕೆಲವು ಸಾಲು ವರ್ಷಗಳಲ್ಲಿ ಗರಿಷ್ಠ ಕಂದಾಯದ ದರವಾಗುವಂತೆ ಇದ್ದ ತಾಲ್ಲೂಕಿನ ಸರಾಸರಿ ತರಿ ಕಂದಾಯ.

ಈ ಮೇಲಿನ ಕಾಯ್ದೆಯು ಚಿತ್ರದುರ್ಗ ಜಿಲ್ಲೆಯಲ್ಲಿಯೂ ಅನುಷ್ಠಾನಕ್ಕೆ ಬಂದಿತು ಮತ್ತು ಕೆಲ ಖಾಸಗಿ ವ್ಯಕ್ತಿಗಳು ಜಿಲ್ಲೆಯಲ್ಲಿ ಅಂದು ಸುಮಾರು ೨೮ ಕೆರೆಗಳನ್ನು ಮುಖ್ಯವೆಂದು ಪರಿಗಣಿಸಿ ಅವುಗಳ ಸಂರಕ್ಷಣೆಗೆ ಮುಂದಾದರು. ಆದರೆ ೧೮೭೧ರಲ್ಲಿ ಹೊರಡಿಸಲಾದ ಇನ್ನೊಂದು ಆಜ್ಞೆಯಲ್ಲಿ, ೧೮೭೧ಕ್ಕೆ ಮೊದಲು ಕೈಗೊಂಡಿದ್ದ ಕಾರ್ಯಗಳ ಬಗ್ಗೆ ಈ ರಿಯಾಯಿತಿಗಳನ್ನು ಮೂವತ್ತು ವರ್ಷಕ್ಕೆ ಮೀರಿದ ಅವಧಿಗೆ ಮಿತಗೊಳಿಸಲಾಯಿತು. ಇದರಿಂದ ಕೆರೆಗಳ ಸಂರಕ್ಷಣಾ ಕಾರ್ಯದಲ್ಲಿ ಮತ್ತಷ್ಟು ಹಿನ್ನಡೆಯುಂಟಾಯಿತು. ಮತ್ತೆ ೧೮೭೬ರಲ್ಲಿ ಇನ್ನೊಂದು ಆಜ್ಞೆ ಹೊರಡಿಸಿ, ಕೆಲಸದ ನಿರ್ಮಾತೃ ಅಥವಾ ದುರಸ್ತಿದಾರನಲ್ಲದೆ ಬೇರೆಯವರ ಸ್ವಾಧೀನದಲ್ಲಿದ್ದ ಸರ್ಕಾರಿ ಭೂಮಿಗಳಿಗೆ ಸ್ವಾಧೀನದಾರರಿಂದ ಪೂರ್ಣ ಕಂದಾಯವನ್ನು ವಸೂಲು ಮಾಡಿ, ಅದರಲ್ಲಿ ಕಾಲು ಭಾಗವನ್ನು ನಿರ್ಮಾಣ ಅಥವಾ ದುರಸ್ತಿ ಮಾಡಿಸಿದ ವ್ಯಕ್ತಿಗೆ ಕೊಡತಕ್ಕದ್ದು ಎಂದು ಸೂಚಿಸಲಾಯಿತು. ಇನಾಂ ಜಮೀನುಗಳ ಬಗ್ಗೆ ವಿಧಿಸಿದ ಸುಂಕದ ನಾಲ್ಕನೆಯ ಒಂದು ಭಾಗವನ್ನು ನಿರ್ಮಾತೃವಿಗೆ ಕೊಡಲಾಗುವುದು ಎಂದು ನಿಗದಿ ಮಾಡಲಾಯಿತು. ಇದು ಸ್ವಲ್ಪಮಟ್ಟಿನ ಬೆಳವಣಿಗೆಗೆ ಕಾರಣವಾದರೂ ಸಹ ಕೆರೆ ದುರಸ್ತಿಯ ಸ್ಥಿತಿ ಅಷ್ಟೇನು ಪ್ರೋತ್ಸಾಹದಾಯಕವಾಗಲಿಲ್ಲ. ಆದ್ದರಿಂದ ೧೮೬೩ರ ಘೋಷಣೆಗೆ ಅನುಸಾರವಾಗಿ ನಿರ್ಮಿತವಾದ ಇಲ್ಲವೇ ದುರಸ್ತಿಯಾದ ಕೆರೆಗಳ ಬಗ್ಗೆ ತರಿ ಕಂದಾಯದ ನಾಲ್ಕನೆಯ ಒಂದು ಭಾಗದ ರಿಯಾಯಿತಿಯನ್ನು ಖಾಯಂ ರಿಯಾಯಿತಿಗೆ ನೀಡಲಾಗುವುದು ಎಂದು ೧೮೮೪ರಲ್ಲಿ ಸಾರಲಾಯಿತು[೧೫].

ಈ ಮಧ್ಯೆ ೧೮೭೩ರಲ್ಲಿ ಸಂಸ್ಥಾನದಲ್ಲಿ ಇದ್ದ ಸಾವಿರಾರು ಕೆರೆಗಳ ದುರಸ್ತಿ ಹಾಗು ಸಂರಕ್ಷಣೆಯನ್ನು ವಹಿಸಿಕೊಳ್ಳುವುದು ಸರ್ಕಾರಕ್ಕೆ ಅಸಾಧ್ಯ ಎಂದು ತಿಳಿದು, ಅಂತೆಯೇ ಯಾವ ಕೆರೆಗಳು ಆಗಲೇ ದಕ್ಷ ದುರಸ್ತಿ ಸ್ಥಿತಿಯಲ್ಲಿ ಇದ್ದವೋ ಅಥವಾ ಅವಶ್ಯ ಮಟ್ಟಕ್ಕೆ ಜೀರ್ಣೋದ್ಧಾರ ಮಾಡಲ್ಪಟ್ಟಿದ್ದವೋ ಅಂತಹ ಕೆರೆಗಳನ್ನು ಹಳ್ಳಿಯವರೆಗೆ ವಹಿಸುವುದು ಅಗತ್ಯ ಎಂದು ಭಾವಿಸಲಾಯಿತು. ಇದನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಆಗ ಕೆಲವು ನಿಯಮಗಳನ್ನು ಘೋಷಿಸಿ ಆ ಕಾರ್ಯವನ್ನು ಭೂ ಹಿಡುವಳಿದಾರರಿಗೆ ವಹಿಸಲಾಯಿತು.

ಈ ನಿಯಮಗಳನ್ನು ಜಾರಿ ಮಾಡುವುದನ್ನು ಆಯಾ ಕೆರೆಗಳಿಗೆ ಸಂಬಂಧಿಸಿದ ಹಳ್ಳಿಗಳ ಪಟೇಲರಿಗೆ ಪುನಃ ವಹಿಸಲಾಯಿತು. ಈ ಕೆಲಸದಲ್ಲಿ ಆಯಾ ಹೋಬಳಿಯ ಶೇಕ್ದಾರರು ಪಟೇಲನಿಗೆ ಸಹಾಯ ಮಾಡಬೇಕಾಗಿತ್ತು. ಕೆರೆಗಳ ಸಂರಕ್ಷಣೆಗೆ ಹೊಣೆಗಾರರೆನಿಸಿಕೊಂಡವರು ಹಳ್ಳಿಯಲ್ಲಿನ

ಖುಷ್ಕಿ ಅಥವಾ ತರಿ ಭೂಮಿ ಉಳ್ಳಂಥ ಪಟ್ಟೆದಾರರು, ಶೇಕ್ದಾರರು, ಇನಾಂದಾರರು ಮತ್ತು ಕೆರೆಯಿಂದ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಪ್ರಯೋಜನ ಪಡೆಯುತ್ತಿದ್ದ ಇವರೆಲ್ಲರೂ ಅಂತಹ ಪ್ರತಿಯೊಬ್ಬ ವ್ಯಕ್ತಿಯೂ ಹಳ್ಳಿಗೆ ಸೇರಿದ ತನ್ನ ಭೂಮಿ ಮನೆ ಅಥವಾ ಇತರ ಆಸ್ತಿಗಳ ಮೇಲೆ ಸರ್ಕಾರಕ್ಕೆ ಸಲ್ಲಿಸುತ್ತಿದ್ದ ಕಂದಾಯದ ಮೊಬಲಗನ್ನು ಅನುಸರಿಸಿ ವ್ಯಕ್ತಿಗಳು ಮಾಡಬೇಕಾಗಿದ್ದ ಕೆಲಸದ ಪ್ರಮಾಣವನ್ನು ಪಟೇಲ ಮತ್ತು ಶೇಕ್ದಾರರು ತೀರ್ಮಾನಿಸಬೇಕಾಗಿತ್ತು.

ಕೆರೆಗಳಿಗೆ ಮತ್ತು ಅವುಗಳ ಕೆಳಗಿನ ಉಪ ಕಾರ್ಯಗಳಿಗೆ ಸಂಬಂಧಿಸಿದ ಸಾಮಾನ್ಯ ಮಣ್ಣು ಕೆಲಸ ಹಾಗೂ ಎಲ್ಲ ಬಗೆಯ ದುರಸ್ತಿ, ಇವು ಕೆರೆ ಸಂರಕ್ಷಣೆಯಲ್ಲಿ ಸೇರುತ್ತಿದ್ದ ಕಾರ್ಯಗಳು. ಗೊತ್ತು ಮಾಡಿದ ಅವಧಿಗಳಲ್ಲಿ ಗ್ರಾಮಾಧಿಕಾರಿಗಳು ಕೆಲಸಗಳನ್ನು ನಡೆಸಬೇಕಾದದು ನಿಯಮವಾಗಿತ್ತು. ಆದರೆ ಅಗತ್ಯವಾದಾಗ ಒಡನೆಯ ದುರಸ್ತಿ ಮಾಡಬೇಕಾಗಿತ್ತು. ಯಾವುದೇ ವ್ಯಕ್ತಿ ತನ್ನ ಹೊಣೆಯನ್ನು ನಿರ್ವಹಿಸದೇ ಹೋದಲ್ಲಿ ಆತ ಮಾಡಬೇಕಾಗಿದ್ದ ಕಾರ್ಯ ಭಾಗವನ್ನು ಕೂಲಿ ಕೊಟ್ಟು ಮಾಡಿಸಲು ಗ್ರಾಮಾಧಿಕಾರಿಗಳಿಗೆ ಅಧಿಕಾರವಿತ್ತು. ಅದು ಕಡ್ಡಾಯವೂ ಆಗಿತ್ತು. ಆ ಕೂಲಿ ವೆಚ್ಚವನ್ನು ಕೆಲಸ ಬಾಕಿ ಉಳಿಸಿದವನಿಂದ ಕಂದಾಯ ಸುಸ್ತಿಯಂತೆ ವಸೂಲು ಮಾಡಬೇಕಾಗಿತ್ತು.

ಪ್ರತಿಯೊಂದು ಕೆರೆಯನ್ನು ಅದಕ್ಕೆ ನಿಗದಿ ಮಾಡಿದ ಮಟ್ಟಕ್ಕೆ ಸರಿಯಾಗಿ ಸಂರಕ್ಷಣೆ ಮಾಡುವಂತೆ ನೋಡಿಕೊಳ್ಳುವುದು ಪಟೇಲನ ಆದ್ಯ ಜವಾಬ್ದಾರಿಯಾಗಿತ್ತು. ಇದು ನಡೆದಿದೆಯೇ ಎನ್ನುವುದನ್ನು ಪ್ರತಿಯೊಂದು ಪ್ರಸಂಗದಲ್ಲೂ ತನಿಖೆ ಮಾಡಿ ಖಾತರಿ ಮಾಡಿಕೊಳ್ಳುವುದು ಶೇಕ್ದಾರನ ಕರ್ತವ್ಯವಾಗಿತ್ತು. ಪ್ರತಿ ವರ್ಷವೂ ಡಿಸೆಂಬರ್-ಮಾರ್ಚ್ ತಿಂಗಳ ನಡುವೆ ತಾಲ್ಲೂಕಿನ ಪ್ರತಿಯೊಂದು ಕೆರೆಯನ್ನು ಅಮಲದಾರನೇ ಖುದ್ದಾಗಿ ತಪ್ಪದೆ ವಿಶೇಷವಾಗಿ ತನಿಖೆ ಮಾಡಬೇಕಾಗಿತ್ತು. ಹಾಗಿಲ್ಲವಾದರೆ ಅಮಲದಾರನು ಸದರಿ ಕೆಲಸಕ್ಕೆ ವಿಶೇಷವಾಗಿ ನಿಯುಕ್ತಿಗೊಳಿಸಿದ ಶೇಕ್ದಾರ, ಶಿರಸ್ತೇದಾರ ಅಥವಾ ತಾಲ್ಲೂಕು ಮೇಸ್ತ್ರಿ ತನಿಖೆ ಮಾಡಬೇಕಾಗಿತ್ತು. ಅಂತಹ ತನಿಖೆಯ ಫಲಿತಾಂಶವನ್ನು ನಿಗದಿಯಾದ ದಫ್ತರದಲ್ಲಿ (ರಿಜಿಸ್ಟರ್) ದಾಖಲು ಮಾಡಬೇಕಾಗಿತ್ತು. ತನಿಖೆಯಲ್ಲಿ ಏನಾದರೂ ಕೆರೆ ಸರಿಯಾದ ಮಟ್ಟಕ್ಕೆ ಇಲ್ಲದೆ ಇದ್ದುದು ಕಂಡುಬಂದಲ್ಲಿ ಏಪ್ರಿಲ್‌ಗೆ ಮೊದಲು ಎರಡನೆ ತನಿಖೆ ಮಾಡಬೇಕಿತ್ತು. ಆ ವೇಳೆಗೆ ದುರಸ್ತಿ ಕಾರ್ಯವನ್ನು ಮಾಡಿರಬೇಕಾಗಿತ್ತು. ಅದು ತಪ್ಪಿದ್ದಲ್ಲಿ ಅಮಲದಾರನೇ ದುರಸ್ತಿ ಕಾರ್ಯವನ್ನು ಮಾಡಿಸಿ, ವೆಚ್ಚವನ್ನು ತಮ್ಮ ಕೆಲಸ ನಿರ್ವಹಿಸಿದ ಬಾಕಿದಾರರಿಂದ ಕಂದಾಯ ಬಾಕಿಯಂತೆ ವಸೂಲು ಮಾಡಬೇಕಾಗಿತ್ತು.

ದಫ್ತರದ ದ್ವಿಪ್ರತಿಯೊಂದನ್ನು ಅಮಲದಾರ ಜಿಲ್ಲಾ ಕಂದಾಯ ಅಧಿಕಾರಿಗಳಿಗೆ ಜೂನ್ ಒಂದರ ಒಳಗೆ ರವಾನಿಸಬೇಕಾಗಿತ್ತು. ಆ ತಾರೀಖಿನ ವೇಳೆಗೆ ಎಲ್ಲಾ ಕೆರೆಗಳ ದುರಸ್ತಿ ಕಾರ್ಯವೂ ಪೂರೈಸಿರಬೇಕಾಗಿತ್ತು. ಆಯಾ ಉಪವಿಭಾಗಗಳ ಸಹಾಯಕ ಕಮೀಷನರುಗಳು ಜಮಾಬಂದೀ ಹಾಗೂ ಇತರ ಸೂಕ್ತ ಸಂದರ್ಭಗಳಲ್ಲಿ ಆದಷ್ಟು ಸಂಖ್ಯೆ ಕೆರೆಗಳನ್ನು ಖುದ್ದಾಗಿ ತನಿಖೆ ಮಾಡಿ ವರದಿಯ ನಿಖರತೆಯನ್ನು ಪರೀಕ್ಷೆ ಮಾಡಿ ಕೆರೆ ದಫ್ತರದಲ್ಲಿ ತನಿಖೆಯ ತಾರೀಖನ್ನು ತಮ್ಮ ಟಿಪ್ಪಣಿಗಳನ್ನು ದಾಖಲು ಮಾಡಬೇಕಾಗಿತ್ತು. ಡೆಪ್ಯುಟಿ ಕಮೀಷನರ್ ಇಂತಹದೇ ಕೆಲಸಗಳನ್ನು

ಮಾಡಬೇಕಾಗಿತ್ತು. ಈ ನಿಯಮಗಳನ್ನು ಪೂರ್ಣವಾಗಿ ಹಾಗೂ ಜಾಣ್ಮೆಯಿಂದ ಪಾಲಿಸಲಾಗಿದೆ. ಕೇವಲ ಕಾಟಾಚಾರವಾಗಿ ಅಲ್ಲ ಎಂಬುದನ್ನು ನೋಡಿಕೊಳ್ಳುವುದಕ್ಕೆ ಆತ ಜವಾಬ್ದಾರನಾಗಿರುತ್ತಿದ್ದ[೨].

ಲೋಕೋಪಯೋಗಿ ಇಲಾಖೆಯ ಇಂಜಿನೀಯರ್ ದರ್ಜೆ ಅಧಿಕಾರಿ ನಡೆಸಲು ಆಜ್ಞೆ ಮಾಡಿದ ಯಾವುದೇ ಕೆರೆಯ ಏನೇ ಕೆಲಸವನ್ನು ಅದೇ ಅಧಿಕಾರಿಯು ಜವಾಬ್ದಾರಿಯ ಮೇಲೆಯೇ ನಡೆಸಬೇಕಾಗಿತ್ತು. ಸದರಿ ಕಾರ್ಯದ ಯಾವುದೇ ಭಾಗ ರೈತರ ಕರ್ತವ್ಯ ಭಾಗವಾಗಿರದೇ ಇದ್ದಲ್ಲಿ ಅದರ ಮಂಜುರಾತಿಯ ಇಸ್ತಿಹಾರವನ್ನು (ನೋಟಿಫಿಕೇಷನ್) ಅಮಲದಾರ ಸೂಕ್ತ ಮಾರ್ಗದ್ವಾರಾ ಸಲ್ಲಿಸಬೇಕಾಗಿತ್ತು. ಕೆಳದರ್ಜೆಯ ಒಬ್ಬ ಲೋಕೋಪಯೋಗಿ ಅಧಿಕಾರಿಗೆ ಯಾವುದೇ ಕೆಲಸ ಅಗತ್ಯವೆಂದು ಎನಿಸಿದ್ದಲ್ಲಿ ಆತ ಅದನ್ನು ತನ್ನ ಇಲಾಖೆಯ ಮೇಲಾಧಿಕಾರಿಗೆ ಯಾವುದೇ ವಿಳಂಬವಿಲ್ಲದೆ ವರದಿ ಮಾಡಬೇಕಾಗಿತ್ತು. ತುರ್ತು ಸ್ಥಿತಿಯಲ್ಲಿ ಅಮಲದಾರನಿಗೂ ನೇರವಾಗಿ ವರದಿ ಮಾಡಬೇಕಾಗಿತ್ತು. ಸಹಾಯಕ ಕಮೀಷನರ್ ತನಿಖಾ ವರದಿಯಲ್ಲಿ ಈ ಮುಂದಿನ ವಿಷಯಗಳ ಬಗ್ಗೆ ಸ್ಪಷ್ಟವಾಗಿ ದಾಖಲಿಸಬೇಕಾಗಿತ್ತು[೨].

ಅ. ಏರಿಯ ಮಟ್ಟ ಸಮವಾಗಿದೆಯೇ, ಪೂರಾ ಅಗಲವಾಗಿದೆಯೇ, ಕಾಡು ಗಿಡ, ಕಳೆಗಳು ಇರಲಿಲ್ಲವೇ, ಡೊಗರುಗಳು ಇರಲಿಲ್ಲವೆ.

ಆ. ಇಳಿಜಾರು ಪೂರ್ಣವಾಗಿದೆಯೇ, ಬಂಡಿ ಜಾಡಿನಲ್ಲಿ ಮುಕ್ತವಾಗಿದೆಯೇ, ಹುಲ್ಲುಹಾಸು ಚೆನ್ನಾಗಿದೆಯೇ ಅಥವಾ ಚೆನ್ನಾಗಿಲ್ಲವೇ.

ಇ. ಹೊರ ಮುಖದ ಕಲ್ಲು ಕಟ್ಟಡ ಸು-ಸ್ಥಿತಿಯಲ್ಲಿದೆಯೇ.

ಈ. ತೂಬು ಒಳ್ಳೆಯ ಸ್ಥಿತಿಯಲ್ಲಿದೆಯೇ ಅಥವಾ ಒಳ್ಳೆಯ ಸ್ಥಿತಿಯಲ್ಲಿಟ್ಟಿಲ್ಲವೇ.

ಉ. ಕೋಡಿ ಪೂರ್ಣವಾಗಿ ಭದ್ರವಾಗಿದೆಯೇ, ರಂಧ್ರಗಳಿಲ್ಲದೆ ಇದೆಯೇ.

ಅನೇಕ ಕೆರೆಗಳನ್ನು ಅಗತ್ಯವಾದ ಮಟ್ಟಕ್ಕೆ ದುರಸ್ತಿ ಮಾಡಿ ಸು-ಸ್ಥಿತಿಗೆ ತಂದು ಮುಂದಿನ ರಕ್ಷಣೆಗೆ ರೈತರಿಗೆ ವಹಿಸಿಕೊಡಬೇಕೆಂದು ಸರ್ಕಾರವು ಮಾಡಿದ ಪ್ರಯತ್ನಗಳು ಎಷ್ಟೇ ಇದ್ದರೂ, ಕೆರೆಗಳ ಸಂರಕ್ಷಣೆಯನ್ನು ರೈತರು ಅಲಕ್ಷ್ಯ ಮಾಡಿದರು. ಸಂರಕ್ಷಣಾ ನಿಯಮಗಳನ್ನು ಜಾರಿಗೊಳಿಸುವುದರಲ್ಲಿ ಕಂದಾಯ ಅಧಿಕಾರಿಗಳು ವಿಫಲರಾದರು. ಈ ಅಲಕ್ಷ್ಯದ ಸಲುವಾಗಿ ಕೆರೆಗಳನ್ನು ಪೂರ್ಣ ವಿನಾಶದಿಂದ ಉಳಿಸಲು ಸರ್ಕಾರವೇ ಜೀರ್ಣೋದ್ಧಾರ ಮಾಡುವುದು ಅಗತ್ಯವಾಯಿತು. ಇಡೀ ವಿಷಯದ ಬಗ್ಗೆ ತೃಪ್ತಿಕರವಾಗಿ ನಿರ್ವಹಿಸಲು ಸರ್ಕಾರಕ್ಕೆ ಸಹಾಯಕವಾಗಲೆಂದು ಈ ಎಲ್ಲಾ ಅಂಶಗಳನ್ನು ಪರಿಶೀಲಿಸಲು ಅಂದು ಒಂದು ಸಮಿತಿಯನ್ನು ನೇಮಿಸಲಾಯಿತು. ಆ ಸಮಿತಿಯ ವರದಿಯ ಆಧಾರದ ಮೇಲೆ ೧೯೦೪ರಲ್ಲಿ ಮೈಸೂರು ಸರ್ಕಾರವು ಕೆರೆಗಳ ಸಂರಕ್ಷಣೆಗಾಗಿ ಆಜ್ಞೆಯೊಂದನ್ನು ಹೊರಡಿಸಿತು. ಅದರಲ್ಲಿ ಈ ಕೆಳಗಿನ ಅಂಶಗಳಿದ್ದವು.

ಅ) ಸಂರಕ್ಷಣೆಯನ್ನು ಅಲಕ್ಷಿಸಿದ್ದರಿಂದ ಹಾಳು ಬಿದ್ದಿರುವ ಕೆರೆಗಳ ದುರಸ್ತಿ ಬಗ್ಗೆ ರೈತರ ಹೊಣೆಗಾರಿಕೆಯನ್ನು ಕೆರೆಯ ಅಚ್ಚುಕಟ್ಟಿನ ಭೂಮಿಯ ಸಾಲಿಯಾನ ಕಂದಾಯಕ್ಕೆ ಮಿತಗೊಳಿಸಬೇಕು.

ಆ. ಮಣ್ಣು ಕೆಲಸವನ್ನು ರೈತರು ಮಾಡಬೇಕು. ಕಲ್ಲು ಕಟ್ಟಡದ ಕೆಲಸವನ್ನು ಸರ್ಕಾರವು ಮಾಡಿಸಬೇಕು ಎನ್ನುವುದು ಸಾಮಾನ್ಯ ನಿಯಮ ಆದರೂ ಆಗಬೇಕಾದ ಮಣ್ಣು ಕೆಲಸ ರೈತರ ಮೇಲೆ ಅತಿಯಾದ ಭಾರವಾಗುವಷ್ಟು ಇದೆ ಎನಿಸಿದಲ್ಲಿ ಡೆಪ್ಯುಟಿ ಕಮೀಷನರರು ಸರ್ಕಾರದ ಒಪ್ಪಿಗೆ ಪಡೆದು ನಿಯಮವನ್ನು ತನ್ನ ವಿಶೇಷ ವಿವೇಚನೆಯ ಮೇರೆಗೆ ಸಡಿಲಿಸಬಹುದು.

ಇ. ೩೦೦ ಹಾಗೂ ಕಡಿಮೆ ರೂಪಾಯಿ ಅಚ್ಚುಕಟ್ಟು ಉಳ್ಳ ಕೆರೆಯ ಅಭಿವೃದ್ಧಿಗೆ ಹೆಚ್ಚು ಅನುದಾನ.

ಈ. ೧೦೦ ರೂ. ಅಚ್ಚುಕಟ್ಟಿನ ಕೆರೆ ಹಾಗೂ ೧೦೦ಗಿಂತ ಹೆಚ್ಚು ಅಚ್ಚಕಟ್ಟಿನ ಕೆರೆ ಎಂಬ ವ್ಯತ್ಯಾಸವನ್ನು ತೆಗೆದು ಹಾಕಿ, ಸಣ್ಣ ನೀರಾವರಿ ಕೆರೆಗಳು ಎಂದು ವರ್ಗೀಕರಿಸಲಾದ ಎಲ್ಲವನ್ನು ಒಂದೇ ರೀತಿಯನ್ನು ಪರಿಗಣಿಸಲಾಯಿತು. ರೈತರು ಮಾಡಬೇಕಾದ ಸಂರಕ್ಷಣಾ ಕಾರ್ಯಗಳನ್ನು ೧೯೫೦ಳರ ಈ ಆಜ್ಞೆಯಲ್ಲಿ ಕೆಳಕಾಣಿಸಿರುವಂತೆ ಸ್ಪಷ್ಟವಾಗಿ ನಿಗದಿಪಡಿಸಲಾಯಿತು.

ಅ. ಏರಿಯನ್ನು ನಿರ್ದಿಷ್ಟ ಪ್ರಮಾಣದ ಮಟ್ಟದಲ್ಲಿ ಹಾಗೂ ಸೂಚಿತವಾದ ಇಳಿಜಾರು ಇರುವಂತೆ ಇರಿಸಬೇಕು.

ಆ. ಮಳೆಯಿಂದ ಹಾಗೂ ದನಕರುಗಳ ತುಳಿತದಿಂದ ಕೆರೆ ಏರಿಯ ಮೇಲೆ ಹಾಗೂ ನಾಲೆಗಳ ದಂಡೆಗಳ ಮೇಲೆ ಉಂಟಾಗಿರುವ ಕೊರಕಲು ಅಥವಾ ಇತರ ಏರುಪೇರುಗಳನ್ನು ತುಂಬಿ ಸರಿ ಮಾಡಬೇಕು.

ಇ. ಏರಿಗಳ ಮೇಲೆ ಪಾಪಾಸುಕಳ್ಳಿ ಮುಂತಾದ ಕಾಡು ಗಿಡಗಳು, ಅಪಾಯಕಾರಿ ಕಳೆಗಳು ಬೆಳೆಯುವುದನ್ನು ತೆಗೆದುಹಾಕಬೇಕು.

ಈ. ಕೆರೆ ಏರಿಗಳ ಮೇಲಿನ ಕುರುಚಲು ಗಿಡಗಳು ಅಪಾಯಕಾರಿಯಾಗಿದ್ದಲ್ಲಿ ತೆಗೆದು ಹಾಕಬೇಕು.

ಉ ಕೆರೆಯ ತೂಬುಗಳಲ್ಲಿ ಹಾಗೂ ಅಲ್ಲಿಂದ ಹೊರಡುವ ಎಲ್ಲಾ ಕಾಲುವೆಗಳಲ್ಲಿ ನೀರು ಹರಿಯಲು ಅಡ್ಡವಾಗಿರುವ ಪದಾರ್ಥ ಸಂಗ್ರಹವನ್ನು ತೆಗೆದು ಹಾಕಬೇಕು. ಸಣ್ಣ ಪುಟ್ಟ ಹಾಗೂ ಶಾಖಾ ನಾಲೆಗಳ ಮಣ್ಣು ಕಟ್ಟೆಗಳನ್ನು ಚೊಕ್ಕಟ ಮಾಡಿ ಸರಿಪಡಿಸಬೇಕು.

ಊ. ಕೆರೆಗೆ ನೀರು ತರುವ ತೊರೆಗಳನ್ನು ಸುಸ್ಥಿತಿಯಲ್ಲಿ ಇಟ್ಟಿರಬೇಕು.

ಋ. ಮಳೆಗಾಲದಲ್ಲಿ ಎಲ್ಲಾ ಕೆರೆಗಳ ಏರಿಗಳ ಮೇಲೂ ನಿಗಾ ಇಟ್ಟಿರಬೇಕು. ನೀರಿನ ಅಲೆಗಳ ಹೊಡೆತಕ್ಕೆ ಸಿಕ್ಕಿದ ಏರಿಯ ಭಾಗಗಳಲ್ಲಿ ಹುಲ್ಲು ಹಾಸು ಹಾಕಬೇಕು. ತೂಬುಗಳನ್ನು ತೆಗೆಯುವುದಕ್ಕೂ ಮುಚ್ಚುವುದಕ್ಕೂ ಸಹಾಯವಾಗುವಂತೆ ಇಟ್ಟಿರಬೇಕು. ಮತ್ತು

ೠ. ಮಳೆಗಾಲದಲ್ಲಿ ಎಲ್ಲಾ ಕೆರೆಗಳ ಏರಿಗಳ ಮೇಲೂ ನಿಗಾ ಇಟ್ಟಿರಬೇಕು. ನೀರಿನ ಅಲೆಗಳ ಹೊಡೆತಕ್ಕೆ ಸಿಕ್ಕಿದ ಏರಿಯ ಭಾಗಗಳಲ್ಲಿ ಹುಲ್ಲು ಹಾಸು ಹಾಕಬೇಕು. ತೂಬುಗಳನ್ನು ತೆಗೆಯುವುದಕ್ಕೆ, ಮುಚ್ಚುವುದಕ್ಕೂ ಸಹಾಯವಾಗುವಂತೆ ಇಟ್ಟಿರಬೇಕು. ಮತ್ತು

ಎ. ಬಿರುಕು ಮತ್ತಿತರ ಆಕಸ್ಮಿಕ ಅನಾಹುತಗಳನ್ನು ತಡೆಯಲು ಎಲ್ಲಾ ಸಣ್ಣಪುಟ್ಟ ಕೆಲಸ ಮಾಡಬೇಕು.

ನೀರು ಒದಗಿಸುವ ಹಾಗೂ ನೀರು ಹಂಚಿಕೆಯ ನಾಲೆಗಳ ಉಪ ಕಾರ್ಯಗಳ ಸ್ಥಿತಿ ಕುರಿತಂತೆಯೂ ಒಂದು ಹೆಚ್ಚುವರಿ ಕೆಲಸವನ್ನು ತನಿಖಾ ವರದಿಯಲ್ಲಿ ಸೇರಿಸಬೇಕು[೨೪].

**ಕೆರೆ ಪಂಚಾಯತಿ ಶಾಸನ ೧೯೧೧**

ಈ ಮೇಲಿನ ನಿಯಮಗಳಿದ್ದರೂ ಸಹ ಹಳ್ಳಿಯವರಲ್ಲಿ ಸಾಮುದಾಯಿಕ ಭಾವನೆ ಮಾಯವಾಗಿದ್ದರಿಂದ ಹಾಗೂ ನಿಯಮಗಳನ್ನು ಜಾರಿ ಮಾಡಲು ನಿಯುಕ್ತರಾಗಿದ್ದ ಅಧಿಕಾರಿಗಳ ಆಲಸ್ಯದಿಂದ ಕೆರೆಗಳ ಸಂರಕ್ಷಣೆ ಮತ್ತೇ ಅಲಕ್ಷ್ಯಕ್ಕೆ ಒಳಗಾಯಿತು. ಕೆರೆಯ ಸಂರಕ್ಷಣೆಗೆ ಬೇಕಾದ ಕ್ರಮಗಳಲ್ಲಿ ಹಳ್ಳಿಯ ಜನರ ಸಹಕಾರವನ್ನು ಪಡೆಯಲು ಅವರ ಮಾತಿಗೂ ಅವಕಾಶ ಕೊಡುವುದು. ಆ ಉದ್ದೇಶಕ್ಕಾಗಿ ಗೊತ್ತು ಮಾಡಿ ಇರಿಸಲಾದ ಹಣವನ್ನು ವ್ಯಯಿಸಿ, ಕೆಲಸವನ್ನು ಮಾಡಲು ಅಧಿಕಾರ ನೀಡುವುದು ಇದಕ್ಕೆ ಪರಿಹಾರ ಎಂದು ಸರ್ಕಾರವು ಭಾವಿಸಿತು. ಇದರಿಂದ ಈ ಕೆಲಸ ಸರ್ಕಾರಕ್ಕೆ ಮಾತ್ರ ಕಾಳಜಿ ಇರುವಂಥದ್ದಲ್ಲ ಎಂದು ಆ ಜನ ಭಾವಿಸಿಯಾರು. ಈ ಉದ್ದೇಶದಿಂದ ಸರ್ಕಾರವು ೧೯೧೧ರಲ್ಲಿ ಕೆರೆ ಪಂಚಾಯತಿ ಶಾಸನವನ್ನು ಪಾಸು ಮಾಡಿತು[೯]. ಈ ಶಾಸನದ ಪ್ರಕಾರ ಯಾವುದೇ ಹಳ್ಳಿಯಲ್ಲಿ ಕೆರೆ ಕೆಳಗಿನ ತರಿ ಭೂಮಿಯಲ್ಲಿ ಅರ್ಧಕ್ಕೆ ಕಡಿಮೆ ಇಲ್ಲದಷ್ಟು ಒಟ್ಟು ಹಿಡುವಳಿ ಉಳ್ಳಂಥ ರೈತರ ಪೈಕಿ ಮೂರನೇ ಎರಡಕ್ಕೆ ಕಡಿಮೆ ಇಲ್ಲದಷ್ಟು ಮಂದಿ ಒಪ್ಪಿದ್ದಲ್ಲಿ, ಅಲ್ಲಿ ಒಂದು ಕೆರೆ ಪಂಚಾಯತಿಯನ್ನು ರಚಿಸತಕ್ಕದ್ದು. ಪಂಚಾಯತಿಯಲ್ಲಿ ಹಳ್ಳಿಯ ಪಟೇಲ, ಶ್ಯಾನುಭೋಗ ಹಾಗೂ ರೈತರಿಂದ ಆರಿಸಲಾದ ಸುಮಾರು ಮೂವರು ಅಥವಾ ಹೆಚ್ಚಿಗೆ ಸದಸ್ಯರು ಇರತಕ್ಕದ್ದು. ಚುನಾಯಿತ ಸದಸ್ಯರಲ್ಲಿ ನಾಲ್ಕರಲ್ಲಿ ಒಂದರಷ್ಟು ಮಂದಿ, ತರಿ ಅಥವಾ ಬಾಗಾಯತು ಜಮೀನು ಹೊಂದದೆ ಇರುವ ರೈತರು ಹಾಗೂ ಉಳಿದ ಸದಸ್ಯರು ತರಿ ಅಥವಾ ಬಾಗಾಯತು ಜಮೀನು ಉಳ್ಳವರು ಆಗಿರತಕ್ಕದ್ದು. ಚುನಾಯಿತ ಸದಸ್ಯರ ಅಧಿಕಾರದ ಅವಧಿ ಮೂರು ವರ್ಷ. ಹಳ್ಳಿಯ ಪಟೇಲನೇ ಪಂಚಾಯತಿಯ ಅಧ್ಯಕ್ಷ. ಪಂಚಾಯತಿ ಕೆಳಕಾಣಿಸಿರುವ ಬಾಬ್ತುಗಳಿಂದ ಆದ ನಿಧಿಯನ್ನು ನಿಯಂತ್ರಿಸತಕ್ಕದ್ದು.

ಅ. ತಮಗೆ ವಹಿಸಿದ ಕೆಲಸವನ್ನು ನಿರ್ವಹಿಸಲು ವಿಫಲವಾದ ಅಥವಾ ತಮ್ಮ ಪಾಲಿನ ಶ್ರಮವನ್ನು ಹಣ ಪಾವತಿಗಾಗಿ ಪರಿವರ್ತಿಸಲು ಬಯಸುವ ರೈತರಿಂದ ವಸೂಲಿ ಮಾಡಿದ ಮೊಬಲಗು.

ಆ. ಕೆರೆಯಲ್ಲಿ ಮೀನು ಹಿಡಿಯುವ ಹಕ್ಕು, ಕೆರೆ ಅಂಗಳದಲ್ಲಿ ದನಕರುಗಳನ್ನು ಮೇಯಿಸುವ ಹಕ್ಕು, ಕೆರೆ ಏರಿಯ ಮೇಲಿನ ಹುಲ್ಲನ್ನು ಕೊಯಿದು ಒಯ್ಯುವ ಹಕ್ಕು ಹಾಗೂ ಕೆರೆಯಲ್ಲಿ ಅದರ ಏರಿಯಲ್ಲಿ ಇರುವ ಮರಗಳ ಉತ್ಪನ್ನವನ್ನು ಒಯ್ಯುವ ಹಕ್ಕು ಇವುಗಳ ಬಿಕರಿಯಿಂದ ಬಂದ ಮೊಬಲಗು.

ಇ. ಕೆರೆ ಅಂಗಳದಲ್ಲಿ ತಾತ್ಕಾಲಿಕವಾಗಿ ಅಲ್ಪಕಾಲೀನ ಬೆಳೆಗಳನ್ನು ಬೆಳೆಯುವುದಕ್ಕೆ ನೀಡುವ ಅವಕಾಶಕ್ಕಾಗಿ ಪಡೆಯುವ ಬಾಡಿಗೆ ಹಣ ಅಥವಾ ಉತ್ಪನ್ನದ ಪಾಲು.

ಈ. ಸರ್ಕಾರವು ನೀರಾವರಿ ಸುಂಕ ನಿಧಿಯಿಂದ ನೀಡುವ ಅನುದಾನ.

ಉ. ಪಂಚಾಯತಿ ಬಯಸಿದಲ್ಲಿ ಕೆರೆಯ ಜೀರ್ಣೋದ್ಧಾರ ಅಥವಾ ಅಭಿವೃದ್ಧಿಗೆ ಸರ್ಕಾರವು ಕೊಡುವ ಮುಂಗಡ ಹಣ.

ಊ. ಸರ್ಕಾರವು ಪಂಚಾಯತಿಗೆ ನೀಡಬಹುದಾದ ಇತರ ಯಾವುದೇ ಅನುದಾನ ಅಥವಾ ಸಾಲ.

ಕೆರೆಯಿಂದ ನೀರು ಬಿಡುವುದನ್ನು ನಿಯಂತ್ರಿಸುವ ಅಧಿಕಾರ ಪಂಚಾಯತಿಗೆ ಇತ್ತು. ಅಲ್ಲದೆ

ಯಾವುದೇ ವರ್ಷದಲ್ಲಿ ಕೆರೆಯಲ್ಲಿ ಸಿಗುವ ನೀರಿನ ಪ್ರಮಾಣವನ್ನು ನೋಡಿಕೊಂಡು ಎಷ್ಟು ಭೂಮಿಯಲ್ಲಿ ತರಿ ಬೆಳೆ ಇಡಬೇಕು, ಎಷ್ಟರಲ್ಲಿ ಕಬ್ಬು ಬೆಳೆಯಬಹುದು ಎಂಬುದನ್ನು ಗೊತ್ತು ಮಾಡಲು ಪಂಚಾಯತಿಗೆ ಅಧಿಕಾರ ನೀಡಲಾಗಿತ್ತು.

ಕೆರೆ ಪಂಚಾಯತಿ ಅಸ್ತಿತ್ವಕ್ಕೆ ಬಂದ ಮೇಲೆ ೧೮೭೩ ಹಾಗೂ ೧೯೦೪ ನಿಯಮಗಳಲ್ಲಿ ವಿಧಿಸಿದಂತೆ ಎಲ್ಲಾ ಕೆರೆಗಳ ಸಂರಕ್ಷಣೆ ಕುರಿತಂತೆ ರೈತರ ಮೇಲೆ ಇದ್ದ ಸಾಂಪ್ರದಾಯಿಕ ಹೊಣೆಗಾರಿಕೆಯ ಚಾಲನೆಯು ಪಂಚಾಯತಿಯ ಪಾಲಿಗೆ ಬಂತು. ಮುಂದೆ ವರ್ಷ ವರ್ಷವೂ ಹೆಚ್ಚು ಹೆಚ್ಚು ಇಂತಹ ಪಂಚಾಯತಿಗಳನ್ನು ಮಂಜೂರು ಮಾಡಲಾಯಿತು. ಜಿಲ್ಲೆಯಲ್ಲಿ ೧೯೧೯-೨೦ರಲ್ಲಿ ಇಂತಹ ೧೦ ಪಂಚಾಯತಿಗಳು ಇದ್ದವು. ೧೯೩೪-೩೫ರಲ್ಲಿ ೨೭ ಕೆರೆ ಪಂಚಾಯತಿಗಳಿದ್ದವು. ಇವುಗಳಲ್ಲಿ ಏಳು ಮಾತ್ರ ಚುರುಕಾಗಿ ಕೆಲಸ ಮಾಡಿದ್ದವು.

ರೈತರಲ್ಲಿ ಸಹಕಾರದ ಕೊರತೆಯೋ ಅಥವಾ ರೂಢಿಯ ಸಂರಕ್ಷಣಾ ಕ್ರಮಗಳನ್ನು ಜಾರಿ ಮಾಡುವುದರಲ್ಲಿ ಪಟೇಲ ಅಥವಾ ಶ್ಯಾನುಭೋಗರ ಉತ್ಸಾಹದ ಅಭಾವವೋ, ಇಲ್ಲವೇ ಇನ್ನಾವ ಕಾರಣಕ್ಕೋ ಕೆರೆ ಪಂಚಾಯತಿಗಳು ಕೆಲಸ ಮಾಡುವುದರಲ್ಲಿ ಸೋತು ಮೃತಪ್ರಾಯವಾದವು. ರೂಢಿಯ ಕರ್ತವ್ಯಗಳನ್ನು ಜಾರಿ ಮಾಡುವುದು ಪಟೇಲ ಅಥವಾ ಹಳ್ಳಿಯ ಮುಖ್ಯಸ್ಥನಿಗೆ ಸಾಧ್ಯವಾಗಲಿಲ್ಲ. ಏಕೆಂದರೆ, ಆತ ಹೆಸರಿಗೆ ಮಾತ್ರ ಊರಿಗೆ ತಲೆಯಾಳು, ಸರ್ಕಾರಿ ಸಂಬಳದ ಒಬ್ಬ ಚಾಕರ ಎನ್ನುವ ಸ್ಥಿತಿಯನ್ನು ಮುಟ್ಟಿದ್ದ. ಪಟೇಲ ಗ್ರಾಮ ವಾಸಿಯಾಗಿರಲಿಲ್ಲ. ಹತ್ತಿರದ ನಗರ ಕೇಂದ್ರದಲ್ಲಿ ವಾಸಿಸುತ್ತಿದ್ದ. ಹಳ್ಳಿಯಲ್ಲಿ ಸಾಮಾಜಿಕ ಮತ್ತು ಆರ್ಥಿಕ ವರ್ಗಗಳು ಅಥವಾ ಗುಂಪುಗಳು ಹುಟ್ಟಿಕೊಂಡು, ಮುಖ್ಯಸ್ಥನಿಗೆ ತನ್ನ ಆಜ್ಞೆಯನ್ನು ಜಾರಿ ಮಾಡುವುದು ಸಾಧ್ಯವಾಗದೇ ಹೋಯಿತು. ಅಲ್ಲದೆ, ನಗರ ಕೇಂದ್ರದಲ್ಲಿ ಜನಸಂಖ್ಯೆ ಅಪಾರ ಬೆಳೆಯಿತು. ಆರ್ಥಿಕ ಸಾಮಾಜಿಕ ಘನತೆ ಹಾಗೂ ಅಧಿಕಾರ ಹೆಚ್ಚಾಯಿತು. ಇದರಿಂದಾಗಿ ಬಹುಪಾಲು ಭಾರಿ ಹಾಗೂ ಶ್ರೀಮಂತ ಜಮೀನುದಾರರು ತಮ್ಮ ಭೂಮಿಗಳ ಯೋಗಕ್ಷೇಮವನ್ನು ತಮ್ಮ ನಂಬಿಗಸ್ಥ ಆಳುಗಳ ಕೈಗೆ ವಹಿಸಿ, ತಾವು ನಗರ ಪ್ರದೇಶಗಳಿಗೆ ಹೊರಟು ಹೋದರು. ಇವೆಲ್ಲದರಿಂದ ಹಾಗೂ ಇನ್ನೂ ಅನೇಕ ಕಾರಣಗಳಿಂದಾಗಿ ಬಹುಶಃ ರೂಢಿಯ ಕರ್ತವ್ಯಗಳು ಮೂಲೆಗುಂಪಾದವು. ಎಲ್ಲೋ ಕೆಲವೇ ಕೆಲವು ಪಂಚಾಯತಿಗಳು ಮಾತ್ರ ನಿಧಿ ಶೇಖರಣೆ ಮಾಡಿ, ನೀರಿನ ಹಂಚಿಕೆ, ಕೆರೆ ಏರಿಗಳ ಕಳೆ ಗಿಡಗಳ ನಿರ್ನಾಮ, ಮತ್ತಿತರ ದುರಸ್ತಿ ಕಾರ್ಯಗಳಲ್ಲಿ ಆಸಕ್ತಿ ವಹಿಸಿದರು.

ಕೆಲವು ಕೆರೆ ಪಂಚಾಯತಿಗಳು ತಮಗೆ ವಹಿಸಲಾಗಿದ್ದ ಕರ್ತವ್ಯಗಳನ್ನು ನಿರ್ವಹಿಸದೆ ಹೋದುದರಿಂದ ಅವುಗಳನ್ನು ರದ್ದು ಮಾಡಲಾಯಿತು. ಆ ಪ್ರಕಾರ ಮಾರ್ಚ್ ೧೯೧೫ರಲ್ಲಿ ರಚಿತವಾದ ಚಿತ್ರದುರ್ಗ ಜಿಲ್ಲೆಯ ಭರಮಸಾಗರ ಪಂಚಾಯತಿ ಜನವರಿ ೧೯೩೬ರಲ್ಲಿ ರದ್ದಾಯಿತು. ಇದರಂತೆ ಜಿಲ್ಲೆಯಲ್ಲಿ ಅನೇಕ ಪಂಚಾಯ್ತಿಗಳು ಸರ್ಕಾರದಿಂದ ರದ್ದಾದವು. ಇದರಿಂದ ಎಚ್ಚೆತ್ತ ಸರ್ಕಾರ ಕೆರೆಗಳ ಸಂರಕ್ಷಣೆಯನ್ನು ತನ್ನ ಸುಪರ್ದಿಗೆ ತೆಗೆದುಕೊಳ್ಳುವ ಉದ್ದೇಶದಿಂದ ೧೯೩೨ರ ಮೈಸೂರು ನೀರಾವರಿ ಶಾಸನದಲ್ಲಿ ಒಂದು ಕಟ್ಟುಪಾಡನ್ನು ಸೇರಿಸಿತು. ತನ್ನ ಕರ್ತವ್ಯವನ್ನು ಶ್ರಮ ರೂಪದಲ್ಲಿ ನಿರ್ವಹಿಸಲು ಆಗದಂಥವರೆಲ್ಲ ಅದನ್ನು ಹಣದ ರೂಪದಲ್ಲಿ ಗಣನೆ ಮಾಡಿ ಸಲ್ಲಿಸಬಹುದು

ಎಂಬುದನ್ನು ಸೇರಿಸಿತು. ಆದರೆ, ಅಂತಹ ಸುಂಕವನ್ನು ವಿಧಿಸಲು ಕೆರೆ ಕೆಳಗಿನ ಜನರಲ್ಲಿ ಮೂರನೆಯ ಎರಡು ಭಾಗ ಜನರು ಒಪ್ಪಿಗೆ ಅಗತ್ಯ ಎಂದು ಗೊತ್ತು ಮಾಡಲಾಯಿತು. ಈ ಎಲ್ಲಾ ಕ್ರಮಗಳೂ ಕೆರೆಗಳ ಸುಸ್ಥಿತಿಯ ಬಗ್ಗೆ ಅಪೇಕ್ಷಿತ ಫಲವನ್ನು ನೀಡದೆ ಹೋದವು. ಭೂಮಿಗೆ ಒಳ್ಳೆಯ ನೀರಾವರಿ ಒದಗಿಸುವ ಉದ್ದೇಶದಿಂದ ಸರ್ಕಾರವೇ ಅಂತಹ ಕೆರೆಗಳ (ಸಣ್ಣ ನೀರಾವರಿ ಕೆರೆಗಳ) ಪೂರಾ ಜವಾಬ್ದಾರಿಯನ್ನು ತಾನೇ ವಹಿಸಿಕೊಳ್ಳಲು ಒಪ್ಪಿತು. ೧೯೩೨ರ ಮೈಸೂರು ನೀರಾವರಿ ಶಾಸನಕ್ಕೆ ಪುನಃ ಒಂದು ಕಲಮನ್ನು ಸೇರಿಸಲಾಯಿತು. ಅಂದರೆ, ಯಾವ ಕೆರೆಗಳ ಸಂರಕ್ಷಣೆಯನ್ನು ಸರ್ಕಾರವು ವಹಿಸಿಕೊಳ್ಳೊವುದೋ ಅವುಗಳಿಂದ ಲಾಭ ಪಡೆಯುವ ಪ್ರದೇಶದ ಪ್ರತಿಯೊಬ್ಬ ಹಿಡುವಳಿದಾರನೂ ನಿಗದಿಯಾದ ಭೂಕಂದಾಯದ ಜೊತೆಗೆ ಎಕರೆಗೆ ಸಾಲಿಯಾನ ಮೂರು ರೂಪಾಯಿಗಳನ್ನು ಸಂರಕ್ಷಣಾ ಸುಂಕವಾಗಿ ಸರ್ಕಾರಕ್ಕೆ ಕೊಡಬೇಕು ಎಂದು ನಿರ್ಧರಿಸಲಾಯಿತು.

೧೯೬೫ರ ನೀರಾವರಿ ಶಾಸನದಲ್ಲಿ ೧೯೩೨ರ ಶಾಸನದಲ್ಲಿ ಹೇಳಲಾಗಿದ್ದ ಸಣ್ಣ ನೀರಾವರಿ ಎಂಬ ಶಬ್ದವನ್ನು ಕೈಬಿಡಲಾಯಿತು. ಯಾವುದೇ ವ್ಯಕ್ತಿಯಾಗಲಿ ಇಲ್ಲವೇ ವ್ಯಕ್ತಿಗಳ ಕೂಟವಾಗಲಿ ನಿರ್ವಹಿಸುತ್ತಿದ್ದ ಯಾವುದೇ ನೀರಾವರಿ ಕಾರ್ಯದ ಸಂರಕ್ಷಣೆಯನ್ನಾದರೂ ಸರ್ಕಾರವು ವಶ ಮಾಡಿಕೊಳ್ಳಲು ಅವಕಾಶವನ್ನು ಕಲ್ಪಿಸಲಾಯಿತು. ೧೯೬೫ರಿಂದ ಈಚೆಗೆ ಯಾವುದೇ ನೀರಾವರಿ ಕಾರ್ಯದ ಸಂರಕ್ಷಣೆಯನ್ನು ವಹಿಸಿಕೊಂಡ ಬಗ್ಗೆ ಸರ್ಕಾರದ ಆಜ್ಞೆಯಾಗಿಲ್ಲ. ಅಂದರೆ, ಅಲ್ಲಿಂದ ಇಲ್ಲಿಯವರೆಗೆ ಎಲ್ಲಾ ನೀರಾವರಿ ಕಾಮಗಾರಿಗಳ ಸಂರಕ್ಷಣೆಯು ಸರ್ಕಾರದ ವಶದಲ್ಲಿತ್ತು ಎನ್ನಬಹುದು[೨].

೧೯೮೫ರಲ್ಲಿ ಜಿಲ್ಲಾ ಪರಿಷತ್ತುಗಳು ರೂಪುಗೊಳ್ಳುವುದಕ್ಕೆ ಮೊದಲು ಹತ್ತು ಎಕರೆ ಅಥವಾ ಕಡಿಮೆ ನೀರಾವರಿ ಯೋಗ್ಯ ಅಚ್ಚಕಟ್ಟು ಉಳ್ಳ ಎಲ್ಲಾ ಕೆರೆಗಳನ್ನು ಪಂಚಾಯತಿಗಳು ಅಥವಾ ಸ್ಥಳೀಯ ಸಂಸ್ಥೆಗಳು ಸರ್ಕಾರವು ಕೊಡಮಾಡುತ್ತಿದ್ದ ಅನುದಾನದಿಂದ ಸಂರಕ್ಷಿಸುತ್ತಿದ್ದವು. ಇತರ ಎಲ್ಲಾ ಕೆರೆಗಳನ್ನು ಲೋಕೋಪಯೋಗಿ ಇಲಾಖೆ ಸಂರಕ್ಷಿಸುತ್ತಿತ್ತು. ಸಂರಕ್ಷಣೆಯ ಅನುದಾನವನ್ನು ನಿಗದಿ ಮಾಡಲು ಯಾವುದೇ ನಿರ್ದಿಷ್ಟ ಅಳತೆಗೋಲು ಇರಲಿಲ್ಲ. ಕೆಲವು ಕೆರೆಗಳಿಗೆ ನಿರ್ದಿಷ್ಟ ಅನುದಾನವಿತ್ತು. ಉಳಿದವು ಬಹುತೇಕ ಅಲಕ್ಷ್ಯಕ್ಕೆ ಪಕ್ಕಾಗಿದ್ದವು. ಎಂಟನೆಯ ಧನ ಆಯೋಗಕ್ಕೆ ರಾಜ್ಯ ಒದಗಿಸಿದ ಮಾಹಿತಿಯಂತೆ ಕೆರೆಗಳ ಸಂರಕ್ಷಣೆ ಹಾಗೂ ದುರಸ್ತಿಗಳಿಗೆ ಒದಗಿಸಲಾದ ಹಣ ಪ್ರತಿ ಎಕರೆಗೆ ಕೇವಲ ಸುಮಾರು ಇಪ್ಪತ್ತು ರೂಪಾಯಿ. ಇದರಲ್ಲಿ ಸೌದಿ ಮುಂತಾದ ಸಿಬ್ಬಂದಿಯವರ ಸಂಬಳವೂ ಸೇರಿತ್ತು. ಆದ್ದರಿಂದ ಕೆರೆಗಳ ದುರಸ್ತಿಗಾಗಿ ಆಗುತ್ತಿದ್ದ ವಾಸ್ತವ ವೆಚ್ಚ ತೀರಾ ನಗಣ್ಯವಾದುದ್ದಾಗಿತ್ತು. ಜಿಲ್ಲಾ ಪರಿಷತ್ತುಗಳು ರೂಪುಗೊಂಡ ಮೇಲೆ ೫೦೦೦ ಅಥವಾ ಕಡಿಮೆ ಎಕರೆ ನೀರಾವರಿ ಯೋಗ್ಯ ಅಚ್ಚುಕಟ್ಟು ಉಳ್ಳ ಕೆರೆಗಳ ಸಂರಕ್ಷಣೆಯನ್ನು ಪರಿಷತ್ತಿಗೆ ವಹಿಸಲಾಗಿದೆ. ಇತರ ಭಾರಿ ಕೆರೆಗಳು ಮಾತ್ರ ಸರ್ಕಾರದಿಂದ ರಕ್ಷಿತವಾಗಿವೆ. ಸಂರಕ್ಷಣೆಯ ಅನುದಾನದಲ್ಲೇನೋ ಎಕರೆಗೆ ನಲುವತ್ತು ರೂಪಾಯಿಗಳನ್ನು ಒದಗಿಸಲಾಗಿದೆ. ಆದರೆ ಸಿಬ್ಬಂದಿಯ ವೇತನ ಶ್ರೇಣಿಯ ಬಗ್ಗೆಯಾಗಲಿ ಅಥವಾ ಮಾಡಬೇಕಾದ ದುರಸ್ತಿಯ ಲಕ್ಷಣದ ವಿಷಯದಲ್ಲಿಯಾಗಲಿ ಯಾವ ನಿರ್ದಿಷ್ಟ ಪ್ರಮಾಣವೂ ಇಲ್ಲ. ಆಗುವ ವೆಚ್ಚವೆಲ್ಲ ಬಹುಪಾಲು ಸಿಬ್ಬಂದಿಯ ಸಂಬಳಕ್ಕೆ. ಕಾಲಕಾಲದ ದುರಸ್ತಿಗಳಿಗೆ ಆಗುವ ವೆಚ್ಚ ತೀರಾ ಅಲ್ಪವಾಗಿರುವುದು ವಿಷಾದನೀಯ.

## ೭.೩. ಕೆರೆಗಳ ಪುನರಾಭಿವೃದ್ಧಿ ಮತ್ತು ಪರಿಹಾರ ಕ್ರಮಗಳು

ನೀರಾವರಿ ಹಾಗೂ ಕುಡಿಯಲು ನೀರು ಒದಗಿಸುವ ವಿಷಯದಲ್ಲಿ ಕೆರೆಗಳ ಪಾತ್ರ ಗಣನೀಯವಾದುದು. ಇದರ ಜೊತೆಗೆ ಕೆರೆಗಳು ಇನ್ನೂ ಇತರ ಅತ್ಯವಶ್ಯಕ ಸೇವೆಗಳನ್ನು ಹಿಂದಿನಿಂದಲೂ ಮಾಡುತ್ತ ಬಂದಿವೆ. ಪ್ರವಾಹ ನಿಯಂತ್ರಣ, ಬರದ ಹತೋಟಿ, ಭೂಮಿಯೊಳಗಿನ ನೀರಿನ ಹೆಚ್ಚಳ, ಮೀನುಗಾರಿಕೆಗೆ ನೆರವು, ಪರಿಸರದ ಅಂದ ಚೆಂದ ಹೆಚ್ಚಿಸುವಲ್ಲಿ ಮತ್ತು ಶುಚಿತ್ವವನ್ನು ಕಾಪಾಡುವಲ್ಲಿ ಕೆರೆಗಳು ಬಹು ಪ್ರಮುಖ ಪಾತ್ರವಹಿಸುತ್ತ ಬಂದಿವೆ[೨].

**ಕೆರೆಗಳ ಪುನರ್ ಅಭಿವೃದ್ಧಿಗೆ ಪರಿಹಾರ ಕ್ರಮಗಳು**

ಚಿತ್ರದುರ್ಗ ಜಿಲ್ಲೆಯ ಕೆರೆಗಳು ನೀರಾವರಿ ಕ್ಷೇತ್ರಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದ್ದು, ಅವು ಇಂದಿಗೂ ಅತ್ಯಂತ ಪ್ರಸ್ತುತವಾಗಿವೆ. ಈ ಹಿನ್ನೆಲೆಯಲ್ಲಿ ಅವುಗಳ ಪುನರ್ ಅಭಿವೃದ್ಧಿಯಾಗಬೇಕಾದ ಅವಶ್ಯಕತೆ ಇದೆ. ಅದಕ್ಕಾಗಿ ಕೆಲ ಪರಿಹಾರ ಕ್ರಮಗಳನ್ನು ಆಯೋಜಿಸುವುದರ ಮೂಲಕವು ಅವುಗಳ ಪುನರ್ ಅಭಿವೃದ್ಧಿ ಮಾಡಲು ಸಾಧ್ಯತೆ ಇದೆ. ಕೆರೆಗಳು ನಮ್ಮ ಮುಂದಿನ ತಲೆಮಾರಿಗೆ ಉಳಿಯಬೇಕಾದರೆ ಈ ಮುಂದಿನ ಪರಿಹಾರ ಕ್ರಮಗಳನ್ನು ತಕ್ಷಣದಿಂದಲೇ ಕೈಗೊಳ್ಳಬೇಕಾಗಿದೆ. ಈ ಹಿನ್ನೆಲೆಯಲ್ಲಿ **ಪರಿಹಾರ ಕ್ರಮಗಳ ಕುರಿತು** ಈ ಮುಂದೆ ಅವಲೋಕಿಸಲಾಗಿದೆ.

**೧. ಅಣೆಕಟ್ಟು/ಜಲಾಶಯಗಳಿಂದ ಕೆರೆಗಳಿಗೆ ನೀರು ಪೂರೈಕೆ**

ಚಿತ್ರದುರ್ಗ ಜಿಲ್ಲೆಯಲ್ಲಿ ಹಲವಾರು ಕೆರೆಗಳಿದ್ದು ಅವು ಎದುರಿಸುತ್ತಿರುವ ಹಲವಾರು ಸಮಸ್ಯೆಗಳಲ್ಲಿ ನೀರು ಶೇಖರಣೆ ಅಥವಾ ನೀರು ಸಂಗ್ರಹ ಸಮಸ್ಯೆಯೂ ಒಂದಾಗಿದೆ. ಇಲ್ಲಿನ ಬಹುತೇಕ ಕೆರೆಗಳು ನೀರು ಶೇಖರಣೆಗಾಗಿ ಮಳೆ ನೀರನ್ನು ಮಾತ್ರ ಅವಲಂಬಿಸಿದ್ದು, ಮಳೆ ಬಂದರೆ ಮಾತ್ರ ಕೆರೆಗಳಿಗೆ ನೀರು ಎನ್ನುವ ಪರಿಸ್ಥಿತಿ ಉಂಟಾಗಿದೆ. ಈ ಸಮಸ್ಯೆಯಿಂದ ನಾವು ಹೊರ ಬರಬೇಕಾದರೆ ಸಮೀಪದ ಅಣೆಕಟ್ಟು/ಜಲಾಶಯಗಳಿಂದ ಜಿಲ್ಲೆಯ ಕೆರೆಗಳಿಗೆ ನೀರು ಪೂರೈಕೆಯಾದರೆ ಕೆರೆಗಳ ನೀರಿನ ಸಮಸ್ಯೆಯನ್ನು ಪರಿಹರಿಸಬಹುದು. ಕಾಲ ಕಾಲಕ್ಕೆ ಸರಿಯಾಗಿ ಮಳೆ ಆದರೆ ವರ್ಷಪೂರ್ತಿ ಕೆರೆಗಳು ತುಂಬಿರುತ್ತವೆ ಮತ್ತು ಅದನ್ನು ಅವಲಂಬಿಸಿಕೊಂಡವರಿಗೆ ನೀರಿನ ಸೌಲಭ್ಯವು ಪ್ರತಿ ಋತುವಿನಲ್ಲೂ ದೊರಕಲಿದೆ. ಏಕೆಂದರೆ ಇಂದು ಹೊಸ ಕೆರೆಗಳ ನಿರ್ಮಾಣ ಮಾಡಿದರೂ ಸಹ ಅವುಗಳು ಸಹ ಕೇವಲ ಮಳೆಯನ್ನು ಮಾತ್ರ ಅವಲಂಬಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಬರಪೀಡಿತ ಪ್ರದೇಶಗಳನ್ನು ಗುರುತಿಸಿ ಅವುಗಳಿಗೆ ತುಂಬಾ ದೂರದ ಜಲಾಶಯಗಳಿಂದ ನೀರನ್ನು ತಂದು ಒದಗಿಸುವ ಅನಿವಾರ್ಯತೆ ಇದೆ. ಇದಕ್ಕಾಗಿ ಉದ್ದನೆಯ ಕಾಲುವೆಗಳನ್ನು ರಚಿಸುವುದು ಅಗತ್ಯವಾಗಿದೆ. ಇದರೊಂದಿಗೆ ಅವಶ್ಯಕತೆ ಎನಿಸಿದರೆ ನದಿಗಳಿಗೆ ಅಡ್ಡಲಾಗಿ ಕೆಲ ಹೊಸ ಅಣೆಕಟ್ಟುಗಳನ್ನು ನಿರ್ಮಿಸಿ, ಅಲ್ಲಿ ವ್ಯರ್ಥವಾಗಿ ಹರಿಯುವ ನೀರನ್ನು ತಡೆದು ಅವುಗಳಿಂದ ಕೆರೆಗಳಿಗೆ ನೀರನ್ನು ತುಂಬಿಸುವ ಅಗತ್ಯ ಕಾರ್ಯವನ್ನು ನಮ್ಮ ಪ್ರಭುತ್ವಗಳು ಸ್ವ-ಇಚ್ಛೆಯಿಂದ ಕೈಗೊಳ್ಳಬೇಕಿದೆ. ಇವು ಆರ್ಥಿಕವಾಗಿ ಭಾರಿ ಹೊರೆ ಎನಿಸಿದರೂ ಸಹ ಜನತೆಯ ಹಿತದೃಷ್ಟಿಯಿಂದ ಆದರೂ ಈ ಕಾರ್ಯ ಕೈಗೊಳ್ಳಬೇಕಾದ ಅವಶ್ಯಕತೆ ಇದೆ. ಪ್ರಸಕ್ತ ಸರ್ಕಾರ ಭದ್ರ ಮೇಲ್ದಂಡೆ ಯೋಜನೆ ಅಡಿಯಲ್ಲಿ ಜಿಲ್ಲೆಯ ಸುಮಾರು ೩೦೦ ಕೆರೆಗಳಿಗೆ ನೀರು ತುಂಬಿಸುವ ಕಾರ್ಯವನ್ನು ಕೈಗೆತ್ತಿಕೊಂಡಿದ್ದು

ಶ್ಲಾಘನೀಯವೆನಿಸಿದೆ. ಇದೇ ರೀತಿ ತುಂಗಾಭದ್ರಾ ಮತ್ತು ವೇದಾವತಿ ನದಿಯಿಂದ ಇಲ್ಲವೇ ಹಗರಿ ನದಿಯಿಂದ ಮಳೆಗಾಲದಲ್ಲಿ ವ್ಯರ್ಥವಾಗಿ ಹರಿಯುವ ನೀರನ್ನು ತಡೆದು ಜಿಲ್ಲೆಯ ಕೆರೆಗಳಿಗೆ ನೀರೊದಗಿಸುವ ಕಾರ್ಯ ಮಾಡಬೇಕಾದ ಅವಶ್ಯಕತೆ ಇದೆ.

**೨. ಅಂತರ್ಜಲ ಹೆಚ್ಚಿಸಲು ಕೆರೆಗಳಲ್ಲಿ ಮತ್ತೆ ನೀರನ್ನು ಇಂಗಿಸುವುದು**

ಜಲ ಸಮಸ್ಯೆಯ ಪರಿಹಾರಕ್ಕೆ ಕೊಳವೆ ಬಾವಿಗಳ ಮೂಲಕ ಅಂತರ್ಜಲದ ಬಳಕೆ ಒಂದು ಸಮರ್ಥ ಪರಿಹಾರವೆನಿಸಿದೆ. ಇದನ್ನು ಕರ್ನಾಟಕ, ಗುಜರಾತು, ತಮಿಳುನಾಡು ಮತ್ತಿತರ ಪ್ರದೇಶಗಳಲ್ಲಿ ಯಶಸ್ವಿಯಾಗಿ ಪ್ರಯತ್ನಿಸಲಾಗಿದೆ[೨೨]. ಆದರೆ ಇದರಿಂದ ಜಲಮಟ್ಟ ಆಳಕ್ಕೆ ಹೋಗಿ ಇಡೀ ಭೂಮಂಡಲ ಆದ್ರಾವೆಯಾಗಿ ಪರಿವರ್ತನೆಯಾಗುವ ಅಪಾಯವಿದೆ. ಇದಕ್ಕಾಗಿ ತಮಿಳುನಾಡಿನಲ್ಲಿ ಜಿನುಗುವ ಕೊಳಗಳ ಮೂಲಕ ಭೂಮಿಗೆ ಮತ್ತೆ ನೀರನ್ನು ಇಂಗಿಸುವ ಮೂಲಕ ಅಂತರ್ಜಲದ ಮಟ್ಟವನ್ನು ಏರಿಸುವ ಪ್ರಯತ್ನವನ್ನು ಆ ರಾಜ್ಯ ಕಂಡು ಹಿಡಿದಿದೆ. ಇದೊಂದು ಉಪಯುಕ್ತ ಯೋಜನೆಯಾಗಿದೆ. ಭೂಮಿಯೊಳಕ್ಕೆ ನೀರನ್ನು ಮತ್ತೆ ಸೇರಿಸುವ ಒಂದೇ ಒಂದು ಉದ್ದೇಶಕ್ಕಾಗಿ ಜಿಲ್ಲೆಯಲ್ಲಿ ಕೆರೆಗಳನ್ನು ಹೊಸದಾಗಿ ಕಟ್ಟುವುದಕ್ಕೆ ಬದಲಾಗಿ, ಜಿಲ್ಲೆಯ ಹಳೆಯ ಕೆರೆಗಳಲ್ಲಿಯೇ ನೀರನ್ನು ಇಂಗಿಸುವ ಪರಿಹಾರ ಕ್ರಮವನ್ನು ಕೈಗೊಂಡರೆ ಜಲಮಟ್ಟವೂ ಸಹಜವಾಗಿ ಏರುತ್ತದೆ ಮತ್ತು ಇದರಿಂದ ನೀರಾವರಿಗೂ ಅನುಕೂಲ ಆಗುವ ಸಾಧ್ಯತೆ ಇದೆ.

**೩. ಕೆರೆಗಳ ಹೂಳು ತೆಗೆಯುವುದರೊಂದಿಗೆ ಪ್ರವಾಹ ನಿಯಂತ್ರಣ**

ಜಲ ಪ್ರವಾಹ ತಡೆಯಲು ಅಮೆರಿಕಾದ ಟಿನಿಸ್ಸಿ ಕಣಿವೆ ಯೋಜನೆ ಮತ್ತು ಭಾರತದಲ್ಲಿ ದಾಮೋದರ ನದಿ ಕಣಿವೆ ಯೋಜನೆಗಳು ಯಶಸ್ವಿಯಾಗಿವೆ. ಪ್ರವಾಹ ನಿಯಂತ್ರಣದಲ್ಲಿ ಈ ಬೃಹತ್ ಯೋಜನೆಗಳು ಏನು ಮಾಡಿವೆಯೋ ಅದನ್ನು ಶತಮಾನಗಳಿಂದಲೂ ಕೆರೆಗಳು ಮಾಡುತ್ತ ಬಂದಿವೆ. ಇಂದಿನ ವರ್ಷಗಳಲ್ಲಿ ಕೆರೆಗಳಂತಹ ಸಾಂಪ್ರದಾಯಿಕ ನೀರಾವರಿ ಮೂಲಗಳ ಬಗೆಗಿನ ಮಹಾ ಅಲಕ್ಷ್ಯದಿಂದ ದಕ್ಷಿಣ ಭಾರತದ ಅಸಂಖ್ಯಾತ ಕೆರೆಗಳ ಜಲಾನಯನ ಪ್ರದೇಶದಲ್ಲಿ ಮೇಲು ಭಾಗದಿಂದ ನೀರಿನ ಹರಿವು ಹೆಚ್ಚಿ, ಕೆಳ ಪ್ರದೇಶಗಳಲ್ಲಿ ನೆರೆ ಉಂಟಾಗಿದೆ. ಇದನ್ನು ತಪ್ಪಿಸಬೇಕಾದರೆ ಜಿಲ್ಲೆಯ ಕೆರೆಗಳಲ್ಲಿ ತುಂಬಿರುವ ಹೂಳನ್ನು ತೆಗೆದರೆ ಪ್ರವಾಹದ ಮಟ್ಟವನ್ನು ತಗ್ಗಿಸಲು ಸಹಕಾರಿಯಾಗಲಿದೆ.

**೪. ಬರ ಮತ್ತು ಜಲಮಟ್ಟವನ್ನು ಉಳಿಸಲು ಸಹಾಯಕವಾಗುವಂತೆ ಕೆರೆಗಳನ್ನು ಮಾರ್ಪಾಡು ಮಾಡುವುದು.**

ಇತರೆಡೆಯಂತೆ ಜಿಲ್ಲೆಯ ಕೆರೆಗಳು ಬರಗಾಲದಲ್ಲಿ ನೆರವು ಹಾಗು ಭೂಮಿಯ ಒಳಗಿನ ನೀರಿನ ಮಟ್ಟವನ್ನು ಏರಿಸಲು ಸಹ ಸಹಕಾರಿಯಾಗಿವೆ. ಈ ಹಿನ್ನೆಲೆಯಲ್ಲಿನ ಜಿಲ್ಲೆಯಲ್ಲಿರುವ ಕೆರೆಗಳನ್ನು, ಇಂದಿನ ಸವಾಲುಗಳನ್ನು ಸಮರ್ಥವಾಗಿ ಎದುರಿಸುವ ನಿಟ್ಟಿನಲ್ಲಿ ಮಾರ್ಪಾಡುಗೊಳಿಸುವ ಅವಶ್ಯಕತೆ ಇದೆ. ಕೆರೆಗೆ ಮಳೆ ನೀರು ಹರಿದು ಬರುವ ಅಡೆತಡೆಗಳನ್ನು ತೆಗೆದು ಹಾಕಿ, ಕೆರೆ ತುಂಬಲು ಬೇಕಾದ ಅಗತ್ಯ ಕ್ರಮ ಕೈಗೊಳ್ಳಬೇಕಿದೆ. ಒಂದು ವೇಳೆ ಕೆರೆ ಭರ್ತಿಯಾದಲ್ಲಿ ಬರಲಿರುವ ಬರಗಾಲವನ್ನು ಸಮರ್ಥವಾಗಿ ಎದರಿಸಬಹುದು. ಜನ, ಜಾನುವಾರುಗಳಿಗೆ ಕುಡಿಯುವ ನೀರನ್ನು ಒದಗಿಸುವ ಜೊತೆಗೆ ನೀರಾವರಿಗೂ ಕೆರೆಯಿಂದ ಅನುಕೂಲವಾಗಲಿದೆ. ಅಲ್ಲದೇ ಕೆರೆ ತುಂಬುವುದರಿಂದ

ಅನೇಕ ತೆರೆದ ಬಾವಿಗಳಿಗೆ ಮತ್ತು ಕೊಳವೆ ಬಾವಿಗಳಿಗೂ ನೀರು ಒದಗುವುದಲ್ಲದೇ ನೀರಿನ ಮಟ್ಟ ಏರಲು ಸಹಾಯಕವಾಗಿದೆ. ೧೯೦೧ರ ನೀರಾವರಿ ಆಯೋಗದ ದೃಷ್ಟಿಯಲ್ಲಿ ಕೆರೆಗಳು "ಸಾಧಾರಣ ದಿನಮಾನಗಳಲ್ಲಿ ಅವು ಮಾಡುವ ಒಳ್ಳೆಯ ಕೆಲಸ, ರೈತರು ಬರಗಾಲದ ವರ್ಷವನ್ನು ದಾಟಲು ಸಹಾಯಕ. ಅತ್ಯಂತ ಒಣ ವರ್ಷದಲ್ಲೂ, ಅವು ಅಂತರ್ಜಲದ ಮಟ್ಟ ಉಳಿಸಲು ನೆರವಾಗುತ್ತವೆ. ಮುಕ್ಕಾಲು ಭಾಗ ಬಾವಿಗಳೆಲ್ಲ ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ ಕೆರೆಗಳನ್ನೇ ಅವಲಂಬಿಸಿವೆ" ಎನ್ನುವ ಮಾತು ಇಲ್ಲಿ ಉಲ್ಲೇಖನೀಯ[೨೨].

**೫. ಕೆರೆಗಳನ್ನು ಮೀನುಗಾರಿಕೆಗೆ ಸಹಾಯಕವಾಗುವಂತೆ ಮಾಡುವುದು**

ಜಿಲ್ಲೆಯ ಕೆರೆಗಳನ್ನು ಮೀನುಗಾರಿಕೆಯ ಅಭಿವೃದ್ಧಿಗೆ ಪೂರಕವಾಗುವ ಹಾಗೇ ಮಾಡಿದಲ್ಲಿ ಅದರಿಂದ ಕೆರೆಗಳಿಗೆ ಆದಾಯವು ಹೆಚ್ಚುತ್ತದೆ. ಅಲ್ಲದೇ ಕೆರೆಗಳು ಸ್ವಚ್ಛವಾಗಲು, ನೀರು ಶುದ್ಧಿಯಾಗಿ, ತಿಳಿಯಾಗಲು ಸಹಕಾರಿಯಾಗಿದೆ. ನಮ್ಮ ದೇಶದಲ್ಲಿ ಜಲಚರ ಕೃಷಿಯನ್ನು ಯಶಸ್ವಿಯಾಗಿ ನಡೆಸಲು ಸಾಧ್ಯತೆಯುಳ್ಳ ವಿಶಾಲ ಪ್ರದೇಶವಿದೆ. ಆದರೆ ಈ ಕೃಷಿಗೆ ಅಗತ್ಯವಾದ ಸಂಶೋಧನ ಯತ್ನವಾಗಲಿ, ಸರ್ಕಾರಿ ಬೆಂಬಲವಾಗಲಿ ಬೇಸಾಯಕ್ಕೆ ಸಿಕ್ಕಂತೆ ಇದಕ್ಕೆ ಸಿಕ್ಕಿಲ್ಲ. ಭಾರತದ ಅರ್ಥವ್ಯವಸ್ಥೆಯ ಅಂಗವಾಗಿ, ಆಹಾರ ಹೆಚ್ಚಳ, ಉದ್ಯೋಗ ಸೃಷ್ಟಿ ಹಾಗೂ ಆಹಾರ ಪುಷ್ಟಿಯ ಮಟ್ಟದ ಏರಿಕೆ, ಇವುಗಳಲ್ಲಿ ಒಳನಾಡು ಮೀನುಗಾರಿಕೆಗೆ ಪ್ರಮುಖ ಪಾತ್ರವಿದೆ. ಚಿತ್ರದುರ್ಗ ಮೀನುಗಾರಿಕೆ ಇಲಾಖೆ ಮತ್ತು ಜಿಲ್ಲಾ ಪರಿಷತ್ತು ಒಳನಾಡು ಮೀನುಗಾರಿಕೆಗೆ ಕೆರೆಗಳನ್ನು ಬಳಸಿಕೊಳ್ಳಬೇಕಾದ ಅವಶ್ಯಕತೆ ಇದೆ. ಈ ಮೂಲದಿಂದ ಬರುವ ಆದಾಯವು ಇಲಾಖೆಗೆ ಮತ್ತು ಜಿಲ್ಲಾ ಪರಿಷತ್ತಿಗೆ ಲಾಭದಾಯಕವಾಗಿರುವುದರ ಜೊತೆಗೆ ಕೆರೆಗಳನ್ನು ಸುಸ್ಥಿತಿಯಲ್ಲಿ ಇರಿಸುವುದಕ್ಕೂ ಸಹಾಯಕವಾಗಲಿದೆ.

**೬. ಕೆರೆಗಳನ್ನು ಹಸಿರು ವಲಯವನ್ನಾಗಿ ಮಾರ್ಪಡಿಸುವುದು**

ಜಿಲ್ಲೆಯ ಕೆರೆಗಳು ಸುತ್ತಮುತ್ತಲ ಪ್ರದೇಶಗಳ ಉಷ್ಣತೆಯನ್ನು ಕಡಿಮೆ ಮಾಡುತ್ತವೆ. ಅವು ಅಕ್ಕಪಕ್ಕದ ಅಂದವನ್ನು ಹೆಚ್ಚಿಸುತ್ತವೆ. ಈ ಹಿನ್ನೆಲೆಯಲ್ಲಿ ಕೆರೆಗಳನ್ನು ಪ್ರಕೃತಿಯ ಹಸಿರು ವಲಯವನ್ನಾಗಿ ಮಾರ್ಪಾಡು ಮಾಡುವ ಅವಶ್ಯಕತೆ ಇದೆ. ಕೆರೆಯ ಸುತ್ತ ಹುಲ್ಲು ಮತ್ತು ಗಿಡ ಮರಗಳನ್ನು ಬೆಳೆಸುವುದರಿಂದ ಆ ಪರಿಸರದಲ್ಲಿ ಮೌಲ್ಯವುಳ್ಳ ಮತ್ತು ಆರೋಗ್ಯಪೂರ್ಣವಾದ ಹಸಿರು ಕಂಗೊಳಿಸುತ್ತದೆ. ಇದು ಮಣ್ಣನ್ನು ಹಿಡಿದಿಡುತ್ತದೆ. ಜೊತೆಗೆ ಜೈವಿಕ ಪದಾರ್ಥವನ್ನೂ ಒದಗಿಸುತ್ತದೆ. ಗಾಳಿ ಮತ್ತು ನೀರಿನಿಂದ ಮಣ್ಣು ಕೊಚ್ಚಿ ಹೋಗದಂತೆ ಅತ್ಯಂತ ಶೀಘ್ರವಾಗಿ ಅತ್ಯಂತ ಸೊಗಸಾಗಿ ಹಿಡಿದಿಡುವಂಥದು ಹುಲ್ಲು. ಅದು ಅತ್ಯಂತ ದಕ್ಷವಾಗಿ ಮಳೆ ನೀರನ್ನು ಹಿಡಿದಿಡುವುದೂ ಹೌದು. ಹೂಳನ್ನು ತಡೆಹಿಡಿದು, ಅದು ಕೊಚ್ಚಿ ಹೋಗದಂತೆ ಮಾಡಬಲ್ಲದು. ಈ ಹಿನ್ನೆಲೆಯಲ್ಲಿ ಜಿಲ್ಲೆಯಲ್ಲಿನ ಕೆರೆಗಳಲ್ಲಿ ವೆಟಿವರ್ ಎನ್ನುವಂಥ ಕೆಲವು ಜಾತಿಯ ಹುಲ್ಲನ್ನು ಅವುಗಳ ಕಟ್ಟೆಗಳ ಸುತ್ತ ನೆಟ್ಟರೆ ಅದು ಬೇಲಿಯಾಗಿ ಬೆಳೆದು, ನೀರು ಭೂಮಿ ಒಳಕ್ಕೆ ಹೋಗುವಂತೆ ಮಾಡುತ್ತದೆ. ಹೊಳೆಗಳಿಗೆ, ನದಿಗಳಿಗೆ ಇಳಿಜಾರಿನಲ್ಲಿ ಹರಿದು ಹೋಗದಂತೆ ತಡೆಯುತ್ತದೆ. ಅಂಥ ಬೇಲಿಗಳನ್ನು ಬೆಳೆಸುವುದು, ಕೆರೆಗಳ ಉಳಿಸುವಿಕೆಗೆ ತುಂಬಾ ಉಪಯುಕ್ತ ಪರಿಹಾರ ಕ್ರಮವಾಗಿದೆ[೨೩].

೭. ಪ್ರವಾಸೋದ್ಯಮದ ತಾಣಗಳನ್ನಾಗಿ ಕೆರೆಗಳನ್ನು ರೂಪಿಸುವುದು

ರಾಜ್ಯದ ಇತರೆಡೆಯಂತೆ ಜಿಲ್ಲೆಯ ಕೆರೆಗಳನ್ನು ಪ್ರವಾಸೋದ್ಯಮದ ತಾಣಗಳಾಗಿ ಅಭಿವೃದ್ಧಿಪಡಿಸುವ ಅವಶ್ಯಕತೆ ಇದೆ. ಚಂದ್ರವಳ್ಳಿ ಕೆರೆಯಂತೆಯೇ ಜಿಲ್ಲೆಯ ಇತರೆ ಪ್ರಮುಖ ಕೆರೆಗಳನ್ನು ಪ್ರವಾಸೋದ್ಯಮದ ತಾಣಗಳಾಗಿ ಅಭಿವೃದ್ಧಿಪಡಿಸಿ, ಅಲ್ಲಿ ಬೋಟಿಂಗ್ ನಡೆಸಲು ಮತ್ತು ಪಕ್ಷಿ ವೀಕ್ಷಣೆಗೆ ಅವಕಾಶ ಮಾಡಿಕೊಟ್ಟರೆ ಜಿಲ್ಲೆಯಲ್ಲಿ ಪ್ರವಾಸೋಧ್ಯಮವು ಅಭಿವೃದ್ಧಿಯಾಗಲಿದೆ. ಇದರೊಂದಿಗೆ ಕೆರೆಗಳು ಬಹುಕಾಲ ಉಳಿಯುತ್ತವೆ ಮತ್ತು ನಮ್ಮ ಸ್ಥಳೀಯ ಸರ್ಕಾರಗಳಿಗೆ ಅವು ಆದಾಯದ ಮೂಲವು ಆಗಲಿವೆ.

೮. ಕೃಷಿ ಮತ್ತು ತೋಟಗಾರಿಕೆ ಅಭಿವೃದ್ಧಿಗಾಗಿ ಕೆರೆಗಳನ್ನು ರೂಪಿಸುವುದು

ಸುಧಾರಿತ ಕೆರೆಗಳ ಅಚ್ಚುಕಟ್ಟು ಪ್ರದೇಶದಲ್ಲಿ ರೈತರು ಆಧುನಿಕ ತಾಂತ್ರಿಕತೆಗಳನ್ನು ಅಳವಡಿಸಿಕೊಂಡು ಹೆಚ್ಚಿನ ಕೃಷಿ ಉತ್ಪಾದನೆಯನ್ನು ಕೆರೆಗಳಿಂದ ಪಡೆಯಲು ಸಾಧ್ಯವಿದೆ. ಅಗತ್ಯವಿರುವ ಮುಂಗಾರು, ಹಿಂಗಾರು, ಬೇಸಿಗೆ ಹಂಗಾಮಿನಲ್ಲಿ ನೀರು ನಿರ್ವಹಣೆ, ಆಹಾರ, ಬೆಳೆ, ತೋಟಗಾರಿಕಾ ಬೆಳೆ ಮತ್ತು ಮೇವಿನ ಬೆಳೆಗಳ ಕ್ಷೇತ್ರ ಪ್ರಾತ್ಯಕ್ಷಿಕೆಗಳನ್ನು ಕೃಷಿ ವಿಶ್ವವಿದ್ಯಾಲಯಗಳ ಸಹಯೋಗದೊಂದಿಗೆ ಅನುಷ್ಠಾನಗೊಳಿಸಿದಲ್ಲಿ ಕೆರೆಗಳ ಅಭಿವೃದ್ಧಿಗೆ ಹೊಸ ಅರ್ಥ ಬರಲಿದೆ.

೯. ಕೆರೆ ಆಧಾರಿತ ಆರ್ಥಿಕ ಕ್ರಮಗಳ ಅಭಿವೃದ್ಧಿ

ಕೆರೆಗಳು ಆರ್ಥಿಕ ದೃಷ್ಟಿಯಿಂದ ಆದಾಯದ ಮೂಲವಾಗಿರುವ ಕಾರಣಕ್ಕಾಗಿ ಅವುಗಳನ್ನು ಪುನರಾಭಿವೃದ್ಧಿ ಮಾಡಬೇಕಿದೆ. ಅವುಗಳಲ್ಲಿ ಮೀನು ಕೃಷಿಯನ್ನು ಮೀನುಗಾರರಿಗೆ ಸೂಕ್ತವಿರುವ ಆಯ್ದ ಕೆರೆಗಳಲ್ಲಿ ಅಭಿವೃದ್ಧಿಪಡಿಸುವುದು. ಅಲ್ಲದೇ ಲಭ್ಯವಿರುವ ಕೆರೆಯ ಮುಂದಂಡೆಯ ಜಾಗದಲ್ಲಿ ಜೀವ ವೈವಿದ್ಯತೆಯನ್ನು ಕಾಪಾಡಲು ವಿವಿಧ ತಳಿಗಳ ಸಸಿಗಳನ್ನು ನೆಟ್ಟು ಪರಿಸರ ನಿರ್ವಹಣೆ ಮಾಡುವುದು. ಅದರಂತೆಯೇ ಕೆರೆ ಪ್ರದೇಶದಲ್ಲಿ ಸಮಗ್ರ ಮೇವಿನ ಅಭಿವೃದ್ಧಿ ಮತ್ತು ಪಶು ಸಂಗೋಪನೆಯನ್ನು ಕೈಗೊಳ್ಳುವುದರಿಂದಲೂ ಕೆರೆಗಳು ಜನರ ಆದಾಯದ ಮೂಲ ಮತ್ತು ಆರ್ಥಿಕ ಮೂಲವಾಗಿಯೂ ನಿಲ್ಲಬಲ್ಲವು[೨೫].

ಕೆರೆಗಳ ಪುನರಾಭಿವೃದ್ಧಿ ಕ್ರಮಗಳು

ಹತ್ತೊಂಬತ್ತನೆಯ ಶತಮಾನದ ಕೊನೆಯವರೆಗೂ ಕೆರೆಗಳು ಜನ ಹಾಗೂ ದನಗಳ ಆಹಾರದ ವಿಷಯದಲ್ಲಿ ಹಳ್ಳಿಗಳನ್ನು ಸ್ವಯಂಪೂರ್ಣವಾಗಿ ಮಾಡಿದ್ದವು. ರಾಜ್ಯದ ಬಹುಪಾಲು ಸಂಪತ್ತನ್ನು ಉತ್ಪತ್ತಿ ಮಾಡಿದ್ದವು. ಅಭಾವ ಹಾಗೂ ಪ್ರವಾಹಗಳ ವಿರುದ್ಧ ರಕ್ಷಣೆ ಒದಗಿಸಿದ್ದವು. ಬಾವಿಗಳಲ್ಲಿ ನೆಲಮಟ್ಟಕ್ಕೆ ಹತ್ತಿರದಲ್ಲೇ ನೀರು ಸಿಗುವಂತೆ ಅಂತರ್ಜಲ ಮಟ್ಟ ಮೇಲುಗಡೆ ಇರುವಂತೆ ಮಾಡಿದ್ದವು. ಮಣ್ಣು ಕೊಚ್ಚಿ ಹೋಗುವುದನ್ನು ತಡೆದಿದ್ದವು. ಸುತ್ತಲ ಪ್ರದೇಶವನ್ನು ತಂಪಾಗಿ ಚೆಂದವಾಗಿ ಹಾಗೂ ಪರಿಸರ ಸಮಸ್ಯೆಗಳಿಂದ ಮುಕ್ತವಾಗಿ ಇರಿಸಿದ್ದವು. ಒಟ್ಟಿನಲ್ಲಿ ೧೯೦೧ರ ನೀರಾವರಿ ಆಯೋಗದ ಪ್ರಕಾರ ಚುಟುಕಾಗಿ ಹೇಳುವುದಾದರೆ ಕೆರೆಗಳು ಜನತೆಯ ಜೀವ ಆಗಿದ್ದವು. ಆ ಕಾರಣಕ್ಕಾಗಿ ಮೇಲಿನ ಪರಿಹಾರ ಕ್ರಮಗಳಂತೆಯೇ ಅವುಗಳ ಪುನರಾಭಿವೃದ್ಧಿ ಕ್ರಮಗಳನ್ನು ಕೈಗೊಳ್ಳಬೇಕಾದ ಅವಶ್ಯಕತೆ ಇದೆ.

"ನೀರು ಜೀವ ಜಲ, ನೀರನ್ನು ಮಿತವಾಗಿ ಬಳಸಿ, ನೀರಿನ ಸಂರಕ್ಷಣೆ ನಮ್ಮೆಲ್ಲರ ಹೊಣೆ, ಶುದ್ಧ ನೀರಿನ ಬಳಕೆಯಿಂದ ಸ್ವಚ್ಛ ಆರೋಗ್ಯವಿದೆ, ಆದ್ದರಿಂದ ನೀರನ್ನು ಮಲೀನಗೊಳಿಸಬೇಡಿ, ಒಂದುವೇಳೆ ಹಾಗೇ ಮಾಡಿದರೆ ಅಮೃತದಲ್ಲಿ ವಿಷ ಬೆರೆಸಿದಂತಾಗುತ್ತದೆ" ಎನ್ನುವ ಮಾತಿನಂತೆ ನೀರಿಗೆ ಮೂಲವಾಗಿರುವ ಕೆರೆಗಳನ್ನು ಸಂರಕ್ಷಿಸಬೇಕಾದ ಅಗತ್ಯವಿದ್ದು, ಅದಕ್ಕಾಗಿ ಅವುಗಳ ಪುನರಾಭಿವೃದ್ಧಿ ಕ್ರಮಗಳನ್ನು ಕೈಗೊಳ್ಳುವ ತುರ್ತು ಅವಶ್ಯಕತೆ ಇದೆ. ಜಿಲ್ಲೆಯಲ್ಲಿ ನಮ್ಮ ಪೂರ್ವಜರು ಕಟ್ಟಿಸಿದ ಬಹಳ ಕೆರೆಗಳು ಇಂದು ನಮ್ಮಿಂದ ಕಣ್ಮರೆಯಾಗಿವೆ. ಕಾಲಕಾಲಕ್ಕೆ ದುರಸ್ತಿಯಾದ ಹಾಗೂ ಜೀರ್ಣೋದ್ಧಾರವಾದಂತಹ ಕೆರೆಗಳು ಮಾತ್ರ ಇಂದು ಉಳಿದುಕೊಂಡಿವೆ. ಅವು ಸಹ ಕಳೆ, ಹೂಳು ತುಂಬಿಕೊಂಡು ಅಸಡ್ಡೆಗೆ ಒಳಗಾಗಿವೆ. ಹಾಗಾಗಿ ಅಂತಹ ಕೆರೆಗಳ ನಿರ್ವಹಣೆ ಮತ್ತು ಸಂರಕ್ಷಣೆ ಮಾಡುವುದು ನಮ್ಮೆಲ್ಲರ ಹೊಣೆಯಾಗಿದೆ.

ಸರ್ಕಾರವು ಸಹ ಈ ಬಗ್ಗೆ ಕಾರ್ಯ ತತ್ಪರವಾಗಬೇಕಾಗಿದೆ. ಕೆರೆಗಳ ಏರಿ, ಕೋಡಿ, ತೂಬು ಮತ್ತು ಕಾಲುವೆಗಳನ್ನು ದುರಸ್ತಿಗೊಳಿಸುವ ಮೂಲಕ ಕೆರೆಗಳನ್ನು ಸಂರಕ್ಷಿಸಬೇಕಾಗಿದೆ. ಇದರಿಂದ ಕೆರೆಗಳು ಹೆಚ್ಚು ಕಾಲ ಸುವ್ಯವಸ್ಥಿತವಾಗಿದ್ದು, ಜನರಿಗೆ ಹೆಚ್ಚು ಉಪಯುಕ್ತವಾಗುತ್ತವೆ. ಇವುಗಳೊಂದಿಗೆ ಈ ಕೆಳಕಂಡ ಸುಧಾರಣಾ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವ ಮೂಲಕ ಶಿಥಿಲವಾಗಿರುವ ಕೆರೆಗಳನ್ನು ಪುನರಾಭಿವೃದ್ಧಿ ಮಾಡಬಹುದಾಗಿದೆ.

**ಕೆರೆಗಳ ಭೌತಿಕ ಪುನರಾಭಿವೃದ್ಧಿ ಸಂರಕ್ಷಣಾ ಕ್ರಮಗಳನ್ನು ಹಮ್ಮಿಕೊಳ್ಳುವುದು**

ಕೆರೆಗಳು ಬಹುಕಾಲ ಉಳಿಯುವಂತಾಗಲೂ ಈ ಮುಂದಿನ ಭೌತಿಕ ಪುನಾರಭಿವೃದ್ಧಿ ಸಂರಕ್ಷಣಾ ಕ್ರಮಗಳಿಂದ ಕೆರೆಗಳನ್ನು ಅಭಿವೃದ್ಧಿಪಡಿಸಬಹುದು. ಸಾಮಾನ್ಯವಾಗಿ ಕೆರೆಯ ಸಂರಕ್ಷಣೆ ಹೀಗಿರುತ್ತದೆ.

**ಕೆರೆಗಳಲ್ಲಿ ಮತ್ತು ಸುತ್ತಲು ಬೆಳೆದಿರುವ ಗಿಡಗಂಟೆಗಳನ್ನು ತೆಗೆಸುವುದು**

ಜಿಲ್ಲೆಯ ಕೆರೆಯ ಏರಿ ಮೇಲೆ ಕೋಡಿ, ಕೆರೆಯಂಗಳದಲ್ಲಿ ಗಿಡ ಗಂಟೆಗಳು ಬೆಳೆದಿದ್ದರೆ ಬೇರು ಸಮೇತ ತೆಗೆದು ಅವುಗಳನ್ನು ಸುಟ್ಟು ಹಾಕಿ ಆ ಮೂಲಕ ಕೆರೆಗಳ ಸಂರಕ್ಷಿಸಬಹುದು. ಕೆರೆಗಳನ್ನು ಸಂರಕ್ಷಿಸಿದರೆ ಅವುಗಳನ್ನು ಬಹುಕಾಲದವರೆಗೆ ಉಳಿಸಬಹುದು.

**ಕೆರೆಗಳ ಏರಿ ಅಭಿವೃದ್ಧಿಪಡಿಸುವುದು**

ಜಿಲ್ಲೆಯ ಕೆರೆಗಳ ಏರಿ ಅಭಿವೃದ್ಧಿ (ಏರಿಯನ್ನು ಬಲಪಡಿಸುವುದು)ಪಡಿಸುವುದರಿಂದ ಕೆರೆಗಳನ್ನು ಸಂರಕ್ಷಿಸಿ ಅವುಗಳನ್ನು ಬಹುಕಾಲದವರೆಗೆ ಉಳಿಸಬಹುದು. ಏರಿಯನ್ನು ಬಲಪಡಿಸುವಾಗ ಅಥವಾ ಎತ್ತರಿಸುವಾಗ ಹಾಲಿ ಇರುವ ಏರಿ ಮಣ್ಣಿನ ಭಾಗ ಹೊಸದಾಗಿ ಹಾಕುವ ಮಣ್ಣಿನೊಂದಿಗೆ ಕೂಡಿಕೊಳ್ಳುವಂತೆ ಮುಂಜಾಗ್ರತೆಯನ್ನು ವಹಿಸಬೇಕು.

- ಕೆರೆ ಅಂಗಳ ಹಾಗೂ ನಾಲೆಯ ತಳದಿಂದ ಕಾಲಕಾಲಕ್ಕೆ ಹೂಳು ತೆಗೆಯುವುದು.
- ಮಳೆಯಿಂದಾಗಲಿ ಅಥವಾ ಇತರ ಕಾರಣಗಳಿಂದಾಗಲಿ ಮಣ್ಣು ಕಟ್ಟೆಗೆ ಎಲ್ಲಿಯಾದರೂ ಹಾನಿಯಾಗಿದ್ದಲ್ಲಿ ಮಣ್ಣು ಕೆಲಸ ಮಾಡಿ ಅದನ್ನು ಸರಿಪಡಿಸುವುದು ಮತ್ತು ತೂಬು, ಕೋಡಿಗಳಿಗೆ ಏನಾದರೂ ಹಾನಿಯಾಗಿದ್ದರೆ, ಕಾಲಕಾಲಕ್ಕೆ ಅದನ್ನು ದುರಸ್ತಿ ಮಾಡುವುದು.

- ಜಲಾನಯನ ಪ್ರದೇಶ ಒತ್ತುವರಿಯಾಗದಂತೆ ಇಟ್ಟುಕೊಳ್ಳುವುದು ಮತ್ತು ಕೆರೆಯ ಅಂಗಳಕ್ಕೆ ಹರಿದು ಬರುವ ಹೂಳನ್ನು ತಡೆಯಲು ವ್ಯವಸ್ಥೆ ಮಾಡುವುದು.
- ಏರಿಯಲ್ಲಿ ಹುತ್ತಗಳಿದ್ದಲ್ಲಿ ಅದನ್ನು ಬಿಲ ಸಮೇತ ತೆಗೆದು, ಆ ಭಾಗಕ್ಕೆ ಮರಳನ್ನು ತುಂಬಬೇಕು.
- ಏರಿಯ ಮೇಲೆ ಉದ್ದಕ್ಕೂ ೨ ಮೀ. ಅಂತರದಲ್ಲಿ ೨೦ ಸೆಂ.ಮೀ. ಆಳತೆಯ ಆಕಾರದಲ್ಲಿ ಮಣ್ಣು ತೆಗೆಯಬೇಕು.
- ಹೊಸ ಮಣ್ಣನ್ನು ಉಪಯೋಗಿಸುವ ಮೊದಲು ಮಣ್ಣನ್ನು ಪರೀಕ್ಷೆ ಮಾಡಿಸಬೇಕು. ಹೊಸ ಮಣ್ಣನ್ನು ತರುವ ಜಾಗದಲ್ಲಿ ಗಿಡಗಳು ಬೆಳೆದಿದ್ದರೆ ತೆಗೆದು, ಸೂಕ್ತ ಸ್ಥಳಕ್ಕೆ ವಿಲೇವಾರಿ ಮಾಡಬೇಕು ಮತ್ತು ನೀರನ್ನು ಹಾಕಿ ಮಣ್ಣನ್ನು ಹದಮಾಡಬೇಕು.
- ಏರಿಯ ಅಗಲಕ್ಕಿಂತ ಸುಮಾರು ೪೫ ಸೆಂ.ಮೀ. ಅಗಲಕ್ಕೆ ಮಣ್ಣಿನ ಪದರ ಹರಡಬೇಕು ಮತ್ತು ಯಾಂತ್ರೀಕೃತ ಗಟ್ಟಿ ಮಾಡುವ ಯಂತ್ರ (ಕಂಪ್ಯಾಕ್ಟರ್)ವನ್ನು ಉಪಯೋಗಿಸಿ, ಮಣ್ಣನ್ನು ಗಟ್ಟಿ ಮಾಡಬೇಕು.
- ಕೆರೆ ಏರಿ ಬದಿಗೆ ಹುಲ್ಲು ಹೆಪ್ಪು ಅಥವಾ ಕಲ್ಕಟ್ಟಣೀ (ರಿವೆಟ್ಟಿಂಡ್) ಹಾಕಬೇಕು. ಇದರಿಂದ ಏರಿಯ ಮಣ್ಣು ಕುಸಿಯುವುದಿಲ್ಲ.
- ತೂಬುಗಳಿಗೆ ಕೊಂತ ಸರಳು ಅಳವಡಿಸುವುದು.
- ಕಾಲುವೆಗಳ ಮತ್ತು ಪೋಷಕ ಕಾಲುವೆಗಳ ಹೂಳನ್ನು ತೆಗೆಸುವುದು.
- ಕೆರೆಯಂಗಳದಲ್ಲಿರುವ ಹೂಳನ್ನು ತೆಗೆದು ಅದನ್ನು ರೈತರ ಹೊಲಗಳಿಗೆ ಹಾಕಿಸುವುದು.

**ಕೆರೆಗಳ ಪುನರಾಭಿವೃದ್ಧಿ ಮತ್ತು ಸಂರಕ್ಷಣೆಯಲ್ಲಿ ಜನಸಾಮಾನ್ಯರ ಪಾತ್ರ ಮತ್ತು ಸಲಹೆಗಳು**

ಸರ್ಕಾರವು ಏನೇ ಕಾನೂನುಗಳನ್ನು ಹಾಗೂ ಸುಧಾರಣಾ ಕ್ರಮಗಳನ್ನು ಕೈಗೊಂಡರೂ ಸಹ ಅದು ಯಶಸ್ವಿಯಾಗಿ ಜಾರಿಗೊಳ್ಳಲು ಅಥವಾ ಸಾಫಲ್ಯ ಹೊಂದಬೇಕೆಂದರೆ ಸಾರ್ವಜನಿಕರ ಸಹಕಾರ ಮತ್ತು ಬೆಂಬಲ ಅತಿ ಅವಶ್ಯಕವಾಗಿದೆ. ಜನಸಾಮಾನ್ಯರ ಸಹಕಾರವಿಲ್ಲದಿದ್ದರೆ ಇಲ್ಲಿ ಕಾರ್ಯಕ್ರಮಗಳು ವಿಫಲವಾಗುತ್ತವೆ. ಆದ್ದರಿಂದ ಜನಸಾಮಾನ್ಯರಾದ ನಾವು ಸಹ ಸರ್ಕಾರದ ಯೋಜನೆಗಳಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಕೈಜೋಡಿಸುವುದು ಒಳಿತು. ಅಷ್ಟೇ ಅಲ್ಲದೆ ಜನರು ಕೆಲವು ಸರಳ ನಿಯಮಗಳನ್ನು ಪಾಲಿಸಬೇಕು ಅವುಗಳೆಂದರೆ;

೧. ಜಿಲ್ಲೆಯ ಜನಸಾಮಾನ್ಯರಲ್ಲಿ ಮತ್ತು ರೈತರಲ್ಲಿ ಕೆರೆಯಿಂದಾಗುವ ಅನುಕೂಲ ಮತ್ತು ಅದರ ರಕ್ಷಣೆಯ ಜವಾಬ್ದಾರಿಯ ಬಗೆಗೆ ಅರಿವು/ಜಾಗೃತಿ ಮೂಡಿಸಿ ಆ ಮೂಲಕ ಕೆರೆಗಳ ಸಂರಕ್ಷಣೆಯ ಜವಬ್ದಾರಿಯನ್ನು ಅವರಿಗೆ ವಹಿಸುವುದು. ಇದರಿಂದ ಕೆರೆಗಳನ್ನು ಸಂರಕ್ಷಿಸಿ ಅವುಗಳನ್ನು ಬಹುಕಾಲದವರೆಗೆ ಉಳಿಸಬಹುದು.

೨. ಕೆರೆಗಳಲ್ಲಿ ಕಸದ ರಾಶಿಯನ್ನು ತಿಪ್ಪೇ ಹಾಕದೇ ಇರುವುದು ಮತ್ತು ಕೆರೆಗಳಲ್ಲಿ ನಿತ್ಯ ಕರ್ಮಗಳನ್ನು ಮಾಡದಿರುವುದು ಹಾಗೂ ಕೆರೆಗಳಲ್ಲಿ ಜನರು ಪಾತ್ರೆ, ಬಟ್ಟೆ, ಜಾನುವಾರುಗಳನ್ನು, ವಾಹನಗಳನ್ನು ತೊಳೆಯದಂತೆ ನೋಡಿಕೊಳ್ಳುವುದು.

೩. ಕೆರೆಗಳಿಗೆ ಚರಂಡಿ, ಕಾರ್ಖಾನೆಯ ಮಾಲಿನ್ಯ ನೀರನ್ನು ಮತ್ತು ತ್ಯಾಜ್ಯವನ್ನು ಬಿಡದಿರುವುದು ಮತ್ತು ಕೆರೆಯ ಸುತ್ತಲಿನ ಪರಿಸರದಲ್ಲಿ ಯಾವುದೇ ಕೈಗಾರಿಕೆಗಳು ಸ್ಥಾಪನೆಯಾಗದಂತೆ ನೋಡಿಕೊಂಡು ಆ ಮೂಲಕ ಅಲ್ಲಿನ ಪರಸರ ಮಾಲಿನ್ಯವಾಗದಂತೆ ನೋಡಿಕೊಳ್ಳುವುದು.
೪. ಕೆರೆಯ ನೀರನ್ನು ಅನಾವಶ್ಯಕವಾಗಿ ಪೋಲು ಮಾಡದಿರುವುದು ಮತ್ತು ಮಲೀನಗೊಳಿಸದಿರುವುದು ಹಾಗೂ ಕೆರೆಯ ನೀರನ್ನು ನಿಯಮ ಬಾಹಿರವಾಗಿ ಬಳಸದಂತೆ ನೋಡಿಕೊಳ್ಳುವುದು.
೫. ಕೆರೆಗಳನ್ನು ಒತ್ತುವರಿ ಮಾಡದಿರುವುದು ಮತ್ತು ಕೆರೆ ಅಂಗಳದಲ್ಲಿ ಅನಾವಶ್ಯಕ ಕಟ್ಟಡಗಳನ್ನು ಕಟ್ಟದಂತೆ ಎಚ್ಚರ ವಹಿಸುವುದು.
೬. ಐತಿಹಾಸಿಕ ಕೆರೆಗಳಲ್ಲಿ, ಪ್ರವಾಸಿಗರು ಬೇಕಾಬಿಟ್ಟಿಯಾಗಿ ತಾವು ಬಳಸಿದ ಪ್ಲಾಸ್ಟಿಕ್ ಕವರ್, ಬಾಟಲ್, ಬಟ್ಟೆ, ಚಪ್ಪಲಿ ಮುಂತಾದ ತ್ಯಾಜ್ಯ ವಸ್ತುಗಳನ್ನು ನೀರಿಗೆ ಹಾಕದೆ ಇರುವುದು[೬].
೭. ಕೆರೆಗಳಿಗೆ ರಾಸಾಯನಿಕ ವಸ್ತುಗಳನ್ನು ಸಿಂಪಡಿಸದಿರುವುದು ಹಾಗೂ ಆಸ್ಪತ್ರೆಗಳ ಔಷಧಿ, ಮಾತ್ರೆ, ಟಾನಿಕ್ ಇತ್ಯಾದಿ ಅನುಪಯುಕ್ತ ವಸ್ತುಗಳನ್ನು ಕೆರೆಗಳಿಗೆ ಎಸೆಯದಿರುವುದು.

ಹೀಗೆ ಜಲ ಸಂಗ್ರಾಹಕಗಳಾದ ಕೆರೆಗಳನ್ನು ಸಂರಕ್ಷಿಸಿ ಕಾಪಾಡಬೇಕಾದ ಅವಶ್ಯಕತೆ ಇದೆ. ವಿದ್ಯಾವಂತ ಯುವಕರು ಮತ್ತು ನಾಗರೀಕರು ಇತರೆ ಜನಸಾಮಾನ್ಯರಲ್ಲಿ ಅರಿವನ್ನು ಮೂಡಿಸಬೇಕು. ನೀರನ್ನು ನಾವು ಬಳಸಿ ಮುಂದಿನ ಪೀಳಿಗೆಗೂ ಸಂರಕ್ಷಿಸುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ. ಕೆರೆಗಳ ನಿರ್ವಹಣೆ ಮತ್ತು ಸಂರಕ್ಷಣೆ ಕೈಗೊಳ್ಳುವ ದೃಷ್ಟಿಯಿಂದ ಸರ್ಕಾರವು ಇಂದು ಹಲವಾರು ಕಾರ್ಯ ಕ್ರಮಗಳನ್ನು ಹಮ್ಮಿಕೊಂಡಿದೆ. ರಾಜ್ಯ ಸರ್ಕಾರವು ೨೦೦೦-೦೨ರಲ್ಲಿ ಸಣ್ಣ ನೀರಾವರಿ ಇಲಾಖೆ ವತಿಯಿಂದ ಜಲ ಸಂವರ್ಧನ ಯೋಜನಾ ಸಂಘವನ್ನು ಸ್ಥಾಪಿಸಿ, ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಯಲ್ಲಿ ವಿಶ್ವ ಬ್ಯಾಂಕ್‌ನ ಹಣಕಾಸು ನೆರವಿನಿಂದ ಅನುಷ್ಠಾನಗೊಳಿಸಿದ್ದು, ಗ್ರಾಮೀಣ ಪ್ರದೇಶದ ಜನರ ಬಡತನವನ್ನು ಮತ್ತು ಜೀವನ ಶೈಲಿಯನ್ನು ಉತ್ತಮಪಡಿಸಲು ಸಮುದಾಯದವರ ಮೂಲಕ ಕೆರೆಗಳನ್ನು ಪುನಶ್ಚೇತನಗೊಳಿಸುವ ಜವಾಬ್ದಾರಿಯನ್ನು ಸಮುದಾಯಗಳಿಗೆ ವಹಿಸುವ ಮುಖ್ಯ ಗುರಿಯನ್ನು ಹೊಂದಿದೆ.[೭] ಈ ಕಾರ್ಯ ಮತ್ತಷ್ಟು ವಿಸ್ತೃತಗೊಳ್ಳಬೇಕಾದ ಅವಶ್ಯಕತೆ ಇದೆ.

**ಕೊನೆ ಟಿಪ್ಪಣಿಗಳು**

೧. ಜೇಮ್ಸ್ ಮಿಲ್ ಮತ್ತು ಸ್ಮಿತ್ ವಿ.ಎ. ಇವರ ಬರವಣಿಗೆಗಳಲ್ಲಿ ಇದು ವ್ಯಕ್ತವಾಗಿದೆ.
೨. ಆರ್ಕಿಲಾಜಿಕಲ್ ಸರ್ವೇ ಆಫ್ ಇಂಡಿಯಾ-ನವದೆಹಲಿ ಇದನ್ನು ಎ.ಎಸ್.ಐ ಎಂದು ಮತ್ತು ಡೈರೆಕ್ಟರ್ ಆಫ್ ಆರ್ಕಿಯಾಲಾಜಿ ಅಂಡ್ ಮ್ಯೂಸಿಯಂ-ಮೈಸೂರು, ಇದನ್ನು ರಾಜ್ಯ ಪುರಾತತ್ವ ಇಲಾಖೆ ಎನ್ನಲಾಗುತ್ತದೆ. ಇವುಗಳು ಹೊರಡಿಸಿರುವ ಕಾಯ್ದೆಗಳನ್ನು ಹೆಚ್ಚಿನ ಮಾಹಿತಿಗಾಗಿ ನೋಡಿ
೩. ತಿಪ್ಪೇಸ್ವಾಮಿ.ಎಚ್, ೨೦೧೪, ಆದಿಮ, ಪು. ೯೭-೧೦೨
೪. Libaralization, Pravitazation, Globalization

೫. ಆರ್.ಶ್ಯಾಮಶಾಸ್ತ್ರೀ, ೧೯೪೯, ಕೌಟಿಲ್ಯನ ಅರ್ಥಶಾಸ್ತ್ರ, ಪು. ೫೬

೬. ರೈಸ್.ಬಿ.ಎಲ್., ಎಪಿಗ್ರಫಿ ಕರ್ನಾಟಕದ ವಿವಿಧ ಸಂಪುಟಗಳು

೭. ಅದೇ, ಪು. ೩೯

೮. ಅದೇ, ಪು. ೬೨

೯. ಬುಕಾನನ್ ಪ್ರಕಾರ ಅಂದು "ಯಾವುದೇ ಶ್ರೀಮಂತ ಒಂದು ಜಲಾಶಯವನ್ನೂ ಅಥವಾ ಕೆರೆಯನ್ನು ಕಟ್ಟಿಸಿದಾಗ ಅವನಿಗೆ ಹಾಗೂ ಅವನ ಉತ್ತರಾಧಿಕಾರಿಗಳಿಗೆ ಕೆರೆ ನೀರು ಒದಗಿಸುವ ಭೂಮಿಯ ಹತ್ತನೆಯ ಒಂದು ಪಾಲನ್ನು ಕಂದಾಯವಿಲ್ಲದೆ ಕೊಡುವುದು ರೂಢಿಯಾಗಿತ್ತು. ಅಲ್ಲದೆ, ಹಾಗೆ ನೀರಾವರಿಯಾದ ಪ್ರತಿ ಖಂಡುಗ ಭೂಮಿಗೂ ನಿರ್ಮಾತೃ ಆರು ಸೇರು ರಾಗಿ ಬಿತ್ತನೆಯ ಭೂಮಿಯನ್ನು ಕಂದಾಯವಿಲ್ಲದೆ ಪಡೆಯುವ ಹಕ್ಕನ್ನು ಹೊಂದಿದ್ದ. ಇದು ಪ್ರತಿ ೧,೦೦೦ ಎಕರೆ ನೀರಾವರಿ ಭೂಮಿಗೆ ಸುಮಾರು ೧೪೬ ಎಕರೆ ಖುಷ್ಕಿ ಭೂಮಿಯಷ್ಟು ಆಗುತ್ತಿತ್ತು. ಆತ ಇವುಗಳನ್ನು ಅನುಭವಿಸುತ್ತಿದ್ದವರೆಗೂ ಕೆರೆಯ ದುರಸ್ತಿ ಅವನಿಗೆ ಕಡ್ಡಾಯವಾಗಿತ್ತು. ಕೆರೆ ಭಾರಿಯೂ ವಿಸ್ತಾರವೂ ಆಗಿದ್ದಲ್ಲಿ, ಅದನ್ನು ಕಟ್ಟಿದಾತನಿಗೆ ಹಾಗೂ ಆತನ ಉತ್ತರಾಧಿಕಾರಿಗಳಿಗೆ ಕೆರೆಯಿಂದ ನೀರಾವರಿಯಾಗುವ ಭೂಮಿಯಲ್ಲಿ ಕಾಲುಭಾಗ ಸಿಗುತ್ತಿತ್ತು. ಆದರೆ ಖುಷ್ಕಿ ಭೂಮಿ ಸಿಗುತ್ತಿರಲಿಲ್ಲ. ಮೂಲ ನಿರ್ಮಾತೃವಿನ ವಂಶ ನಿಂತು ಹೋದಲ್ಲಿ ಆ ಮಾನ್ಯದ ಭೂಮಿಯನ್ನು ಸರಕಾರವೇ ವಹಿಸಿಕೊಳ್ಳುತ್ತಿತ್ತು. ಕೆರೆಯನ್ನು ದುರಸ್ತಿಯಲ್ಲಿ ಇಟ್ಟಿರುತ್ತಿತ್ತು."

೧೦. ರೈಸ್. ಬಿ.ಎಲ್., ಎಪಿಗ್ರಫಿ ಕರ್ನಾಟಕ, ಸಂಪುಟ-೧೧, ಶಾ.ಸಂ: ೧೩,೧೭, ೩೯. ೫೪

೧೧. ಮೇಜರ್ ವಿಲ್ಕ್ಸ್ ವರದಿ

೧೨. ದಿವಾನ್ ಶೇಷಾದ್ರಿ ಅಯ್ಯರ್‌ರವರು ಈ ಕುರಿತಂತೆ ಈ ರೀತಿ ಹೇಳುತ್ತಾರೆ "ಕೆರೆಗಳ ಸಂರಕ್ಷಣೆಯಲ್ಲಿ ಸರ್ಕಾರದ ಜವಾಬ್ದಾರಿಗೆ ವಿಪರೀತ ಪ್ರಾಮುಖ್ಯತೆ ಕೊಡಲಾಯಿತು. ರೈತರ ಹೊಣೆಯನ್ನು ಪೂರ್ಣ ಅಲಕ್ಷ್ಯ ಮಾಡಲಾಯಿತು. ತನ್ನ ಬಂಡವಾಳಕ್ಕೆ ಸಾಕಷ್ಟು ಲಾಭ ಸಿಗುವ ಸಂಭವ ಇಲ್ಲವಾದರೆ ಕೆರೆಗಳ ನಿರ್ವಹಣೆಯನ್ನು ತನ್ನ ದುಬಾರಿ ಕಾರ್ಯವ್ಯವಸ್ಥೆ ವಹಿಸಿಕೊಳ್ಳುವುದು ಅಸಾಧ್ಯ ಎಂದು ಸರ್ಕಾರಕ್ಕೆ ತೋರಿತು. ಆಗ ಬಹುಪಾಲು ಕೆರೆಗಳನ್ನು ರೈತರೇ ವಹಿಸಿಕೊಳ್ಳಬೇಕೆಂದು ಹೇಳಿತು. ಆದರೆ ಆ ವೇಳೆಗೆ ರೈತ ಸಾರ್ವಜನಿಕ ಉಪಯೋಗದ ಕಾರ್ಯಗಳಿಗೆ ಕಾಣಿಕೆ ನೀಡುವ ರೂಢಿಯನ್ನೆಲ್ಲ ಕಳೆದುಕೊಂಡಿದ್ದ. ಅಲ್ಲದೆ ಸಿವಿಲ್ ಅಧಿಕಾರಿಗಳು ರೈತರ ಹೊಣೆಗಾರಿಕೆಯನ್ನು ಪರಿಣಾಮಕಾರಿ ರೀತಿಯಲ್ಲಿ ಜಾರಿ ಮಾಡಿಸುವ ಸ್ಥಿತಿಯಲ್ಲಿ ಇರಲಿಲ್ಲ. ರೈತರು ಸಂರಕ್ಷಿಸಬೇಕಾದುದಕ್ಕೆ ಕೊಡಮಾಡಲಾಗಿದ್ದ ನಾನಾ ಇನಾಂಗಳು ಸವಲತ್ತುಗಳೂ ಕೊಚ್ಚಿಹೋಗಿದ್ದವು. ಸರ್ಕಾರವು ತಾನೆ ಕೆಲಸವನ್ನು ಮಾಡಿಸುವುದು ಎಂಬ ತಿಳುವಳಿಕೆ ಮೇರೆಗೆ ಸುಂಕಗಳನ್ನು ವಿಧಿಸಲಾಗಿತ್ತು". "ನಮ್ಮ ಕೆರೆಗಳ ವ್ಯೂಹವ್ಯವಸ್ಥೆಯ ಸುಧಾರಣೆ ಈ ವಾಸ್ತವಾಂಶದ ನಿಚ್ಚಳ ಅರಿವಿನಿಂದ ಆರಂಭವಾಗಬೇಕು. ಏನೆಂದರೆ ಪ್ರಾಂತ್ಯದಲ್ಲಿನ ಎಲ್ಲಾ ಕೆರೆಗಳ ದುರಸ್ತಿ ಹಾಗೂ ಸಂರಕ್ಷಣೆಯನ್ನು ಅಖೈರಾಗಿ ಲಾಭದಾಯಕ ರೀತಿಯಲ್ಲಿ ನಿರ್ವಹಿಸುವುದು ಸರ್ಕಾರದ ಸಾಮರ್ಥ್ಯಕ್ಕೆ ಮೀರಿದ್ದು. ಅಲ್ಲದೆ ಗ್ರಾಮ ವ್ಯವಸ್ಥೆ

ಅಥವಾ ಅದರ ಅಂಶ ಏನು ಉಳಿದಿತ್ತೋ, ಅದು ಮುರಿದು ಹೋಗಿದೆಯಾಗಿ ಮತ್ತು ಕೆರೆ ದುರಸ್ತಿಗಾಗಿ ವಿಶೇಷ ಸುಂಕಗಳನ್ನು ವಿಧಿಸಿ ರೈತನನ್ನು ಹೊಣೆಗಾರಿಕೆಯಿಂದ ಬಿಡಿಸಿದ ಮೇಲೆ ಮತ್ತೆ ಈಗ ರೈತನಿಗೆ ಭಾರವನ್ನು ಹೇರುವುದು ನ್ಯಾಯವಾಗಲಾರದು".

೧೩. ರೈಸ್ ಪ್ರಕಾರ ೧೬೫೪ರಲ್ಲಿ ಕಂಠೀರವ ನರಸರಾಜ, ಪಟೇಲರ ಇನಾಂಗಳನ್ನು ಕಡಿಮೆ ಮಾಡಿ, ಅವರ ಅಧಿಕಾರಗಳಿಗೆ ಪ್ರಹಾರ ಮಾಡಿದ. ಅವರ ಭತ್ಯೆಗಳನ್ನು ಚಿಕ್ಕದೇವರಾಜ (೧೬೭೨) ಕೊಂಚಮಟ್ಟಿಗೆ ಮತ್ತೆ ಕೊಡಿಸಿದ. ಆದರೆ ಅವನ ಮಗನು ಉತ್ತರಾಧಿಕಾರಿಯೂ ಆದ ಕಂಠೀರವ ರಾಜರು, ಪಟೇಲರ ಪಾಲುಗಳನ್ನು ಮುಟ್ಟುಗೋಲು ಹಾಕಿಕೊಂಡ. ಪಟೇಲರ ಭತ್ಯೆಗಳನ್ನು ಹಿಂತಿರುಗಿಸಲು ಹೈದರಾಲಿ ಏನೂ ಕ್ರಮ ಕೈಗೊಳ್ಳಲಿಲ್ಲ. ಟಿಪ್ಪು ಸುಲ್ತಾನನ ಆಳ್ವಿಕೆಯಲ್ಲಿ ಅವರ ಇನಾಂ ಭೂಮಿಗಳ ಮೇಲೆ ಕಂದಾಯವನ್ನು ವಿಧಿಸಲಾಯಿತು. "ಪಟೇಲರ ಅವನತಿ ೧೮೦೦ರಲ್ಲಿ ಪೂರ್ಣಯ್ಯನಿಂದ ಪೂರ್ಣವಾಗಿ ಆಯಿತು. ಆತನ ಆಳ್ವಿಕೆಯವರೆಗೂ ಪಟೇಲರ ಇನಾಂಗಳನ್ನು ಸ್ವಾಧೀನಪಡಿಸಿಕೊಂಡಿದ್ದರೂ ಅದನ್ನು ನಮೂದು ಮಾಡಲಾಗುತ್ತಿತ್ತು. ಇದರಿಂದ ಅವುಗಳನ್ನು ಮೂಲ ಅನುಭೋಗಸ್ಥರಿಗೆ ವಾಪಾಸು ಮಾಡುವುದು ಸುಲಭವಾಗಿತ್ತು. ಆದರೆ, ಪೂರ್ಣಯ್ಯ ಈ ಎಲ್ಲಾ ಭತ್ಯೆಗಳನ್ನು ನಾಡಿನ ಒಟ್ಟು ಆದಾಯದಲ್ಲಿ ಸೇರಿಸಿಬಿಟ್ಟು, ಅಂತಹ ನಿರೀಕ್ಷೆಗಳನ್ನು ಒಂದೇಟಿಗೆ ತೊಡೆದು ಹಾಕಿದ. ಇದೇ ಅವಸ್ಥೆ ಮುಂದಿನ ಮಹಾರಾಜರುಗಳ ಕಾಲದಲ್ಲಿ ಮುಂದುವರೆಯಿತು. ಇದರಿಂದ ಕೆರೆಗಳ ಸಂರಕ್ಷಣೆ ಪಟೇಲರಿಂದ ನಿರ್ಲಕ್ಷ್ಯಕ್ಕೊಳಗಾಯಿತು.

೧೪. ಬಸವರಾಜಪ್ಪ, ಹೆಚ್.ಈ. ಚಿತ್ರದುರ್ಗ ಜಿಲ್ಲೆಯ ಭೂ-ಹಿಡುವಳಿಗಳು, ಪು. ೯೨

೧೫. ಅದೇ, ಪು. ೯೭

೧೬. ಅರ್ಕಿವೇಯಲ್ ರೆರ್ಕಾಡ್, ನಂ ೯೮೩೨೩

೧೭. ಅದೇ, ನಂ ೯೮೩೨೩

೧೮. ಆದರೆ ಕೆರೆಯ ಅಂಗಳದಿಂದ ಹೂಳನ್ನು ತೆಗೆಯುವ ಬಗ್ಗೆ ಯಾವ ಸೂಚನೆಯೂ ಈ ನಿಯಮಾವಳಿಯಲ್ಲಿ ಕಾಣಸಿಗುವುದಿಲ್ಲ. ಇದನ್ನು ಅಲಕ್ಷಿಸಿರುವಂತೆ ತೋರುತ್ತದೆ.

೧೯. ಬಸವರಾಜಪ್ಪ, ಹೆಚ್.ಈ., ಪೂರ್ವೋಕ್ತ,, ಪು. ೯೭

೨೦. ಜಲ ಸಂವರ್ಧನಾ ಇಲಾಖೆ, ಚಿತ್ರದುರ್ಗ ಇವರು ನೀಡಿದ ಮಾಹಿತಿ

೨೧. Vatsala Iyengar, 2010, Tanks of Karnataka *A historical perspective* ಪು.೧-೮

೨೨. ಜಿ.ಎಸ್.ದೀಕ್ಷಿತ್, ಜಿ.ಆರ್.ಕುಪ್ಪುಸ್ವಾಮಿ, ಎಸ್.ಕೆ.ಮೋಹನ್, (ಮೂಲ) ನೀಲತ್ತಳ್ಳಿ ಕಸ್ತೂರಿ, (ಕ.ಅ.),೨೦೦೧, ಕರ್ನಾಟಕದಲ್ಲಿ ಕೆರೆ ನೀರಾವರಿ, ಪು. ೫೬-೭೨

೨೩. ಅದೇ, ಪು.೫೬-೭೨

೨೪. ಅದೇ. ಪು.೫೬-೭೨

೨೫. ರಾಜಾರಾಮ ಹೆಗಡೆ (ಸಂ), ೨೦೦೨, ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ, ಪು.೨೬

೨೬. ಕುಮಾರ್ ಎಸ್., ೨೦೧೬, ಚಳ್ಳಕೆರೆ ತಾಲೂಕಿನ ಕೆರೆಗಳು, (ಅಪ್ರಕಟಿತ ಪ್ರಬಂಧ)ಪು. ೪೭.

೨೭. ಜಲ ಸಂವರ್ಧನೆ ಇಲಾಖೆ ಕೈಪಿಡಿ. ಪು.೧೨

ಅಧ್ಯಾಯ ಎಂಟು

# ಚಿತ್ರದುರ್ಗ ಜಿಲ್ಲೆಯ ಕೆರೆ ಸಂಬಂಧಿ ನಂಬಿಕೆ ಮತ್ತು ಆಚರಣೆಗಳು

೮.೧. ಐತಿಹ್ಯಗಳು

೮.೨. ಜಾನಪದ ನಂಬಿಕೆ, ಆಚರಣೆ ಮತ್ತು ಸಂಪ್ರದಾಯಗಳು

೮.೩. ಜಾನಪದ ಆಶಯ ಮತ್ತು ವಿಧಿ ನಿಷೇಧಗಳು

ಅಧ್ಯಾಯ ಎಂಟು

# ಚಿತ್ರದುರ್ಗ ಜಿಲ್ಲೆಯ ಕೆರೆ ಸಂಬಂಧಿ ನಂಬಿಕೆ ಮತ್ತು ಆಚರಣೆಗಳು

ಜಗತ್ತಿನ ಬಹುತೇಕ ನಾಗರಿಕತೆ ಮತ್ತು ಸಂಸ್ಕೃತಿ ಹಾಗೂ ರಾಜ್ಯ ಮತ್ತು ಸಾಮ್ರಾಜ್ಯಗಳು ಹುಟ್ಟಿ ಬೆಳೆದು ಅವಸಾನಗೊಂಡಿರುವುದು ನದಿಯ ದಂಡೆಗಳ ಮೇಲೆ ಇಲ್ಲವೇ ಹೆಚ್ಚಿನ ನೀರಿನ ಆಸರೆಗಳಿರುವ ತಾಣಗಳಲ್ಲಿ ಮಾತ್ರ. ಏಕೆಂದರೆ ಜಲವೇ ಎಲ್ಲದಕ್ಕೂ ಮೂಲವಾಗಿದೆ. ಅದರಂತೇ ಇಡೀ ಮಾನವನ ಜೀವನ ಮತ್ತು ಅವನ ನಡವಳಿಕೆಗಳು ಜಲ ಇಲ್ಲವೇ ಅಗ್ನಿ ಮೂಲದಲ್ಲಿ ಅಡಗಿವೆ ಎಂದರೆ ತಪ್ಪಾಗಲಾರದು. ಅಂದರೆ ಅದುವೇ ಮಾನವ ಸಂಸ್ಕೃತಿಯ ಮೂಲವಾಗಿದೆ. ಚಿತ್ರದುರ್ಗ ಜಿಲ್ಲೆಯಲ್ಲಿನ ಅಸಂಖ್ಯಾತ ಕೆರೆಗಳು ತನ್ನದೇ ಆದ ಮಹತ್ವವನ್ನು ಹೊಂದಿದ್ದು, ಅವು ಹಿಂದಿನ ಜನರ ಜೀವನಾಡಿಯಾಗಿದ್ದವು. ಇಲ್ಲಿನ ಕೆರೆಗಳನ್ನು ಜನಪದರು 'ಗಂಗಾಮಾತೆ'ಯ ಪ್ರತೀಕವೆಂದು ಇಂದಿಗೂ ಪೂಜ್ಯಭಾವನೆಯಿಂದ ಕಾಣುತ್ತಾರೆ. ಅಲ್ಲದೇ ಅವುಗಳೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿದ್ದಾರೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಕೆರೆಸಂಬಂಧಿ ನಂಬಿಕೆ ಮತ್ತು ಆಚರಣೆಗಳನ್ನು ಗುರುತಿಸುವುದು ಬಹುಮುಖ್ಯವೆನಿಸುತ್ತದೆ. ಆದ್ದರಿಂದ ಈ ಮುಂದಿನಂತೆ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ.

## ೮.೧. ಐತಿಹ್ಯಗಳು

ಭಾರತ ಹಲವು ಸಮುದಾಯಗಳ ದೇಶ. ಇಲ್ಲಿ ನೂರಾರು ಜಾತಿಗಳಿದ್ದು, ಅವು ತಮ್ಮದೇ ಆದ ಪ್ರತ್ಯೇಕತೆಯನ್ನು ಹೊಂದಿರುತ್ತವೆ. ಸಮುದಾಯ ಎಂದರೆ ಸಾಮುದಾಯಿಕ ಭಾವನೆ, ಏಕತೆ, ಸಹಕಾರ ಇರಬೇಕಾದದು ಅವಶ್ಯಕ. ನಾವು ನಮ್ಮವರು ಅನ್ನುವ ನಂಬಿಕೆ, ಭಾವನೆಗಳು ಸಮುದಾಯವೊಂದರ ಮೂಲಾಂಶಗಳಾಗಿವೆ. ಅಷ್ಟೇ ಅಲ್ಲದೆ ಪ್ರತಿ ಸಮುದಾಯ ತನ್ನದೇ ಆದ ಸಾಮಾಜಿಕ, ಧಾರ್ಮಿಕ ಅಚರಣೆ ಮತ್ತು ತನ್ನದೇ ಆದ ಕಟ್ಟುಪಾಡುಗಳು ಹಾಗೂ ಸಂಸ್ಕೃತಿಯನ್ನು ರೂಢಿಸಿಕೊಂಡಿರುತ್ತದೆ. ಅದರಂತೆ ನಮ್ಮ ದೇಶದಲ್ಲಿನ ಪ್ರತಿ ಸಮುದಾಯಗಳು ಧರ್ಮ, ದೇವರು, ವ್ಯಕ್ತಿ, ಘಟನೆ, ಪ್ರದೇಶಗಳನ್ನು ಪರಿಗಣಿಸಿ ಅವುಗಳನ್ನು ಪವಿತ್ರ ಮತ್ತು ಶ್ರೇಷ್ಠ ಇಲ್ಲವೇ ಅವರನ್ನು ದೈವತ್ವಕ್ಕೇರಿಸಿರುವ ಪ್ರಯತ್ನಗಳನ್ನೇ ನಾವು ಐತಿಹ್ಯಗಳೆಂದು ಕರೆಯಬಹುದು. ಮೇಲೆ ಹೇಳಿದ

ಮತ್ತು ಬೇರೆ ಕಾರಣಕ್ಕಾಗಿಯೂ ಸಹ ಅನೇಕ ಐತಿಹ್ಯಗಳು ಹುಟ್ಟಿಕೊಂಡಿದ್ದು, ಅಂತಹ ಅನೇಕ ಉದಾಹರಣೆಗಳು ನಮ್ಮ ಮುಂದಿವೆ. ಅಂತೆಯೇ ಜಿಲ್ಲೆಯಲ್ಲಿನ ಕೆರೆಗಳಿಗೆ ಸಂಬಂಧಿಸಿದಂತೆ ಅನೇಕ ಐತಿಹ್ಯಗಳು ಹುಟ್ಟಿಕೊಂಡಿದ್ದು, ಅವುಗಳಿಗೆ ಇಲ್ಲಿನ ಪುರಾಣ ಇಲ್ಲವೇ ಧರ್ಮಗಳ ಶ್ರೇಷ್ಠತೆಯೇ ಬಹು ಮುಖ್ಯವಾದ ಮೂಲವಾಗಿರುವುದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಕೆರೆ ಸಂಬಂಧಿ ಐತಿಹ್ಯಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ರಾಜ್ಯದ ಅನೇಕ ಕಡೆ ಕೆರೆಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ಹಲವು ಐತಿಹ್ಯಗಳು ಲಭ್ಯ ಇವೆ. ಅವುಗಳಲ್ಲಿ ತಂಬ ಸಮುದ್ರದ ಕೆರೆಯ ಐತಿಹ್ಯ ಇಲ್ಲಿ ಉಲ್ಲೇಖನೀಯ. "ಬನ್ನಿಯೂರೆಂಬ ಅಗ್ರಹಾರದ ಕೆರೆಯು ಪದೇ ಪದೇ ಒಡೆದು ಹೋಗುತ್ತಿದ್ದಿತು. ಬಹುಶಃ ಆ ಕೆರೆಯನ್ನು ದುರಸ್ತಿಪಡಿಸುವ ಶಕ್ತಿ ಆ ಊರಿಗೆ ಇರಲಿಲ್ಲ. ಆಗ ಅಲ್ಲಿಯ ಮಹಾಜನರೆಲ್ಲರು ಒಟ್ಟಾಗಿ ಸೇರಿ ರಾಜನ ಬಳಿ ಬಂದು ಹಿಂದಿನ ಹಲವು ರಾಜರು ಎಷ್ಟು ಸಾರಿ ಕಟ್ಟಿಸಿದರೂ ಅದು ನಿಲ್ಲುತ್ತಿರಲಿಲ್ಲ. ಅದು ನಿಲ್ಲಬೇಕಾದರೆ ಧರ್ಮರಾಜನಾದ ನಿನ್ನ ಹೆಸರಿನಲ್ಲಿ ಕಟ್ಟಿಸಬೇಕು. ಊರಿನ ಜನ ಸುಖವಾಗಿದ್ದರೆ ಅದರ ಪುಣ್ಯ ನಿನಗೆ ಬರುತ್ತದೆ ಎಂದು ಹೊಗಳುತ್ತಾರೆ. ಆಗ ರಾಜನು 'ಅದೇನು ಮಹಾ' ಎಂದು ಜಕ್ಕ ಗೋಸಿಯ ಕೈಯಲ್ಲಿ ಹಣವನ್ನು ಕೊಟ್ಟು ಕೆರೆಯನ್ನು ಕಟ್ಟಿಸಿ ಅದಕ್ಕೆ 'ತಂಬ ಸಮುದ್ರ'ವೆಂದು ಹೆಸರಿಡುತ್ತಾನೆ". 'ಬನ್ನಿಯೂರಲೆರಡೂ ಗ್ರಾಹೆಯ ಸಿದ್ಧಾಯದ ಪೊನ್ನ ಜಕ್ಕಗೋಸಿಯ ಕಯೊಳೆಕೊಟ್ಟು ಕೆರೆಯಂ ಕಟ್ಟಿಸಿ ತಂಬ್ರ ಸಮುದ್ರವೆಂಬ ಪೆಸರನಿಟ್ಟು' ಎನ್ನುವ ಹೇಳಿಕೆಯೇ ಇದಕ್ಕೆ ಸಾಕ್ಷಿಯಾಗಿದೆ.[೧]

ಇದೇ ರೀತಿಯ ಮತ್ತೊಂದು ಐತಿಹ್ಯ ಕೆರೆ ಪದ್ಮರಸನಿಗೆ ಸಂಬಂಧಿಸಿದ್ದು, ಅದು ಸಹ ಬಹು ಮುಖ್ಯವಾಗುತ್ತದೆ. ಪದ್ಮರಸನು ಬೇಲೂರಿನಲ್ಲಿ ಒಂದು ಕೆರೆಯನ್ನು ಕಟ್ಟಿಸುವುದಕ್ಕಾಗಿ ದೊರೆಯ ಭಂಡಾರದಿಂದ 12,000 ಹೊನ್ನುಗಳನ್ನು ತೆಗೆದುಕೊಂಡು ಶಿವರೂಪಿಯಾದ ಒಬ್ಬ ಜಂಗಮ ಭುಜಂಗನಿಗೆ ಕೊಟ್ಟು ಬಿಡಲು ಜನರು ಈ ಸಂಗತಿಯನ್ನು ದೊರೆಗೆ ಹೇಳಿದಾಗ, ಅವನು ಪದ್ಮರಸನನ್ನು ಕರೆಯಿಸಿ ಕೇಳಲು, ಗರ್ದೆ ತೋಂಟಗಳೊಡನೆ ಕೆರೆ ಸಿದ್ಧವಾಗಿದೆ ಬಂದು ನೋಡಬಹುದು ಎಂದು ಹೇಳಿ ದೊರೆಯೊಡನೆ ಬೇಲೂರಿಗೆ ಹೋಗಿ ಅಲ್ಲಿ ಪವಾಡವನ್ನು ಮಾಡಿ ಕೆರೆಯನ್ನು ತೋರಿಸಿ, ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿದನು. ಇವನ ಧ್ಯಾನದಿಂದ ಗಂಗೆಯೇ ಅಲ್ಲಿ ಬಂದು, ಆಕಾಶದಿಂದ ಬಿದ್ದಿತು. 'ಅಸಮಾಕ್ಷನಿಂದ ಬಿಟ್ಟಿಗೆ ಕಟ್ಟಿಸಿದ ಕತದಿ' ಈ ಕೆರೆಗೆ ಬಿಟ್ಟಿ ಸಮುದ್ರವೆಂದು ಹೆಸರು ಬಂತು. ಇದನ್ನು ಕಟ್ಟಿಸಿದುದರಿಂದಲೇ ಈತನಿಗೆ ಕೆರೆಯ ಪದ್ಮರಸನೆಂಬ ಹೆಸರು ಬಂದಿತು. ಪವಾಡದ ಅಧಿಕೃತತೆ ಏನೇ ಇರಲಿ ಕೆರೆಯ ಕಾಮಗಾರಿಯು ಮಂತ್ರಿ ಪದ್ಮರಸನಿಂದ ಜರುಗಿರಬೇಕೆಂದು ಊಹಿಸಬಹುದು. ಹೊಯ್ಸಳ ಅರಸ ಬಿಟ್ಟಿದೇವನ ಹೆಸರಿನಲ್ಲಿ ಅಥವಾ ಪುನರುಜ್ಜೀವನ ಮಾಡಿರಬಹುದಾದ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ[೨].

ಭಾಗೀರಥಿ, ಕೆರೆ ಹೊನ್ನಮ್ಮ, ಬೆಂಗಳೂರಿನ ಕೆಂಪೇಗೌಡರ ಸೊಸೆ ಕೆಂಪಮ್ಮರಿಗೆ ಸಂಬಂಧಿಸಿದ ಐತಿಹ್ಯಗಳು ಇಲ್ಲಿ ಬಹುಮುಖ್ಯವಾಗಿದ್ದು ಇಂದಿಗೂ ಜನಮಾನಸದಲ್ಲಿ ಉಳಿದುಕೊಂಡು ಬಂದಿವೆ. ಇವರುಗಳು ಕೆರೆ ನಿರ್ಮಾಣ ಸುಸೂತ್ರವಾಗಿ ನಡೆಯಲಿ ಎಂಬ ಕಾರಣಕ್ಕೆ ಮನೆಯ ಹಿರಿಯರ

ಇಚ್ಛೆ ಅಥವಾ ಅವರ ಸ್ವ-ಅಪೇಕ್ಷೆಯಂತೆ ಕೆರೆಗೆ ಹಾರವಾದ ಪ್ರಸಂಗಗಳು ನಮ್ಮಲ್ಲಿ ಲಭ್ಯವಿರುವ ಐತಿಹ್ಯಗಳು ಕಥೆಯ ರೂಪದಲ್ಲಿ ನಿರೂಪಿಸುತ್ತವೆ. ಜಿಲ್ಲೆಯಲ್ಲಿ ಲಭ್ಯವಿರುವ ಕೆಲ ಪ್ರಮುಖ ಕೆರೆ ಸಂಬಂಧಿ ಐತಿಹ್ಯಗಳನ್ನು ಈ ಮುಂದೆ ವಿಶ್ಲೇಷಿಲಾಗಿದೆ.

**೧. ನಾಯಕನಹಟ್ಟಿ ತಿಪ್ಪೇಸ್ವಾಮಿಯ ಐತಿಹ್ಯ**

ಚಳ್ಳಕೆರೆ ತಾಲೂಕಿನ ನಾಯಕನಹಟ್ಟಿಯಲ್ಲಿರುವ ಎರಡು ಕೆರೆಗಳಿಗೆ ಸಂಬಂಧಿಸಿದ ಐತಿಹ್ಯವೊಂದು ಅದೇ ಸ್ಥಳದಲ್ಲಿ ಲಭ್ಯವಿದೆ. "ನಾಯಕನಹಟ್ಟಿಯ ಪಾಳೆಯಗಾರನಾದ ಹಟ್ಟಿ ಮಲ್ಲಪ್ಪನಾಯಕ ಬರಗಾಲದಿಂದ ತತ್ತರಿಸಿದ್ದ ಪ್ರಜೆಗಳ ಕಷ್ಟ ಪರಿಹಾರಕ್ಕೆ ಪಂಚಗಣಾಧೀಶರಲ್ಲಿ ಒಬ್ಬರಾದ ಸಂತ ಶ್ರೀ.ನಾಯಕನಹಟ್ಟಿ ತಿಪ್ಪೇಸ್ವಾಮಿಯವರನ್ನು ಸಲಹೆ ಕೇಳಲು ಅದಕ್ಕೆ ಶ್ರೀ. ಸ್ವಾಮಿಗಳು ಇಲ್ಲಿನ ಜನರ ಕಷ್ಟ ಪರಿಹಾರಕ್ಕಾಗಿ ಎರಡು ಕೆರೆಗಳ ನಿರ್ಮಾಣದ ಅವಶ್ಯಕತೆ ಇದೆ ಎಂದು ಹೇಳಿದರು. ಆ ಪ್ರಕಾರ ಶ್ರೀ. ಸ್ವಾಮಿಗಳ ಮಾರ್ಗದರ್ಶನದಲ್ಲಿ ದೊಡ್ಡಕೆರೆ ಮತ್ತು ಸಣ್ಣಕೆರೆಗಳೆಂಬ ಎರಡು ಕೆರೆಗಳ ನಿರ್ಮಾಣ ಕಾರ್ಯ ಆರಂಭವಾಯಿತು. "ಒಮ್ಮೆ ಕೆಲಸಗಾರರು ತಮ್ಮ ಕೆಲಸ ಮುಗಿದ ಮೇಲೆ ಕೂಲಿ ಕೊಡುವಂತೆ ಶ್ರೀ ಸ್ವಾಮಿಗಳನ್ನು ಕೇಳಿದಾಗ ಅದಕ್ಕೆ ಸ್ವಾಮಿಗಳು ನೀವೆಲ್ಲರೂ ನಿಮ್ಮ ಮುಂದೆ ಮಣ್ಣಿನ ಕುಪ್ಪೆ(ರಾಶಿ) ಮಾಡಿಕೊಂಡು ಕಣ್ಮುಚ್ಚಿ ಭಕ್ತಿಯಿಂದ ಶಿವನನ್ನು ಧ್ಯಾನಿಸಿರಿ ಶಿವ ನಿಮ್ಮ ಕೂಲಿ ನೀಡುತ್ತಾನೆ ಎಂದು "ಮಾಡಿದವರಿಗೆ ನೀಡು ಭಿಕ್ಷೆ" ತಮ್ಮ ಕೈಯಲ್ಲಿದ್ದ ಬೆತ್ತದಿಂದ ಮೂರು ಸಾರಿ ನಿವಾಳಿಸಿ ತಮ್ಮ ಕೂಲಿ ತೆಗೆದುಕೊಳ್ಳುವಂತೆ ಹೇಳಿದರು. ಸ್ವಲ್ಪ ಹೊತ್ತಿನ ನಂತರ ಆ ಮಣ್ಣಿನ ರಾಶಿಯನ್ನು ತೆಗೆದುನೋಡಿದ ಕೆಲಸಗಾರರಿಗೆ ಅದ್ಭುತ ಕಾದಿತ್ತು. ಅದೇನೆಂದರೆ ಎಲ್ಲಾ ಕೆಲಸಗಾರರಿಗೂ ಅವರವರ ಕೂಲಿ ಸಿಕ್ಕಿತ್ತು. ಆದರೆ ಒಬ್ಬ ತುಂಬು ಗರ್ಭಿಣಿಗೆ ಮಾತ್ರ ಎರಡು ಕೂಲಿ ಸಿಕ್ಕಿದ್ದನ್ನು ಕಂಡ ಆಕೆ ಆಶ್ಚರ್ಯಗೊಂಡಾಗ ಸ್ವಾಮಿಗಳು ನಿನ್ನೊಂದಿಗೆ ನಿನ್ನ ಹೊಟ್ಟೆಯಲ್ಲಿರುವ ಮಗನೂ ಸಹ ದುಡಿದಿರುವ ಕಾರಣ ನಿನಗೆ ಎರಡು ಕೂಲಿ ಸಿಕ್ಕಿದೆ ಎಂದು ಹೇಳುತ್ತಾರೆ. ಈ ರೀತಿ ಕೆರೆ ನಿರ್ಮಾಣ ಬಹು ಜೋರಾಗಿ ನಡೆಯುತ್ತಿರಬೇಕಾದಾಗ ಹಿರೇಕೆರೆಯ ಒಡ್ಡು ಏನು ಮಾಡಿದರೂ ನಿಲ್ಲದೇ ಇದ್ದಾಗ ಸ್ವಾಮಿಗಳು ತಮ್ಮ ಪವಾಡ ಶಕ್ತಿಯಿಂದ ನಿಲ್ಲಿಸಿ ಆ ಬರಡು ಪ್ರದೇಶ ನೀರಾವರಿಯಾಗಿ ಸಮೃದ್ಧಿ ಪ್ರದೇಶವಾಯಿತೆಂದು ಅಲ್ಲಿನ ಸ್ಥಳೀಯರು ಭಾವಿಸಿದ್ದಾರೆ[೬].

**೨. ಟಿ. ಎಮ್ಮಿಗನೂರಿನ ಐತಿಹ್ಯ**

ಜಿಲ್ಲೆಯ ಹೊಳಲ್ಕರೆ ತಾಲೂಕಿನ ಟಿ.ಎಮ್ಮಿಗನೂರಿನ ಕೆರೆಯು ಪದೇ ಪದೇ ಒಡೆದು ಹೋಗುತ್ತಿದ್ದಿತು. ಆಗ ಆ ಊರಿನ ಜನರೆಲ್ಲವೂ ಒಟ್ಟಾಗಿ ಸೇರಿ ಅಲ್ಲಿನ ಗೌಡನ ಬಳಿ ಬಂದು ಬಹುಶಃ ಆ ಕೆರೆಯನ್ನು ದುರಸ್ತಿಪಡಿಸುವಂತೆ ಕೋರಿಕೊಂಡರು. ಹಿಂದಿನ ಹಲವು ರಾಜರು ಎಷ್ಟು ಸಾರಿ ಕೆರೆಯ ಒಡ್ಡನ್ನು ಕಟ್ಟಿಸಿದರೂ ಅದು ನಿಲ್ಲುತ್ತಿರಲಿಲ್ಲ. ಅದು ನಿಲ್ಲಬೇಕಾದರೆ ಏನು ಮಾಡಬೇಕೆಂಬ ಚಿಂತೆಯಲ್ಲಿ ಆತ ನಿದ್ರಿಸುತ್ತಿದ್ದಾಗ ಆತನ ಕನಸಿನಲ್ಲಿ ಗಂಗಾದೇವಿ ಬಂದು "ನಾನು ನಿಲ್ಲಬೇಕಾದರೆ 'ಮದ್ದೂರಿನಲ್ಲಿರುವ' ನಿನ್ನ ದೂರದ ಸಂಬಂಧಿಯೋರ್ವರ ಮನೆಯಲ್ಲಿರುವ ತುಂಬು ಬಸುರಿಯನ್ನು ಬಲಿ ನೀಡಿದರೆ ಮಾತ್ರ ನಾನು ಸ್ಥಿರವಾಗಿ ನೆಲೆ ನಿಲ್ಲುತ್ತೇನೆ ಎಂದಳಂತೆ". ಆ ಪ್ರಕಾರವಾಗಿಯೇ

ತುಂಬು ಬಸುರಿಯನ್ನು ಆ ಕೆರೆಗೆ ಶಾಸ್ತ್ರೋಕ್ತವಾಗಿ ಬಲಿ ನೀಡಿದ ಕೆಲವೇ ಹೊತ್ತಿನಲ್ಲಿ ಆ ಕೆರೆಯು ನಿಂತಿತಂತೆ.[೪]

**೩. ಶಿವಗಂಗಾ ಕೆರೆಯ ಐತಿಹ್ಯ**

ಜಿಲ್ಲೆಯ ಹೊಳಲ್ಕರೆ ತಾಲೂಕಿನ ಶಿವಗಂಗ ಕೆರೆಯನ್ನು ನಿರ್ಮಿಸುವ ಕಾಲಕ್ಕೆ ಅಬ್ಬನಾಯಕ ಎನ್ನುವ ವ್ಯಕ್ತಿ ಕೆರೆಯ ಕೋಡಿಯಿಂದ ಬಿದ್ದು ಸತ್ತನೆಂಬ ಕಾರಣಕ್ಕೆ ಅದನ್ನು ಮೊದಲು ಅಬ್ಬಯನಾಯಕನ ಕೆರೆ ಎನ್ನುತ್ತಿದ್ದರು. ನಂತರ ಕಾಲದಲ್ಲಿ ಅದೇ ಕೆರೆಯಲ್ಲಿ ಶಿವನ ಮೂರ್ತಿಯೊಂದು ಸಿಕ್ಕ ಕಾರಣಕ್ಕೆ ಆ ಕೆರೆಯನ್ನು ಶಿವಗಂಗ ಕೆರೆ ಎಂದು ಕರೆಯುವ ಪ್ರತೀತಿ ಇದೆ.[೫]

**೪. ಭರಮಸಾಗರ ಕೆರೆಯ ಐತಿಹ್ಯ**

ಚಿತ್ರದುರ್ಗ ತಾಲೂಕಿನ ಭರಮಸಾಗರ ಕೆರೆಯನ್ನು ಚಿತ್ರದುರ್ಗದ ಖ್ಯಾತ ಪಾಳೆಯಗಾರನಾದ ಭರಮಣ್ಣ ನಾಯಕನು ನಿರ್ಮಿಸುತ್ತಿರುವಾಗ ಹಣಕಾಸಿನ ಅಭಾವದಿಂದಾಗಿ ಕೆರೆ ನಿರ್ಮಾಣ ಅರ್ಧದಲ್ಲಿ ನಿಲ್ಲುವ ಸಂಭವವಿದ್ದಾಗ ಭರಮವ್ವ ಎನ್ನುವ ವೃದ್ಧ ಮಹಿಳೆ ತನ್ನಲ್ಲಿದ್ದ ಮೂರು ಕುಡಿಕೆ ಹಣವನ್ನು ದೊರೆಗೆ ನೀಡಿ ಕೆರೆಯ ನಿರ್ಮಾಣ ಕಾರ್ಯಕ್ಕೆ ಸಹಾಯ ಮಾಡಿದಳು. ಆ ಕಾರಣಕ್ಕಾಗಿ ಆ ವೃದ್ಧ ಮಹಿಳೆಯ ಹೆಸರನ್ನು ಆ ಕೆರೆಗಿಡಲಾಯಿತಂತೆ. ಅಂದಿನಿಂದ ಆಕೆಯ ನೆನಪಿನಲ್ಲಿಯೇ ಆ ಊರಿಗೆ ಭರಮಸಾಗರ ಎಂದೇ ಹೆಸರಿಸಿ ಅದೇ ರೀತಿ ಇಂದಿಗೂ ಕರೆಯಲಾಗುತ್ತಿದೆ.[೬]

ಇದೇ ರೀತಿಯ ಹಲವು ಐತಿಹ್ಯಗಳು ಭೀಮಸಮುದ್ರ, ಧರ್ಮಪುರ, ಎಮ್ಮಿಗನೂರು, ದಡಗೂರು ಮೊದಲಾದೆಡೆ ಲಭ್ಯವಿದ್ದು, ಅವುಗಳ ಸಹಾಯದಿಂದ ಅಂದಿನ ಕೆರೆಗಳ ನಿರ್ಮಾಣದ ಹಿನ್ನೆಲೆಯನ್ನು ಅರಿಯಬಹುದಾಗಿದೆ. ಅಲ್ಲದೇ ಇಲ್ಲಿನ ಐತಿಹ್ಯಗಳು ಕೆರೆಗಳ ಇತಿಹಾಸ ಪುನರ್‌ರಚನೆಗೆ ಸಹಾಯಕವಾಗಿವೆ.

**೮.೨. ಜಾನಪದ ನಂಬಿಕೆ, ಆಚರಣೆ ಮತ್ತು ಸಂಪ್ರದಾಯಗಳು**

ಮಾನವ ಶಿಲಾಯುಗದ ಸಂದರ್ಭದಲ್ಲಿ ಬದುಕಿಗಾಗಿ ನಿರಂತರವಾಗಿ ಪ್ರಕೃತಿಯೊಡನೆ ಸೆಣಸಾಡಬೇಕಿತ್ತು. ಆಹಾರಕ್ಕಾಗಿ ಅಲೆದಾಡುವಾಗ ಪ್ರಾಣಿಗಳನ್ನು ಎದುರಿಸುವ ಪರಿಸ್ಥಿತಿ ಅವನು ಸದಾ ಜಾಗರೂಕನಾಗಿರುವಂತೆ ಮಾಡಿತ್ತು. ಅದರ ಜೊತೆಗೆ ಪ್ರಕೃತಿ ಅವನಲ್ಲಿ ಭಯ, ಭೀತಿ ಮತ್ತು ಆಶ್ಚರ್ಯಗಳನ್ನು ಉಂಟು ಮಾಡಿತು. ಆದಿ ಮಾನವ ಮಳೆ, ಗುಡುಗು, ಸಿಡಿಲು, ಕಾಡ್ಗಿಚ್ಚುಗಳನ್ನು ನಿಸರ್ಗ ನಿಯಮಗಳು ಎಂಬುದನ್ನರಿಯದ ಕಾರಣ ಅವನಲ್ಲಿ ಅವು ಭೀತಿಯನ್ನು ಮೂಡಿಸಿದವು. ನಿಸರ್ಗದಲ್ಲಿ ಎಲ್ಲಕ್ಕಿಂತಲೂ ಮಿಗಿಲಾದ ಅದ್ಭುತ ಶಕ್ತಿ – ದೇವರು ಇದೆ ಎಂದು ನಂಬಿದನು, ಜೊತೆಗೆ ಆ ನಿಸರ್ಗದ ರಹಸ್ಯಗಳನ್ನು ಅರಿಯುವ ಕುತೂಹಲವೂ ಉಂಟಾಯಿತು, ಮತ್ತು ಅವು ಪವಿತ್ರ, ಪೂಜಾರ್ಹ ಎಂಬ ಭಾವನೆಯೂ ಬೆಳೆಯಿತು. ಆ ನಿಸರ್ಗ ಶಕ್ತಿಗಳನ್ನು ಒಲಿಸಿಕೊಳ್ಳಬೇಕಾದರೆ ಅದನ್ನು ಆರಾಧಿಸಬೇಕು ಎಂದು ಮತ್ತು ತಾನು ಸಾಧಿಸಬೇಕಾದ ಕಾರ್ಯಗಳಿಗೆ ಇಂತಹ ಶಕ್ತಿಗಳ ಬೆಂಬಲ, ಆಶೀರ್ವಾದ ಅವಶ್ಯವೆಂದು ಭಾವಿಸಿದ ಕಾರಣ ಆ ಶಕ್ತಿಗೆ ಒಂದು ರೂಪ ನೀಡಿ ಅದನ್ನು ಪ್ರತಿಮೆಯನ್ನಾಗಿಸಿ ಪೂಜಿಸುವ ಪದ್ಧತಿ ಆರಂಭವಾಯಿತು. ನಮ್ಮ ದೇಶದ ಪ್ರಾಚೀನ ನಾಗರಿಕತೆಯಾದ

ಸಿಂಧೂ ಬಯಲಿನ ನಾಗರೀಕತೆಯ(ಇಂಡಸ್ ವ್ಯಾಲಿ ಸಿವಿಲೈಜೇಷನ್) ಜನರು ಇತರೆ ದೇವರುಗಳ ಜೊತೆಗೆ ಮುಖ್ಯವಾಗಿ ಮಾತೃದೇವತೆ(ಮದರ್ ಗಾಡಸ್)ಯನ್ನು ಸಹ ಆರಾಧಿಸುತ್ತಿದ್ದರೆಂದು ಪುರಾತತ್ವ ಶಾಸ್ತ್ರಜ್ಞರಾದ ಶುಭಾಂಗಣಾ ಆತ್ರೆಯವರು ಹೇಳುತ್ತಾರೆ. ಅದಕ್ಕೆ ಅವರು ಅಲ್ಲಿ ದೊರೆತ ಮುದ್ರೆಗಳಲ್ಲಿನ ಚಿತ್ರಗಳನ್ನು ಆಧಾರವಾಗಿಟ್ಟುಕೊಂಡು ವಾದಿಸಿದ್ದಾರೆ[೪]. ನಮ್ಮ ಜನಪದರು ಗ್ರಾಮೀಣ ಪ್ರದೇಶಗಳಲ್ಲಿ ಮತ್ತು ಕೆಲ ನಗರಗಳಲ್ಲಿ ಇಂದಿಗೂ ಶಕ್ತಿ ದೇವತೆಗಳು ಜನರನ್ನು ಸಂರಕ್ಷಿಸುವ ತಾಯಿದೇವರ ಪ್ರತೀಕಗಳೆಂದು ತಿಳಿದು ಅವುಗಳನ್ನು ಮಾರಿ ಅಥವಾ ಮಾರವ್ವ(ಮ್ಮ), ಮಲಿಯಮ್ಮ(ವ್ವ), ಗಂಗಮ್ಮ, ದುರುಗಮ್ಮ ಇತ್ಯಾದಿ ಹೆಸರುಗಳಿಂದ ಕರೆಯುವುದರ ಜೊತೆಗೆ ಕರಾರುವಕ್ಕಾದ ಆರಾಧನೆಯನ್ನು ಹಿಂದಿನಿಂದಲೂ ಮಾಡುತ್ತಾ ಬಂದಿದ್ದಾರೆ. ಈ ರೀತಿಯ ದೈವದ ಕರಾರುವಕ್ಕಾದ ಆರಾಧನೆಯೇ ಸಂಪ್ರದಾಯ ಮತ್ತು ಆಚರಣೆಗಳ ಹುಟ್ಟಿಗೆ ಮೂಲ ಕಾರಣವಾದವು.

ಪ್ರಾಯಶಃ ಇದೇ ಹಿನ್ನೆಲೆಯಲ್ಲಿ ಮನುಷ್ಯ ಹುಟ್ಟಿನಿಂದ ಸಾಯುವವರೆಗೂ ಹಲವು ಆಚರಣೆಗಳನ್ನು ಬೇರೆ, ಬೇರೆ ಕಾರಣ ಹಾಗೂ ನಂಬಿಕೆಗಳ ಹಿನ್ನೆಲೆಯಲ್ಲಿ ಇಂದಿಗೂ ಮುನ್ನಡಿಸುತ್ತಾ ಸಂಸ್ಕೃತಿಯ ಪ್ರಸರಣಕ್ಕೆ ಕಾರಣೀಭೂತನಾಗಿದ್ದಾನೆ. ಭಾರತ ಸಂಪ್ರದಾಯಗಳ ತವರೂರು. ಇಲ್ಲಿ ನೆಲೆಸಿರುವ ವಿವಿಧ ಜನಪದರು ತಮ್ಮದೇ ಆದ ನಂಬಿಕೆ, ಆಚರಣೆ ಹಾಗೂ ಸಂಪ್ರದಾಯಗಳನ್ನು ಹೊಂದಿದ್ದಾರೆ. ಇವುಗಳ ಮಧ್ಯೆ ಅವಿನಾಭಾವ ಸಂಬಂಧವಿದೆ. ಇಲ್ಲಿ ನೆಲೆಸಿರುವ ವಿವಿಧ ಜನಪದರು ತಮ್ಮದೆ ಆದ ನಂಬಿಕೆ ಮತ್ತು ಆಚರಣೆ ಅಥವಾ ಸಂಪ್ರದಾಯಗಳನ್ನು ತಲೆ ತಲಾಂತರದಿಂದ ಮಾಡುತ್ತಾ ಬಂದಿದ್ದಾರೆ. ಜನಪದರ ದೃಷ್ಟಿಯಲ್ಲಿ ಇವು ಜೀವನದ ಪ್ರಮುಖ ಭಾಗಗಳಾಗಿವೆ. ಸಂಪ್ರದಾಯದ ತಳಹದಿಯ ಮೇಲೆ ನಂಬಿಕೆ, ನಂಬಿಕೆಯ ತಳಹದಿಯ ಮೇಲೆ ಆಚರಣೆ ನಿಂತಿರುತ್ತದೆ. ಹಬ್ಬಗಳಲ್ಲಿ ಎಡೆ ಇಡುವುದು ಸಂಪ್ರದಾಯ. ಇಟ್ಟ ಎಡೆಯನ್ನು ಹಿರಿಯರು ಬಂದು ಸ್ವೀಕರಿಸುತ್ತಾರೆಂಬುದು ನಂಬಿಕೆ. ಎಡೆಯನ್ನು ಹೇಗೆ ಇಡಬೇಕು, ಯಾವ ವಿಧಾನದಿಂದ, ಯಾರು ಎಡೆ ಇಡಬೇಕು, ಯಾವ್ಯಾವ ಅಡುಗೆಗಳನ್ನು ಎಡೆಗಾಗಿ ಬಳಸಬೇಕು ಎನ್ನುವುದು ಆಚರಣೆ[೫].

ಆಚರಣೆಗಳೆಂದರೆ ಆಚರಿಸುವುದು, ಅನುಸರಿಸುವುದು, ಸಂಪ್ರದಾಯದಂತೆ ನಡೆಯುವುದು ಎಂದು ಅರ್ಥೈಸಬಹುದು. ಮನುಷ್ಯನು ಅಗೋಚರವಾದ ದೈವ ಶಕ್ತಿಗಳ ಪ್ರತ್ಯರ್ಥವಾಗಿ ನಡೆಸುವ ಮತಾಚಾರಗಳು ಕರ್ಮ ವಿಧಾನಗಳನ್ನು ಆಚರಣೆಗಳೆಂದು ಕರೆಯುವರು. ಆಚರಣೆಗಳನ್ನು ಪರಂಪರಾಗತವಾಗಿ ಮುಂದುವರೆಸಿಕೊಂಡು ಬಂದಿರುವುದರಿಂದ ಇವುಗಳ ಬಗ್ಗೆ ಬಲವಾದ ನಂಬಿಕೆಗಳು ಇರುತ್ತವೆ. ಈ ರೀತಿಯ ಆಚರಣೆಗಳು ಧಾರ್ಮಿಕ ವಲಯದಲ್ಲಿರುತ್ತವೆ. ಅವರ ಸಾಮಾಜಿಕ ಸ್ಥಿತಿಗೆ ಅನುಗುಣವಾಗಿ ನಡೆಯುತ್ತವೆ. ಜಾನಪದೀಯ ಆಚರಣೆಗಳಲ್ಲಿ ಕೆಲವು ಫಲವಂತಿಕೆಯ ಹಿನ್ನೆಲೆ ಇರುತ್ತದೆ. ಇಂತಹ ನಂಬಿಕೆಗಳು ಸಹಜವಾಗಿ ಮಾನವನಲ್ಲಿ ಕಂಡುಬರುತ್ತವೆ. ಆಚರಣೆಗಳನ್ನು ಮಾನವನ ಬದುಕಿಗೆ ಮತ್ತು ಆತನ ಬಾಹ್ಯ ಪ್ರಪಂಚಕ್ಕೆ ಸಂಬಂಧಿಸಿದ ಆಚರಣೆಗಳು ಆರ್ಥಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಆಚರಣೆಗಳು, ನೈಸರ್ಗಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಆಚರಣೆಗಳೆಂದು ವಿಭಾಗಿಸಬಹುದು. ದೈವಕ್ಕೆ ಸಂಬಂಧಿಸಿದ ಆಚರಣೆಗಳನ್ನು ಜನಪದರು ದಿನಕ್ಕೆ,

ವಾರಕ್ಕೆ ವಾರ್ಷಿಕ, ದೇವರ ಆರಾಧನೆ ಹಿನ್ನೆಲೆಯಲ್ಲಿ ಆಚರಿಸುತ್ತಾರೆ. ಇಂತಹ ಸಕಲ ಸಿದ್ಧತೆಗಳಿಂದ ಕೂಡಿದ ಹಬ್ಬ-ಹರಿದಿನಗಳು ತಿಥಿ-ವಾರ ಅನೇಕ ಆಚರಣೆಗಳಿಗೆ ಆಧಾರಗಳಾಗಿವೆ. ಜನಪದರಿಂದ ಚಾಚುತಪ್ಪದೇ ಆಚರಿಸುವ ಆಚರಣೆಗಳು ಸಂಸ್ಕೃತಿಯ ಪ್ರಸರಣದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಇವುಗಳನ್ನು ವಿವಿಧ ಸಮುದಾಯಗಳ ಜನಪದರು ನಿರ್ದಿಷ್ಟ ಕಾಲಗಳಲ್ಲಿ ನಡೆಸುವ ಹಬ್ಬ, ಜಾತ್ರೆ, ಉತ್ಸವ, ಹರಕೆ, ಕಾಣಿಕೆ-ಮುಡಿಪು ಕೊಡುವ ಆಚರಣೆಗಳನ್ನು ನಾವು ಕಾಣಬಹುದಾಗಿದೆ[೯].

ಆಧುನಿಕ ಯುಗದಲ್ಲಿಯೂ ನಮ್ಮ ನಾಡಿನ ಉದ್ದಗಲಕ್ಕೂ ಧರ್ಮ ಮತ್ತು ಸಂಸ್ಕಾರದ ಹೆಸರಿನಲ್ಲಿ ಹಲವಾರು ಆಚರಣೆಗಳು ನಡೆಯುತ್ತವೆ. ಜನಪದರು ಚಾಚುತಪ್ಪದೇ ನಡೆಸುವ ಪ್ರತಿ ಆಚರಣೆಗಳು ಆಯಾ ಸಮುದಾಯಗಳ ನಂಬಿಕೆ ಹಾಗೂ ಅವರ ಸಾಮಾಜಿಕ ಸ್ಥಿತಿಗೆ ಅನುಗುಣವಾಗಿ ನಡೆಯುತ್ತವೆ. ಜಾನಪದೀಯ ಆಚರಣೆಗಳಲ್ಲಿ ಕೆಲವು ಆಚರಣೆಗಳಿಗೆ ಫಲವಂತಿಕೆಯ ಹಿನ್ನೆಲೆ ಪ್ರಧಾನವಾಗಿದ್ದರೆ ಇನ್ನು ಕೆಲವು ಆಚರಣೆಗಳಿಗೆ ವೈಯಕ್ತಿಕ ಹಿತಾಸಕ್ತಿಗಳ ಹಿನ್ನೆಲೆ ಇರುತ್ತದೆ(ಸಾಮಾನ್ಯವಾಗಿ ಸಂಪತ್ತು ಮತ್ತು ಆರೋಗ್ಯ ಸುಧಾರಿಸುತ್ತದೆ ಎನ್ನುವ ಮನುಷ್ಯ ಸಹಜವಾದ ನಂಬಿಕೆಗಳು).

ಮಾನವ ತನ್ನ ಬೆಳವಣಿಗೆಯ ಆರಂಭದ ದಿನಗಳಲ್ಲಿ ನಡೆಸುತ್ತಿದ್ದ ಆಚರಣೆ, ಪದ್ಧತಿಗಳಿಗೆಲ್ಲಾ ಧಾರ್ಮಿಕ ಭಾವನೆಯೇ ಪ್ರೇರಕವಾಗಿತ್ತು. ಬದುಕಿನ ಒಂದು ಭಾಗವಾಗಿ ನಡೆಯುವ ಪ್ರತಿ ಜನಪದೀಯ ಆಚರಣೆಗಳಲ್ಲೂ ಇಂಥ ಧಾರ್ಮಿಕ ಹಿನ್ನೆಲೆಯನ್ನು ಕಾಣುತ್ತೇವೆ. ಮಾನವನ ಮನಸ್ಸು ಪಕ್ವಗೊಂಡಂತೆಲ್ಲ ಧರ್ಮದ ಬಗೆಗಿನ ಭಾವನೆಗಳು ನಾನಾ ರೀತಿಯಾಗಿ ರೂಪುಗೊಂಡವು. ಬಲಿ, ಬೆತ್ತಲೆ ಸೇವೆಯಂತಹ ಆಚರಣೆಗಳು ಕೆಲ ಸಮುದಾಯಗಳ ಮೌಢ್ಯತೆಯ ಪ್ರತಿಬಿಂಬಗಳಾಗಿದ್ದರೂ ಸಹ ಅವು ಆ ಸಮುದಾಯಗಳ ದೃಷ್ಟಿಯಲ್ಲಿ ಮೌಢ್ಯತೆಯ ಇಲ್ಲವೆ ಕ್ರೌರ್ಯದ ಆಚರಣೆಗಳಾಗಿರದೆ ಅವರ ಕಷ್ಟ ದೂರ ಮಾಡಿಕೊಳ್ಳುವ ಬಹು ವಿಶ್ವಾಸನೀಯ ಮತ್ತು 'ಹರಕೆ'ಯನ್ನು ತೀರಿಸಿಕೊಳ್ಳುವ ಆಚರಣೆಗಳಾಗಿರುವುದು ವಿಪರ್ಯಾಸ. ಇದೇ ಮಾದರಿಯಲ್ಲಿ ಕೆರೆ ಸಂಬಂಧಿ ಆಚರಣೆಗಳು ಹುಟ್ಟಿಕೊಂಡಿರುವ ಸಾಧ್ಯತೆ ಇದೆ. 'ಸಂಸ್ಕೃತಿ'ಯ ಎಲ್ಲೆಯೊಳಗಡೆ ಮಾನವ ಆಚರಿಸಲ್ಪಡುವ ಆಚರಣೆಗಳನ್ನು ಮಾನವೀಯ ಹಾಗೂ ಅಮಾನವೀಯ ಆಚರಣೆಗಳೆಂದು ವಿಭಾಗಿಸಬಹುದು[೧೦]. ಇವುಗಳಿಗೆ ದೇವರ ಮೇಲಿನ ನಂಬಿಕೆ, ಭಕ್ತಿ ಹಾಗೂ ಧರ್ಮ ಮೂಲವಾಗಿರುತ್ತದೆ. ಮಾನವ ಕುರಿ, ಕೋಳಿ, ಕೋಣಗಳಂತಹ ಸಾಕುಪ್ರಾಣಿಗಳನ್ನು ದೇವರಿಗೆ ಬಲಿ ಕೊಟ್ಟು ತನ್ನ ಕ್ರೌರ್ಯ ಇಲ್ಲವೇ ಅಮಾನವೀಯತೆ ಪ್ರದರ್ಶಿಸುತ್ತಾನೆ. ಮನುಷ್ಯ ತನ್ನ ದಿನನಿತ್ಯದ ಬದುಕಿನಲ್ಲಿ ಆಚರಿಸಲ್ಪಡುವ ಈ ಬಗೆಯ ಆಚರಣೆಗಳು ಮೂಢನಂಬಿಕೆಗಳು ಎನ್ನಿಸಿಕೊಳ್ಳುತ್ತವೆ. ಆದರೆ ಆಚರಣೆಗಳನ್ನು ನಮ್ಮ ಜನಪದರು ಗ್ರಹಿಸುವ ದೃಷ್ಟಿಯೇ ಬೇರೆ. ಅವರ ದೃಷ್ಟಿಯಲ್ಲಿ ಇವು **'ದೈವತ್ವದ ಸಂಕೇತ'** ಎಂದು ಭಾವಿಸುತ್ತಾರೆ. ಅದಕ್ಕಾಗಿಯೇ ದೇವರಿಗಾಗಿ ಕೆಲವರು **'ಹರಕೆ'** ಕಟ್ಟಿಕೊಳ್ಳುತ್ತಾರೆ. ಇದಕ್ಕೆ ಕೆರೆಗಳು ಸಹ ಹೊರತಾಗಿಲ್ಲ, ಅಂದರೆ ಕೆರೆಗಳನ್ನು ಗಂಗಾದೇವಿಯ ಮತ್ತು ಜಲ ಮೂಲದ ಪ್ರತೀಕವೆಂದೂ ಭಾವಿಸಿ ತಮ್ಮ ಕಷ್ಟಗಳ ಪರಿಹಾರಕ್ಕಾಗಿ ಹಲವು ಹರಕೆಗಳನ್ನು ಕಟ್ಟಿಕೊಳ್ಳುತ್ತಾರೆ. ಅಂತಹ ಹರಕೆಗಳ ಪೈಕಿ ಕನ್ನೆ ಕೆರೆ ಪೂಜೆ ಹರಿಕೆಯೂ ಒಂದಾಗಿದ್ದು, ಅದು ವಿಶೇಷ ಮಹತ್ವ ಪಡೆದಿದೆ.

ಮನುಷ್ಯರಿಗೆ ಜೀವನದಲ್ಲಿ ಅನೇಕ ಕಷ್ಟಗಳು ಬರುತ್ತವೆ. ಆಗ ಜನ ಅವುಗಳನ್ನು ಪರಿಹರಿಸಿಕೊಳ್ಳಲು ಗ್ರಾಮ ದೇವರ ಮೊರೆ ಹೋಗುತ್ತಾರೆ. 'ಹತ್ತು' ಹಲವು ಜನಗಳ ಚುಚ್ಚು ನುಡಿಗೆ ತುತ್ತಾದ ಬಂಜೆಯೊಬ್ಬಳು ತನಗೊಂದು ಕೂಸು ಕೊಟ್ಟರೆ ಸಾಕೆಂದು ಹಾತೊರೆಯುತ್ತಾಳೆ. ಒಂದೇ ಸಮನೆ ಕಾಯಿಲೆಗಳು ಬಂದಾಗ, ಮನೆಯಲ್ಲಿ ಕಷ್ಟವಾದಾಗ, ಯಾವುದೋ ಭೂತದ ಕಾಟ ಎಂದು ಭಾವಿಸುವ ಮುಗ್ಧ ಜನ ಹೆದರಿ ಇಲ್ಲವೇ ಭವಿಷ್ಯದಲ್ಲಿ ಅಪಾಯಗಳು ಬರದಂತೆ ಇರಲಿ ಎಂದು 'ಹರಕೆ' ಕಟ್ಟಿಕೊಳ್ಳುವ ಜನಪದರಿಗೆ ತಮ್ಮ ಹರಕೆ ತೀರಿಸಿಕೊಳ್ಳುವ ಒಂದು ಸುಸಂಧಿ ಎಂದರೆ ಆ ಗ್ರಾಮದಲ್ಲಿ ನಡೆಯುವ ಹಬ್ಬ, ಉತ್ಸವ ಇಲ್ಲವೇ ಗ್ರಾಮ ದೇವತೆಯ ಜಾತ್ರೆಗಳು. ಅದೇ ರೀತಿ ಊರಿಗೆ ಬರ ಬಂದಾಗ ಬರಗಲ್ಲು ತಿರುಗಿಸುವ ಆಚರಣೆ, ಮಳೆ ಬಾರದೇ ಇದ್ದಾಗ ನಡೆಸುವ ಗುಲಕವ್ವನ ಆಚರಣೆ, ಕತ್ತೆ ಮತ್ತು ಕಪ್ಪೆಗಳ ಮದುವೆ ಆಚರಣೆಗಳು ಹಾಗೂ ಕೆರೆ ತುಂಬಿದಾಗ ನಡೆಸುವ ವಿವಿಧ ಪೂಜೆಗಳಿಗೂ ಒಂದು ರೀತಿಯ ಪೂರಕ ಸಂಬಂಧಗಳಿದ್ದು, ಅವುಗಳು ಕೆರೆಗಳಿಗೆ ಪರೋಕ್ಷವಾಗಿ ಸಂಬಂಧಿಸಿವೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಕೆರೆಗಳಿಗೆ ಸಂಬಂಧಿಸಿದ ಆಚರಣೆಗಳ ಹಿನ್ನೆಲೆ, ಅದರ ಆಚರಣೆಯ ವಿಧಿ ವಿಧಾನಗಳು ಮತ್ತು ಅದರ ಔಚಿತ್ಯತೆಯ ಕುರಿತು ಚರ್ಚಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಆಧುನಿಕತೆ ಎಲ್ಲೆಡೆ ವ್ಯಾಪಿಸುತ್ತಿದ್ದರೂ ಸಾಂಪ್ರದಾಯಿಕ ಆಚರಣೆಗಳು ಕರ್ನಾಟಕದಲ್ಲಿ ಮರೆಯಾಗುತ್ತಿಲ್ಲ. ಇಂತಹ ಆಚರಣೆಗಳೇ ನಮ್ಮನ್ನು ಉನ್ನತಿಯತ್ತ ಕೊಂಡೊಯ್ಯುವ ಮಾರ್ಗಗಳೆಂದು ನಮ್ಮ ಜನಪದರು ಬಾವಿಸಿರುವುದರಿಂದ ಅವು ನಿರಂತರವಾಗಿ ನಮ್ಮಲ್ಲಿ ನಡೆಯುತ್ತವೆ. ಚಿತ್ರದುರ್ಗ ಜಿಲ್ಲೆಯ ಜನಪದರು ಕೆರೆಗಳಿಗೆ ಸಂಬಂಧಿಸಿದಂತೆ ಅನೇಕ ವಿಶಿಷ್ಟ ಆಚರಣೆ ಮತ್ತು ಸಂಪ್ರದಾಯಗಳನ್ನು ನಡೆಸುತ್ತಾರೆ. ಅಂಥವುಗಳಲ್ಲಿ ಕೆಲ ಪ್ರಮುಖ ಜಾನಪದೀಯ ಆಚರಣೆ ಮತ್ತು ಸಂಪ್ರದಾಯಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

**೧. ಕೆರೆಗೆ ಬಾಗಿನ ಅರ್ಪಿಸುವುದು**

ಕೆರೆ ಸಂಬಂಧಿ ಆಚರಣೆಗಳಲ್ಲಿ ಕೆರೆ ಪೂರ್ತಿ ಭರ್ತಿಯಾದಾಗ ಅದಕ್ಕೆ ಬಾಗಿನ ಅರ್ಪಿಸುವ ಆಚರಣೆಯೂ ಒಂದಾಗಿದ್ದು, ಅದನ್ನು ಹಿಂದಿನಿಂದಲೂ ಮಾಡುತ್ತಾ ಬರಲಾಗಿದೆ. ಇದನ್ನು ಜಿಲ್ಲೆಯ ತಮ್ಮೇನಹಳ್ಳಿ, ಹಿರೇ ಕೆರೆಯಾಗಳಹಳ್ಳಿ, ಧರ್ಮಪುರ, ಶಿವಗಂಗ, ತಾಳ್ಯ, ಮತ್ತೋಡು, ಜಾನ್ಕಲ್, ಸೂರಮ್ಮನಹಳ್ಳಿ, ಐಮಂಗಲ, ರಾಣಿಕೆರೆ, ಹಿರೇಕೆರೆ, ಭೀಮಸಮದ್ರ, ಭರಮಸಾಗರ ಮೊದಲಾದೆಡೆ ಮಳೆ ಸಮೃದ್ಧಿಯಾಗಿ ಕೆರೆಗಳು ತುಂಬಿದಾಗ ಅವುಗಳಿಗೆ ಬಾಗಿನ ಅರ್ಪಿಸುವ ರೂಢಿ ಇಂದಿಗೂ ಇದೆ. ಇದರಲ್ಲಿ ಗಂಗೆ ಬಾಗಿನ, ದೇವರ ಬಾಗಿನ ಮತ್ತು ಮುತ್ತೈದೆ ಬಾಗಿನ ಎನ್ನುವ ಪ್ರಕಾರಗಳಿವೆ. ಅಣೆಕಟ್ಟೆ/ನದಿ/ಕೆರೆ/ಬಾವಿಗಳು ತುಂಬಿದಾಗ ಅವುಗಳಿಗೆ ಶಾಸ್ತ್ರೋಕ್ತವಾಗಿ ಅರ್ಪಿಸುವುದೇ ಗಂಗೆ ಬಾಗಿನ, ಅದೇ ರೀತಿ ದೇವರ ಬಾಗಿನವನ್ನು ಸ್ವರ್ಣಗೌರಿ ವ್ರತ, ಮಂಗಳ ಗೌರಿ ವ್ರತ, ಮಾರ್ಗಶಿರ ಮಹಾಲಕ್ಷ್ಮಿ ವ್ರತ, ಸಿರಿಯಾಳ ಷಷ್ಠಿ, ಮುಂತಾದ ಪೂಜೆಗಳಲ್ಲಿ ದೇವರ ಹೆಸರಿನಲ್ಲಿ ಸುಮಂಗಲಿಯರಿಗೆ ಇಲ್ಲವೇ ದೇವರಿಗೆ ಬಾಗಿನ ಕೊಡುವುದೇ ದೇವರ ಬಾಗಿನ. ಗೌರಿ ಹಬ್ಬದ ತಿಂಗಳಲ್ಲಿ ತಮ್ಮ ಮನೆಯ ಹೆಣ್ಣು ಮಕ್ಕಳಿಗೆ ಬಾಗಿನ ನೀಡುವುದೇ ಮುತ್ತೈದೆ ಬಾಗಿನವೆನಿಸುತ್ತದೆ. ಇವುಗಳಲ್ಲಿ ಗಂಗೆ ಬಾಗಿನ ಕೆಲ ವಿಶೇಷತೆಗಳಿಂದ ಕೂಡಿದ್ದು, ಸಾಮಾಜಿಕ ಜೀವನದಲ್ಲಿ ಅತಿ ಪ್ರಾಮುಖ್ಯ ಪಡೆದಿದೆ.

ಕರ್ನಾಟಕದ ಬಹುತೇಕ ಜಿಲ್ಲೆಗಳಲ್ಲಿ ಇದು ಅಸ್ತಿತ್ವದಲ್ಲಿದೆ. ಈ ಬಾಗಿನವನ್ನು ಸಾಮಾನ್ಯವಾಗಿ ಗ್ರಾಮಸ್ಥರು ತಮ್ಮ ಗ್ರಾಮಕ್ಕೆ ಒಳಿತಾಗಲಿ ಎನ್ನುವ ಸದಾಶಯದಿಂದ ಚಾಚು ತಪ್ಪದೇ ಇಂದಿನ ಐಟೆಕ್ ಯುಗದಲ್ಲಿಯೂ ನೀಡುತ್ತಾ ಬಂದಿರುವುದು ಗಮನಾರ್ಹ. ಇದೇ ಪದ್ಧತಿಯನ್ನು ಇಂದು ಸರ್ಕಾರದವರು ಜಲಾಶಯಗಳು ಸಂಪೂರ್ಣ ಭರ್ತಿಯಾದಾಗ ಸರ್ಕಾರದ ವತಿಯಿಂದ ಮಂತ್ರಿ ಮಹೋದಯರು ಸರ್ಕಾರಿ ಕಾರ್ಯಕ್ರಮವಾಗಿ ಆಚರಿಸುವುದು ವಿಶೇಷವಾಗಿದೆ.

ಸ್ವರ್ಣಗೌರಿ ಹಬ್ಬ ಪ್ರಾರಂಭವಾಗುತ್ತಿದ್ದಂತೆ ನಾಡಿನ ವಿವಿದೆಡೆ ಮುತ್ತೈದೆಯರಿಗೆ ಬಾಗಿನ ಕೊಡುವ ಸಂಪ್ರದಾಯ ಆರಂಭವಾಗುತ್ತದೆ. ಅದೇ ರೀತಿ ಶ್ರಾವಣ ಮಾಸದಲ್ಲಿ ಕೆರೆಗಳು ತುಂಬಿದಾಗ ಅವುಗಳಿಗೆ ಬಾಗಿನ ಅರ್ಪಿಸುವುದು ವಿಶೇಷ. ಎರಡು ಹೊಸ ಬಿದುರಿನ ಮೊರಗಳಲ್ಲಿ ಸುಮಂಗಲಿಯರ ಸಂಕೇತಗಳಾದ ಅರಿಶಿಣ, ಕುಂಕುಮ, ಹಸಿರು ಬಳೆ, ಕನ್ನಡಿ, ಬಾಚಣಿಗೆ ವಿವಿಧ ರೀತಿಯ ತರಕಾರಿಗಳು, ಚಕ್ಕಲಿ, ಕೋಡುಬಳೆ, ಕರ್ಜಿಕಾಯಿಯಂತಹ ತಿಂಡಿ ತಿನಿಸುಗಳನ್ನು ಹೊಸ ಬಟ್ಟೆಯೊಂದಿಗೆ ಇಟ್ಟು ಕೊಡುವುದನ್ನು ಬಾಗಿನ ಎಂದು ಸಾಮಾನ್ಯವಾಗಿ ಕರೆಯಲಾಗುತ್ತದೆ. ಜಿಲ್ಲೆಯಲ್ಲಿ ಕೆರೆಗಳು ತುಂಬಿದಾಗ ಕೆರೆಗಳಿಗೆ ಇದೇ ರೀತಿಯ ಬಾಗಿನವನ್ನು ಅರ್ಪಿಸುವ ಪರಿಪಾಠವಿದೆ.

**ಬಾಗಿನಕ್ಕೆ ಬೇಕಾಗುವ ಪರಿಕರಗಳು**

ಅರಿಶಿಣ, ಕುಂಕುಮ ಹಚ್ಚಿರುವ ಒಂದು ಅಥವಾ ಎರಡು ಜೊತೆ ಮರ[೧೧], ಎರಡು ಬೆಲ್ಲದ ಅಚ್ಚು, ಕಡಲೆ ಬೇಳೆ, ತೊಗರಿ ಬೇಳೆ, ಉದ್ದಿನ ಬೇಳೆ, ರವೆ, ಅಕ್ಕಿ, ಗೋಧಿ, ಕಲ್ಲು ಸಕ್ಕರೆ, ಅರಿಶಿಣ ಕೊನೆ, ಉಪ್ಪು, ತೆಂಗಿನ ಕಾಯಿ, ಹಣ್ಣು, ಬಳೆ, ಬಿಚ್ಚೋಲೆ, ಕನ್ನಡಿ, ಕಪ್ಪು, ಬಾಚಣಿಗೆ, ಐದು ವೀಳ್ಯದ ಎಲೆ, ಅಡಿಕೆ, ದಕ್ಷಿಣೆ, ಅರಿಶಿಣ, ಕುಂಕುಮ, ರವಿಕೆ/ಬಟ್ಟೆ ಗಳನ್ನು ಹತ್ತಾರು ಬಗೆಯ ಸಿಹಿ ಉಂಡೆಗಳು, ಹುಳಿ, ಒಟ್ಟಾಗಿ ಇಟ್ಟು ಕೆರೆಗಳಿಗೆ ಬಾಗಿನ ಅರ್ಪಿಸುವ ಸಂಪ್ರದಾಯವಿದೆ.[೧೨] ಆದರೆ ದೇವರಿಗೆ ಬಾಗಿನ ನೀಡುವುದಾದಲ್ಲಿ ಗೆಜ್ಜೆ ವಸ್ತ್ರ, ಶ್ರೀಗಂಧ, ಊದಿನಕಡ್ಡಿ ಇತ್ಯಾದಿಗಳನ್ನು ಇಟ್ಟು ಕೊಡಲಾಗುತ್ತದೆ. ಇವುಗಳನ್ನು ನಿರ್ದಿಷ್ಟ ಪ್ರಮಾಣದಲ್ಲಿ ನೀಡಬೇಕೆಂಬ ನಿಯಮವಿದ್ದು, ಅದನ್ನು ಎಲ್ಲಾರೂ ಚಾಚು ತಪ್ಪದೇ ಪಾಲಿಸುತ್ತಾರೆ.

**ಕೆರೆಗಳಿಗೆ ಬಾಗಿನ ಅರ್ಪಿಸುವ ವಿಧಾನ**

ಊರಿನ ಮುಖ್ಯ ದೇವಸ್ಥಾನವನ್ನಾಗಲೀ ಇಲ್ಲವೇ ಅ ಗ್ರಾಮದ ಮುಖ್ಯಸ್ಥನ ಮನೆಯನ್ನು ಮತ್ತು ದೇವರ ಕೋಣೆಯನ್ನು ಮೊದಲು ಸ್ವಚ್ಛ ಮಾಡಿ, ಮಾವಿನ ಸೊಪ್ಪು, ತಳಿರು ತೋರಣದಿಂದ ಅಲಂಕರಿಸಿಕೊಳ್ಳಬೇಕು. ಪೂಜೆಗೆ ಬೇಕಾದ ಅರಿಶಿಣ, ಕುಂಕಮ, ಮಂತ್ರಾಕ್ಷತೆ, ಹೂವು, ಹಣ್ಣು, ಗರಿಕೆ, ಬಾಳೆ ಎಲೆ ಇವೆಲ್ಲವುಗಳನ್ನು ಜೋಡಿಸಿಟ್ಟುಕೊಳ್ಳಬೇಕು, ಮೊರವನ್ನು ಅರಿಶಿಣದಿಂದ ಸಾರಿಸಿ, ಅದರಲ್ಲಿ ಕುಂಕುಮದಿಂದ ಎಕ್ಸ್ ಮಾರ್ಕನ್ನು ಹಾಕಿಕೊಳ್ಳಬೇಕು. ನಂತರ ಈ ಮೇಲೆ ಹೇಳಿದ ಎಲ್ಲಾ ಸಾಮಾನುಗಳನ್ನು ಮೊರದಲ್ಲಿ ಇಡಬೇಕು. ನಂತರ ಗೌರಿಯನ್ನು ಸಿಂಗರಿಸಿ ಅರಿಶಿಣ, ಕುಂಕುಮ ಅಕ್ಷತೆ ಹಾಕಿ ಪೂಜೆ ಮಾಡಿ, ಹಣ್ಣು, ಕಾಯಿ, ಪ್ರಸಾದ ನೈವೇದ್ಯ ಮಾಡಿ ಕೊನೆಯಲ್ಲಿ ತಂಬಿಟ್ಟಿನ ಆರತಿ ಬೆಳಗಿ ನಾಲ್ಕಾರು ಮುತ್ತೈದೆಯರಿಗೆ ಕುಂಕುಮ ಬಳೆ ನೀಡಿ ಪ್ರಸಾದ ನೀಡುತ್ತಾರೆ.

ನಂತರ ಬಾಗಿನವನ್ನು ಕೆರೆಯ ಬಳಿ ತಂದಿಟ್ಟು ಕೆರೆ ನೀರನ್ನು ಚಿಮುಕಿಸಿ, ಎಡೆ ಹಾಕಿ ಪೂಜಿಸಿ ತುಂಬಿರುವ ಬಾಗಿನದ ಮೊರಗಳನ್ನು ಊರಿನ ಮುಖ್ಯಸ್ಥ ಪತ್ನಿ ಸಮೇತವಾಗಿ ಎತ್ತಿಕೊಂಡು ಪೂಜಾರಿ ಮತ್ತು ಊರಿನ ಸಮ್ಮುಖದಲ್ಲಿ ಕೆರೆಯ ಕೋಡಿಯ ಮೇಲಿಂದ ಅದನ್ನು ಕೆರೆಗೆ ಅರ್ಪಿಸುತ್ತಾರೆ. ಕೆರೆಯ ನೀರನ್ನು ಗಂಗೆಯ ಪ್ರತಿರೂಪವೆಂದೂ ಭಾವಿಸಿ ಆಕೆಯಿಂದ ಊರಿಗೆ ಯಾವುದೇ ಅಪಾಯಗಳು ತಲೆದೋರದಿರಲೆಂದು ಸಿರಿ ಗೌರಿಯ ಸಂಕೇತವಾದ ಬಾಗಿನವನ್ನು ಆಕೆಗೆ ಅರ್ಪಿಸುತ್ತಾರೆ. ಗೌರಿಯನ್ನು ತಮ್ಮ ಮನೆಗಳಲ್ಲಿ ಕೂರಿಸುವ ಸಂಪ್ರದಾಯವಿದ್ದ ಕೆಲವರು ಈ ರೀತಿ ಸಿರಿಗೌರಿ ಪೂಜೆ ಮಾಡಿ ನಂತರ ತಮ್ಮ ಊರಿನ ಕೆರೆಗಳಿಗೆ ಬಾಗಿನ ವೈಯಕ್ತಿಕವಾಗಿಯೂ ಅರ್ಪಿಸುತ್ತಾರೆ. ಆದರೆ ಕೆಲವು ಕಡೆ ಕೆಲ ಪ್ರಾದೇಶಿಕ ಭಿನ್ನತೆಯಿಂದಲೂ ಇದನ್ನು ಅರ್ಪಿಸುವ ಪರಿಪಾಠವನ್ನು ಜಿಲ್ಲೆಯ ಜನರು ರೂಢಿಸಿಕೊಂಡಿದ್ದಾರೆ.

**ಆಚರಣೆಯ ಉದ್ದೇಶ**

ಕೆರೆಗಳಿಗೆ ಬಾಗಿನ ನೀಡುವ ಪದ್ಧತಿ ಬಹು ಹಿಂದಿನಿಂದ ರೂಢಿಯಲ್ಲಿದೆ. ಹಲವು ಉದ್ದೇಶಗಳ ಹಿನ್ನೆಲೆಯಲ್ಲಿ ಈ ಸಾಂಪ್ರದಾಯಿಕ ಆಚರಣೆಯನ್ನು ಮಾಡಲಾಗುತ್ತದೆ. ಅದರಲ್ಲಿ ಕೆಲವು ಉದ್ದೇಶಗಳು ಇಂತಿವೆ.

೧. ಸಮೃದ್ಧತೆಯ ಸಂಕೇತವಾಗಿ ಈ ಪದ್ಧತಿ ರೂಪುಗೊಂಡಿರಬೇಕು

೨. ಊರಿಗೆ ಯವುದೇ ರೀತಿಯ ಕೆಡಕು ಸಂಭವಿಸದಿರಲಿ ಎನ್ನುವ ಸದಾಶಯದಿಂದ ಈ ಪದ್ಧತಿ ಅಸ್ತಿತ್ವಕ್ಕೆ ಬಂದಿರಬೇಕು.

೩. ರೈತರ ಬೆಳೆಗಳು ಅಧಿಕವಾಗಿ ಬೆಳೆದು ಹುಲಸಾಗಲಿ ಎನ್ನುವ ಸದಾಶಯ ಈ ಆಚರಣೆಗೆ ಇದೆ.

೪. ಫಲವಂತಿಕೆಯ ಸದಾಶಯದಿಂದಲೂ ಈ ಪದ್ಧತಿ ಹುಟ್ಟಿಕೊಂಡಿರಬೇಕು.

೫. ಗಂಗೆಯನ್ನು ಸದಾ ಮುತ್ತೈದೆಯೆಂದು ಜನರು ಭಾವಿಸಿ ಕೆರೆಗಳು ತುಂಬಿದಾಗ ಆಕೆಗೆ ತಪ್ಪದೇ ಇಂದಿನ ವ್ಯವಹಾರಿಕ ಜಗತ್ತಿನಲ್ಲಿಯೂ ಬಾಗಿನ ಅರ್ಪಿಸುವ ಪದ್ಧತಿ ಇದೆ. ಇದರ ಹಿಂದೆ ಪ್ರತಿ ವರ್ಷ ಉತ್ತಮ ಮಳೆಯಾಗಿ ಉತ್ತಮ ಬೆಳೆಯಾಗಲಿ ಎನ್ನುವ ಸದಾಶಯವು ಈ ಪದ್ಧತಿಗಿದೆ.

**೨. ಕೋಡಿ ಪೂಜೆ ಮಾಡುವುದು**

ಜಿಲ್ಲೆಯ ಭೀಮಸಮುದ್ರ, ಬಿ.ಜಿ.ಕೆರೆ, ನುಂಕೆಮಲೆ, ಹಳೆಕೆರೆ, ಸಾಣಿಕೆರೆ ಮೊದಲಾದೆಡೆ ಸಾಮಾನ್ಯವಾಗಿ ಕೆರೆ ತುಂಬಿ ಕೋಡಿ ಬಿದ್ದ ಶುಭ ಸೂಚನೆಯ ಪ್ರತೀಕವಾಗಿ ಆ ಊರಿನಲ್ಲಿರುವ ಎಲ್ಲಾ ಸಮುದಾಯದವರು ಕೆರೆ ಬಳಿ ಸೇರಿ ವಿವಿಧ ಬಗೆಯ ಎಡೆಗಳನ್ನು ಕೋಡಿಗೆ ಅರ್ಪಿಸುವ ಪೂಜೆಯೇ ಕೋಡಿ ಪೂಜೆಯಾಗಿದೆ. ಈ ಪೂಜೆ ಕೈಗೊಳ್ಳುವ ವೇಳೆ ಕೋಡಿ ದೇವರುಗಳಾದ ಆಂಜನೇಯ, ಗಣಪ, ಈಶ್ವರ, ಬಸವಣ್ಣ, ಗಂಗಮ್ಮ ಮೊದಲಾದ ದೈವಗಳನ್ನು ವಿಶೇಷವಾಗಿ ಅಲಂಕರಿಸಿ ಆಚರಿಸಲಾಗುತ್ತದೆ. ಕೆಲವು ಕಡೆ ತುಂಬು ಗರ್ಭ ಧರಿಸಿರುವ (ಬಾನ್‌ಗುರಿ) ಕುರಿಯೊಂದನ್ನು ಬಲಿ ನೀಡಲಾಗುತ್ತದೆ. ಅದನ್ನು ಅಡುಗೆ ಮಾಡಿ ಎಲ್ಲರೂ ಸಾಮೂಹಿಕವಾಗಿ ಅದನ್ನು ಸೇವಿಸುತ್ತಾರೆ[೮].

**೩. ಗಂಗಮ್ಮನ ಪೂಜೆ**

ಜಲವನ್ನು ಪವಿತ್ರ ಎಂದು ಭಾವಿಸಿರುವ ವಿವಿಧ ಸಮುದಾಯಗಳು ನೀರನ್ನು ಗಂಗಾದೇವಿಯ ಪ್ರತೀಕವೆಂದೂ ಭಾವಿಸಿ ಆಕೆಯ ಪೂಜೆಯನ್ನು ಕೆಲ ವಿಶೇಷ ದಿನಗಳಂದು ಆಚರಿಸಲಾಗುತ್ತದೆ. ಊರಿನ ಗ್ರಾಮ ದೈವಗಳ ಜಾತ್ರೆ–ಉತ್ಸವ, ಹಬ್ಬ–ಹರಿದಿನಗಳಲ್ಲಿ ಆ ದೈವಗಳೊಂದಿಗೆ ಕೆರೆಯ ಬಳಿ ಹೋಗಿ ಅಲ್ಲಿಯ ಏರಿಯ ಮೇಲಾಗಲೀ, ಇಲ್ಲವೇ ಕೋಡಿಯ ಬಳಿಯಾಗಲಿ ಅವುಗಳನ್ನು ಕುಳ್ಳಿರಿಸಿ ಆ ದೈವದ ಎಲ್ಲಾ ಪರಿಕರಗಳನ್ನು ಶುಭ್ರಗೊಳಿಸಿ ವಿಶೇಷ ಪೂಜೆ ಸಲ್ಲಿಸುವುದನ್ನು ಗಂಗೆ ಪೂಜೆ, ಇಲ್ಲವೇ ಹೊಳೆ ಪೂಜೆ ಎಂದು ಕರೆಯಲಾಗುತ್ತದೆ. ಈ ಪೂಜೆ ನಡೆಸುವ ವೇಳೆ ದಾರಿಯುದ್ದಕ್ಕೂ ಸುಮಾರು ೭ ರಿಂದ ೯ ಕುರಿಗಳನ್ನು ಬಲಿ ನೀಡಿ ಅವುಗಳನ್ನು ವಿವಿಧ ಆಯಗಾರರಿಗೆ ನೀಡಲಾಗುತ್ತದೆ[೧೪]. ಜಿಲ್ಲೆಯ ಬಹುತೇಕ ಕಡೆ ಈ ಆಚರಣೆ ಚಾಲ್ತಿಯಲ್ಲಿದ್ದು, ಇದು ಇಲ್ಲಿನ ಜನರು ಕೆರೆಗಳೊಂದಿಗೆ ಹೊಂದಿರುವ ಸಂಬಂಧವನ್ನು ಸೂಚಿಸುತ್ತದೆ.

**೪. ಬಲಿ ನೀಡುವುದು**

ಕೆರೆಗಳು ತುಂಬಿದಾಗ ಅವು ಶಾಂತವಾಗಿರಲಿ ಎಂದು ಕುರಿ, ಕೋಳಿ, ಕೋಣಗಳನ್ನು ಬಲಿ ನೀಡುವ ಸಂಪ್ರದಾಯವನ್ನು ಇಂದಿಗೂ ಜಿಲ್ಲೆಯ ವಿವಿಧೆಡೆ ಮುಂದುವರಿಸಿಕೊಂಡು ಬಂದಿರುವುದನ್ನು ನಾವು ಕಾಣಬಹುದು. ತಾಳ್ಯದ ಕೆರೆ ತುಂಬಿದಾಗ ಅಲ್ಲಿನ ಚೌಡಮ್ಮನ ತೂಬಿಗೆ ಕುರಿ, ಕೋಳಿ, ಕೋಣಗಳನ್ನು ಬಲಿ ನೀಡಿದ ತರುವಾಯವೇ ಅಲ್ಲಿನ ತೂಬಿನ ಮೂಲಕ ನೀರನ್ನು ಹೊರಗೆ ಬಿಡಲಾಗುತ್ತದೆ. ಹಿಂದೆ ಪ್ರಾಣಿಗಳಿಗೆ ಬದಲಾಗಿ ನರ ಬಲಿ ನೀಡುವ ಸಂಪ್ರದಾಯವಿತ್ತೆಂಬುದನ್ನು ಕೆರೆಗೆ ಹಾರವಾದ ಭಾಗೀರಥಿ, ಕೆಂಪಮ್ಮ, ಮದಗಮ್ಮ, ಕೆಂಚಮ್ಮ, ಹೊನ್ನಮ್ಮ ಪ್ರಕರಣಗಳಿಂದ ಮತ್ತು ಬಸುರಿ ಹೆಣ್ಣು ಮಕ್ಕಳನ್ನು ಅರ್ಪಿಸಿರುವ ಕಥೆಗಳಿಂದ ಅರ್ಥೈಸಿಕೊಳ್ಳಬಹುದು. ಟಿ.ಎಮ್ಮಿಗನೂರಿನ ಕೆರೆ ನಿರ್ಮಾಣದ ವೇಳೆ ಮದ್ದೇರು ಗ್ರಾಮದ ತುಂಬು ಗರ್ಭಿಣಿ ಹೆಂಗಸನ್ನು ಬಲಿ ಕೊಡಲಾಗಿತ್ತು. ಇದನ್ನು ಪರೀಕ್ಷಿಸಲು ಬಂದ ಜನರಿಗೆ ಅಲ್ಲಿನ ಗ್ರಾಮ ದೇವತೆ ಕರಿಯಮ್ಮ ತನ್ನ ಮಹಿಮೆಯಿಂದ ಆ ಹೆಂಗಸಿನ ರುಂಡ ಮುಂಡಗಳನ್ನು ಕುರಿಯ ರುಂಡಮುಂಡಗಳನ್ನಾಗಿ ಪರಿವರ್ತಿಸಿದ ಪವಾಡದ ಕಥೆ ನಮಗೆ ಆಶ್ಚರ್ಯವನ್ನುಂಟು ಮಾಡುತ್ತದೆ.[೧೫] ಈ ಪ್ರಸಂಗ ಹಿಂದೆ ಕೆರೆಗಳಿಗೆ ನರ ಬಲಿ ನೀಡಲಾಗುತ್ತಿತ್ತು ಎಂಬುದನ್ನು ಸೂಚಿಸುತ್ತದೆ.

**೫. ಶುದ್ಧಿ ಪೂಜೆ**

ಜಿಲ್ಲೆಯಲ್ಲಿ ಚಾಲ್ತಿಯಲ್ಲಿರುವ ಕೆರೆ ಸಂಬಂಧಿ ಆಚರಣೆಗಳಲ್ಲಿ ಇದೊಂದು ಪ್ರಮುಖ ಆಚರಣೆಯಾಗಿದ್ದು, ಅದನ್ನು ಜಿಲ್ಲೆಯ ವಿವಿದೆಡೆ ಕೆರೆಗಳು ತುಂಬಿದಾಗ ನೀರನ್ನು ಶುದ್ಧಿ ಮಾಡುವ ಸಲುವಾಗಿ ತುಪ್ಪ, ಹಾಲು, ಗಂಜಲ, ಗರಿಕೆ, ಸಗಣಿ ಮೊದಲಾದವುಗಳ ಮಿಶ್ರಣವನ್ನು ನೀರಿಗೆ ಚೆಲ್ಲುವ ಆಚರಣೆಯನ್ನು ಮಾಡಲಾಗುತ್ತದೆ ಇದನ್ನು ಗಂಜಲ ಪೂಜೆ ಇಲ್ಲವೇ ಶುದ್ಧಿ ಪೂಜೆ ಎನ್ನಲಾಗುತ್ತದೆ.[೧೬] ಇದರಿಂದ ಕೆರೆಯಲ್ಲಿರುವ ನೀರು ಶುದ್ಧಿಯಾಗಿ ಅದರಲ್ಲಿರುವ ಕ್ರಿಮಿಕೀಟಗಳು ನಾಶವಾಗಿ ಮೀನು ಮೊದಲಾದ ಜಲಚರಗಳ ಉತ್ಪಾದನೆಗೆ ಮತ್ತು ನೀರು ಕುಡಿಯಲು ಸಹಕಾರಿಯಾಗಲಿದೆ.

**೬. ಕನ್ನೆಕೆರೆ ಪೂಜೆ**

ಜಿಲ್ಲೆಯಲ್ಲಿ ಚಾಲ್ತಿಯಲ್ಲಿರುವ ಕೆರೆ ಸಂಬಂಧಿ ಆಚರಣೆಗಳಲ್ಲಿ ಇದು ಮತ್ತೊಂದು ಪ್ರಮುಖ ಆಚರಣೆಯಾಗಿದ್ದು, ಇದನ್ನು ಜಿಲ್ಲೆಯ ತಾಳ್ಯ, ಜಾನಕಲ್, ಗಂಗ ಸಮುದ್ರ, ಬಿದರಕೆರೆ ಮೊದಲಾದೆಡೆ ಆಚರಿಸಲಾಗುತ್ತದೆ. ಮಕ್ಕಳಾಗದೇ ಇರುವ ಸ್ತ್ರೀಯರು ಮೊಸರೆಡೆ, ತುಪ್ಪದೆಡೆ, ಸಿಹಿ ಎಡೆ, ಖಾರದೆಡೆ ಮೊದಲಾದ ಏಳು ರೀತಿಯ ಎಡೆಗಳನ್ನು ಮಾಡಿಕೊಂಡು ಕೆರೆಗಳಿಗೆ ಹೋಗಿ ಕೆರೆಯನ್ನು ಪೂಜಿಸಿಕೊಂಡು ಬಂದರೆ ಗಂಗಮ್ಮ ತಾಯಿ ಮಕ್ಕಳ ಫಲ ಕೊಡುತ್ತಾಳೆ ಎನ್ನುವ ನಂಬಿಕೆಯಿಂದ ಈ ಪೂಜೆಯನ್ನು ಮಾಡಲಾಗುತ್ತದೆ.[೧೭] ಈ ಆಚರಣೆಯ ಹಿಂದೆ ಫಲವಂತಿಕೆಯ ಆಶಯ ಎದ್ದು ಕಾಣುತ್ತದೆ.

**೭. ದೇವರ ಪೂಜೆ**

ಜಿಲ್ಲೆಯಲ್ಲಿ ಚಾಲ್ತಿಯಲ್ಲಿರುವ ಕೆರೆ ಸಂಬಂಧಿ ಆಚರಣೆಗಳಲ್ಲಿ ಕುಡಿಕೆ ಪೂಜೆಯೂ ಒಂದಾಗಿದ್ದು, ಇದನ್ನು ಜಿಲ್ಲೆಯ ವಡ್ಡನಹಳ್ಳಿ, ಉಡುವಳ್ಳಿ, ಭರಮಪುರ, ಟಿ.ಎನ್.ಕೋಟೆ, ಮಲ್ಲಾಪುರ, ರಂಗಸಮುದ್ರ, ತಾಳ್ಯ ಮೊದಲಾದೆಡೆ ಆಚರಿಸಲಾಗುತ್ತದೆ. ಇದನ್ನು ವರ್ಷಕ್ಕೊಮ್ಮೆ ಇಲ್ಲವೇ ೫–೬ ಅಥವಾ ೧೦–೨೦ ವರ್ಷಗಳಿಗೊಮ್ಮೆ ಮಾತ್ರ ಆಚರಿಸಲಾಗುತ್ತದೆ. ಈ ಪೂಜೆಯನ್ನು ಸಾಮಾನ್ಯವಾಗಿ ಕೆರೆಯ ಬಳಿ ಇಲ್ಲವೇ ಕೆರೆ ಅಂಗಳದಲ್ಲಿರುವ ದೇವರುಗಳಾದ ಕರಿಯಮ್ಮ, ಆಂಜನೇಯ, ಗಣಪ, ಈಶ್ವರ, ಬಸವಣ್ಣ, ಗಂಗಮ್ಮ ಮೊದಲಾದ ದೈವಗಳ ಹೆಸರಿನಲ್ಲಿ ಆಚರಿಸಲಾಗುತ್ತದೆ. ತಾಳ್ಯದಲ್ಲಿ ಅಲ್ಲಿರುವ ಕೋಡಿ ಹನುಮಂತ ದೇವರ ಕೆರೆ ಅಂಗಳದಲ್ಲಿ ವಿಶೇಷವಾಗಿ ದೇವರನ್ನು ಅಲಂಕರಿಸಿ ಅಂದು **"ನೂರೊಂದು ದೇವರಿಗೆ ನೂರೊಂದೆಡೆ"** ಎನ್ನುವ ವಿಶೇಷ ಆಚರಣೆಯನ್ನು ಆಚರಿಸಲಾಗುತ್ತದೆ.[೧೮] ಈ ವೇಳೆ ೧೦೧ ತೆಂಗಿಕಾಯಿ ಒಡೆದು, ೧೦೧ ವೀಳ್ಯದೆಲೆ, ೧೦೧ ಅಡಿಕೆ, ೧೦೧ ರೂಪಾಯಿ ಕಾಣಿಕೆ ಮತ್ತು ಎಡೆಯನ್ನು, ಹಾಲು, ಮೊಸರು, ತುಪ್ಪದೊಂದಿಗೆ ಇಟ್ಟು ಪೂಜಿಸಲಾಗುತ್ತದೆ. ಇದರೊಂದಿಗೆ ಮರಿಕುರಿ, ಚೆರುಗದ ಕುರಿ, ಮೀಸಲು ಕುರಿ, ತುಂಬು ಗರ್ಭ ಧರಿಸಿರುವ (ಬಾನ್‌ಗುರಿ) ಕುರಿಗಳನ್ನು ಬಲಿ ನೀಡಲಾಗುತ್ತದೆ. ಬಲಿ ನೀಡಿದ ಕುರಿಯ ಉದರದಲ್ಲಿರುವ ಸೆಗಣಿಯನ್ನು ಅದರ ರಕ್ತ ಮತ್ತು ಅನ್ನದೊಂದಿಗೆ ಬೇಯಿಸಿ ಚೆರಗ ಅಥವಾ ನೀರುಗೂಳ್ ತಯಾರಿಸಲಾಗುತ್ತದೆ. ಇದನ್ನು ಊರಿನ ಗಡಿ ಮೇರೆಗಳಲ್ಲಿ ಚೆಲ್ಲಲಾಗುತ್ತದೆ. ಈ ವೇಳೆ ಪರ ಊರಿನ ವ್ಯಕ್ತಿ ಇಲ್ಲವೇ ದೈವವನ್ನಾಗಲಿ ಹತ್ತಿರ ಇಟ್ಟುಕೊಳ್ಳುವುದಿಲ್ಲ ಮತ್ತು ಚೆರಗವು ಯಾವುದೇ ಕಾರಣಕ್ಕೂ ಪರ ಊರಿನವರ ಕೈ ಸೇರದಂತೆ ನೋಡಿಕೊಳ್ಳಲಾಗುತ್ತದೆ. ಒಂದು ವೇಳೆ ಚೆರಗ ಬೇರೆಯವರ ಕೈಸೇರಿದರೆ ನಮ್ಮ ಹುಲಸು ಹೊರಟು ಹೋಗಿ ನಮಗೆ ದಾರಿದ್ರ್ಯ ಬರುತ್ತದೆ ಎನ್ನುವ ನಂಬಿಕೆ ಇದೆ. ಇದನ್ನು ತಮ್ಮೂರಿನ ಮಾಗಾಣಿಯ ಸುತ್ತಲೂ ಚಲ್ಲಿದರೆ ಆ ವರ್ಷ ತಮ್ಮ ಕೃಷಿ ಬೆಳೆಗಳಿಗೂ, ದನ, ಕರು, ಮನುಷ್ಯರಿಗೆ ಯಾವುದೇ ರೋಗರುಜಿನಗಳು ಬರುವುದಿಲ್ಲ ಎಂಬ ನಂಬಿಕೆ ಸುತ್ತ ಮುತ್ತಿನ ಊರಿನವರದ್ದಾಗಿದೆ. ನಮ್ಮ ಗ್ರಾಮಕ್ಕೆ ಯಾವುದೇ ರೀತಿಯ ಕೆಡಕು ಉಂಟಾಗದಿರಲಿ ಎನ್ನುವ ಮತ್ತು ಈ ದೈವಗಳು ಕೋಪಗೊಂಡು ಕೆರೆಯ ಮೇಲೆ ಯಾವುದೇ ದುಷ್ಪರಿಣಾಮ ಬೀರದಿರಲಿ

ಎನ್ನುವ ಉದ್ದೇಶ ಈ ಆಚರಣೆಗಿದೆ. ಈ ಆಚರಣೆಯ ಹಿಂದೆಯೂ ಸಹ ಫಲವಂತಿಕೆ ಮತ್ತು ಸಮೃದ್ಧತೆಯ ಆಶಯಗಳಿರುವುದನ್ನು ಗುರುತಿಸಬಹುದು. ಇದರೊಂದಿಗೆ ಕೆರೆ ಮತ್ತು ಜನರ ಬದುಕಿನ ನಡುವಿನ ಅವಿನಾಭಾವ ಸಂಬಂಧಗಳಿರುವುದನ್ನು ಗುರುತಿಸಬಹುದು.

**೮. ಕೆರೆತುಂಬ ಪೂಜೆ**

ಜಿಲ್ಲೆಯಲ್ಲಿ ಚಾಲ್ತಿಯಲ್ಲಿರುವ ಕೆರೆ ಸಂಬಂಧಿ ಆಚರಣೆಗಳಲ್ಲಿ ಇದು ಮತ್ತೊಂದು ಪ್ರಮುಖ ಆಚರಣೆಯಾಗಿದ್ದು, ಇದನ್ನು ಜಿಲ್ಲೆಯ ಬಿ.ದುರ್ಗ, ಬಾಗೂರು, ಜಾನಕಲ್, ತಿಮ್ಮಣ್ಣನಾಯಕನ ಕೆರೆ, ಮೊದಲಾದೆಡೆ ಆಚರಿಸಲಾಗುತ್ತದೆ. ಸಾಮಾನ್ಯವಾಗಿ ಈ ಆಚರಣೆಯನ್ನು ಮಳೆ ಬಾರದೇ ಇದ್ದಾಗ, ಕೆರೆಯಲ್ಲಿ ನೀರು ತುಂಬಾ ಕಡಿಮೆಯಾದಾಗ ಆಚರಿಸಲಾಗುತ್ತದೆ. ಅಂದು ಒಂಭತ್ತು ಜನ ಮುತ್ತೈದೆಯರು, ಏಳು ಜನ ಬಾಲಕಿಯರು(ಕನ್ಯೆಯರು) ಶುಚಿಭೂತರಾಗಿ ಕೆರೆಗಳ ಹತ್ತಿರ ಹೋಗಿ ವಿಶೇಷ ಪೂಜೆಯನ್ನು ಮಾಡುತ್ತಾರೆ. ಅಲ್ಲದೇ ಊರಿನ ಹಿರಿಯರ ಸಮ್ಮುಖದಲ್ಲಿ ಕಪ್ಪೆಗಳ ಇಲ್ಲವೇ ಕತ್ತೆಗಳ ಮದುವೆಯನ್ನು ಮಾಡುತ್ತಾರೆ. ಇದರಿಂದ ಮಳೆ ಬಂದು ಕೆರೆ ತುಂಬುತ್ತದೆ ಎಂಬ ನಂಬಿಕೆ ಇದೆ.[೧೯]

**೯. ಕುಡಿಕೆ ಪೂಜೆ**

ಜಿಲ್ಲೆಯಲ್ಲಿ ಚಾಲ್ತಿಯಲ್ಲಿರುವ ಕೆರೆ ಸಂಬಂಧಿ ಆಚರಣೆಗಳಲ್ಲಿ ಕುಡಿಕೆ ಪೂಜೆಯೂ ಒಂದಾಗಿದ್ದು, ಇದನ್ನು ಜಿಲ್ಲೆಯ ಹಲಕನಾಳು, ಧರ್ಮಪುರ, ಪರಶುರಾಂಪುರ, ಜಾನ್‌ಕಲ್, ಸಾಣಿಕೆರೆ, ಮೊದಲಾದೆಡೆ ಆಚರಿಸಲಾಗುತ್ತದೆ. ಕೆರೆಯ ನೀರನ್ನು ಶಾಸ್ತ್ರೋಕ್ತವಾಗಿ ಪೂಜಿಸಿ ಆ ನೀರನ್ನು ಒಂದು ಹೊಸ ಮಡಿಕೆ (ಕುಡಿಕೆ)ಯಲ್ಲಿ ತುಂಬಿಕೊಂಡು ನಂತರ ಅದರಲ್ಲಿ ತಾವು ಬಿತ್ತನೆ ಮಾಡಲು ಉದ್ದೇಶಿಸಿರುವ ಕಾಳುಗಳನ್ನು ತುಂಬಿಕೊಂಡು ತಮ್ಮ ಹೊಲಕ್ಕೆ ತಂದು ಪುನಃ ಆ ಕುಡಿಕೆಯನ್ನು ಪೂಜಿಸಿ ಅದನ್ನು ಕೈಯಿಂದ ಮೇಲಕ್ಕೆತ್ತಿ ಆ ಕುಡಿಕೆಯಲ್ಲಿದ್ದ ನೀರನ್ನು ಭೂಮಿಗೆ ಅಭಿಮುಖವಾಗಿ ಸುರಿಯುವಾಗ ನೀರಿನೊಂದಿಗೆ ಯಾವ ಬೀಜ (ಕಾಳು) ಮೊದಲು ಭೂಮಿಯ ಮೇಲೆ ಬೀಳುವುದು. ಆ ಧಾನ್ಯ ಹುಲಸಾಗಿ ಬೆಳೆಯುತ್ತದೆ ಎಂದು ನಂಬಲಾಗುತ್ತದೆ.[೨೦] ಈ ಆಚರಣೆಯ ಹಿಂದೆಯೂ ಸಹ ಫಲವಂತಿಕೆ ಮತ್ತು ಸಮೃದ್ಧತೆಯ ಆಶಯಗಳಿವೆ.

**೧೦. ಋತುಮತಿ ಆಚರಣೆ**

ಜಿಲ್ಲೆಯಲ್ಲಿ ಚಾಲ್ತಿಯಲ್ಲಿರುವ ಕೆರೆ ಸಂಬಂಧಿ ಆಚರಣೆಗಳಲ್ಲಿ ಇದು ಮತ್ತೊಂದು ಪ್ರಮುಖ ಆಚರಣೆಯಾಗಿದ್ದು, ಇದನ್ನು ಜಿಲ್ಲೆಯ ಬೋರನಕುಂಟೆ, ಭೋಸೆದೇವರಹಟ್ಟಿ, ದಿಂಡಾವರ, ಐಮಂಗಲ, ದೊಡ್ಡಘಟ್ಟ, ಗಂಗನರಸಿ, ಇಸಾಮದ್ರ, ದೊಡ್ಡೇರಿ ಮೊದಲಾದೆಡೆ ಆಚರಿಸಲಾಗುತ್ತದೆ. ಋತುಮತಿಯಾಗದೆ ಇರುವ ಬಾಲಕಿಯರು ೩೧ ದಿನಗಳ ಕಾಲ ಬಗೆ ಬಗೆಯ ಮೊಸರೆಡೆ, ತುಪ್ಪದೆಡೆ, ಸಿಹಿ ಎಡೆ, ಖಾರದೆಡೆ ಮೊದಲಾದ ೩೧ ರೀತಿಯ ಎಡೆಗಳನ್ನು ಮಾಡಿಕೊಂಡು ಕೆರೆಗಳಿಗೆ ಬ್ರಾಹ್ಮಿ ಮುಹೂರ್ತದಲ್ಲಿ ಹೋಗಿ ಕೆರೆಯನ್ನು ಪೂಜಿಸಿಕೊಂಡು ಬಂದರೆ ಗಂಗಮ್ಮ ತಾಯಿ ಕೃಪೆಯಿಂದ ಪಟ್ಟಮಿಕ್ಕವರು ಋತುವಾಗುತ್ತಾರೆ ಎನ್ನುವ ನಂಬಿಕೆಯಿಂದ ಈ ಪೂಜೆಯನ್ನು ಮಾಡಲಾಗುತ್ತದೆ.[೨೧] ಈ ಆಚರಣೆಯ ಹಿಂದೆ ಫಲವಂತಿಕೆಯ ಆಶಯ ಎದ್ದುಕಾಣುತ್ತದೆ.

**೮.೩. ಜಾನಪದ ಆಶಯ ಮತ್ತು ವಿಧಿ-ನಿಷೇಧಗಳು**

ಪ್ರತಿ ಜಾನಪದ ಆಚರಣೆಯಲ್ಲಿ ಅವಲೋಕಿಸಬೇಕಾದ ಬಹಳ ಮುಖ್ಯವಾದ ಸಂಗತಿಗಳಿರುತ್ತವೆ. ಮಾನವನ ಹುಟ್ಟು, ಮದುವೆ, ಸಾವು ಈ ಮೂರು ಪ್ರಧಾನ ಘಟನೆಗಳ ಸುತ್ತ ಅವರಿಸಿಕೊಂಡಿರುವ ಜನಪದ ಆಚರಣೆಗಳು ಬಹುಮುಖ್ಯವಾಗಿ ಚಾರಿತ್ರಿಕ ಸಂಗತಿಗಳನ್ನು ನೆನಪಿಸುತ್ತವೆ. ಇಲ್ಲಿ ನಡೆಸುವ ಬಹುತೇಕ ಆಚರಣೆಗಳು ಬಹುಮುಖ್ಯವಾಗಿ ಜಲಸಂಬಂಧಿ ಆಚರಣೆಗಳಾಗಿದ್ದು, ಅವು ಜನರ ಫಲವಂತಿಕೆಯ ಪ್ರತೀಕವಾಗಿ ನಡೆಯುತ್ತವೆ ಎಂಬ ಸುಳಿವನ್ನು ನಮಗೆ ನೀಡುತ್ತವೆ. ಇದರೊಂದಿಗೆ ನಾವು ಗುರುತಿಸಬೇಕಾದ ಮತ್ತೊಂದು ಮುಖ್ಯ ಸಂಗತಿ ಎಂದರೆ ಯಜಮಾನಿಕೆ ಸಂಸ್ಕೃತಿಯವರು ಸಮಾಜದ ಸ್ವಾಸ್ಥ್ಯ ಕಾಪಾಡಿಕೊಂಡು ಹೋಗುವ ನೆಪದಲ್ಲಿ ತಮ್ಮ ಅಧೀನದಲ್ಲಿರುವ ಸಮಾಜ ಮತ್ತು ಸಮುದಾಯದ ಮೇಲೆ ಕೆಲ ವಿಧಿ ನಿಷೇಧಗಳನ್ನು ಹೇರಿರುವುದು. ಚಿತ್ರದುರ್ಗ ಜಿಲ್ಲೆಯಲ್ಲಿ ರೂಢಿಗತವಾಗಿರುವ ಕೆರೆ ಸಂಬಂಧಿ ಜನಪದ ಆಶಯ ಮತ್ತು ವಿಧಿ ನಿಷೇಧಗಳ ಕುರಿತಂತೆ ಈ ಮುಂದೆ ಚರ್ಚಿಸಲಾಗಿದೆ.

**ಜಾನಪದ ಆಶಯಗಳು**

ಚಿತ್ರದುರ್ಗ ಜಿಲ್ಲೆಯಲ್ಲಿರುವ ಕೆರೆಗಳಿಗೆ ಸಂಬಂಧಿಸಿದಂತೆ ನಡೆಯುವ ಪ್ರತಿ ಆಚರಣೆಗಳ ಹಿಂದೆ ಅನೇಕ ಸಾಮುದಾಯಿಕ ಆಶಯಗಳಿವೆ. ಅವುಗಳು ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಸಹಕಾರಿಯಾಗಿದ್ದು, ಅಂತಹ ಕೆಲ ಪ್ರಮುಖ ಆಶಯಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**೧. ಫಲವಂತಿಕೆಯ ಆಶಯ**

ಕೆರೆ ಸಂಬಂಧಿ ಆಚರಣೆಗಳಲ್ಲಿ ಪ್ರಧಾನವಾಗಿ ಫಲವಂತಿಕೆಯ ಆಶಯ ಎದ್ದು ಕಾಣುತ್ತದೆ. ಕನ್ನೆಕೆರೆ ಪೂಜೆ, ಋತುಮತಿ ಪೂಜೆ ಹಾಗೂ ದೇವರ ಪೂಜೆಗಳಲ್ಲಿ ಈ ಆಶಯವನ್ನು ಗುರುತಿಸಬಹುದಾಗಿದೆ. **"ನೂರೊಂದು ದೇವರಿಗೆ ನೂರೊಂದೆಡೆ"** ಎನ್ನುವ ವಿಶೇಷ ಆಚರಣೆಯ ವೇಳೆ ತಯಾರಿಸುವ ಚೆರಗ ಅಥವಾ ನೀರುಗೂಳ್‌ನ್ನು ಊರಿನ ಗಡಿ ಮೇರೆಗಳಲ್ಲಿ ಚೆಲ್ಲಲಾಗುತ್ತದೆ. ಅಲ್ಲದೇ ಇದನ್ನು ತಮ್ಮೂರಿನ ಮಾಗಣಿಯ ಸುತ್ತಲೂ ಚೆಲ್ಲಿದರೆ ಆ ವರ್ಷ ತಮ್ಮ ಕೃಷಿ ಬೆಳೆಗಳಿಗೂ, ದನ, ಕರು, ಮನುಷ್ಯರಿಗೆ ಯಾವುದೇ ರೋಗರುಜಿನಗಳು ಬರುವುದಿಲ್ಲ ಎಂಬ ನಂಬಿಕೆ ಸುತ್ತ ಮುತ್ತಲಿನ ಊರಿನವರದಾಗಿದೆ. ನಮ್ಮ ಗ್ರಾಮಕ್ಕೆ ಯಾವುದೇ ರೀತಿಯ ಕೆಡಕು ಉಂಟಾಗದಿರಲಿ ಎನ್ನುವ ಮತ್ತು ಈ ದೈವಗಳು ಕೋಪಗೊಂಡು ಕೆರೆಯ ಮೇಲೆ ಯಾವುದೇ ದುಷ್ಪಾರಿಣಾಮ ಬೀರದಿರಲಿ ಎನ್ನುವ ಉದ್ದೇಶ ಈ ಆಚರಣೆಗಿದೆ.[೨]

**೨. ಧಾರ್ಮಿಕ ಮುಕ್ತಿ**

ಕೆರೆ ಸಂಬಂಧಿ ಆಚರಣೆಗಳಲ್ಲಿ ಧಾರ್ಮಿಕ ಮುಕ್ತಿ ಎನ್ನುವ ಮತ್ತೊಂದು ಅಂಶ ಇರುವುದನ್ನು ಗುರುತಿಸಬಹುದು. ಇಲ್ಲಿ ಆಚರಿಸಲ್ಪಡುವ ಬಾಗಿನ, ಕೋಡಿ-ಪೂಜೆ, ಕುಡಿಕೆ-ಪೂಜೆ, ಗಂಗಮ್ಮನ-ಪೂಜೆ, ಕೆರೆ-ತುಂಬಪೂಜೆ, ದೇವರ ಪೂಜೆಯ ಆಚರಣೆಗಳ ಹಿಂದೆ ಈ ಆಶಯಗಳಿರುವುದನ್ನು ಗುರುತಿಸಬಹುದು. ಪ್ರಾಗೈತಿಹಾಸಿಕ ಕಾಲದ ಮನುಷ್ಯ ನಿಸರ್ಗದಲ್ಲಿ ನಡೆಯುವ ವಿದ್ಯಮಾನಗಳಾದ

ಗುಡುಗು, ಸಿಡಿಲು, ಮಳೆ ಇತ್ಯಾದಿಗಳಿಂದ ಆಶ್ಚರ್ಯಗೊಂಡ ಅವನು ನಿಸರ್ಗದಲ್ಲಿ ನನಗಿಂತಲೂ ಒಂದು ಅದ್ಭುತ ಶಕ್ತಿ ಇದೆ ಎಂಬುದನ್ನು ಅರಿತು ಅವುಗಳ ಸಂತೃಪ್ತಿಗಾಗಿ ಅವುಗಳನ್ನು ಆರಾಧಿಸಲು ಮುಂದಾದ. ಇದುವೇ ಮುಂದೆ ವಿವಿಧ ಆಚರಣೆಗಳ ಹುಟ್ಟಿಗೆ ಕಾರಣವಾಯಿತು. ಈ ರೀತಿಯ ಆಚರಣೆಗಳಿಂದ ಮಳೆ, ಬೆಳೆ ಸಮೃದ್ಧಿಯಾಗಿ ಜನ ಸುಖ ಸಮೃದ್ಧಿಯಿಂದ ಜೀವಿಸುತ್ತಾರೆ ಎನ್ನುವ ನಂಬಿಕೆ ಜನರಲ್ಲಿದೆ. ನಾವು ದೇವರ ಅವಕೃಪೆಗೆ ಒಳಗಾಗುವುದಿಲ್ಲ ಮತ್ತು ದೈವದಿಂದ ಮುಕ್ತಿ ಪಡೆಯಬಹುದು ಎನ್ನುವ ನಂಬಿಕೆ ಜನರಲ್ಲಿದೆ.

**೩. ಜೀವನ ಮುಕ್ತಿ**

ಕೆರೆ ಸಂಬಂಧಿ ಆಚರಣೆಗಳಲ್ಲಿ ಪ್ರಧಾನವಾಗಿ ಜೀವನ ಮುಕ್ತಿಯ ಆಶಯ ಎದ್ದು ಕಾಣುತ್ತದೆ. ಇಲ್ಲಿ ಆಚರಿಸಲ್ಪಡುವ ಬಾಗಿನ, ಬಲಿ, ಗಂಗಮ್ಮನ ಪೂಜೆಯ ಆಚರಣೆಗಳ ಹಿಂದೆ ಈ ಆಶಯಗಳಿರುವುದನ್ನು ಗುರುತಿಸಬಹುದು. ಸಮಾಜದ ಒಳಿತಿಗಾಗಿ ತಮ್ಮ ಸ್ವ-ಇಚ್ಛೆಯಿಂದ, ಇಲ್ಲವೇ ಮನೆಯವರ ಇಷ್ಟಕ್ಕಾಗಿ ಕೆರೆಗೆ ಹಾರವಾದ ಭಾಗೀರಥಿ, ಮದಗಮ್ಮ, ಕೆಂಚಮ್ಮರ ಪ್ರಕರಣಗಳ ಹಿಂದೆ ಬಹುಶಃ ಇದೇ ಜೀವನ ಮುಕ್ತಿಯ ಆಶಯವಿದೆ. ಇದರೊಂದಿಗೆ ಕೆರೆ ಸಂಬಂಧಿ ಆಚರಣೆಗಳಲ್ಲಿ ಮರಿ ಕುರಿ, ಚೆರಗದ ಕುರಿ, ಮೀಸಲು ಕುರಿ, ತುಂಬು ಗರ್ಭ ಧರಿಸಿರುವ (ಬಾನ್‌ಗುರಿ) ಕುರಿಗಳನ್ನು ಬಲಿ ನೀಡುವ ಆಚರಣೆಗಳು ಸಹ ಜೀವನ ಮುಕ್ತಿಯ ಆಶಯವಿದ್ದು, ಇವುಗಳಲ್ಲಿ ಸಮಾಜದ ಹಿತ ಚಿಂತನೆಯ ಮೌಲ್ಯ ಅಡಗಿದೆ. ಈ ರೀತಿಯ ಆಚರಣೆಗಳಿಂದ ಮಳೆ, ಬೆಳೆ ಸಮೃದ್ಧಿಯಾಗಿ, ಜನ ಸುಖ, ಸಂಮೃದ್ಧಿಯಿಂದ ಜೀವಿಸುತ್ತಾರೆ ಎನ್ನುವ ನಂಬಿಕೆ ಜನರಲ್ಲಿದೆ. ಇದರೊಂದಿಗೆ ಕೆರೆ ಮತ್ತು ಜನರ ಬದುಕಿನ ನಡುವೆ ಅವಿನಾಭಾವ ಸಂಬಂಧಗಳಿರುವುದನ್ನು ಗುರುತಿಸಬಹುದು.

**೪. ಸಮೃದ್ಧಿಯ ಸಂಕೇತ**

ಕೆರೆ ಸಂಬಂಧಿ ಆಚರಣೆಗಳಲ್ಲಿ ಪ್ರಧಾನವಾಗಿ ಸಮೃದ್ಧಿಯ ಆಶಯ ಎದ್ದು ಕಾಣುತ್ತದೆ. ಇಲ್ಲಿ ಆಚರಿಸಲ್ಪಡುವ ಬಾಗಿನ, ಕುಡಿಕೆ, ಗಂಗಮ್ಮನ, ಕೆರೆ ತುಂಬ, ಬರಗಲ್ಲು ಪೂಜೆ, ಕತ್ತೆ ಮತ್ತು ಕಪ್ಪೆಗಳ ಮದುವೆಯ ಆಚರಣೆಗಳ ಹಿಂದೆ ಸಮೃದ್ಧತೆಯ ಆಶಯಗಳಿರುವುದನ್ನು ಗುರುತಿಸಬಹುದು. ಈ ರೀತಿಯ ಆಚರಣೆಗಳಿಂದ ಮಳೆ, ಬೆಳೆ ಸಮೃದ್ಧಿಯಾಗಿ, ಜನ ಸುಖ, ಸಮೃದ್ಧಿಯಿಂದ ಜೀವಿಸುತ್ತಾರೆ ಎನ್ನುವ ನಂಬಿಕೆ ಜನರಲ್ಲಿದೆ. ಇದರೊಂದಿಗೆ ಕೆರೆ ಮತ್ತು ಜನರ ಬದುಕಿನ ನಡುವಿನ ಅವಿನಾಭವ ಸಂಬಂಧಗಳಿರುವುದನ್ನು ಗುರುತಿಸಬಹುದು.

**೫. ಗ್ರಾಮಕ್ಕೆ ಯಾವುದೇ ರೀತಿಯ ಕೆಡುಕು ಉಂಟಾಗದಿರಲೆಂಬ ಆಶಯ**

ಜಿಲ್ಲೆಯಲ್ಲಿ ನಡೆಯುವ ಕೆರೆ ಸಂಬಂಧಿ ಆಚರಣೆಗಳಲ್ಲಿ ಪ್ರಧಾನವಾಗಿ ಗ್ರಾಮಕ್ಕೆ ಯಾವುದೇ ರೀತಿಯ ಕೆಡುಕು ಉಂಟಾಗದಿರದೆಂಬ ಆಶಯ ಎದ್ದು ಕಾಣುತ್ತದೆ. ಇಲ್ಲಿ ಆಚರಿಸಲ್ಪಡುವ ಗಂಗಮ್ಮನ ಪೂಜೆ, ಶುದ್ಧಿ ಪೂಜೆ, ಕೆರೆ ತುಂಬ ಪೂಜೆ, ಕೋಡಿಪೂಜೆಗಳ ಆಚರಣೆಗಳ ಹಿಂದೆ ಇದೇ ರೀತಿಯ ಆಶಯಗಳಿರುವುದನ್ನು ಗುರುತಿಸಬಹುದು. ಈ ರೀತಿಯ ಆಚರಣೆಗಳಿಂದ ಕೇವಲ ಮಳೆ, ಬೆಳೆ ಸವೃದ್ಧಿಯಾಗಿ ಜನ ಸುಖ ಸಮೃದ್ಧಿಯಿಂದ ಜೀವಿಸುತ್ತಾರೆ ಎನ್ನುವ ನಂಬಿಕೆಯೊಂದಿಗೆ,

ಕೆರೆಗಳಿಗೆ ಯಾವುದೇ ರೀತಿಯ ಅಪಾಯ ಉಂಟಾಗದಿರಲಿ ಮತ್ತು ಕೆರೆಯ ನೀರಿನಿಂದಾಗಿ ಜನರಿಗೆ ಯಾವುದೇ ರೀತಿಯ ಸಾಂಕ್ರಾಮಿಕ ರೋಗಗಳು ಬಾರದಿರಲಿ ಹಾಗೂ ಅಧಿಕ ಮಳೆಯಾದಾಗ ಕೆರೆಯ ಕೋಡಿಯ ಮಟ್ಟ ಅಪಾಯದ ಹಂತವನ್ನು ತಲುಪಿ ಪ್ರವಾಹ ಪರಿಸ್ಥಿತಿ ಉಂಟಾದಾಗ ಜನರಿಗೆ ಯಾವುದೇ ತೊಂದರೆಗಳು ಆಗದಿರಲಿ ಎನ್ನುವ ಆಶಯ ಇಂತಹ ಆಚರಣೆಗಳಿವೆ.

**ಜಾನಪದ ವಿಧಿ ನಿಷೇಧಗಳು**

ಕೆರೆ ಮತ್ತು ಜನರ ಬದುಕಿನ ನಡುವಿನ ಅವಿನಾಭಾವ ಸಂಬಂಧಗಳಿರುವಂತೆಯೇ ಕೆರೆ ಮತ್ತು ಜನರ ನಡುವೆ ಕೆಲ ವಿಧಿ ನಿಷೇಧಗಳಿರುವುದನ್ನು ಗುರುತಿಸಬಹುದಾಗಿದ್ದು, ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವ ಉದ್ದೇಶ ಮತ್ತು ಯಥಾಸ್ಥಿತಿಯನ್ನು ಕಾಪಾಡಿಕೊಂಡು ಹೋಗುವ ಮತ್ತು ಆ ಮೂಲಕ ಬಲಿಷ್ಠ ವ್ಯಕ್ತಿಗಳು ಸಮಾಜದ ಕೆಳ ವರ್ಗಗಳ ಮೇಲೆ ಹಿಡಿತ ಸಾಧಿಸುವ ಪ್ರಯತ್ನಗಳು ಅಡಗಿವೆ. ಜಿಲ್ಲೆಯಲ್ಲಿರುವ ಕೆಲ ವಿಧಿ ನಿಷೇಧಗಳ ಕುರಿತ ಪ್ರಮುಖ ವಿವರಗಳು ಈ ಮುಂದಿನಂತಿವೆ.

**ಧಾರ್ಮಿಕ ನಿಷೇಧ**

ಫಲವಂತಿಕೆ ಇಲ್ಲವೇ ಸಮೃದ್ಧತೆಯ ಹೆಸರಿನಲ್ಲಿ ನಡೆಯುವ ಬಹುತೇಕ ಕೆರೆ ಸಂಬಂಧಿ ಆಚರಣೆಗಳಿಗೆ ಕೆಲ ವಿಧಿ ನಿಷೇಧಗಳು ಸಹ ಇವೆ. ಅವುಗಳಲ್ಲಿ ಧಾರ್ಮಿಕ ನಿಷೇಧವು ಒಂದಾಗಿದೆ. ಕೆಲ ಆಚರಣೆಗಳಲ್ಲಿ ಬಲಿ ನೀಡಿದ ಕುರಿಯ ಉದರದಲ್ಲಿರುವ (ಕರಸು) ಸೆಗಣಿಯನ್ನು, ಅದರ ರಕ್ತ ಮತ್ತು ಅನ್ನದೊಂದಿಗೆ ಬೇಯಿಸಿ ಚೆರಗ ಅಥವಾ ನೀರುಗೂಳ್ ತಯಾರಿಸಲಾಗುತ್ತದೆ. ಇದನ್ನು ಊರಿನ ಗಡಿ ಮೇರೆಗಳಲ್ಲಿ ಚೆಲ್ಲಲಾಗುತ್ತದೆ. ಈ ವೇಳೆ ಪರ ಊರಿನ ಯಾವುದೇ ವ್ಯಕ್ತಿ, ಇಲ್ಲವೇ ದೈವವನ್ನಾಗಲಿ ಚೆರಗದ ಹತ್ತಿರ ಸುಳಿಯಲು ಬಿಡುವುದಿಲ್ಲ. ಏಕೆಂದರೆ ಚೆರಗವು ಹುಲಸಿನ ಸಂಕೇತವಾಗಿದ್ದು, ಅದು ಯಾವುದೇ ಕಾರಣಕ್ಕೂ ಪರ ಊರಿನವರ ಕೈಸೇರದಂತೆ ನೋಡಿಕೊಳ್ಳಲಾಗುತ್ತದೆ. ಒಂದು ವೇಳೆ ಚೆರಗ ಬೇರೆಯವರ ಕೈಸೇರಿದರೆ ನಮ್ಮ ಹುಲಸು ಹೊರಟು ಹೋಗಿ ನಮಗೆ ದಾರಿದ್ರ್ಯ ಬರುತ್ತದೆ ಎನ್ನುವ ನಂಬಿಕೆ ಇದೆ. ಇದನ್ನು ತಮ್ಮೂರಿನ ಮಾಗಣಿಯ ಸುತ್ತಲೂ ಚೆಲ್ಲಿದರೆ ಆ ವರ್ಷ ತಮ್ಮ ಕೃಷಿ ಬೆಳೆಗಳಿಗೂ, ದನ, ಕರು, ಮನುಷ್ಯರಿಗೆ ಯಾವುದೇ ರೋಗ ರುಜಿನಗಳು ಬರುವುದಿಲ್ಲ ಮತ್ತು ಈ ರೀತಿ ಮಾಡುವುದರಿಂದ ನಮ್ಮ ಗ್ರಾಮಕ್ಕೆ ಯಾವುದೇ ರೀತಿಯ ಕೆಡುಕು ಉಂಟಾಗುವುದಿಲ್ಲ ಎನ್ನುವ ನಂಬಿಕೆ ಇದೆ. ಈ ಕಾರಣಕ್ಕಾಗಿ ಧಾರ್ಮಿಕ ದೃಷ್ಟಿಯಿಂದ ಈ ನಿಷೇಧ ಹೇರಿರುವುದನ್ನು ಗುರುತಿಸಬಹುದು. ಈ ನಿಷೇಧದ ಹಿಂದೆಯೂ ಸಹ ಫಲವಂತಿಕೆ ಮತ್ತು ಸಮೃದ್ಧತೆಯ ಆಶಯಗಳಿರುವುದನ್ನು ಗುರುತಿಸಬಹುದು.[೨೨]

**ವ್ಯಕ್ತಿ ನಿಷೇಧ**

ಫಲವಂತಿಕೆ ಇಲ್ಲವೇ ಸಮೃದ್ಧತೆಯ ಹೆಸರಿನಲ್ಲಿ ನಡೆಯುವ ಬಹುತೇಕ ಕೆರೆ ಸಂಬಂಧಿ ಆಚರಣೆಗಳಿಗೆ ಕೆಲ ವಿಧಿ ನಿಷೇಧಗಳು ಸಹ ಇವೆ. ಅವುಗಳಲ್ಲಿ ವ್ಯಕ್ತಿ ನಿಷೇಧವು ಒಂದಾಗಿದೆ. ಕೆಳ ವರ್ಗದವರಿಗೆ ಅದರಲ್ಲೂ ದಲಿತ ಅಸ್ಪೃಶ್ಯರಿಗೆ ದೇವಾಲಯ ಪ್ರವೇಶ ನಿರಾಕರಿಸಿರುವಂತೆ ಕೆರೆಗಳಲ್ಲಿನ ನೀರನ್ನು ಮುಟ್ಟಬಾರದೆಂಬ ವಿಧಿ ನಿಷೇಧವನ್ನು ಬಲಾಢ್ಯ ಸಮುದಾಯಗಳು ಧರ್ಮ ಮತ್ತು

ನಂಬಿಕೆಯ ಹೆಸರಿನಲ್ಲಿ ಹೇರಲಾಗಿದೆ. ಈ ವರ್ಗಗಳು ನೀರನ್ನು ಸ್ಪರ್ಶಿಸದೆ ಇರುವಂತೆ ಹೇರಿರುವ ನಿಷೇಧವೇ ವ್ಯಕ್ತಿ ನಿಷೇಧವಾಗಿದೆ. ಹಿಂದೆ ಕೆಲವು ಸಮುದಾಯಗಳು ಕೆರೆಯ ನೀರನ್ನು ಕುಡಿಯಲು ಉಪಯೋಗಿಸುತ್ತಿದ್ದರು. ಶೂದ್ರರು ಆ ನೀರನ್ನು ಮುಟ್ಟಿದರೆ ಆ ನೀರು ಮಲೀನವಾಗುತ್ತದೆ ಎಂಬ ಕುರುಡು ನಂಬಿಕೆ ಇದಕ್ಕೆ ಕಾರಣವಾಗಿತ್ತು.

**ಸಮುದಾಯ ನಿಷೇಧ**

ಫಲವಂತಿಕೆ ಇಲ್ಲವೇ ಸಮೃದ್ಧತೆಯ ಹೆಸರಿನಲ್ಲಿ ನಡೆಯುವ ಜಿಲ್ಲೆಯ ಬಹುತೇಕ ಕೆರೆ ಸಂಬಂಧಿ ಆಚರಣೆಗಳಿಗೆ ಕೆಲ ವಿಧಿ ನಿಷೇಧಗಳಿದ್ದು, ಅವುಗಳಲ್ಲಿ ಸಮುದಾಯ ನಿಷೇಧವು ಒಂದಾಗಿದೆ. ಕುಡಿಕೆ ಪೂಜೆ, ಗಂಗೆ ಪೂಜೆ ಮತ್ತು ಕೋಡಿ ಪೂಜೆಯ ವೇಳೆ ಕೆಲ ಸಮುದಾಯಗಳು ಮತ್ತು ಬಂಧು-ಬಳಗದವರು ಆ ಆಚರಣೆಗಳಲ್ಲಿ ಭಾಗವಹಿಸಲು ನಿಷೇಧ ಹೇರಲಾಗಿದೆ. ಅದೇ ರೀತಿ ಚೆರಗ ಚೆಲ್ಲುವವರೆಗೆ ಹೊಸಬರಿಗೆ ಮತ್ತು ಬಂಧುಗಳಿಗೆ ಊರಿನಲ್ಲಿ ಪ್ರವೇಶ ನಿಷೇಧ ಹೇರಲಾಗಿದೆ. ಅಲ್ಲದೇ ಅಲ್ಲಿಯವರೆಗೆ ಕಾಲಿಗೆ ಚಪ್ಪಲಿ ಧರಿಸಬಾರದೆಂಬ ಮತ್ತೊಂದು ನಿಷೇಧವಿದೆ. ಇದು ಸಹ ಫಲವಂತಿಕೆಯ ಹೆಸರಿನಲ್ಲಿ ನಡೆಯುವ ಆಚರಣೆಯಾಗಿದೆ.

**ಕೊನೆ ಟಿಪ್ಪಣಿಗಳು**

೧. ರಾಜಾರಾಮ ಹೆಗಡೆ(ಸಂ), ೨೦೦೧, ಕೆರೆ ನಿರ್ವಹಣೆ ಚಾರಿತ್ರಿಕ ಅಧ್ಯಯನ, ಪು.೨೭-೨೯
೨. ನೀಲತ್ತಹಳ್ಳಿ ಕಸ್ತೂರಿ (ಅನು.), ೨೦೦೩, ಕರ್ನಾಟಕದಲ್ಲಿ ಕರೆ ನೀರಾವರಿ, ಪು. ೧೭-೧೮
೩. ಲಕ್ಷ್ಮಣ್ ತೆಲಗಾವಿ, ೧೯೯೭, ನಾಯಕನಹಟ್ಟಿ ಪಾಳೆಯಗಾರರ ಕುರಿತ ಒಂದು ಐತಿಹ್ಯ, ಇತಿಹಾಸ ದರ್ಶನ. ಸಂ.೦೭, ಪು. ೧೪
೪. ಜಗದೀಶ ಕೆರೆನಳ್ಳಿ, ೨೦೧೬, ಹೊಳಲ್ಕೆರೆ ತಾಲೂಕಿನ ಕೆರೆಗಳ ಸಾಂಸ್ಕೃತಿಕ ಅಧ್ಯಯನ, ಮೊಂಬೊಳಲ ಸಿರಿ, ಸಂ.೧೬, ಚಿತ್ರದುರ್ಗ ಜಿಲ್ಲಾ ೧೩ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ, ಪು. ೬೭-೭೩
೫. ಅದೇ. ಪು. ೬೭-೭೩,
೬. ವೀರಬಸಪ್ಪ, (೪೮), ಬಹದ್ದೂರಘಟ್ಟ, ಭರಮಸಾಗರ ಇವರು ನೀಡಿದ ಮಾಹಿತಿ.
೭. ತಿಪ್ಪೇಸ್ವಾಮಿ.ಎಚ್., ೨೦೧೪, ದಾವಣಗೆರೆ ಜಿಲ್ಲೆಯ ದೇವಾಲಯಗಳು, ಪು. ೪೮
೮. ತಿಪ್ಪೇಸ್ವಾಮಿ.ಎಚ್., ೨೦೧೪, ತಳಮುಖಿ, ಪು. ೨೮-೫೬
೯. ತಿಪ್ಪೇರುದ್ರ ಸ್ವಾಮಿ ಎಚ್., ೧೯೯೭, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು. ೫೮-೬೭
೧೦. ಅದೇ., ಪು. ೫೮-೬೭
೧೧. ಕೆಲವು ಕಡೆ ಒಂದು ಜೊತೆ ಮೊರದಲ್ಲಿ ಬಾಗಿನ ಅರ್ಪಿಸುತ್ತಾರೆ.
೧೨. ಕೆಲವರು ಬಾಗಿನ ನೀಡುವಾಗ ಬೆಳ್ಳಿಕಾಲುಂಗುರ ಮತ್ತು ಬಂಗಾರದ ತಾಳಿಯನ್ನು ನೀಡುತ್ತಾರೆ.
೧೩. ಶ್ರೀಮತಿ ಮಂಜಮ್ಮ, (೬೭), ಇವರು ನೀಡಿದ ಮಾಹಿತಿ.

೧೪. ಶ್ರೀ. ದುರುಗಪ್ಪ ಇವರು ನೀಡಿದ ಮಾಹಿತಿ

೧೫. ಜಗದೀಶ ಕೆರೆನಳ್ಳಿ, ೨೦೧೬, ಪೂರ್ವೋಕ್ತ., ಪು. ೨೬

೧೬. ಗುಡ್ಡದೇಶ್ವರಪ್ಪ (೫೩)ಇವರು ನೀಡಿದ ಮಾಹಿತಿ

೧೭. ಜಗದೀಶ ಕೆರೆನಳ್ಳಿ, ಪೂರ್ವೋಕ್ತ., ಪು. ೨೬

೧೮. ಅದೇ, ಪು. ೨೬–೨೮

೧೯. ಶ್ರೀ.ತಾಳಕೇರಪ್ಪನವರ ಮಲ್ಲಪ್ಪ, (೬೫) ತಾಳ್ಯ ಇವರು ನೀಡಿದ ಮಾಹಿತಿ.

೨೦. ಜಗದೀಶ ಕೆರೆನಳ್ಳಿ, ೨೦೧೬, ಪೂರ್ವೋಕ್ತ., ಪು. ೨೬

೨೧. ಕೆ.ಪಾಪಣ್ಣನವರ್, ೨೦೧೨, ನವತೇಜ, ಕರ್ನಾಟಕ ಕೆರೆಗಳ ಸಮಾಜಿಕ ಆಯಾಮಗಳು, ಪು. ೩೨–೩೪

೨೨. ಅದೇ, ಪು. ೩೨–೩೪

೨೩. ಅದೇ, ಪು. ೩೨–೩೪

## ಅಧ್ಯಾಯ ಒಂಭತ್ತು

# ಸಮಾರೋಪ

ಚಿತ್ರದುರ್ಗ ಪ್ರದೇಶ ಮತ್ತು ಈ ಜಿಲ್ಲೆಯು ಪ್ರಾಗೈತಿಹಾಸಿಕ ಕಾಲದಿಂದಲೂ ಮಾನವನ ನೆಲೆಯಾಗಿದ್ದು, ಬಹು ಪ್ರಾಚೀನ ಕಾಲದಿಂದ ವಿವಿಧ ರಾಜ ಮನೆತನಗಳ ಆಳ್ವಿಕೆಗೊಳಪಟ್ಟಿತ್ತು. ಈ ಪ್ರದೇಶವು ಮೌರ್ಯ, ಶಾತವಾಹನ, ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ, ಚಿತ್ರದುರ್ಗ ಪಾಳೆಯಗಾರರು, ಹೈದರ್ ಮತ್ತು ಟಿಪ್ಪು, ಮೈಸೂರು ಅರಸರು, ಬ್ರಿಟಿಷರ ನೇರ ಆಳ್ವಿಕೆಗೆ ಒಳಗಾಯಿತು. ಈ ಜಿಲ್ಲೆಯಲ್ಲಿ ದೊರೆತ ಶಾಸನಗಳು ಈ ಭಾಗವನ್ನು 'ದುರ್ಗದ ಸೀಮೆ', 'ದುರ್ಗದ ರಾಜ್ಯ' 'ಚಿಂಚನಕಲ್ಲು', 'ಬೆ(ಬಿ)ಮ್ಮತ್ತನೂರು ದುರ್ಗ', 'ಚಿಂನ್ಮನಗಿರಿದುರ್ಗ' 'ಶಿಂಗನಗಿರಿದುರ್ಗ'ವೆಂದೂ 'ಚಿಂತಲಕಲದುರ್ಗ' ಎಂದೆಲ್ಲ ಉಲ್ಲೇಖಿಸಿರುವುದು ಅದರ ಪ್ರಾಚೀನತೆಗೆ ಪುರಾವೆಯಾಗಿವೆ.

ಮಾನವ 'ಸ್ವಾವಲಂಬಿ ಮತ್ತು ಉತ್ಪಾದನಾ ಜೀವನ ಕ್ರಮವನ್ನು' ಅಳವಡಿಸಿಕೊಳ್ಳಲು ಕೃಷಿ ಬಹುಮುಖ್ಯ ಕಾರಣವಾದಂತೆ ನೀರಾವರಿ ವ್ಯವಸ್ಥೆಯ ಅಳವಡಿಕೆಯೂ ಸಹ ಮಾನವನ ಅಭಿವೃದ್ಧಿಗೆ ಪೂರಕವಾಗಿ, ಚರಿತ್ರೆಯಲ್ಲಿಯೇ ಅತ್ಯಂತ ಪ್ರಮುಖವಾದ ಮೈಲಿಗಲ್ಲಾಯಿತು. ಕೆರೆ ಕಾಲುವೆಗಳನ್ನು ನಿರ್ಮಿಸುವುದು ಮಹೋನ್ನತ ಕಾರ್ಯ, ಸಮಾಜ ಸೇವಾ ಕಾರ್ಯ, ಇದೊಂದು ಪುಣ್ಯಕಾರ್ಯ ಎಂಬ ಮನೋಭಾವನೆ ಮತ್ತು ಉದ್ದೇಶ ನಮ್ಮ ಹಿರಿಯರಿಗಿತ್ತು. ಇದೇ ಹಿನ್ನೆಲೆಯಲ್ಲಿ ಅಸಂಖ್ಯಾತ ರಾಜರು, ರಾಣಿಯರು, ಅಧಿಕಾರಗಳು, ಜನಸಾಮಾನ್ಯರು ಈ ಪರೋಪಕಾರಿ ಕಾರ್ಯದಲ್ಲಿ ಹೆಚ್ಚು ತೊಡಗಿಸಿಕೊಂಡ ಪರಿಣಾಮವಾಗಿ ರಾಜ್ಯದಲ್ಲಿ ಅಸಂಖ್ಯಾತ ಕೆರೆಗಳು ಪ್ರಾಚೀನ ಕಾಲದಿಂದಲೂ ನಿರ್ಮಾಣವಾಗಿರುವುದಕ್ಕೆ ಚರಿತ್ರೆ ಸ್ಪಷ್ಟೀಕರಿಸಿದೆ.

ಚಿತ್ರದುರ್ಗವು ಕರ್ನಾಟಕ ರಾಜ್ಯದ ಮಧ್ಯಭಾಗದಲ್ಲಿದ್ದು, 'ದಖನ್ ಪ್ರಸ್ಥಭೂಮಿ'ಯ ಭಾಗವಾಗಿದೆ. ಇದು ಕರ್ನಾಟಕದ ಪೀಠಭೂಮಿಯ ಕೇಂದ್ರ ಎನಿಸಿದ್ದು, ಕೃಷ್ಣ ಜಲಾನಯನ ಪ್ರದೇಶಕ್ಕೆ ಒಳಪಟ್ಟಿದೆ. ಕರ್ನಾಟಕದ ಮೈದಾನ ಪ್ರದೇಶದಲ್ಲಿರುವ ಚಿತ್ರದುರ್ಗ ಜಿಲ್ಲೆಯು ರಾಜ್ಯದಲ್ಲಿ ಅತ್ಯಂತ ಕಡಿಮೆ ಮಳೆಯಾಗುವ ಎರಡನೇ ಪ್ರದೇಶವಾಗಿದ್ದು, ತೀವ್ರ ಅನಾವೃಷ್ಟಿಗೆ ತುತ್ತಾಗುವ ಪ್ರದೇಶಗಳಲ್ಲಿ ಇದು ಸಹ ಒಂದಾಗಿದೆ. ಈ ಹಿನ್ನೆಲೆಯಲ್ಲಿ ಬಿದ್ದ ಮಳೆಯ ನೀರನ್ನು ಸಂಗ್ರಹಿಸುವ ಹಾಗೂ ವ್ಯವಸ್ಥಿತವಾಗಿ ಆ ನೀರನ್ನು ಬಳಸಿಕೊಳ್ಳುವ ಕಾರ್ಯ ಬಹುಹಿಂದಿನಿಂದಲೂ ಇಲ್ಲಿ ವ್ಯವಸ್ಥಿತವಾಗಿ ನಡೆದು

ಬಂದಿರುವುದನ್ನು ಗುರುತಿಸಬಹುದಾಗಿದೆ. ಇದೇ ಮಹತ್ವಾಕಾಂಕ್ಷೆಯೊಂದಿಗೆ ಜಿಲ್ಲೆಯ ವಿವಿಧೆಡೆ ನಿರ್ಮಿತವಾಗಿರುವ ಪ್ರಾಚೀನ ಕೆರೆಗಳು ಇಲ್ಲಿನ ಕೃಷಿ ಅಭಿವೃದ್ಧಿಗೆ ಮಹತ್ವದ ಕೊಡುಗೆ ನೀಡಿವೆ. ಇಲ್ಲಿ ಕ್ರಿಪೂ. ೩ನೇ ಶತಮಾನದಿಂದ, ಕ್ರಿಪೂ. ೧೯ನೇ ಶತಮಾನದವರೆಗೆ ಆಳ್ವಿಕೆ ಮಾಡಿದ ವಿವಿಧ ರಾಜಮನೆತನಗಳು, ಅಧಿಕಾರಿಗಳು, ಜನರು ಕೆರೆ ನಿರ್ಮಾಣಕ್ಕೆ ಹೆಚ್ಚಿನ ಆದ್ಯತೆ ಕೊಟ್ಟ ಪರಿಣಾಮ ಇಲ್ಲಿ ಹಲವಾರು ಕೆರೆಗಳು ನಿರ್ಮಾಣವಾಗಿವೆ. ಜಿಲ್ಲೆಯ ವಿವಿಧೆಡೆ ದೊರೆತ ಸುಮಾರು ೨೯ ಶಾಸನಗಳು ಇಲ್ಲಿನ ಕೆರೆ ನಿರ್ಮಾಣ, ಕೆರೆ ನೀರಾವರಿ ವ್ಯವಸ್ಥೆಯನ್ನು ಮತ್ತು ಅವುಗಳ ದುರಸ್ತಿಗೆ ಸಂಬಂಧಿಸಿದ ವಿವರಗಳನ್ನು ಉಲ್ಲೇಖಿಸಿವೆ. ಜಿಲ್ಲೆಯಾದ್ಯಂತ ಒಟ್ಟು ೨೮೦ ಚಾರಿತ್ರಿಕ ಕೆರೆಗಳಿವೆ. ಅವುಗಳಲ್ಲಿ ೧೪೮ ದೊಡ್ಡ ಕೆರೆಗಳು ಹಾಗು ೧೩೨ ಸಣ್ಣ ಕೆರೆಗಳಿದ್ದು, ಅಧ್ಯಯನ ದೃಷ್ಟಿಯಿಂದ ಅವು ಅತ್ಯಂತ ಮಹತ್ವ ಪಡೆದಿವೆ. ಇಲ್ಲಿನ ಕೆರೆಗಳು ಚರಿತ್ರೆಯ ಆಕರಗಳಾಗಿದ್ದು, ಇವುಗಳು ನೀರಾವರಿ ಇತಿಹಾಸಕ್ಕೆ ತನ್ನ ಅಮೂಲ್ಯ ಕೊಡುಗೆ ನೀಡಿವೆ. ಇಲ್ಲಿ ಆಳ್ವಿಕೆ ಮಾಡಿದ ಪ್ರಭುತ್ವಗಳಂತೆಯೇ ಇಲ್ಲಿಯ ಸ್ಥಳೀಯರು ಸಹ ಸಾಮೂಹಿಕ ಸಹಭಾಗಿತ್ವದ ಪರಿಕಲ್ಪನೆಯಲ್ಲಿ ಕೆರೆಗಳ ನಿರ್ಮಾಣದಂಥ ಸಾಮಾಜಿಕ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಲ್ಲದೆ ಅವುಗಳ ನಿರ್ವಹಣೆ ಮತ್ತು ದುರಸ್ತಿ ಕಾರ್ಯದಲ್ಲಿ ಭಾಗವಹಿಸಿದ್ದಾರೆ. ಇದನ್ನು ಇಲ್ಲಿ ದೊರೆತ ಶಾಸನಗಳು ಪುಷ್ಟೀಕರಿಸಿದ್ದು, ಇದನ್ನು ಗುರುತಿಸಿರುವುದು ಈ ಅಧ್ಯಯನದ ವಿಶೇಷತೆಯಾಗಿದೆ.

ಈ ಪ್ರದೇಶವು ಹಿಂದಿನ ರಾಜಪ್ರಭುತ್ವದಿಂದ ಪ್ರಸ್ತುತ ಜನತಾ ಪ್ರಭುತ್ವದವರೆಗೆ ರಾಜಕೀಯ ಕ್ಷೇತ್ರಕ್ಕೆ ತನ್ನ ಅಮೂಲ್ಯ ಕೊಡುಗೆಗಳನ್ನು ನೀಡಿದೆ. ಅಲ್ಲದೆ ಇಲ್ಲಿನ ಚರಿತ್ರೆಯೂ ಅದ್ವಿತೀಯವಾಗಿದ್ದು, ಮಾನವ ಸಂಸ್ಕೃತಿಯ ಏಳ್ಗೆಗಾಗಿ ತನ್ನದೇ ಆದ ಮಹತ್ವದ ಕೊಡುಗೆಯನ್ನು ನೀಡಿದೆ. ಚಾರಿತ್ರಿಕ, ಸಾಂಸ್ಕೃತಿಕ ಇತಿಹಾಸ ಹಾಗೂ ಪ್ರಾದೇಶಿಕ ಇತಿಹಾಸ ಮತ್ತು ಸಬಾಲ್ಟ್ರನ್ ಅಧ್ಯಯನದ ದೃಷ್ಟಿಯಿಂದ ಚಿತ್ರದುರ್ಗವು ಅತಿ ಮಹತ್ವದ ಸ್ಥಾನ ಪಡೆದಿದೆ. ಸಬಾಲ್ಟರ್ನ್ ಅಧ್ಯಯನವು ಸ್ಥಳಿಯ ಚರಿತ್ರೆ, ಕೆಳಸ್ಥರದ ಜನರ ಮತ್ತು ಕುಶಲಕರ್ಮಿಗಳ ಅಧ್ಯಯನಕ್ಕೆ ಹೆಚ್ಚಿನ ಒತ್ತನ್ನು ನೀಡುತ್ತದೆ. ಈ ಹಿನ್ನೆಲೆಯಲ್ಲಿ ಇದುವರೆಗೆ ವ್ಯವಸ್ಥಿತವಾಗಿ ದಾಖಲಿಸಲಾಗದೇ ಇರುವ ಚಿತ್ರದುರ್ಗ ಜಿಲ್ಲೆಯಲ್ಲಿನ ಕೆರೆಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಇಲ್ಲಿ ವಿಶೇಷವಾಗಿ ಅಧ್ಯಯನ ಮಾಡಲಾಗಿದೆ.

ಚಿತ್ರದುರ್ಗ ಜಿಲ್ಲೆಯಲ್ಲಿನ ಚಾರಿತ್ರಿಕ ಕೆರೆಗಳ ಚರಿತ್ರೆಯನ್ನು ಅನಾವರಣಗೊಳಿಸುವುದರ ಜೊತೆಗೆ ಕೆರೆಗಳ ನಿರ್ಮಾಣದಲ್ಲಿ ಇಲ್ಲಿನ ಸ್ಥಳೀಯ ಜನರ ಪಾಲ್ಗೊಳ್ಳುವಿಕೆ ಮತ್ತು ಅವರ ಪಾತ್ರ ಹಾಗೂ ಕೆರೆಗಳ ವೈಶಿಷ್ಟ್ಯತೆಗಳ ಮೇಲೆ ವಿಶೇಷ ಬೆಳಕನ್ನು ಚೆಲ್ಲುವ ಪ್ರಯತ್ನವನ್ನು ಮೊದಲಬಾರಿಗೆ ಇಲ್ಲಿ ಮಾಡಲಾಗಿದೆ. ಇಂದಿನ ಜಾಗತೀಕರಣದ ನಾಗಲೋಟಕ್ಕೆ ಇಲ್ಲಿನ ಪರಿಸರ ಮತ್ತು ಕೆರೆಗಳು ಸಹ ಸಿಲುಕಿಕೊಂಡಿವೆ. ಪರಿಣಾಮವಾಗಿ ಭಗ್ನವಾಗಿರುವ, ಕಣ್ಮರೆಯಾಗುವ ಮತ್ತು ಅಪಾಯದ ಹಂತದಲ್ಲಿರುವ ಇಲ್ಲಿನ ಕೆರೆಗಳನ್ನು ಮತ್ತು ಅವುಗಳ ನಿರ್ಮಾಣ ಸಂಸ್ಕೃತಿ, ಅವುಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಇಲ್ಲಿ ವಿಶೇಷ ಆದ್ಯತೆ ಕೊಟ್ಟು ಮೊದಲ ಬಾರಿಗೆ ವಿಶ್ಲೇಷಿಸಿ ದಾಖಲಿಸಲಾಗಿದೆ. ಈ ಮೂಲಕ ಕಳಚಲಿರುವ ಚರಿತ್ರೆಯ ಕೊಂಡಿಗಳನ್ನು ದಾಖಲೆಗಳಲ್ಲಿ ಹಿಡಿದಿಟ್ಟ ಶ್ರೇಯಸ್ಸು ಈ

ಅಧ್ಯಯನಕ್ಕೆ ಸಲ್ಲುತ್ತದೆ. ಪ್ರಸ್ತುತ ಅಧ್ಯಯನವು ತನ್ನ ಗುರಿ ಮತ್ತು ಉದ್ದೇಶಗಳನ್ನು ಈಡೇರಿಸಿಕೊಳ್ಳುವಲ್ಲಿ ನೂರಕ್ಕೆ ನೂರರಷ್ಟು ಯಶಸ್ವಿಯಾಗಿದ್ದು, ಅದರ ಫಲಿತಗಳನ್ನು ಈ ಮುಂದೆ ನೀಡಲಾಗಿದೆ.

**ಅಧ್ಯಯನದ ಫಲಿತಗಳು**

ದೇಶವೊಂದರ ಸಾಂಸ್ಕೃತಿಕ ಇತಿಹಾಸದಲ್ಲಿ ಸ್ಮಾರಕಗಳು ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದಿವೆ. ಸ್ಮಾರಕಗಳ ಅವಿಭಾಜ್ಯ ಅಂಗಗಳಾದ ಕೆರೆಗಳು ಸಹ ಕಾಲದಿಂದ ಕಾಲಕ್ಕೆ ರಾಷ್ಟ್ರದ ಸಾಂಸ್ಕೃತಿಕ ಇತಿಹಾಸಕ್ಕೆ ತನ್ನದೇ ಆದ ಗಮನಾರ್ಹ ಕೊಡುಗೆಗಳನ್ನು ನೀಡಿವೆ. ಈ ಅಧ್ಯಯನದಲ್ಲಿ ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೆ ಮಾನವ ಸಂಸ್ಕೃತಿ ಹೇಗೆ ಚಿತ್ರದುರ್ಗ ಪರಿಸರದಲ್ಲಿ ಕಾಲಾನುಕ್ರಮದಲ್ಲಿ ವಿಕಸನಗೊಂಡಿತೆಂಬುದನ್ನು ಪೂರಕವಾಗಿ ಪ್ರಸ್ತಾಪಿಸುತ್ತ ವಿಶೇಷವಾಗಿ ಇಲ್ಲಿನ ಕೆರೆಗಳು ಪ್ರಭುತ್ವದ ಆಸರೆಯಲ್ಲಿ ಕಾಲದಿಂದ ಕಾಲಕ್ಕೆ ನಿರ್ಮಾಣವಾಗಿ ಜನಸಾಮಾನ್ಯರಿಂದ ಪೋಷಿಸಲ್ಪಟ್ಟವೆ ಎನ್ನುವುದನ್ನು ದಾಖಲಿಸಲಾಗಿದೆ. ಅಲ್ಲದೇ ಇದರೊಂದಿಗೆ ಇಲ್ಲಿ ಮೊದಲ ಬಾರಿಗೆ ಜಿಲ್ಲೆಯಲ್ಲಿನ ಕೆರೆಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ವೈಶಿಷ್ಟ್ಯತೆಗಳನ್ನು ಈ ಮುಂದಿನಂತೆ ಗುರುತಿಸಲಾಗಿದೆ.

೧. ಭೌಗೋಳಿಕ ಲಕ್ಷಣಗಳು ದೇಶವೊಂದರ ಅಭಿವೃದ್ಧಿಯಲ್ಲಿ ಅತಿ ಮುಖ್ಯ ಪಾತ್ರವನ್ನು ನಿರ್ವಹಿಸುತ್ತವೆ. ಅದರಂತೆ ಚಿತ್ರದುರ್ಗ ಜಿಲ್ಲೆಯ ಭೌಗೋಳಿಕ ಪರಿಸರ, ಭೌಗೋಳಿಕ ವಿವರ, ಚಿತ್ರದುರ್ಗ ಹೆಸರಿನ ಹಿನ್ನೆಲೆ ಮತ್ತು ಅದರ ಜಿಲ್ಲಾ ರಚನೆ ಹಾಗೂ ಅಲ್ಲಿನ ಭೌಗೋಳಿಕ ಲಕ್ಷಣಗಳು ಮತ್ತು ಮಹತ್ವ, ಅವುಗಳು ಇಲ್ಲಿನ ರಾಜವಂಶ ಮತ್ತು ಸ್ಮಾರಕಗಳ ಮೇಲೆ ಬೀರಿದ ಪರಿಣಾಮಗಳನ್ನು ಇಲ್ಲಿ ವಿಶೇಷವಾಗಿ ಗುರುತಿಸಲಾಗಿದೆ.

೨. ಮಾನವನ ಇತಿಹಾಸ ಮತ್ತು ಅವನ ವಿಕಾಸದಲ್ಲಿ ಪ್ರಾಗೈತಿಹಾಸಿಕ ಕಾಲಘಟ್ಟಕ್ಕೆ ತನ್ನದೇ ಆದ ವಿಶೇಷವಾದ ಮಹತ್ವದ ಸ್ಥಾನವಿದೆ. ಅದರಂತೆ ಚಿತ್ರದುರ್ಗ ಪರಿಸರದಲ್ಲಿ ಪ್ರಾಗೈತಿಹಾಸಿಕ ಕಾಲದ ಹಲವು ಕುರುಹುಗಳನ್ನು ವಿಶೇಷವಾಗಿ ಗುರುತಿಸಲಾಗಿದ್ದು, ಅವು ಬಹು ಅಪರೂಪವೆನಿಸಿವೆ. ಈ ಸಂಸ್ಕೃತಿಗೆ ಸಂಬಂಧಿಸಿದ ವಿವಿಧ ನೆಲೆಗಳು ಹಾಗೂ ಅವುಗಳ ಸಾಂಸ್ಕೃತಿಕ ಮಹತ್ವ ಮತ್ತು ವೈಶಿಷ್ಟ್ಯತೆಯನ್ನು ಇಲ್ಲಿ ವ್ಯವಸ್ಥಿತವಾಗಿ ಗುರುತಿಸಿ ವಿಶ್ಲೇಷಿಸಲಾಗಿದೆ.

೩. ರಾಜಕೀಯ ಇತಿಹಾಸವು ಪ್ರದೇಶವೊಂದರ ಚರಿತ್ರೆಯ ಕೈಗನ್ನಡಿಯಾಗಿದ್ದು, ಅಲ್ಲಿನ ಸಾಂಸ್ಕೃತಿಕ ಹಿರಿಮೆ ಮತ್ತು ಗರಿಮೆಗಳನ್ನು ಅರಿಯಲು ಸಹಾಯಕವಾಗಿದೆ. ಅದರಂತೆ ಚಾರಿತ್ರಿಕ ಕಾಲಘಟ್ಟದಲ್ಲಿ ಇಲ್ಲಿ ಹಲವಾರು ರಾಜ ಮನೆತನಗಳು ಆಳ್ವಿಕೆ ಮಾಡಿವೆ. ಈ ಪ್ರದೇಶದ ಪ್ರಾಚೀನ ಕಾಲಘಟ್ಟ, ಮಧ್ಯಯುಗೀನ ಕಾಲಘಟ್ಟ ಮತ್ತು ಮಧ್ಯಯುಗದ ನಂತರ ಕಾಲದ ಚಿತ್ರದುರ್ಗ ಪಾಳೆಯಗಾರರ ಚಾರಿತ್ರಿಕ ಹಿನ್ನೆಲೆ, ಆಳ್ವಿಕೆ ಮಾಡಿದ ವಿವಿಧ ಅರಸರು ಮತ್ತು ಅವರ ರಾಜಕೀಯ ಆಡಳಿತ ವ್ಯವಸ್ಥೆ ಹಾಗೂ ಅವರು ಕೈಗೊಂಡ ಪ್ರಜಾಹಿತ ಕಾರ್ಯಗಳು, ಅಂದಿನ ಪ್ರಮುಖ ಆಡಳಿತ ವಿಭಾಗಗಳು ಹಾಗೂ ಅವು ನಿರ್ವಹಿಸಿದ ಪಾತ್ರ ಮೊದಲಾದ ಅಂಶಗಳನ್ನು ಲಭ್ಯ ಶಾಸನ ಮತ್ತು ಇತರೆ ಚಾರಿತ್ರಿಕ ಆಕರಗಳ ಹಿನ್ನೆಲೆಯಲ್ಲಿ ಇಲ್ಲಿ ವಿಶೇಷವಾಗಿ ದಾಖಲಿಸಲಾಗಿದೆ.

೪. ರಾಷ್ಟ್ರವೊಂದರ ಇತಿಹಾಸದಲ್ಲಿ ಆ ದೇಶದಲ್ಲಿರುವ ಚಾರಿತ್ರಿಕ ಆಕರಗಳ ಪಾತ್ರವು ಬಹು ಮುಖ್ಯವಾಗಿರುತ್ತದೆ. ಅದೇರೀತಿ ಚಾರಿತ್ರಿಕ ಆಕರಗಳಾದ ಕೆರೆಗಳ ಪಾತ್ರವು ಬಹು

ಮುಖ್ಯವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಚಾರಿತ್ರಿಕ ಹಿನ್ನೆಲೆಯಲ್ಲಿ ಕರ್ನಾಟಕದ ಕೆರೆಗಳ ಪಾತ್ರ ಮತ್ತು ಕೆರೆಗಳ ಹುಟ್ಟು, ಅರ್ಥ, ವ್ಯಾಖ್ಯಾನಗಳು ಹಾಗೂ ಕೆರೆಗಳ ನಿರ್ಮಾಣದ ಹಿನ್ನೆಲೆ ಮತ್ತು ಮಹತ್ವವನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

೫. ಚಾರಿತ್ರಿಕ ಕೆರೆಗಳ ಪ್ರಮುಖ ಅಂಗಗಳು ಮತ್ತು ತಾಂತ್ರಿಕ ವೈಶಿಷ್ಟ್ಯತೆ ಮತ್ತು ಕೆರೆ ನೀರಾವರಿ ವ್ಯವಸ್ಥೆ ಮತ್ತು ಅದರ ನಿರ್ವಹಣೆಯ ಸ್ವರೂಪ, ಕೆರೆಗಳ ನಿರ್ಮಾಣದಲ್ಲಿ ಅನುಸರಿಸಬೇಕದ ಮಾನದಂಡಗಳೇನು? ಮತ್ತು ಅವುಗಳ ಸಂರಕ್ಷಣೆ ಹೇಗೆ ಮತ್ತು ಏಕೆ ಮಾಡಬೇಕು ಎನ್ನುವುದರ ವಿಶೇಷತೆಯನ್ನು ಸಾಕ್ಷ್ಯಾಧಾರಗಳೊಂದಿಗೆ ಇಲ್ಲಿ ನಿರೂಪಿಸಲಾಗಿದೆ.

೬. ಕರ್ನಾಟಕದ ಚರಿತ್ರೆಯಲ್ಲಿ ಚಿತ್ರದುರ್ಗ ಜಿಲ್ಲೆಯ ಪ್ರಮುಖ ಐತಿಹಾಸಿಕ ಕೆರೆಗಳು ನಿರ್ವಹಿಸಿದ ಪಾತ್ರ ಏನು? ಅವುಗಳ ನಿರ್ಮಾಣದ ವೈಶಿಷ್ಟ್ಯತೆ, ಅವುಗಳ ನಿರ್ಮಾಣದ ಕಾಲ ಮತ್ತು ಮಹತ್ವವನ್ನು ದಾಖಲಿಸಲಾಗಿದೆ. ಇದರೊಂದಿಗೆ ಜಿಲ್ಲೆಯ ಮಹತ್ವದ ಕೆರೆಗಳನ್ನು ಪ್ರಾಚೀನ ಮತ್ತು ಮಧ್ಯಕಾಲೀನ ಹಾಗೂ ಆಧುನಿಕ(ಸಮಕಾಲೀನ)ಕಾಲಘಟ್ಟದ ಕೆರೆಗಳು ಎಂದು ವಿಭಾಗಿಸಿಕೊಂಡು ಇಲ್ಲಿ ವಿವರಿಸಲಾಗಿದೆ.

೭. ಕರ್ನಾಟಕದ ಕೆರೆಗಳ ಇತಿಹಾಸದಲ್ಲಿ ಈ ಜಿಲ್ಲೆಯ ಕೆರೆಗಳು ನಿರ್ವಹಿಸಿದ ಪಾತ್ರ ಏನು? ಮತ್ತು ಅವುಗಳ ಆಡಳಿತ ನಿರ್ವಹಣಾ ವ್ಯವಸ್ಥೆಯ ಸ್ವರೂಪವೇನು? ಮತ್ತು ಅಂದಿನ ಕೃಷಿ–ನೀರಾವರಿ ವ್ಯವಸ್ಥೆಯ ವಿವಿಧ ಆಯಾಮಗಳನ್ನು ಇಲ್ಲಿ ಕ್ರಮಬದ್ಧವಾಗಿ ಚರ್ಚಿಸಲಾಗಿದೆ.

೮. ಜಿಲ್ಲೆಯ ಅಂದಿನ ನೀರಾವರಿ, ತೆರಿಗೆ ವ್ಯವಸ್ಥೆ ಮತ್ತು ಅಂದಿನ ನೀರು ಬಳಕೆದಾರರು ನಿರ್ವಹಿಸಿದ ಕಾರ್ಯಗಳು ಹಾಗೂ ಅಂದಿನ ಜಲ ನಿರ್ವಹಣೆಯಲ್ಲಿ ಅನುಸರಿಸಬೇಕಾದ ಕ್ರಮಗಳ ಕುರಿತು ಪ್ರಾಚೀನ ಕಾಲದ ಆಯಗಾರ ಪದ್ಧತಿಯು ಸಮಾಜದಲ್ಲಿ ಹೇಗೆ ತನ್ನ ಅಸ್ತಿತ್ವ ಉಳಿಸಿಕೊಂಡಿದೆ ಮತ್ತು ಸ್ಥಳೀಯ ಆಡಳಿತ ವ್ಯವಸ್ಥೆಯು ಕೆರೆಗಳನ್ನು ಹೇಗೆ ನಿಯಂತ್ರಿಸುವುದರ ಮೂಲಕ ಅವು ಕೆರೆಗಳನ್ನು ತಮ್ಮ ಆದಾಯದ ಮೂಲವಾಗಿ ಮಾಡಿಕೊಂಡಿದ್ದವು ಎನ್ನುವುದನ್ನು ಇಲ್ಲಿ ಮೌಲಿಕರಿಸಲಾಗಿದೆ.

೯. ಕೆರೆಗಳು ಪರಿಸರ ಸಂರಕ್ಷಣೆಯಲ್ಲಿ ಬಹು ಮುಖ್ಯ ಪಾತ್ರ ನಿರ್ವಹಿಸಿರುವಂತೆ ಅವುಗಳು ಜನರಿಗೆ ಉದ್ಯೋಗದ ಮೂಲವಾಗಿಯೂ ಕಾರ್ಯನಿರ್ವಹಿಸಿವೆ. ಇದರ ಭಾಗವಾಗಿ ಬೆಳೆದು ಬಂದ ಕೆರೆ ಮೀನುಗಾರಿಕೆ ಮತ್ತು ಇತರೆ ವೃತ್ತಿಗಳ ವೈಶಿಷ್ಟ್ಯತೆಯನ್ನು ಮತ್ತು ಕೆರೆಗಳು ಹೇಗೆ ಮುಖ್ಯವಾಗಿ ಸಹಕಾರಿಯಾಗಿವೆ ಎನ್ನುವುದನ್ನು ಇಲ್ಲಿ ದಾಖಲಿಸಲಾಗಿದೆ.

೧೦. ಕೆರೆಗಳನ್ನು ನಿರ್ಮಿಸುವುದು ಹೇಗೆ ಮಹತ್ವದ ಕಾರ್ಯವೋ ಅದರಂತೆ ಕೆರೆಗಳ ಸಂರಕ್ಷಣಾ ಕಾರ್ಯವು ಸಹ ಬಹು ಮುಖ್ಯವಾದ ಕ್ರಮವಾಗಿದೆ. ಕೆರೆಗಳ ಸಂರಕ್ಷಣೆಯನ್ನು ಏಕೆ ಮಾಡಬೇಕು? ಅದರ ವಿವಿಧ ಆಯಾಮಗಳು ಯಾವವು? ಅವುಗಳ ಸಂರಕ್ಷಣೆಯ ಔಚಿತ್ಯತೆ ನಿಜಕ್ಕೂ ಇದೆಯೇ? ಅಳಿವಿನಂಚಿನಲ್ಲಿರುವ ಭಗ್ನ ಕೆರೆಗಳ ಜೀರ್ಣೋದ್ಧಾರದ ಮಹತ್ವವೇನು? ಮತ್ತು ಅವುಗಳ ದುರಸ್ತಿ ಕಾರ್ಯದ ಸ್ವರೂಪ ಮತ್ತು ಅನುಸರಿಸಬೇಕಾದ ಕ್ರಮಗಳು ಹಾಗೂ ಕೆರೆಗಳ

ಪುನರಾಭಿವೃದ್ಧಿ ಮಾಡುವುದರ ಮೂಲಕ ಅವುಗಳನ್ನು ಮುಂದಿನ ಪೀಳಿಗೆಗೆ ಏಕೆ ಉಳಿಸಿ ಕೊಡಬೇಕಾದ ಅವಶ್ಯಕತೆ ಇದೆ ಎನ್ನುವುದನ್ನು ಚರ್ಚಿಸಿರುವುದು ಈ ಪ್ರಬಂಧದ ಮತ್ತೊಂದು ವಿಶೇಷತೆಯಾಗಿದೆ. ಈ ದುರಸ್ತಿ ಕಾರ್ಯದಲ್ಲಿ ಸ್ಥಳೀಯ ಆಡಳಿತದ ಪಾತ್ರವೇನು ಎನ್ನುವುದನ್ನು ವಿವರಿಸಲಾಗಿದೆ.

೧೧. ಪ್ರತಿ ಪ್ರದೇಶದಲ್ಲಿ ನಡೆಯುವ ಹಬ್ಬ- ಜಾತ್ರೆ-ಉತ್ಸವ ಮತ್ತು ವಿವಿಧ ಆಚರಣೆಗಳ ಸಹಾಯದಿಂದ ಆ ಪ್ರದೇಶದ ಸಾಂಸ್ಕೃತಿಕ ಇತಿಹಾಸ ಮತ್ತು ಮಾನವ ಸಂಸ್ಕೃತಿಯನ್ನು ಅರಿಯಬಹುದಾಗಿದೆ. ಸಮಾಜದಲ್ಲಿನ ನಂಬಿಕೆ ಮತ್ತು ಆಚರಣೆಗಳು ಮಾನವನ ಜೀವನದಲ್ಲಿ ಬಹು ಮುಖ್ಯ ಪಾತ್ರ ನಿರ್ವಹಿಸುತ್ತವೆ. ಅದರಂತೆ ಜಿಲ್ಲೆಯ ಕೆರೆ ಸಂಬಂಧಿ ನಂಬಿಕೆ ಮತ್ತು ಆಚರಣೆಗಳು ಸಹ ಅತಿ ಮುಖ್ಯ ಪಾತ್ರ ನಿರ್ವಹಿಸಿವೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯ ಕೆರೆ ಸಂಬಂಧಿ ಐತಿಹ್ಯ ಮತ್ತು ನಂಬಿಕೆಗಳನ್ನು ಗುರುತಿಸುವಲ್ಲಿ ಈ ಅಧ್ಯಯನ ಯಶಸ್ವಿಯಾಗಿದೆ. ಅಲ್ಲದೇ ಜಿಲ್ಲೆಯಲ್ಲಿ ನಡೆಯುವ ಕೆರೆ ಸಂಬಂಧಿ ಜಾನಪದ ಆಚರಣೆ ಮತ್ತು ಸಂಪ್ರದಾಯಗಳನ್ನು ಸಹ ಕ್ರಮಬದ್ಧವಗಿ ಗುರುತಿಸಿರುವುದು ಈ ಅಧ್ಯಯನದ ಮತ್ತೊಂದು ವೈಶಿಷ್ಟ್ಯವಾಗಿದೆ.

೧೨. ಜಿಲ್ಲೆಯ ಕೆರೆ ಸಂಬಂಧಿ ಜಾನಪದ ಆಶಯ ಮತ್ತು ವಿಧಿ ನಿಷೇಧಗಳನ್ನು ಹಾಗೂ ಮಹತ್ವದ ಜಾನಪದ ಕಥೆ/ಹಾಡುಗಳನ್ನು ಇಲ್ಲಿ ಪ್ರಾಸಂಗಿಕವಾಗಿ ಗುರುತಿಸಿ ದಾಖಲಿಸಲಾಗಿದೆ.

೧೩. ಸಮಾಜವೊಂದರ ಉನ್ನತಿ ಮತ್ತು ಅವನತಿಗಳು ಅಲ್ಲಿನ ಆರ್ಥಿಕ ಸ್ಥಿತಿಗತಿಗಳ ಮೇಲೆ ಅವಲಂಬಿತವಾಗಿರುತ್ತವೆ. ಈ ಪ್ರದೇಶದ ಜನರ ಆರ್ಥಿಕ ಜನಜೀವನ ಹಾಗೂ ಕೃಷಿ-ನೀರಾವರಿ ವ್ಯವಸ್ಥೆಗಳು ಶೇ. ೬೦ರಷ್ಟು ಕೆರೆಗಳನ್ನು ಅವಲಂಬಿಸಿದೆ. ಅಲ್ಲದೇ ಕೆರೆಗಳು ಇಲ್ಲಿ ಪಶುಪಾಲನೆ ವ್ಯವಸ್ಥೆ, ಮೀನುಗಾರಿಕೆ ಮತ್ತು ಇಲ್ಲಿನ ಜನರ ಉಪ ವೃತ್ತಿಗಳು ಹಾಗೂ ಜನರ ವ್ಯಾಪಾರ/ವಾಣಿಜ್ಯ ಚಟುವಟಿಕೆಗಳು ಹಾಗೂ ತೆರಿಗೆ ಮತ್ತು ಕಂದಾಯ ವ್ಯವಸ್ಥೆಯ ಮೇಲೆ ಪ್ರಭಾವ ಬೀರಿವೆ. ಅಲ್ಲದೇ ಚರಿತ್ರೆಯ ಪಳೆಯುಳಿಕೆಯಾಗಿ ಪರಂಪರಗತವಾಗಿ ಸಮಾಜದಲ್ಲಿ ಇಂದಿಗೂ ಉಳಿದುಕೊಂಡು ಬಂದಿರುವ ಆಯಗಾರ ಪದ್ಧತಿಯನ್ನು ವಿಶೇಷವಾಗಿ ಕೆರೆಗಳ ಚಾರಿತ್ರಿಕ ದೃಷ್ಟಿಯಿಂದ ಅಧ್ಯಯನ ಮಾಡಿ ಇಲ್ಲಿ ಪ್ರಥಮ ಬಾರಿಗೆ ದಾಖಲಿಸಲಾಗಿದೆ.

೧೪. ಈ ಪ್ರದೇಶದ ಕೆರೆಗಳ ಅಧ್ಯಯನವನ್ನು ಅವು ಮೂಡಿಬಂದ ಪರಿಸರದ ಹಿನ್ನೆಲೆಯಲ್ಲಿ ವಿವೇಚಿಸುತ್ತಾ, ವಿವಿಧ ಕಾಲಘಟ್ಟಗಳಲ್ಲಿ ನಿರ್ಮಿತವಾದ ಕೆರೆಗಳ ಒಂದು ಚಿತ್ರಣವನ್ನು ನೀಡುವ ಪ್ರಯತ್ನವನ್ನು ಇಲ್ಲಿ ಮೊದಲ ಬಾರಿಗೆ ಮಾಡಲಾಗಿದೆ. ಬೇರೆ ಬೇರೆ ಕಡೆ ಚದುರಿಹೋಗಿರುವ ರಾಷ್ಟ್ರಕೂಟ, ಬಾದಾಮಿ ಚಾಲುಕ್ಯ, ಕಲ್ಯಾಣಿ ಚಾಲುಕ್ಯ, ಸೇವುಣ, ವಿಜಯನಗರ, ವಿಜಯನಗರೋತ್ತರ ಪಾಳೆಯಗಾರರ ಕಾಲಗಳಲ್ಲಿ ನಿರ್ಮಿತವಾದ ಕೆರೆಗಳನ್ನು ವ್ಯಾಪಕ ಕ್ಷೇತ್ರಕಾರ್ಯ ಕೈಗೊಂಡು ಗುರುತಿಸಲಾಗಿದೆ. ವಿಭಿನ್ನ ಧರ್ಮಗಳಿಗೆ ಸಂಬಂಧಿಸಿದ ಅನೇಕ ದೇವಾಲಯಗಳು, ಮಸೀದಿ, ಬಸದಿಗಳು ಇದೇ ಕೆರೆಗಳ ಸಮೀಪ ಸ್ಥಾಪಿತವಾಗಿದ್ದು ಅವುಗಳನ್ನು ವ್ಯವಸ್ಥಿತವಾಗಿ ಗುರುತಿಸಲಾಗಿದೆ. ವಿಭಿನ್ನ ಕಾಲಾವಧಿಯಲ್ಲಿ ನಿರ್ಮಿತವಾಗಿರುವ ಇವುಗಳ ಅಧ್ಯಯನದಿಂದ ವಿವಿಧ ರಾಜಮನೆತನಗಳ,

ಸಾಮ್ರಾಜ್ಯದ ಎಲ್ಲೆಗಳನ್ನು ವಿಶ್ಲೇಷಿಸಲು ಮತ್ತು ಅಂದಿನ ಜನರ ಧಾರ್ಮಿಕ ಜನಜೀವನವನ್ನು ಅರಿಯಲು ಸಹಾಯಕವಾಗಿದೆ ಎನ್ನುವುದನ್ನು ಗುರುತಿಸಲಾಗಿದೆ.

೧೫. ಇಲ್ಲಿರುವ ಕೆರೆಗಳು ಹಾಗೂ ಇಲ್ಲಿನ ಸ್ಮಾರಕಾವಶೇಷಗಳ ಸಹಾಯದಿಂದ ಇಲ್ಲಿನ ಮಾನವ ಸಂಸ್ಕೃತಿಯ ವಿಶೇಷತೆಯನ್ನು ಅರಿಯುವ ಪ್ರಯತ್ನ ಮಾಡಲಾಗಿದೆ. ಅಲ್ಲದೇ ಶಾಸನಾಧಾರಗಳಿಲ್ಲದೇ ಇರುವ ಕೆರೆಗಳನ್ನು ಅಧ್ಯಯನಕ್ಕೊಳಪಡಿಸಿ ಅವುಗಳ ಶೈಲಿಯನ್ನು ಗುರುತಿಸಲಾಗಿದ್ದು, ಅವು ರಾಷ್ಟ್ರಕೂಟ. ಬಾದಾಮಿ ಚಾಲುಕ್ಯ, ಕಲ್ಯಾಣಿ ಚಾಲುಕ್ಯ, ವಿಜಯನಗರ ಮತ್ತು ವಿಜಯನಗರೋತ್ತರ, ಇತ್ಯಾದಿ ಶೈಲಿಯಲ್ಲಿವೆ ಎನ್ನುವುದನ್ನು ದಾಖಲಿಸಲಾಗಿದೆ.

೧೬. ಇತಿಹಾಸ ಪೂರ್ವದಿಂದ ಇಂದಿನವರೆಗಿನ ಕೆರೆ ನೀರಾವರಿಯ ಚರಿತ್ರೆಯನ್ನು ಇಲ್ಲಿ ಗುರುತಿಸಲಾಗಿದೆ. ಕರ್ನಾಟಕದಲ್ಲಿ ಕೆರೆ ನೀರಾವರಿಯ ಬೆಳವಣಿಗೆ ಹಾಗೂ ಅವನತಿಗಳನ್ನು ಗುರುತಿಸಿರುವುದು ಮಾತ್ರವಲ್ಲ ಕೆರೆಗಳ ರಚನೆ, ಜೀರ್ಣೋದ್ಧಾರ, ಜಲ ನಿರ್ವಹಣೆ ಹಾಗೂ ಹಣಕಾಸು ಪರಿಸ್ಥಿತಿಗಳ ಸಮಸ್ಯೆಗಳನ್ನು ನಮ್ಮ ಹಿಂದಿನವರು ಹೇಗೆ ಎದುರಿಸಿದರು ಎನ್ನುವ ಸಂಗತಿಗಳನ್ನು ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸಲಾಗಿದೆ.

೧೭. ಕೆರೆಗಳ ಇತಿಹಾಸದಿಂದ ನಾವು ಕಲಿಯಬೇಕಾದ ಪಾಠ ಬಹಳವಿದೆ. ಕೆರೆಗಳ ರಚನೆ ಹಾಗೂ ಜೀರ್ಣೋದ್ಧಾರದಲ್ಲಿ ಫಲಾನುಭವಿಗಳನ್ನು, ಸ್ಥಳೀಯ ಪಂಚಾಯತಿಗಳನ್ನು ಸೇರಿಸಿಕೊಳ್ಳದೇ ಹೋದಲ್ಲಿ ಕೆರೆಗಳ ಸಮಸ್ಯೆಯನ್ನು ಬಗೆಹರಿಸುವುದು ಅಸಾಧ್ಯ. ಹಾಗೆಯೇ ನಮ್ಮ ನೀರಾವರಿ ಸೌಲಭ್ಯಗಳ ಅಭಿವೃದ್ಧಿಗೆ ಕೆರೆಗಳ ಕೊಡುಗೆ ಏನು ಎಂಬುದನ್ನು ಇಲ್ಲಿ ಸೂಕ್ತ ಉದಾರಣೆಗಳೊಂದಿಗೆ ಪರಿಶೀಲಿಸಲಾಗಿದೆ.

೧೮. ಲಭ್ಯ ಶಾಸನ ಮತ್ತು ಇತರೆ ಲಿಖಿತ ದಾಖಲೆ ಹಾಗೂ ಮೌಖಿಕ ಆಕರಗಳನ್ನು ಆಧಾರವಾಗಿಟ್ಟು ಕೊಂಡು ಮತ್ತು ಕೆರೆಗಳಲ್ಲಿ ನಡೆಯುವ ಸಮಕಾಲೀನ ಪ್ರಸಕ್ತ ಆಚರಣೆಗಳ ಸಹಾಯದಿಂದ ಅಂದಿನ ಸಾಮಾಜಿಕ, ಧಾರ್ಮಿಕ ಸ್ಥಿತಿಗತಿಗಳನ್ನು ಅರಿಯಬಹುದಾಗಿದೆ. ಇವುಗಳ ಸಹಾಯದಿಂದ ಜಿಲ್ಲೆಯ ಮಾನವನ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ರಾಜಕೀಯ ಇತಿಹಾಸವನ್ನು ವಿಶ್ಲೇಷಿಸಿ ದಾಖಲಿಸಲಾಗಿದೆ.

ಒಟ್ಟಿನಲ್ಲಿ ಈ ಸಂಶೋಧನಾ ಮಹಾ ಪ್ರಬಂಧವು ಚಿತ್ರದುರ್ಗ ಜಿಲ್ಲೆಯ ಕೆರೆಗಳ ಚರಿತ್ರೆ, ಅವುಗಳ ಸಂಸ್ಕೃತಿ ಮತ್ತು ವಿವಿಧ ಕಾಲಘಟ್ಟದಲ್ಲಿ ಅವುಗಳು ನಿರ್ವಹಿಸಿದ ಪಾತ್ರವನ್ನು ವಿಶೇಷವಾಗಿ ಗುರುತಿಸಿ, ಅವುಗಳ ಮೇಲೆ ಹೊಸ ಬೆಳಕನ್ನು ಚೆಲ್ಲುವಲ್ಲಿ ಯಶಸ್ವಿಯಾಗಿದೆ. ಇದುವರೆಗೆ ಹಲವಾರು ವಿದ್ವಾಂಸರು ಅಧ್ಯಯನ ನಡೆಸಿರುವ ಹಾದಿಯಲ್ಲಿಯೇ ಮುಂದುವರೆದು, ವಿವಿಧ ಕಾಲದಲ್ಲಿ ನಿರ್ಮಿಸಲ್ಪಟ್ಟ ಕೆರೆ ಮತ್ತು ಅವುಗಳ ವೈಶಿಷ್ಟ್ಯವನ್ನು ಹಾಗೂ ಸಮಕಾಲೀನ ಜನಜೀವನ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ಗುರುತಿಸುವಲ್ಲಿ ಪ್ರಸ್ತುತ ಅಧ್ಯಯನ ಯಶಸ್ವಿಯಾಗಿದೆ ಎಂದು ಹೇಳಬಹುದಾಗಿದೆ. ಹಾಗೆಯೇ ಕೆರೆಗಳ ಅನಿವಾರ್ಯ ಅಂಗಗಳಾದ ಅವುಗಳ ತಾಂತ್ರಿಕ ಭಾಗಗಳ ಕುರಿತು ಅಲ್ಲಲ್ಲಿ ಪೂರಕವಾಗಿ ಚರ್ಚಿಸಿರುವುದು ಈ ಮಹಾ ಪ್ರಬಂಧದ ವಿಶೇಷವಾಗಿದೆ.

ಕೆರೆಗಳು ಇರುವ ಬಹುತೇಕ ಪ್ರದೇಶಗಳಲ್ಲಿ ವಿಭಿನ್ನ ರೀತಿಯ ಐತಿಹ್ಯಗಳಿವೆ. ಅನೇಕ ಸ್ಥಳೀಯರು ಇವುಗಳ ಬಳಿ ಇರುವ ಅಕ್ಷರ(ಶಾಸನ)ಗಳನ್ನು ಓದಿದರೆ ರಕ್ತಕಾರಿ ಸಾಯುತ್ತಾರೆ ಹಾಗೂ ಇವುಗಳ ಬಳಿ ನಿಧಿ ಇದೆ, ಇವುಗಳನ್ನು ಸರ್ಪ ಕಾಯುತ್ತಿದೆ ಹಾಗೂ ಇದನ್ನು ಜಕಣಾಚಾರಿ ನಿರ್ಮಿಸಿದ್ದಾನೆಂಬ ಅನೇಕ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಈ ರೀತಿಯ ಐತಿಹ್ಯಗಳ ಕುರಿತು ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡಬೇಕಾದ ಅಗತ್ಯತೆ ಇದೆ. ಅಲ್ಲದೇ ಇಲ್ಲಿನ ಕೆರೆಗಳ ಚರಿತ್ರೆ ಮತ್ತು ಅವುಗಳ ಸಾಂಸ್ಕೃತಿಕ ಇತಿಹಾಸ, ಅವುಗಳಿಗೆ ಸಂಬಂಧಿಸಿದ ದಾನ ದತ್ತಿಗಳ ಕುರಿತು ಸುದೀರ್ಘವಾಗಿ ಇನ್ನೂ ಹೆಚ್ಚಿನ ಮಟ್ಟದಲ್ಲಿ ಅಧ್ಯಯನ ಮಾಡಲು ಅವಕಾಶಗಳು ಇವೆ.

ಈ ಪ್ರದೇಶದ ಚರಿತ್ರೆ ಮತ್ತು ಸಂಸ್ಕೃತಿಯ ಕುರಿತು ಇಲ್ಲಿಯವರೆಗೆ ನಡೆದಿರುವ ಕೆಲ ವಿರಳವಾದ ಅಧ್ಯಯನಗಳ ಕುರಿತು ಈ ಹಿಂದೆಯೇ ಸ್ಪಷ್ಟಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಈ ಪ್ರದೇಶದ ಕೆರೆಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಇತಿಹಾಸದ ಮಹತ್ವದ ಕುರಿತು ಒಂದೆಡೆ ಇಡಿಯಾಗಿ ಮಾಹಿತಿ ಲಭ್ಯವಾಗುವ ರೀತಿ ಮೊದಲ ಬಾರಿಗೆ ಈ ಮಹಾ ಪ್ರಬಂಧದಲ್ಲಿ ಮಾಡಲಾಗಿದೆ. ಆದಾಗ್ಯೂ ಇದೇ ವಿಷಯದ ಕುರಿತು ವಿವಿಧ ದೃಷ್ಟಿ ಕೋನಗಳಿಂದ ಮತ್ತಷ್ಟು ಅಧ್ಯಯನ ನಡೆಸುವುದಕ್ಕೆ ಹೇರಳವಾದ ಅವಕಾಶಗಳಿವೆ.

**ಅಭಿಪ್ರಾಯಗಳು ಅಥವಾ ಅಧ್ಯಯನದ ಉಪಯುಕ್ತತೆಗಳು**

ನಮ್ಮ ಕೆರೆಗಳ ಈಗಿನ ದುಸ್ಥಿತಿಗೆ ಹಲವು ಕಾರಣಗಳನ್ನು ಹೇಳಬಹುದು. ಇಂದು ಪಟ್ಟಣಗಳು ಬೆಳೆಯುತ್ತಿರುವುದರಿಂದ, ಅದರ ಸುತ್ತಮುತ್ತಲ ಪ್ರದೇಶದಲ್ಲಿರುವ ಕೆರೆಗಳು ಕಸದ ಗುಂಡಿಗಳಾಗಿ, ಅವುಗಳ ವಿನಾಶವು ಆರಂಭವಾಗಿದೆ. ಇಂದು ಮನೆ ಕಟ್ಟಲಿಕ್ಕೆ ಸ್ಥಳ ಬೇಕಾಗುವುದರಿಂದ ಹಳೆಯ ಕೆರೆ ಬಯಲುಗಳು ಹೊಸ ನಿವೇಶನಗಳಾಗುತ್ತಿವೆ. ಇದರಿಂದ ಹಳ್ಳಿಗಳಿಗಿಂತಲೂ ಪಟ್ಟಣಗಳಲ್ಲಿ ಕೆರೆಗಳು ಅಧಿಕವಾಗಿ ನಾಶವಾಗುತ್ತಿವೆ, ಇದರೊಂದಿಗೆ ಹಳ್ಳಿಗಳಲ್ಲಿ ಅವುಗಳ ಜಲಾನಯನ ಪ್ರದೇಶ ಅಥವಾ ಕೆರೆಗೆ ನೀರು ಹರಿದು ಬರುವ ಪ್ರದೇಶವನ್ನು ಸರ್ಕಾರದವರು ತಮಗೆ ಸೇರಿದ್ದೆನ್ನುವ ತಪ್ಪು ಕಲ್ಪನೆಯಿಂದ ಭೂರಹಿತ ಬಡವರಿಗೆ ದಾನ ಮಾಡುತ್ತಿದ್ದಾರೆ ಅಥವಾ ಹಳ್ಳಿಗಳಲ್ಲಿ ಬಲ ಇರುವವರು ಈ ಜಲಾನಯನ ಪ್ರದೇಶವನ್ನು ಅಕ್ರಮಿಸಿಕೊಂಡಿದ್ದಾರೆ. ಹೀಗಾಗಿ ನಾಡಿನ ಬಹುತೇಕ ಕಡೆ ಕೆರೆಗಳು ಕಣ್ಮರೆಯಾಗುವ ಅಪಾಯದಲ್ಲಿವೆ. ಆದರಿಂದ ಈ ಕೆಳಕಂಡ ಕ್ರಮಗಳನ್ನು ಅನುಸರಿಸಿದರೆ ಕೆರೆಗಳನ್ನು ಉಳಿಸಬಹುದು ಮತ್ತು ನಮ್ಮ ನೀರಿನ ಅಭಾವವನ್ನು ಕಡಿಮೆ ಮಾಡಬಹುದು.

**೧. ಅಣೆಕಟ್ಟುಗಳನ್ನು ಕಟ್ಟುವುದಕ್ಕಿಂತ ಅರಣ್ಯಗಳನ್ನು ಬೆಳೆಸುವುದರಿಂದ ನೀರಿನ ಸಮಸ್ಯೆಯನ್ನು ಬಗೆಹರಿಸಬಹುದು**

ಸರ್ಕಾರಕ್ಕೆ ನೀರಿನ ಸಮಸ್ಯೆಗೆ ತಕ್ಷಣ ಹೊಳೆಯುತ್ತಿದ್ದ ಪರಿಹಾರಗಳು ಭಾರೀ ಅಣೆಕಟ್ಟುಗಳು ಮತ್ತು ಕೊಳವೆ ಬಾವಿಗಳು. ಇವುಗಳಿಂದ ಲಾಭ-ನಷ್ಟ ಸರಿಸಮನಾಗಿವೆ. ಲಾಭದಲ್ಲಿ ಮುಖ್ಯವಾಗಿರುವುದು – ಭಾರತದಲ್ಲಿ 'ಹಸಿರುಕ್ರಾಂತಿ' ಸಾಧ್ಯವಾಯಿತು ಮತ್ತು ಧಾನ್ಯಗಳನ್ನು ವಿಫುಲವಾಗಿ ಬೆಳೆಯಲು ಸಾಧ್ಯವಾಯಿತು. ಆದರೆ ಭಾರೀ ಆಣೆಕಟ್ಟುಗಳನ್ನು ಕಟ್ಟುವಲ್ಲಿ ಆದ ನಷ್ಟವೂ ಗಣನೀಯವಾಗಿದೆ.

ಅಲಮಟ್ಟಿ ಅಂತಹ ಆಣೆಕಟ್ಟನ್ನು ಕಟ್ಟುವುದಕ್ಕೆ ಅನೇಕ ವರ್ಷಗಳು ಬೇಕಾಗುತ್ತದೆ. ಕಟ್ಟುವಾಗ ಬಹಳ ಹಣ ಪೋಲಾಗುತ್ತದೆ. ಕಟ್ಟುವ ಸ್ಥಳದಲ್ಲಿರುವವರ ಸ್ಥಳಾಂತರದಿಂದ ಮನೆಮಠಗಳನ್ನು ಕಳೆದುಕೊಂಡವರ ಪುನರ್‌ವಸತಿಯನ್ನು ಏರ್ಪಡಿಸುವುದು ಸುಲಭ ಸಾಧ್ಯವಿಲ್ಲ. ಅವರ ಗತಿಯನ್ನು ಊಹಿಸಲಾಗುವುದಿಲ್ಲ. ಆದ್ದರಿಂದ ಇಂತಹವರು ಮತ್ತು ಪರಿಸರವಾದಿಗಳು ಭಾರೀ ಅಣೆಕಟ್ಟುಗಳನ್ನು ವಿರೋಧಿಸುತ್ತಾರೆ. ಪರಿಸರವಾದಿಗಳ ಪ್ರಕಾರ ಭಾರೀ ಅಣೆಕಟ್ಟುಗಳಿಂದ ಅರಣ್ಯಗಳು ಹಾಳಾಗುತ್ತವೆ. ಅವುಗಳು ಹಾಳಾಗುವುದರಿಂದ ಮಳೆ ಕಡಿಮೆಯಾಗುತ್ತ ಹೋಗುತ್ತದೆ. ಆದ್ದರಿಂದ ಈ ಅಣೆಕಟ್ಟುಗಳನ್ನು ಕಟ್ಟುವುದಕ್ಕಿಂತ ಅರಣ್ಯಗಳನ್ನು ಬೆಳೆಸುವುದರಿಂದ ನೀರಿನ ಸಮಸ್ಯೆಯನ್ನು ಅತಿ ಸುಲಭವಾಗಿ ಮತ್ತು ಕಡಿಮೆ ಖರ್ಚಿನಲ್ಲಿ ಬಗೆಹರಿಸಬಹುದೆನ್ನುತ್ತಾರೆ.

**೨. ಕೊಳವೆ ಬಾವಿಗಳ ಬದಲು ಕೆರೆಗಳ ಪುನರುದ್ಧಾರದ ಕಡೆ ಗಮನಹರಿಸಬೇಕು**

ಕೊಳವೆ ಬಾವಿಗಳಿಂದ ಲಾಭವೆಂದರೆ ಅವುಗಳನ್ನು ಒಂದು ದಿನದಲ್ಲಿ ನಿರ್ಮಿಸಬಹುದು. ವಿದ್ಯುಚ್ಛಕ್ತಿಯ ಪಂಪಿನಿಂದ ನೀರನ್ನು ಸುಲಭವಾಗಿ ಮೇಲೆತ್ತಬಹುದು. ಇವು ನಿಜವಾದರೂ ಈಚೆಗೆ ಅವುಗಳಿಂದ ಆಗುವ ಅನಾಹುತಗಳನ್ನು ನಾವು ನೋಡುತ್ತಿದ್ದೇವೆ. ಮೊದಲನೆಯ ನಷ್ಟ ಅವುಗಳಿಂದ ಸೇದೋ ಬಾವಿಗಳೆಲ್ಲಾ ಖಾಲಿಯಾಗಿವೆ. ಈಚೆಗೆ ಕೊಳವೆ ಬಾವಿಗಳ ಉಪಯೋಗ ಹೆಚ್ಚಾಗಿ ಅವುಗಳ ಆಳವನ್ನು ಹೆಚ್ಚಿಗೆ ಮಾಡುತ್ತಾ ಹೋಗುವುದು ಅನಿವಾರ್ಯವಾಗಿದೆ. ಕೆಳಕ್ಕೆ ಹೋದ ಹಾಗೆ ಕಲುಷಿತ ನೀರು ಅವುಗಳಿಂದ ಬರಹತ್ತಿದೆ. ಈ ನೀರಿನಿಂದ ರೋಗರುಜಿನಗಳು ಬೆಳೆಯತೊಡಗಿವೆ. ಹೀಗಿದ್ದರೂ, ಕೊಳವೆ ಬಾವಿಗಳನ್ನಾಗಲಿ ಕೈಬಿಡುವ ಹಾಗಿಲ್ಲ. ಎಲ್ಲಿ ಸಾಧ್ಯವೊ ಅಲ್ಲಿ ಅವುಗಳನ್ನು ನಿರ್ಮಿಸಲೇಬೇಕು. ಆದರೆ ಅವುಗಳಿಂದಾಗುವ ಖರ್ಚನ್ನು ಕಡಿಮೆ ಆಗುವ ಹಾಗೆ ಎಚ್ಚರಿಕೆ ವಹಿಸಬೇಕು. ಅವುಗಳ ಜೊತೆಗೆ ಕೆರೆಗಳ ಪುನರುದ್ದಾರವನ್ನು ಮಾಡಿದರೆ ಇಂತಹ ಬಾವಿಗಳಲ್ಲಿ ನೀರು ಸಮೃದ್ಧವಾಗಿ ದೊರೆಯುವುದು. ಕೊಳವೆ ಬಾವಿಗಳ ಆಳವನ್ನು ಕಡಿಮೆ ಮಾಡುವುದಕ್ಕೆ ಕೆರೆಗಳ ಜತೆಗೆ ಸರ್ಕಾರದವರು ಚಿಕ್ಕ ಡ್ಯಾಂಗಳ ಕಟ್ಟಡಕ್ಕೆ ಹೆಚ್ಚು ಮಹತ್ವವನ್ನು ಕೊಡುತ್ತಿದ್ದಾರೆ. ಇವುಗಳನ್ನು ಕಟ್ಟುವುದಕ್ಕೆ ಕೋಟ್ಯಾಂತರ ರೂಪಾಯಿಗಳನ್ನು ವ್ಯಯ ಮಾಡಬೇಕಾಗುತ್ತದೆ. ಶ್ರೀ ಜಯಚಂದ್ ಜೈನ ಎನ್ನುವವರ ಪ್ರಕಾರ ಕೊಳವೆ ಬಾವಿಗಳನ್ನು ನದಿಯ, ಕಾಲುವೆಗಳ, ಹಳ್ಳಿಗಳ ಪಕ್ಕದಲ್ಲಿ ನಿರ್ಮಿಸಿದರೆ, ಪ್ರವಾಹ ಬಂದಾಗ, ಈ ಬಾವಿಗಳು ಅಂತರ್ಜಲವನ್ನು ನೀರು ವಿಫುಲವಾಗಿ ಸಂಗ್ರಹವಾಗುತ್ತವೆ ಎನ್ನುತ್ತಾರೆ.

**೩. ಸ್ಥಳೀಯ ಸಂಸ್ಥೆಗಳನ್ನು ಕೆರೆ ಅಭಿವೃದ್ಧಿ ಕಾರ್ಯದಲ್ಲಿ ತೊಡಗಿಸಬೇಕು**

ಕೆರೆಗಳ ಪುನರುದ್ದಾರದ ಕೆಲಸ ನಡೆದಾಗ ಗ್ರಾಮ ಪಂಚಾಯತಿಗಳನ್ನು ಈ ಕೆಲಸದಲ್ಲಿ ಖಡ್ಡಾಯವಾಗಿ ತೊಡಗಿಸಬೇಕು. ಜೀರ್ಣೋದ್ದಾರವಾದ ಮೇಲೆ ಆ ಕೆರೆಗೆ ಸಂಬಂಧಪಟ್ಟ, ಎಲ್ಲಾ ಜವಾಬ್ದಾರಿಯನ್ನು ಸರ್ಕಾರ ಮಾತ್ರ ಹೊರದೇ ಅದನ್ನು ಸ್ಥಳೀಯಸಂಸ್ಥೆಗಳಿಗೆ ಹಸ್ತಾಂತರಿಸಬೇಕು

**೪. ಕೆರೆ ಹೂಳು ತೆಗೆಯಯುವುದು**

ಮಳೆಗಾಲದಲ್ಲಿ ಹೊಳೆ ಭಾರಿ ಪ್ರಮಾಣದ ಹೂಳನ್ನು ತರುತ್ತದೆ. ಇದು ನೀರಿನೊಂದಿಗೆ ತೂಬಿನ ಮೂಲಕ ಕಾಲುವೆಗಳಿಗೆ ಸಾಗಿ ಹೋಗುತ್ತದೆ. ಪ್ರವಾಹದ ಬಿರುಸು ಇಳಿದಂತೆ ಹೂಳು

ನೀರಿನಿಂದ ಬೇರ್ಪಟ್ಟು ಕಾಲುವೆಯ ಅಡಿಯಲ್ಲಿ ಪದರಗಟ್ಟುತ್ತವೆ. ಮುಂದಿನ ಮಳೆಗಾಲ ಮೊದಲಾಗುವುದಕ್ಕೆ ಮುಂಚೆಯೆ ಇದನ್ನು ತೆಗೆದುಹಾಕಬೇಕು. ಅಂದು ಬೇಸಾಯ ಮುಗಿದ ನಂತರ ಹೂಳೆ ಮೆಲ್ಲನೆ ಹರಿಯುವಾಗ ನೀರನ್ನೇ ನಿವಾರಣೋಪಾಯ ಸಾಧನವಾಗಿ ಮಾಡಿಕೊಳ್ಳಲಾಗುತ್ತಿತ್ತು. ಮೊದಲು ಭಾಗಶಃ ಮಾತ್ರ ತೆರೆದಿದ್ದ ಕೆರೆಗಳ ತೂಬನ್ನು ಪೂರ್ಣ ತೆಗೆಯಲಾಗುತ್ತಿತ್ತು. ನೀರು ಕಾಲುವೆಯಲ್ಲಿ ನುಗ್ಗಿ ಬಂದು ಹೂಳನ್ನು ಕೊಚ್ಚಿಕೊಂಡು ಹೋಗುತ್ತಿತ್ತು. ಇದರಿಂದ ಹೂಳು ತೆಗೆಯಲು ಪಡಬೇಕಾಗಿದ್ದ ಎಷ್ಟೋ ಶ್ರಮ ತಪ್ಪುತ್ತಿತ್ತು. ಕೆರೆಯ ಅಂಗಳದಿಂದಲೂ ಹೂಳು ತೆಗೆಯಲು ಇದೇ ಕ್ರಮವನ್ನು ಅನುಸರಿಸಲಾಗುತ್ತಿತ್ತು. ಆದರೆ ಆರಿಸಿಕೊಳ್ಳುತ್ತಿದ್ದ ಕಾಲ ಬೇರೆ, ಮಳೆಗಾಲದ ಮುಕ್ತಾಯಕ್ಕೆ ಬದಲಾಗಿ ಆರಂಭವನ್ನೇ ಆರಿಸಿಕೊಳ್ಳಲಾಗುತ್ತಿತ್ತು. ಮಳೆ ಆರಂಭವಾಯಿತೋ ಇಲ್ಲವೋ ರೈತರು ಕೆರೆಯಲ್ಲಿ ತೂಬಿನ ತಲೆಯ ಬಳಿ ಸಾಲುಗಟ್ಟಿ ನಿಲ್ಲುತ್ತಿದ್ದರು. (ಮಳೆಗಾಲದ ಆರಂಭವಾದ್ದರಿಂದ ನೀರಿನ ಮಟ್ಟ ಕಡಿಮೆ), ಕೆರೆಯಲ್ಲಿ ನೀರು ಬಗ್ಗಡವಾಗುವವರೆಗೂ ಜಾಲಾಡುತ್ತಿದ್ದರು. ನೀರಿನ ಜೊತೆಗೆ ಹೂಳು ಆ ಬಗ್ಗಡದಲ್ಲಿ ತೂಬಿನಲ್ಲಿ ಹೂಳು ಇರದಂತೆ ಸಹಾಯಕವಾಗಿತ್ತು.

ಕೆರೆಗೆ ನೀರು ತರುವ ಹೊಳೆ ಭಾರಿ ಪ್ರಮಾಣದಲ್ಲಿ ಹರಿದು ಬರುತ್ತಿದ್ದ ಹೂಳನ್ನು ತಡೆಯಲು ಹಿಂದೆ ಹೊಳೆಗೆ ಅಡ್ಡಲಾಗಿ ಅಣೆಕಟ್ಟೆಯಂತಹ ಒಂದು ಒರಟುಗಲ್ಲಿನ ಕಟ್ಟೆ ಕಟ್ಟಲಾಗುತ್ತಿತ್ತು. ಇದರ ಪರಿಣಾಮವಾಗಿ ನೀರಿನ ವೇಗ ತಗ್ಗುತ್ತಿತ್ತು. ಹೂಳು ಅಲ್ಲೇ ನಿಲ್ಲುತ್ತಿತ್ತು. ಅಲ್ಲಲ್ಲಿ ಮಳೆ ಬಿದ್ದಾಗ ಮಾತ್ರ ಹರಿಯುತ್ತಿದ್ದ ನೀರಿನ ಜಾಡು ಅಥವಾ ಸಣ್ಣ ಹೊಳೆಗಳಿಗೆ ಅಡ್ಡ ಗಟ್ಟೆ ಹಾಕಿ, ಅಲ್ಲೇ ನಿಲ್ಲುತ್ತಿದ್ದ ನೀರನ್ನು ಅದೇ ರೀತಿ ಕೆರೆಗಳಿಗಾಗಿ ಬಳಸಿಕೊಳ್ಳಲಾಗುತ್ತಿತ್ತು. ಕೆರೆಗಳಲ್ಲಿನ ಹೂಳು ತೆಗೆಯಿಸುವುದು ಮತ್ತು ಹೂಳು ತೆಗೆದ ಮಣ್ಣನ್ನು ಹೊಲಗಳಿಗೆ ಸಾಗಿಸುವುದು ನಿರಂತರ ಕ್ರಿಯೆಯಾಗಿ ನಡೆಯಬೇಕು ಇದರಿಂದ ಕೆರೆಗಳನ್ನು ನಾವು ಬಹು ಕಾಲದವರೆಗೆ ಕಾಪಾಡಬಹುದು..

**೫. ಕೆರೆ ಅಭಿವೃದ್ಧಿ ಕಾರ್ಯದಲ್ಲಿ ಗ್ರಾಮೀಣ ಜನಗಳ ಸಹಕಾರ ಪಡೆಯುವುದು**

ಕೆರೆ ಅಭಿವೃದ್ಧಿ ಕಾರ್ಯದಲ್ಲಿ ಗ್ರಾಮೀಣ ಜನಗಳ ಸಹಾಯವು ಅತ್ಯಗತ್ಯ. ಆದ್ದರಿಂದ ಕೆರೆ ಮಣ್ಣಿನ ಫಲವತ್ತತೆ ಬಗ್ಗೆ ನೀರಾವರಿ, ಕೃಷಿ ಮತ್ತು ಕಂದಾಯ ಖಾತೆಯವರು ಸಂಯುಕ್ತವಾಗಿ ಪ್ರಸಾರ ಮಾಧ್ಯಮಗಳ ಮತ್ತು ಗ್ರಾಮ ಸಭೆಗಳ ಮುಖಾಂತರ ಜನರಿಗೆ ತಿಳಿಸಬೇಕು. ಪ್ರಾತ್ಯಕ್ಷಿಕೆ, ಕಾರ್ಯಾಗಾರಗಳು ನಡೆಯಬೇಕು. ಹೀಗೆ ಮಾಡಿದರೆ ಗ್ರಾಮಸ್ಥರು ಬೇಸಿಗೆಯಲ್ಲಿ ಟ್ರ್ಯಾಕ್ಟರ್ ಮತ್ತು ಚಕ್ಕಡಿಗಳಲ್ಲಿ ಮಳೆಗಾಲ ಪ್ರಾರಂಭವಾಗುವವರೆಗೂ ತಮ್ಮ ಜಮೀನಿಗೆ ಹೂಳು ಮಣ್ಣನ್ನು ಹಾಕಿ ಅದನ್ನು ಫಲವತ್ತಾಗಿ ಮಾಡಿಕೊಳ್ಳಬಹುದು. ಕೆಲವು ಗ್ರಾಮದ ರೈತರು ಹೀಗೆ ಮಾಡಿ ರಾಜ್ಯಮಟ್ಟದಲ್ಲಿ ಕೃಷಿ ಪ್ರಶಸ್ತಿ ಸಂಪಾದಿಸುತ್ತಿದ್ದಾರೆ. ಇದು ಇತರರಿಗೆ ಅನುಕರಣೀಯವಾಗಬೇಕು.

**೬. ಅಂತರ್ಜಲದ ಮಟ್ಟ ಏರಿಸಲು ಕ್ರಮ ಕೈಗೊಳ್ಳುವುದು**

ಹಿಂದೆ ಎಲ್ಲಾ ಕೆರೆಗಳ ಸುತ್ತಮುತ್ತ ಗಿಡಗಳನ್ನು ನೆಟ್ಟಿರುತ್ತಿದ್ದರು. ಈ ಗಿಡಗಳು ಮಳೆಯ ರಭಸವನ್ನು ತಡೆದು ಕೆರೆಯಲ್ಲಿ ನಿಧಾನವಾಗಿ ನೀರು ಸಂಗ್ರಹವಾಗುವ ಹಾಗೆ ಮಾಡುತ್ತಿದ್ದವು. ಕೆರೆಯಲ್ಲಿ ಹೂಳು ಸೇರುವುದನ್ನು ಕಡಿಮೆ ಮಾಡುತ್ತಿದ್ದವು ಈಗ ಅವುಗಳಿಲ್ಲ. ಫೆಬ್ರವರಿ ೨೦೦೧ರಲ್ಲಿ ಶ್ರೀ.ಎ.ಎಸ್.ಯಲ್ಲಪ್ಪರೆಡ್ಡಿ ಸಮಿತಿಯವರು ನೀರಾವರಿ ಯೋಜನೆಗಳ ಕಾಲುವೆ ಜಾಲದುದ್ದಕ್ಕೂ

